ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೬

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ಏಳನೆಯ ಸ್ಕಂಧ

ಅನುವಾದಕ

**ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,**

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೪

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಜನರೆಲ್ಲರೂ ಸುಖವು ಬೇಕೆಂದೂ ದುಃಖವು ಬೇಡವೆಂದೂ ಆಶಿಸುತ್ತಿರುತ್ತಾರೆ. ಆದುದರಿಂದ ಸುಖಪ್ರಾಪ್ತಿಗೆ ಬೇಕಾದ ಸಾಧನಸಾಮಗ್ರಿಗಳನ್ನು ಸಂಪಾದಿಸಲೂ, ದುಃಖಕಾರಣಸಾಧನಗಳನ್ನು ನಿವಾರಿಸಿಕೊಳ್ಳಲೂ, ಜನರು ಪ್ರಯತ್ನಿಸುತ್ತಿರಬೇಕು. ಆದರೆ ಮಾನವರ ನಡೆವಳಿಯು ಹೀಗಿರುವಂತೆ ಕಂಡುಬರುವುದಿಲ್ಲವೆಂಬುದನ್ನು

ಧರ್ಮಸ್ಯ ಫಲಮಿಚ್ಛಂತಿ ಧರ್ಮಂ ನೇಚ್ಛಂತಿ ಮಾನವಾಃ ।
ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಮಾನವಾಃ ॥

ಎಂದರೆ, ಜನರು ಧರ್ಮಾಚರಣೆಯ ಫಲವಾದ ಸುಖವನ್ನು ಎಲ್ಲರೂ ಆಶಿಸುತ್ತಾರೆ. ಆದರೆ ಆ ಸುಖಸಾಧನವಾದ ಧರ್ಮಾಚರಣೆಯನ್ನು ಮಾತ್ರ ಆಲಸ್ಯದಿಂದಲೋ, ಅಜ್ಞಾನದಿಂದಲೋ, ಅಪನಂಬಿಕೆಯಿಂದಲೋ ಅಥವಾ ಸನ್ನಿವೇಶ, ಸೌಕರ್ಯಗಳಿಲ್ಲದೆಯೋ, ಅಶಕ್ತಿಯಿಂದಲೋ, ಮಾಡದೆ ಇರುತ್ತಾರೆ. ಅಲ್ಲದೆ ಪಾಪದ ಫಲವಾದ ದುಃಖವನ್ನು ಬೇಡವೆಂದು ಎಲ್ಲರೂ ಅಪೇಕ್ಷಿಸುತ್ತಾರೆ. ಆದರೆ ಪಾಪಾಚರಣೆಯನ್ನು ಮಾತ್ರ ತಿಳಿವಳಿಕೆ ಇಲ್ಲದೆಯೋ, ಅಥವಾ ಅಶಕ್ತಿ, ಬಡತನಗಳಿಂದ ಆಕರ್ಷಣೆಗಳಿಗೆ ಒಳಗಾಗಿಯೋ ಮಾಡುತ್ತಿರುತ್ತಾರೆ. ಹೀಗೆ ಈ ಅಜ್ಞಾನ, ಅಶಕ್ತಿಗಳು ಈ ಸ್ಥಿತಿಗೆ ಕಾರಣವೆಂಬುದನ್ನು ಈ ಸೂಕ್ತಿಯಿಂದಲೂ ನಮ್ಮ ಅನುಭವದಿಂದಲೂ ತಿಳಿಯಬಹುದು. ಆದುದರಿಂದಲೇ ಶ್ರೀವೇದವ್ಯಾಸರೂ ಮೇಲಿನ ಅಂಶವು ಜನರ ದಿನಗಟ್ಟಲೆಯ ವ್ಯವಹಾರದಲ್ಲಿದ್ದುದನ್ನು ಗಮನಿಸಿ ತಮ್ಮ ನಿರೀಕ್ಷೆಯ ಭಂಗವನ್ನು ಆಶ್ಚರ್ಯ ವಿಷಾದಗಳಿಂದ ಹೀಗೆ ತಿಳಿಸಿದ್ದಾರೆ.

ಊರ್ಧ್ವಬಾಹುಃ ವಿರೌಮ್ಯೇಷಃ ನ ಚ ಕಶ್ಚಿತ್ ಶೃಣೋತಿ ಮೇ ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥

ಎಂದರೆ ಧರ್ಮಾಚರಣೆಯಿಂದಲೇ ಎಲ್ಲ ಸಂಪತ್ತುಗಳ ಪ್ರಾಪ್ತಿಯೂ, ಎಲ್ಲ ಆಸೆಗಳ ಪೂರ್ತಿಯೂ, ತಪ್ಪದೆ ಖಂಡಿತವಾಗಿ ಆಗುತ್ತದೆಂದು ನಾನು ಕೈಯೆತ್ತಿ ಸಾರಿಸಾರಿ

ಹೇಳುತ್ತಿದ್ದೇನೆ. ಆದರೂ ಒಬ್ಬರೂ ನನ್ನ ಮಾತನ್ನು ಕೇಳಿ ಅದರಂತೆ ನಡೆಯುತ್ತಿಲ್ಲ! ಇಂತಹ ಧರ್ಮವನ್ನು ಜನರು ಅದೇಕೆ ಆಚರಿಸುತ್ತಿಲ್ಲವೋ ?

ಹೀಗಾಗಿರಲು ಕಾರಣವೇನೆಂಬುದನ್ನು ನಾವು ವಿಮರ್ಶಿಸಿ ಗೊತ್ತುಮಾಡಿಕೊಳ್ಳಬಹುದು. ಹೇಗೆಂದರೆ, ಜನರಲ್ಲಿ ಬಹುಭಾಗದವರು ಅರ್ಥವೇ ಸುಖಸಾಧನವೆಂದು ತಿಳಿದು ಆ ಅರ್ಥಸಂಪಾದನೆಗಾಗಿ ದುಡಿಯುತ್ತಿದಾರೆ. ಇದರಲ್ಲಿ ಕುಶಲರಾದವರು ತುಂಬ ಹಣವನ್ನು ಕೂಡಿಡುತ್ತಾರೆ. ಹಾಗೆಯೇ ಅಧಿಕಾರವು ಸುಖಕ್ಕೆ ಕಾರಣವೆಂದು ತಿಳಿದು ಹೆಚ್ಚು ಹೆಚ್ಚು ಅಧಿಕಾರವನ್ನು ಸಂಪಾದಿಸಲೂ ಜನರೂ ಜನಾಂಗಗಳೂ ಹುರುಡಿನಿಂದ ಮುಂದುವರಿಯುತ್ತಿದಾರೆ. ಈ ಸಂಪತ್ತು ಮತ್ತು ಅಧಿಕಾರಗಳ ಆರ್ಜನೆಯಲ್ಲಿ ಸ್ವಾರ್ಥವು ಮುಂದಾಗಿ, ಜನರನ್ನೂ ಜನಾಂಗಗಳನ್ನೂ ಇತರರ ವಿಷಯದಲ್ಲಿ ಸಹಾನುಭೂತಿ ಇಲ್ಲದವರನ್ನಾಗಿ ಮಾಡುತ್ತಿದೆ. ಅಲ್ಲದೆ ಇತರರನ್ನು ಮೆಟ್ಟಿ ತಾನು ಮೇಲಾಗಬೇಕೆಂಬ ಆಶೆಯೇ ಮೇಗೈಯಾಗುತ್ತಿದೆ. ಮತ್ತು ಇನ್ನೊಂದು ವಿಚಿತ್ರವೇನೆಂದರೆ, ಇನ್ನೆಂದೆಂದಿಗೂ ಯುದ್ಧವೇ ಸಂಭವಿಸದಂತೆ ಮಾಡಲೂ, ಜಗತ್ತಿನಲ್ಲಿ ಶಾಂತಿ, ಸುಖಗಳನ್ನು ಶಾಶ್ವತವಾಗಿ ನೆಲೆಗೊಳಿಸಲೂ, ಈ ಯುದ್ಧದಲ್ಲಿ ತೊಡಗಿರುತ್ತೇವೆಂದು ಮುಖಂಡರು ಈಗಲೂ ಇನ್ನೂ ನಂಬುತ್ತಿದಾರೆ! ದ್ವೇಷವು ಪ್ರತೀಕಾರದಿಂದ ಹೆಚ್ಚುತ್ತದೆಯೇ ಹೊರತು ಶಾಂತವಾಗುವುದಿಲ್ಲವೆಂಬುದು ನಿಜವಾದರೂ, ಮುಖಂಡರಿಗೆ ಒಪ್ಪಿ ಬಂದಿಲ್ಲ! ಇಂತಹ ಪರಿಸ್ಥಿತಿಗೆ ಮುಖ್ಯವಾದ ಕಾರಣವು ಧರ್ಮಾಚರಣೆಯಲ್ಲಿ ಮುಖಂಡರಿಗೂ, ಜನಾಂಗಗಳಿಗೂ, ನಂಬಿಕೆ ಇಲ್ಲದಿರುವುದೇ ಆಗಿದೆ. ಧರ್ಮಾಚರಣೆಯಲ್ಲಿ ಆದರಪೂರ್ವಕವಾದ ಪ್ರವೃತ್ತಿಯನ್ನು ಸಾಮಾನ್ಯಜನರಲ್ಲೂ ಉಂಟುಮಾಡುವುದೇ ಪುರಾಣಗಳ ಮುಖ್ಯವಾದ ಉದ್ದೇಶವಾಗಿದೆ. ಎಲ್ಲ ಜನರಲ್ಲೂ ಧರ್ಮಾದರವು ರೂಢಿಗೆ ಬಂದಹೊರತು ಜಗತ್ತಿನಲ್ಲಿ ಶಾಂತಿ ಸುಖಗಳು ನೆಲಸಲಾರವು. ಈ ಅಂಶವನ್ನು ಆರನೆಯ ಸ್ಕಂಧದ ಮುನ್ನುಡಿಯಲ್ಲೂ ಸ್ವಲ್ಪ ವಿಸ್ತಾರವಾಗಿ ನಿರೂಪಿಸಿದೆ.

ಈ ಸ್ಕಂಧದಲ್ಲಿ ದೇವೀಗೀತೆಯನ್ನು ಹೇಳಿರುವುದು ಒಂದು ವಿಶೇಷಗುಣವಾಗಿದೆ. ಇದರಲ್ಲಿ ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗಗಳನ್ನು ನಿರೂಪಿಸಿ ಇವೆಲ್ಲವೂ ಜ್ಞಾನಯೋಗದಲ್ಲಿ ಪರಿಣಮಿಸುತ್ತವೆಂಬ ಅಂಶವನ್ನು ಚೆನ್ನಾಗಿ ತಿಳಿಯ ಹೇಳಿದೆ. ಮಹಾಭಾರತದಲ್ಲಿ ಭಗವದ್ಗೀತೆಯೂ, ಪದ್ಮಪುರಾಣದಲ್ಲಿ ಶಿವಗೀತೆಯೂ, ಸೂತಸಂಹಿತೆಯಲ್ಲಿ ಬ್ರಹ್ಮಗೀತೆ, ಸೂತಗೀತೆಗಳೂ, ಗಣೇಶಪುರಾಣದಲ್ಲಿ ಗಣೇಶಗೀತೆಯೂ, ಕೂರ್ಮಪುರಾಣದಲ್ಲಿ ಈಶ್ವರಗೀತೆಯೂ, ವ್ಯಾಸಗೀತೆಯೂ, ಬ್ರಹ್ಮಾಂಡ

ಪುರಾಣದ ಅಧ್ಯಾತ್ಮರಾಮಾಯಣದಲ್ಲಿ ಮತ್ತು ಯೋಗವಾಸಿಷ್ಠ ಪುರಾಣದಲ್ಲಿ ರಾಮ ಗೀತೆಯೂ, ಇವಲ್ಲದೆ ಅಷ್ಟಾವಕ್ರಗೀತೆ, ಯಮಗೀತೆ, ಸೂರ್ಯಗೀತೆ, ಭಿಕ್ಷುಗೀತೆ ಮುಂತಾದುವು ಪ್ರಸಿದ್ಧವಾಗಿವೆ.

ಇವೆಲ್ಲವುಗಳ ಉದ್ದೇಶವು ಹೀಗಿದೆ. ಎಲ್ಲ ಜನರ ದಿನಗಟ್ಟಲೆಯ ಜೀವನದಲ್ಲಿ ಮೇಲ್ಮೆಯು ಧರ್ಮದಿಂದ ಆಗುತ್ತದೆ. ಅದರಿಂದ ಚಿತ್ತಶುದ್ಧಿಯಾಗಿ ತತ್ತ್ವಜ್ಞಾನವು ಉಂಟಾಗಿ ಜೀವನವು ಸಾರ್ಥಕವೂ ಪೂರ್ಣವೂ ಆಗುತ್ತದೆ. ತತ್ತ್ವಜ್ಞಾನದಿಂದ ಕೂಡಿದ ನೀತಿಜೀವನವು ಐಹಿಕವಾದ ಸಾಮಾಜಿಕವೂ ಆದ ಶಾಂತಿ, ಸುಖ, ಅಭ್ಯುದಯಗಳನ್ನೂ, ಕಡೆಗೆ ಪ್ರಾತಿಸ್ವಿಕವಾದ ಜೀವನ್ಮುಕ್ತಿಯಿಂದ ವಿದೇಹಮುಕ್ತಿಯನ್ನೂ ದೊರೆಯುವಂತೆ ಮಾಡುತ್ತದೆಂಬುದನ್ನು ಚನ್ನಾಗಿ ವಿವರಿಸಿದೆ. ಪುರಾಣಗಳ ವ್ಯಾಸಂಗದಿಂದ ಧಾರ್ಮಿಕ ಸಂಸ್ಕೃತಿಯು ಏರ್ಪಡುತ್ತದೆ. ಜನರ ನಡೆ, ನುಡಿ, ಭಾವಗಳಲ್ಲಿ ಸಂಸ್ಕೃತಿಯು ಪ್ರತಿಫಲಿಸುತ್ತಿರುತ್ತದೆ. ಸಾಮಾನ್ಯವಾಗಿ ಜನರು ಯಾವುದಾದರೊಂದು ಫಲವನ್ನು ಪಡೆಯುವುದಕ್ಕಾಗಿ, ಅಥವಾ ಯಾವುದಾದರೂ ಒಂದು ಅನಿಷ್ಟವನ್ನು ನಿವಾರಿಸಿಕೊಳ್ಳುವುದಕ್ಕಾಗಿ ಪ್ರಯತ್ನ ಪಡುತ್ತಿರುತ್ತಾರೆ. ಅಂಥವರನ್ನು ಕಂಡು ನಾವು, 'ಅಯ್ಯೋ ಪಾಪ; ಅವರೂ ನಮ್ಮ ಹಾಗೆಯೇ ಅಲ್ಲವೇ?' ಎಂದು ಹೇಳುತ್ತಾ ಅವರ ಇಷ್ಟಸಾಧನೆಗೂ, ಮತ್ತು ಅನಿಷ್ಟ ನಿವಾರಣೆಗೂ ಸಹಾಯ ಮಾಡುತ್ತೇವೆ. ಈ ಮಾತಿನಲ್ಲಿ 'ಅಯ್ಯೋ ಪಾಪ' ಎಂಬ ಅಂಶವು ಸಹಾನುಭೂತಿಯನ್ನೂ, 'ನಮ್ಮ ಹಾಗೆಯೇ' ಎಂಬ ಅಂಶವು ಜೀವರ ಅಭೇದ ಅಥವಾ ಆತ್ಮೈಕ್ಯವನ್ನೂ ಸೂಚಿಸುತ್ತದೆ ಎಂದರೆ ತಪ್ಪಾಗಲಾರದು. ಪುರುಷಾರ್ಥದ ಸ್ವರೂಪವನ್ನೂ, ಅದರ ಪ್ರಾಪ್ತಿಯ ಪ್ರಕಾರವನ್ನೂ, ಈ ಪದ್ಯದಲ್ಲಿ ಸಂಗ್ರಹಿಸಿರುತ್ತೇನೆ.

ದುಃಖಸ್ಯಾತ್ಯಂತ ನಾಶಃ, ಸುಖಮಪಿ ಪರಮಂ, ಪ್ರಾರ್ಥನೀಯಂ ತು ಸರ್ವೈಃ,
ಸೌಖ್ಯಂ ಪ್ರಾಪ್ಯಂ ನ ತತ್ಸ್ಯಾತ್ ಅನುಭವವಿದಿತಂ ಸ್ವಾತ್ಮರೂಪಂ ಹಿ ಸಿದ್ಧಂ ।
ಮೋಕ್ಷೋ ದುಃಖಸ್ಯ ನಾಶಃ, ಜನಿಮೃತಿಲಹರೀಪ್ರಾಪ್ತಿರೂಪಂ ಚ ದುಃಖಂ,
ಜ್ಞಾನಾನ್ಮೋಕ್ಷೋಽಭ್ಯುಪೇತಃ, ತತ ಇಹ ಹಿ ಭವೇದ್ದುಃಖಮಜ್ಞಾನರೂಪಂ ॥

ನಿತ್ಯವಾದ ಮೋಕ್ಷಾನಂದವು ಆತ್ಮೈಕ್ಯಜ್ಞಾನದಿಂದ ಉಂಟಾಗುತ್ತದೆ. ಅಂತಹ ಜ್ಞಾನವು ಜೀವನಸ್ವರೂಪವು. ಅದು ಅಜ್ಞಾನದ ನಿವೃತ್ತಿಯಿಂದ ಸ್ಫುರಿಸುತ್ತದೆ. ಅಜ್ಞಾನನಿವೃತ್ತಿಯು ಚಿತ್ತಶುದ್ಧಿಯಿಂದ ಆಗುತ್ತದೆ. ಚಿತ್ತಶುದ್ಧಿಯು ಧರ್ಮಾ

ಚರಣೆಯಿಂದ ಬರುತ್ತದೆ. ಆದುದರಿಂದ ಧಾರ್ಮಿಕ ಜೀವನ ಕ್ರಮದ ತಿಳಿವಳಿಕೆಯು ಜನಸಾಮಾನ್ಯದಲ್ಲಿ ಹರಡುವಂತಾಗಲಿ, ಆದರಿಂದ ಜಗತ್ತಿನಲ್ಲಿ ಶಾಂತಿ, ನೆಮ್ಮದಿ, ಸುಖ, ಕಲ್ಯಾಣಗಳು ನೆಲೆಸುವಂತಾಗಲೆಂಬ ಶ್ರೇಯಸ್ಕರವಾದ ಉದ್ದೇಶದಿಂದ ಪುರಾಣಗಳ ಪ್ರಚಾರಣವೆಂಬ ಧರ್ಮಕಾರ್ಯವನ್ನು, ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಮುಂದಾಲೋಚನೆಯಿಂದಲೂ ಔದಾರ್ಯದಿಂದಲೂ, ನೆರವೇರಿಸುತ್ತಿರುವುದು ಕನ್ನಡಿಗರೆಲ್ಲರ ಭಾಗ್ಯವಿಶೇಷವಾಗಿದೆ. ಅವರ ಅಪ್ಪಣೆಯನ್ನು ಶಿರಸಾವಹಿಸಿ ಈ ಗ್ರಂಥವನ್ನು ಪ್ರಕಟಿಸಿದೆ. ಈ ಕಾರ್ಯವು ಸರ್ವದಾ ನೆರವೇರುತ್ತಿರುವಂತಾಗಲೆಂದು ಭುವನೇಶ್ವರೀ ಮಹಾತಾಯಿಯನ್ನು ಪ್ರಾರ್ಥಿಸುತ್ತಿರುತ್ತೇನೆ.

ತಾರಣಸಂವತ್ಸರದ<br>ಆಷಾಢ ಶುಕ್ಲ ಏಕಾದಶೀ<br>ಭಾನುವಾರ, 2-7-1944.

**ಎಡತೊರೆ ದೇವಯ್ಯದೀಕ್ಷಿತರ ಮಗ**<br>**ಚಂದ್ರಶೇಖರಶಾಸ್ತ್ರೀ.**

# ಶ್ರೀ ದೇವೀಭಾಗವತಮಹಾಪುರಾಣದಲ್ಲಿ ಏಳನೆಯ ಸ್ಕಂಧದಲ್ಲಿನ ವಿಷಯಾನುಕ್ರಮಣಿಕೆ


| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| 1. | ಸೂರ್ಯಚಂದ್ರವಂಶಗಳ ಕಥೆಯ ಪ್ರಶ್ನೆ; ಬ್ರಹ್ಮ ಮಾನಸ ಪುತ್ರರ ಸೃಷ್ಟಿ; ದಕ್ಷನಸೃಷ್ಟಿಯಲ್ಲಿ ನಾರದನಿಂದ ದೋಷದರ್ಶನ; ದಕ್ಷಪುತ್ರರು ಭೂತಲಪರೀಕ್ಷಣಕ್ಕೆ ಹೋದುದು ...... | ೧—೮ |
| 2. | ನಾರದನು ರಾಜರ ವಂಶವನ್ನು ವಿವರಿಸಿದುದು; ವೈವಸ್ವತ ಮನುವಿಗೆ ಒಂಬತ್ತು ಜನ ಮಕ್ಕಳು; ರಾಜಪುತ್ರಿಯಾದ ಸುಕನ್ಯೆಯನ್ನು ಕುರುಡನಾದ ಚ್ಯವನಋಷಿಗೆ ಮದುವೆಮಾಡಿಕೊಟ್ಟುದು ಏಕೆ? ಚ್ಯವನನ ಕಣ್ಣು ಬೇನೆ ...... | ೧೧—೨೪ |
| 3. | ಶರ್ಯಾತಿರಾಜನು ಚ್ಯವನನಲ್ಲಿ ಕ್ಷಮಾಪ್ರಾರ್ಥನೆ ಮಾಡಿದುದು; ರಾಜನಿಗೆ ಋಷಿಯ ಸಲಹೆ; ರಾಜನ ಯೋಚನೆಗಳು; ತಂದೆಗೆ ಸುಕನ್ಯೆಯ ಅರಿಕೆ; ತಂದೆಯು ಒಪ್ಪಲಿಲ್ಲ; ಸುಕನ್ಯೆಯ ಧಾರ್ಮಿಕವಾದ ಮನೋದಾರ್ಢ್ಯ; ಚ್ಯವನ ಸುಕನ್ಯೆಯರ ವಿವಾಹ ...... | ೨೫—೨೯ |
| 4. | ಸುಕನ್ಯೆಯ ಪತಿಸೇವಾಪ್ರಕಾರ; ಅವಳು ತನ್ನ ದೇಹವನ್ನೂ ರಕ್ಷಿಸಿಕೊಳ್ಳುತ್ತಿದ್ದುದು; ಧರ್ಮಗಳನ್ನು ತಿಳಿದು ಆಚರಿಸುವುದು ಮೇಲು; ಅಶ್ವಿನೀದೇವತೆಗಳು ಸುಕನ್ಯೆಯನ್ನು ಕಂಡು ಮೋಹಿತರಾದುದು; ಸುಕನ್ಯೆಯೊಡನೆ ಪ್ರಶ್ನೋತ್ತರ; ಆಕರ್ಷಣೆ, ಪ್ರರೋಚನೆಗಳು ...... | ೪೦—೫೩ |

ಅಧ್ಯಾಯ ವಿಷಯ ಪುಟಸಂಖ್ಯಾ

5. ದೃಢವಾದ ಧರ್ಮಾಸಕ್ತಿಗೆ ಜಯವು ಕಡೆಗಾದರೂ ಬಂದೇ
ಬರುವುದು; ಧರ್ಮಶೀಲದಿಂದ ಒಳಗಣ್ಣು ತೆರೆದಂತಾ
ಗುವುದು; ದೇವೀಭಕ್ತಿಯಿಂದ ಒಳ್ಳೆಯ ಬುದ್ಧಿ;
ಅಶ್ವಿನೀದೇವತೆಗಳಿಂದ ಚ್ಯವನನಿಗೆ ದೃಷ್ಟಿಲಾಭ;
ಉಪಕಾರಕ್ಕೆ ಪ್ರತ್ಯುಪಕಾರ ಋಣಮೋಚಕವು; ಅಶ್ವಿನೀ
ದೇವತೆಗಳಿಗೆ ಚ್ಯವನನ ಹವಿರ್ಭಾಗದ ವಾಗ್ದಾನ ...... ೫೪—೬೪

6. ಚ್ಯವನನನ್ನು ಶರ್ಯಾತಿಯು ಕಾಣಲು ಬಂದುದು; ತಪ್ಪು
ಭಾವದಿಂದ ಶರ್ಯಾತಿಯು ಸುಕನ್ಯೆಯನ್ನು ದೂಷಿಸಿ
ದುದು; ಚ್ಯವನನಿಂದ ಶರ್ಯಾತಿಯ ಸಂದೇಹನಿವಾರಣೆ;
ಅಶ್ವಿನೀದೇವತೆಗಳಿಗೂ ಹವಿರ್ಭಾಗವನ್ನು ಕೊಡಲು
ಯಾಗಾಚರಣೆಗೆ ಶರ್ಯಾತಿಯನ್ನು ಒಪ್ಪಿಸಿದುದು;
ಇಂದ್ರನ ಆಕ್ಷೇಪಣೆಗೆ ಚ್ಯವನನ ಪ್ರತಿವಾದ ...... ೬೫—೭೮

7. ಅಶ್ವಿನೀದೇವತೆಗಳಿಗೆ ಯಾಗದಲ್ಲಿ ಹವಿರ್ಭಾಗವನ್ನು ಕೊಟ್ಟು
ದು; ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿ
ದುದು; ಚ್ಯವನನ ಕೃತ್ಯಾಪ್ರಯೋಗ; ಮದನ ಉತ್ಪತ್ತಿ;
ಇಂದ್ರನ ಪರಾಭವ, ಪಲಾಯನ; ಗುರುವಿನ ಬುದ್ಧಿ
ವಾದ; ಇಂದ್ರನೂ ಅಶ್ವಿನೀದೇವತೆಗಳೂ ಹವಿಸ್ಸನ್ನು
ಪಡೆದುದು; ಚ್ಯವನನು ಮದನನ್ನು ವಿಯೋಗ
ಮಾಡಿದ ಬಗೆ; ರೇವತನು ಬ್ರಹ್ಮನನ್ನು ಕಾಣಲು
ಸತ್ಯಲೋಕಕ್ಕೆ ಹೋದುದು ...... ೭೮—೮೯

8. ಪುಣ್ಯದ ಪ್ರಭಾವದಿಂದ ಮಾನವರು ಸ್ವರ್ಗಲೋಕ ಮುಂತಾ
ದುವಕ್ಕೆ ಹೋಗಿಬರುವುದುಂಟು; ಅರ್ಜುನ, ಮಹಾ
ಭಿಷ ಮುಂತಾದವರಂತೆ; ರೇವತನ ಮಗಳನ್ನು ಬಲರಾ
ಮನಿಗೆ ಕೊಡುವಂತೆ ಬ್ರಹ್ಮನು ಹೇಳಿದುದು; ಸತ್ಯ
ಲೋಕದಲ್ಲಿರುವ ವರೆಗೆ ಮುಪ್ಪು ಸಾವುಗಳಿಲ್ಲ; ದೇವೀ

ಅಧ್ಯಾಯ ವಿಷಯ ಪುಟಸಂಖ್ಯಾ

ಪ್ರಸಾದದಿಂದ ಇಕ್ಷ್ವಾಕುವು ಒಂದುನೂರು ಮಕ್ಕಳನ್ನು ಪಡೆದು ರಾಜ್ಯಾಧಿಕಾರವನ್ನು ಹಂಚಿದುದು ...... ೯೦-೧೦೧

9. ಇಕ್ಷ್ವಾಕು ಪುತ್ರನಾದ ವಿಕುಕ್ಷಿಯು ಶಶಾದನಾದುದು; ಶಶಾದನ ಮಗನು ಕಕುತ್ಸ್ಥನಾದ ಬಗೆ; ಕಕುತ್ಸ್ಥನಿಗೆ ಇಂದ್ರನು ವಾಹನವಾದುದು; ಪುರಂಜಯನಾದುದು; ಮಹಾಪುರಾಣದಲ್ಲಿ ರಾಜವಂಶ ವರ್ಣನೆ; ಮಾಂಧಾತನು ಯೌವನಾಶ್ವನೆಂಬ ತಂದೆಯ ಶರೀರದಿಂದ ಹುಟ್ಟಿದ ಬಗೆ; ...... ೧೦೨-೧೧೫

10. ಮಾಂಧಾತನಿಗೆ ಪುರುಕುತ್ಸ, ಮುಚುಕುಂದರು, ಮಕ್ಕಳು; ಪುರುಕುತ್ಸನಿಗೆ ಬೃಹದಶ್ವ (ಅನರಣ್ಯ, ಅರಣ್ಯ) ನು ಮಗನು; ಅನರಣ್ಯನಿಗೆ ಹರ್ಯಶ್ವ, ಅವನಿಗೆ ಅರುಣನೂ ಮಕ್ಕಳು; ಅರುಣನಿಗೆ ಸತ್ಯವ್ರತನು ಮಗನು; ಅವನು ಕೆಟ್ಟವನಾಗಲು ತಂದೆಯು ತ್ಯಜಿಸಿದನು; ಅರುಣನು ತಪಸ್ಸಿಗೆ ಹೋಗಲು, ರಾಜ್ಯದಲ್ಲಿ ಕ್ಷಾಮಬಂದಿತು; ವಿಶ್ವಾಮಿತ್ರನೂ ತಪಸ್ಸಿನಲ್ಲಿರಲು, ಅವನ ಹೆಂಡಿತಿಮಕ್ಕಳಿಗೆ ದಿಕ್ಕಿಲ್ಲದೆ ಇದ್ದಾಗ ಸತ್ಯವ್ರತನ ಸಹಾಯ; ಅದಕ್ಕಾಗಿ ಅವನು ವಸಿಷ್ಠನ ಹಸುವನ್ನೂ ಕೊಂದನು; ಸತ್ಯವ್ರತನ ದೇವೀಭಕ್ತಿ; ...... ೧೧೬-೧೨೭

11. ಸತ್ಯವ್ರತನು ತ್ರಿಶಂಕುವಾದುದು; ವಸಿಷ್ಠನಶಾಪ; ಸತ್ಯವ್ರತನನ್ನು ದೇವಿಯು ಆತ್ಮಹತ್ಯೆಯಿಂದ ತಪ್ಪಿಸಿದುದು; ಅರುಣನಿಂದ ಮಗ (ತ್ರಿಶಂಕು, ಸತ್ಯವ್ರತ) ನಿಗೆ ಆಹ್ವಾನ ಮತ್ತು ಬುದ್ಧಿವಾದ ಪೂರ್ವಕವಾಗಿ ಸ್ವೀಕಾರಲಾಭ ೧೨೮-೧೩೯

12. ತ್ರಿಶಂಕುವಿಗೆ ರಾಜ್ಯಾಭಿಷೇಕ; ಹರಿಶ್ಚಂದ್ರನೆಂಬ ಮಗನಾದುದು; ದೇವೀಭಕ್ತಿಯಿಂದ ಶುದ್ಧನಾದ ಸತ್ಯವ್ರತನು ಸಶರೀರಸ್ವರ್ಗಪ್ರಾಪ್ತಿಗೆ ವಸಿಷ್ಠನ ಸಹಾಯವನ್ನು ಕೋರಿ

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| | ನಿರ್ಬಂಧಿಸಲು, ಅವನು ಪುನಃ ಶಪಿಸಿದುದು; ದುಷ್ಕರ್ಮವು ಫಲಿಸುತ್ತಿರುವಾಗಲೂ ಧಾರ್ಮಿಕಮನೋವೃತ್ತಿ; ಕರ್ಮವಾದವು ಮಾನವನ ಸ್ವಾತಂತ್ರ್ಯಕ್ಕೆ ಅನುಕೂಲ, ಪ್ರತಿಕೂಲವಲ್ಲ; ಹರಿಶ್ಚಂದ್ರನನ್ನು ರಾಜ್ಯಭಾರದಲ್ಲಿ ನಿಲ್ಲಿಸಿ, ತಂದೆಯು ತಪಸ್ಸಿಗೆ ಹೋದುದು; ...... | ೧೩೦—೧೫೩ |
| 13. | ವಿಶ್ವಾಮಿತ್ರನು ಹಿಂತಿರುಗಿ ಬಂದು, ಕ್ಷಾಮಕಾಲದಲ್ಲಿ ತನ್ನ ಹೆಂಡಿತಿಮಕ್ಕಳನ್ನು (ತ್ರಿಶಂಕು) ಸತ್ಯವ್ರತನು ಕಾಪಾಡಿದುದನ್ನು ಕೇಳಿ, ಕಷ್ಟಕಾಲವು ಜನರ ಧರ್ಮಾದರಕ್ಕೆ ಒರೆಗಲ್ಲು, ಅವನಿಗೆ ಪ್ರತ್ಯುಪಕಾರವನ್ನು ಮಾಡಲು ಒಪ್ಪಿದುದು ...... | ೧೫೪—೧೬೬ |
| 14. | ವಿಶ್ವಾಮಿತ್ರನು ತ್ರಿಶಂಕುವಿನಿಂದ ಯಾಗವನ್ನು ಮಾಡಿಸಲು, ದೇವತೆಗಳು ಬರದಿರಲು, ಅವನನ್ನು ಸ್ವರ್ಗಕ್ಕೆ ಕಳುಹಿಸಿದುದು; ಇಂದ್ರನಿಂದ ತಿರಸ್ಕಾರ; ವಿಶ್ವಾಮಿತ್ರನ ಪ್ರತಿಸೃಷ್ಟಿ; ಇಂದ್ರನು ತ್ರಿಶಂಕುವನ್ನು ಸ್ವರ್ಗಕ್ಕೆ ಬರಲು ಒಪ್ಪಿದುದು; ಹರಿಶ್ಚಂದ್ರನು ಪುತ್ರಪ್ರಾಪ್ತಿಗಾಗಿ ವರುಣನನ್ನು ಕುರಿತು ತಪಸ್ಸನ್ನು ಮಾಡಿ, ಪುತ್ರ ಪಶುಯಾಗಕ್ಕೆ ಒಪ್ಪಿ, ಮಗನನ್ನು ಪಡೆದುದು ...... | ೧೬೭—೧೭೮ |
| 15. | ಹರಿಶ್ಚಂದ್ರನು ಪುತ್ರಪಶುಯಾಗಕ್ಕೆ ವರುಣನಿಂದ ವಾಯಿದೆಯನ್ನು ಕೇಳುತ್ತಾ ಇರಲು, ಮಗನು ಓಡಿಹೋಗಲು, ರಾಜನಿಗೆ ವರುಣನಿಂದ ಜಲೋದರವ್ಯಾಧಿಯ ಶಾಪ | ೧೭೯—೧೯೨ |
| 16. | ಹರಿಶ್ಚಂದ್ರನ ಮಗನಾದ ರೋಹಿತನು ಓಡಿಹೋಗಿದ್ದು ತನ್ನಿಂದ ತಂದೆಗೆ ವ್ಯಾಧಿಪೀಡೆಯು ಬಂದುದನ್ನು ಕೇಳಿ, ಹಿಂತಿರುಗಬೇಕೆಂದಿರಲು, ಇಂದ್ರನು ಅವನನ್ನು ತಡೆದುದು; ಅಜೀಗರ್ತನ ಮಗನಾದ ಶುನಶ್ಶೇಫನನ್ನು ಕೊಂಡುತಂದು, ಪಶುಸ್ಥಾನದಲ್ಲಿಟ್ಟಿರಲು, ವಿಶ್ವಾಮಿತ್ರನು | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಬಂದು ದೊರೆಗೆ ಮಾಡಿದ ಅಹಿಂಸೆಯ ಬುದ್ಧಿವಾದವನ್ನು ವ್ಯಾಧಿದುಃಖದಿಂದ ಒಪ್ಪಲಿಲ್ಲ | ....... ೧೯೩—೨೦೫ |
| 17. | ದಯಾಳುವಾದ ವಿಶ್ವಾಮಿತ್ರನು ಶುನಶ್ಶೇಫನಿಗೆ ವರುಣ ಮಂತ್ರೋಪದೇಶವನ್ನು ಮಾಡಿ, ಅದರ ಜಪದಿಂದ ಸಂತುಷ್ಟನಾದ ವರುಣನಿಂದ ಅವನ ಬಿಡುಗಡೆ; ಶುನಶ್ಶೇಫನು ವಿಶ್ವಾಮಿತ್ರ ಪುತ್ರನೆಂಬ ಧರ್ಮಸೂಕ್ಷ್ಮ ಸಿದ್ಧಾಂತ; ಸ್ವರ್ಗದಲ್ಲಿ ವಸಿಷ್ಠ ವಿಶ್ವಾಮಿತ್ರರು ಸಂಧಿಸಿ, ಹರಿಶ್ಚಂದ್ರನ ಯಾಗದ ಔದಾರ್ಯವನ್ನು ವಿಶ್ವಾಮಿತ್ರನು ಕೇಳಿ, ಅವನನ್ನು ಅಸತ್ಯವಾದಿಯನ್ನಾಗಿ ಮಾಡಲು ಪ್ರತಿಜ್ಞೆ ಮಾಡಿದುದು | ...... ೨೦೬—೨೧೮ |
| 18. | ಹರಿಶ್ಚಂದ್ರನು ಬೇಟೆಗೋಸ್ಕರ ಕಾಡಿಗೆ ಹೋಗಿ, ಅಲ್ಲಿ ಅಳುತ್ತಿದ್ದ ಸ್ತ್ರೀಯನ್ನು ಕಾಪಾಡಲು ವಿಶ್ವಾಮಿತ್ರನನ್ನು ತಪಸ್ಸಿನಿಂದ ವಿಶ್ರಾಂತನಾಗೆಂದು ಪ್ರಾರ್ಥಿಸಿ ತಡೆದುದು. ವಿಶ್ವಾಮಿತ್ರನು ಸೃಷ್ಟಿಸಿ ಕಳುಹಿಸಿದ ಹಂದಿಯನ್ನು ಕೊಲ್ಲಲು ರಾಜನು ಬೆನ್ನಟ್ಟಿಹೋಗಿ, ಬಳಲಿದ್ದಾಗ, ಅವನು ವೃದ್ಧ ಬ್ರಾಹ್ಮಣನಂತೆ ಕಾಣಿಸಿಕೊಂಡನು; | ೨೧೯—೨೩೦ |
| 19. | ವಿಶ್ವಾಮಿತ್ರನ ಧರ್ಮಶ್ರವಣಕ್ಕೆ ಮರುಳಾಗಿ, ದೊರೆಯು ಅವನು ಕೇಳಿದ್ದನ್ನು ದಾನಮಾಡಲೊಪ್ಪಿ, ರಾಜ್ಯವನ್ನೇ ಧಾರೆ ಎರೆದುಕೊಟ್ಟು, ಆಮೇಲೆ ದಕ್ಷಿಣೆಯನ್ನು ಹೇಗೆ, ಎಲ್ಲಿಂದ, ತಂದುಕೊಡಬೇಕೆಂದು ಚಿಂತಿಸುತ್ತಿರಲು, ರಾಣಿಯು ವಿಪತ್ತಿನಲ್ಲೂ ಧರ್ಮಾದರವೇ ಶ್ರೇಯಸ್ಕರವೆಂದು ಒತ್ತಾಸೆ ಕೊಟ್ಟುದು; | ....... ೨೩೧—೨೪೩ |
| 20. | ರಾಜ್ಯವನ್ನು ಬಿಟ್ಟುಕೊಟ್ಟು, ಹೆಂಡಿತಿ, ಮಗನೊಡನೆ ಹೊರಟ ರಾಜನನ್ನು ವಿಶ್ವಾಮಿತ್ರನು ದಕ್ಷಿಣೆಗಾಗಿ ಪೀಡಿಸಲು, ಕಾಶಿಯಲ್ಲಿ ಸಂಪಾದಿಸಿಕೊಡುವುದಾಗಿ ಹೇಳಿ ರಾಜನು | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| | ಅಲ್ಲಿಗೆ ಹೋದುದು ; ರಾಣಿಯು ತನ್ನನ್ನು ಮಾರಿ ದಕ್ಷಿಣೆಯನ್ನು ಕೊಡೆಂದು ರಾಜನಿಗೆ ಹೇಳಲು ರಾಜನು ಮೂರ್ಛಿತನಾದುದು. | ...... ೧೪೪–೧೫೪ |
| 21. | ದಕ್ಷಿಣೆಗಾಗಿ ವಿಶ್ವಾಮಿತ್ರನು ಪೀಡಿಸಲು, ರಾಜನು ಯಾಚನೆಯಿಂದ ದಕ್ಷಿಣೆಯ ಹಣವನ್ನು ಸಂಪಾದಿಸಲು ಒಪ್ಪದಿರಲು, ರಾಣಿಯನ್ನು ಮಾರಿಯಾದರೂ ಋಣಮುಕ್ತನಾಗಲು ನಿಶ್ಚಯಿಸಿದುದು | ...... ೧೫೫–೧೬೧ |
| 22. | ರಾಜನು ಪತ್ನೀಪುತ್ರರ ವಿಕ್ರಯದಿಂದ ದಕ್ಷಿಣೆಯ ಹಣದಲ್ಲಿ ಒಂದು ಭಾಗವನ್ನು ಕೊಟ್ಟುದು, ಕೊಂಡುಕೊಂಡ ಕೌಶಿಕನೊಡನೆ ಅವರು ಹೋದುದು | ...... ೧೬೨–೧೬೩ |
| 23. | ರಾಜನು ತನ್ನನ್ನು ಮಾರಲು ಸಾರಿದುದು ; ಯಮಧರ್ಮನು ಚಂಡಾಲರೂಪದಲ್ಲಿ ಕೊಳ್ಳಲು ಬಂದುದು ; ಅಸತ್ಯವು ಚಂಡಾಲತ್ವಕ್ಕಿಂತಲೂ ಹೀನವಾದರೂ, ಚಂಡಾಲದಾಸ್ಯದಲ್ಲಿ ಧರ್ಮಲೋಪದ ಚಿಂತಾತಂಕದಿಂದ ಕೂಡಿದ್ದ ರಾಜನನ್ನು ವಿಶ್ವಾಮಿತ್ರನು ಮಾರಿದುದು | ...... ೧೬೪–೧೮೨ |
| 24. | ಹರಿಶ್ಚಂದ್ರನು ಸ್ಮಶಾನದ ಕಾವಲುಗಾರನಾಗಿದ್ದುದು ; ಸ್ಮಶಾನದ ಘೋರರೂಪ | ...... ೧೮೩–೧೮೯ |
| 25. | ರೋಹಿತಾಶ್ವನು ಹೂವು, ದರ್ಭೆಗಳಿಗಾಗಿ ಕಾಡಿಗೆ ಬಂದು ಹಾವು ಕಡಿದು ಬಿದ್ದುದು ; ರಾಣಿಯು ಇದನ್ನು ಕೇಳಿ ನೋಡಿ ಬರಲು ದಣಿಯಿಂದ ಅಪ್ಪಣೆಯನ್ನು ಪಡೆದು ಬಂದು, ಮಗನನ್ನು ನೋಡಿ ಅತ್ತುದು, ನಗರರಕ್ಷಕರು ಅವಳನ್ನು ಕಂಡು ಶಂಕಿಸಿ, ಹಿಡಿದುಕೊಂಡು ಹೋಗಿ, ಸ್ಮಶಾನ ರಕ್ಷಕನಿಗೆ ಒಪ್ಪಿಸಿ ಕೊಲ್ಲಹೇಳಿದುದು ; ರಾಜನು ಸ್ತ್ರೀವಧೆಯನ್ನು ಮಾಡಲಾರೆನೆಂದರೂ, ದಣಿಯ ನಿರ್ಬಂಧ | ...... ೧೮೯–೨೦೬ |

| ಅಧ್ಯಾಯ | ವಿಷಯ | ಪುಟಸಂಖ್ಯೆ |
|---|---|---|
| 26. | ರಾಣಿಯು ಮಗನ ಸಾವಿನ ಬಗೆಯನ್ನು ಹೇಳಲು, ಅವನಿಂದ ಅವಳನ್ನು ಗುರುತಿಸಿದುದು; ಮಗನ ಮರಣಕ್ಕಾಗಿ ರಾಜನ ಪ್ರಲಾಪ; ರಾಣಿಯೂ ರಾಜನನ್ನು ಗುರುತಿಸಿದುದು; ಮಗನ ಮರಣಕ್ಕಾಗಿ ರಾಜನ ಪ್ರಲಾಪ; ರಾಣಿಯೂ ರಾಜನನ್ನು ಗುರುತಿಸಿದುದು; ಧರ್ಮಾಧರ್ಮಗಳು ನಿಷ್ಫಲಗಳೆಂದು ತೋರುವುದುಂಟು; ಧರ್ಮಸಂಕಟದಿಂದ ರಾಜನು ಅಗ್ನಿಮರಣಕ್ಕೆ ನಿಶ್ಚಯಿಸಲು, ರಾಣಿಯೂ ಹಿಂಬಾಲಿಸುವೆನೆಂದುದು | ....... ೨೦೭–೨೧೪ |
| 27. | ಇಂದ್ರನು ರಾಜನನ್ನು ಸ್ವರ್ಗಕ್ಕೆ ಬರಲು ಪ್ರಾರ್ಥಿಸಿದುದು; ರಾಜನು ತಾನೊಬ್ಬನೇ ಬರಲಾರೆನೆನ್ನಲು, ಪ್ರಜೆಗಳೊಡನೆ ಸ್ವರ್ಗಪ್ರಾಪ್ತಿ; ಶತಾಕ್ಷೀದೇವೀಭಕ್ತಿ ಫಲ | ....... ೨೫–೨೨೪ |
| 28. | ಶತಾಕ್ಷೀದೇವಿಯ ಚರಿತ್ರೆ; ದುರ್ಗಮಾಸುರನ ತಪಸ್ಸು; ಕಾಮ್ಯ ಮತು ನಿಷ್ಕಾಮ ತಪಸ್ಸಿನ ವಿಶೇಷ; ದುರ್ಗಮನ ವೇದಾಪಹರಣ; ಬ್ರಾಹ್ಮಣರು ದೇವಿಯನ್ನು ಪ್ರಾರ್ಥಿಸಲು ಶತಾಕ್ಷೀದೇವಿಯು ಪ್ರತ್ಯಕ್ಷಳಾಗಿ ಬಂದು, ದುರ್ಗಮನೊಡನೆ ಯುದ್ಧವನ್ನು ಮಾಡಿ ಸಂಹರಿಸಿದುದು; ಶತಾಕ್ಷೀ ಸ್ತೋತ್ರ; ವೇದಗಳೇ ಸರ್ವಮಂಗಳಕಾರಣ | ೨೨೫–೨೫೩ |
| 29. | ವಿಶೇಷ ಮಹಿಮೆ ಇರುವುದೆಲ್ಲವೂ ದೇವಿಯ ಅಂಶವು; ದೇವಿಯ ಉತ್ಕರ್ಷ; ಗೌರೀ, ಲಕ್ಷ್ಮೀದೇವಿಯರ ಕಥೆ; ಹಾಲಾಹಲರೆಂಬ ರಾಕ್ಷಸ ಕಥೆ; ಹರಿಯೂ ಹರನೂ ಅವರನ್ನು ಸಂಹರಿಸಿದುದು ತಮ್ಮ ಪರಾಕ್ರಮವೆನ್ನಲು, ಆ ಶಕ್ತ್ಯವಮಾನದಿಂದ ಗೌರೀ ಲಕ್ಷ್ಮಿಯರು ಹರಿಹರರನ್ನು ಬಿಟ್ಟುದು; ಅವರಿಗಾಗಿ ಬ್ರಹ್ಮಮಾನಸ ಪುತ್ರರ ತಪಶ್ಚರ್ಯೆ; | ...... ೨೫೪–೨೬೫ |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| 30. | ದೇವಿಯು ಪ್ರತ್ಯಕ್ಷಳಾಗಲು ಮುನಿಗಳು ಸ್ತುತಿಸಿದರು ; ಹರಿಹರರು ಗರ್ವವನ್ನು ಬಿಟ್ಟುದು ; ದಕ್ಷನ ಪುತ್ರಿಯಾಗಿ ದೇವಿಯು ಅವತಾರ; ದೂರ್ವಾಸಮುನಿಗೆ ದೇವಿಯು ಅನುಗ್ರಹಮಾಲೆಯನ್ನು ಕರುಣಿಸಿದುದು ; ದಕ್ಷನು ಆ ಮಾಲೆಯನ್ನು ಪಡೆದು ತನ್ನ ಶಯನಗೃಹದಲ್ಲಿಡಲು, ಅಪವಿತ್ರವಾಗಿ ಉಂಟಾದ ದೇಹವನ್ನು ಸತಿಯು ಯೋಗಾಗ್ನಿಯಾಗಾಗ್ನಿಗಳಲ್ಲಿ ದಹಿಸಿದುದು ; ಶಿವಶಕ್ತಿಕ್ಷೇತ್ರಗಳು ಉಂಟಾದ ಬಗೆ ; ದೇವೀನಾಮ ಜಪ, ಕ್ಷೇತ್ರಯಾತ್ರೆಯ ಫಲ ; | ...... ೩೬೬–೩೮೮ |
| 31. | ಹಿಮವಂತನಲ್ಲಿ ದೇವಿಯ ಅವತಾರ ಪ್ರಶ್ನೆ ; ತಾರಕಾಸುರನ ಬ್ರಹ್ಮವರಲಾಭ ; ಶಿವೌರಸಪುತ್ರನಿಂದಲೇ ಮರಣ ; ದೇವತೆಗಳು ವಿಷ್ಣುವಿನ ಮಾತಿನಂತೆ ಹಿಮಾಲಯದಲ್ಲಿ ತಪಸ್ಸು ಮಾಡುತ್ತಾ ದೇವೀಸ್ತೋತ್ರಮಾಡಿದ ಬಗೆ ; ದೇವಿಯು ಪ್ರತ್ಯಕ್ಷಳಾದುದು ; ವೈದಿಕಸ್ತೋತ್ರ ; ದೇವತೆಗಳನ್ನೂ ಪರ್ವತರಾಜನನ್ನೂ ಅನುಗ್ರಹಿಸಲು ಅವತಾರ ; | ...... ೩೮೯–೪೦೭ |
| 32. | ದೇವೀಗೀತಾ ; ಪರಬ್ರಹ್ಮತತ್ವವು ಒಂದೇ ಸತ್ಯವು, ಮಿಕ್ಕೆಲ್ಲವೂ ತೋರಿಕೆ ; ಮಾಯೆಯ ಸ್ವರೂಪದ ವಿವರಣೆ ; ಮಾಯೆಯು ದೃಶ್ಯವು, ಆತ್ಮಾದ್ರಷ್ಟೃವು, ದೃಶ್ಯನಲ್ಲ ; ಸಂವಿದ್ರೂಪನು ಎಲ್ಲಕ್ಕೂ ಸಾಕ್ಷೀ, ನಿತ್ಯನು ; ಚಿತ್ಸುಖರೂಪನು ; ಪರಮೇಶ್ವರನ ಜಗಸ್ಸೃಷ್ಟಿಕ್ರಮ: ಪಂಚಭೂತಗಳು, ಇಂದ್ರಿಯಗಳು, ಜೀವನಸ್ವರೂಪ ; | ೪೦೮–೪೩೬ |
| 33. | ಜಗತ್ತಿನಲ್ಲಿ ದೇವಿಯ ಅನುಪ್ರವೇಶ ; ಉಪಾಧಿಭೇದಗಳಿಂದ ತ್ರಿಮೂರ್ತಿಗಳ, ಮತ್ತು ಜೀವರ ಭೇದ, ಭೇದಔಪಾಧಿಕ, ಅವಾಸ್ತವ ; ದೇವಿಯ ವಿಶ್ವರೂಪ ಪ್ರದರ್ಶನ ; | |

| ಅಧ್ಯಾಯ | ವಿಷಯ | ಪುಟಸಂಖ್ಯೆ |
|---|---|---|
| | ವಿಶ್ವರೂಪದ ವಿವರ, ನಡೆವಳಿ ; ದೇವತೆಗಳ ಸ್ತೋತ್ರ ; ಘೋರವಿಶ್ವರೂಪದ ಉಪಸಂಹಾರ | ...... ೪೨೭–೪೪೨ |
| 34. | ಮುಖ್ಯ ಪುರುಷಾರ್ಥವು ಅಜ್ಞಾನನಾಶವೇ ; ಚಿತ್ತಶುದ್ಧಿ ಯಾಗುವ ವರೆಗೆ ಮಾತ್ರ ಕರ್ಮವಿಧಿ ; ತತ್ತ್ವಮಸಿ ವಾಕ್ಯಾರ್ಥ ; ಸೂಕ್ಷ್ಮದೇಹದ ಸ್ವರೂಪ ; ಹ್ರೀಂಕಾರ ಧ್ಯಾನಕ್ರಮ, ದೇವೀಪ್ರಣವ ; | ...... ೪೪೩–೪೫೭ |
| 35. | ಯೋಗದ ಸ್ವರೂಪ, ಅನುಕೂಲವಾದ ಆಸನಗಳು, ಪ್ರಾಣಾಯಾಮದ ಸ್ವರೂಪ, ದೇಹದಲ್ಲಿ ಸುಷುಮ್ನಾನಾಡೀ ಮತ್ತು ಹ್ರೀಂಕಾರಸ್ಥಾನ, ಷಟ್ಚಕ್ರಗಳ ಬಗೆ, ಷಟ್ಚಕ್ರ ಮಾರ್ಗವು ಉಪಾಸಕನಿಗೆ ಹಿತವಾದುದು, ವಾಯು ಧಾರಣೆಯಂತೆ ಮನೋಧಾರಣೆಯೂ ಉಂಟು ; | ೪೫೮–೪೭೩ |
| 36. | ಧ್ಯಾನಯೋಗದ ರೀತಿ ; ಬ್ರಹ್ಮನಲ್ಲಿ ಮನೋಲಯದ ಬಗೆ, ಆತ್ಮಸಾಕ್ಷಾತ್ಕಾರವು, ಅದರ ಫಲವಿಶೇಷವು, ಬ್ರಹ್ಮ ವಿದ್ಯೆಯು ಸುಲಭಸಾಧ್ಯವಲ್ಲವು ; | ...... ೪೭೩–೪೮೧ |
| 37. | ಭಕ್ತಿಯೋಗದ ವಿಶೇಷಗುಣಗಳು, ಪರಾಭಕ್ತಿಯ ವಿಶೇಷ ಸ್ವರೂಪ, ಅಂತಹ ಭಕ್ತನ ವಿಶೇಷಧರ್ಮಗಳು ; ಕರ್ಮ, ಭಕ್ತಿ, ಧ್ಯಾನಯೋಗಗಳು ಕಡೆಗೆ ಜ್ಞಾನಯೋಗದಲ್ಲಿ ಪರಿಣಮಿಸುತ್ತವೆ ; ಬ್ರಹ್ಮಾತ್ಮೈಕ್ಯಜ್ಞಾನವಾಗುವ ಬಗೆ ; | ೪೮೨--೪೯೩ |
| 38. | ದೇವಿಯ ಪೂಜಾವಿಧಿ : ದೇವಿಯ ಪವಿತ್ರಕ್ಷೇತ್ರಗಳು ದೇವಿಯ ನೆಲೆಗಳು ಮತ್ತು ಅಷ್ಟೋತ್ತರಶತನಾಮಗಳು ; ದೇವಿಯ ವ್ರತವಿಶೇಷಗಳು ; ದೇವೀ ಪೂಜೆಯ ಫಲಗಳು ; | ...... ೪೯೩–೫೦೩ |
| 39. | ದೇವಿಯ ಪೂಜೆಯು ಅಂತರ ಮತ್ತು ಬಾಹ್ಯ ಎಂದು ಎರಡು ಬಗೆ ; ತಾಂತ್ರಿಕ ಪೂಜೆಗಿಂತ ವೈದಿಕಪೂಜೆಯು | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಮೇಲಾದುದು : ತಾಮಸ ತಾಂತ್ರಿಕ ಪೂಜಕರು ರಾಜನಿಂದ ನಿಗ್ರಾಹ್ಯರು ; ತಾಂತ್ರಿಕಪೂಜೆಯು ದ್ವಿಜೇತರರಿಗಾಗಿ ಹೇಳಿದೆ ; ಉಪಾಸನೆಗೆ ಎಲ್ಲರೂ ಅಧಿಕಾರಿಗಳು ; ಅವರು ತಮ್ಮ ಯೋಗ್ಯತೆಯನ್ನು ಅನುಸರಿಸಿ ತಕ್ಕುದಾದ ಪೂಜಾಕ್ರಮವನ್ನು ಆರಿಸಿಕೊಂಡು ಮಾಡಬೇಕು ; ಸಂವಿದ್ರೂಪಳಾದ ದೇವಿಯ ತತ್ವದಲ್ಲಿ ಉಪಾಸಕನ ಮನೋಲಯಪೂರ್ವಕವಾದ ಆತ್ಮಲಯವೇ ಆಂತರ ಪೂಜೆಯ ಗುರಿಯು ; | ...... ೫೦೪–೫೧೭ |
| 40. | ದೇವಿಯ ಬಾಹ್ಯಪೂಜಾಕ್ರಮ ; ಧ್ಯಾನದಲ್ಲಿ ಮಾಡಬೇಕಾದ ನ್ಯಾಸವಿಧಾನಕ್ರಮ ; ಆವರಣದೇವತೆಗಳೊಡನೆ ದೇವಿಯ ಪೂಜೆ ; ಈ ಸಗುಣಸಾಕಾರ ಪೂಜೆಯಿಂದ ಮನಸ್ಸು ಏಕಾಗ್ರವಾಗಿ ನಿಲ್ಲುವಂತಾಗುವುದೇ ಗುರಿಯು ; ಇಂತಹ ಪೂಜೆಯ ಪರಮಫಲವು ; ಗೌರೀ ಲಕ್ಷ್ಮೀದೇವಿಯರ ಅವತಾರಕಥೆ ; | ...... ೫೧೮–೫೩೮ |

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ಪ್ರಥಮೋಽಧ್ಯಾಯಃ ॥

### ಮೊದಲನೆಯ ಅಧ್ಯಾಯವು

॥ ಸೂತ ಉವಾಚ ॥

**ಶ್ರುತ್ವೈತಾಂ ತಾಪಸಾ ದಿವ್ಯಾಂ ಕಥಾಂ ರಾಜಾ ಮುದಾನ್ವಿತಃ ।**
**ವ್ಯಾಸಂ ಪಪ್ರಚ್ಛ ಧರ್ಮಾತ್ಮಾ ಪರೀಕ್ಷಿತಸುತಃ ಪುನಃ ॥೧॥**

---

॥ ಶ್ರೀಗಣೇಶಶಾರದಾ ಗುರುಭ್ಯೋನಮಃ ॥

**ಕಾಮ್ಯಾನಾಂ ಕರ್ಮಣಾಂ ಯೈಃ ಫಲಮಭಿಲಷಿತಂ ದುರ್ಗಯಾ ತತ್ಪ್ರದಾತುಂ**
**ಸಂಸಾರಸ್ಸೌಖ್ಯದುಃಖೈರಪಿ ಜನಿಮೃತಿಭಿಃ ವಿಸ್ತೃತೋಽನಾದ್ಯನಂತಃ ।**
**ವೈರಾಗ್ಯಾದ್ಯೇ ವಿವೇಕಾದಿಹಪರವಿಭವಂ ನಶ್ವರಂ ಸಂತ್ಯಜೇಯುಃ**
**ತನ್ಮುಕ್ತೌ ಸೈವ ಶಕ್ತಾ ಪ್ರಭುರಿವ ಭವತಿ ಪ್ರಾಣಿನಾಂ ಬಂಧಮುಕ್ತ್ಯೋಃ ॥**

ಈ ಲೋಕದಲ್ಲಿ ಜನರು ತಮ್ಮ ಸಂಸ್ಕೃತಿ ರುಚಿಗಳಿಗೆ ತಕ್ಕಂತೆ ಯಾವುದಾದರೂ ಫಲವನ್ನು ಉದ್ದೇಶಿಸಿಯೇ ಕರ್ಮಗಳನ್ನು ಮಾಡುತ್ತಿರುತ್ತಾರೆ. ಈ ಕರ್ಮಗಳು ಶಾಸ್ತ್ರಗಳಲ್ಲಿ ವಿಧಿಸಿರುವ ವೈದಿಕಧರ್ಮಗಳಾಗಿರಬಹುದು. ಅಥವಾ ವ್ಯವಸಾಯ ಮುಂತಾದ ಲೌಕಿಕ ಕರ್ಮಗಳಾಗಿರಬಹುದು. ಆ ಕರ್ತೃಗಳಿಗೆ ಆ ಫಲಗಳು ತಕ್ಕ ದೇಶ ಕಾಲ ಸನ್ನಿವೇಶಗಳಲ್ಲಿ ತಲಪುವಂತೆ ಒಂದು ಕ್ಲ್ಪಪ್ತರೀತಿಯಲ್ಲಿ ವ್ಯವಸ್ಥೆಮಾಡಿರುವ ಆದಿಶಕ್ತಿಯೇ ದುರ್ಗಾದೇವಿಯು. ಈ ಕಾರ್ಯವು ಕ್ರಮವಾಗಿ ನೆರವೇರುತ್ತಿರುವುದಕ್ಕೋಸ್ಕರ ಸುಖದುಃಖಗಳಿಂದಲೂ ಹುಟ್ಟು ಸಾವುಗಳಿಂದಲೂ ಕೂಡಿರುವ, ಮೊದಲು ತುದಿಗಳಿಲ್ಲದ, ಈ ಪ್ರಾಪಂಚಿಕಸಂಸಾರವು, ಎಂದರೆ ಕರ್ತೃತ್ವ, ಭೋಕ್ತೃತ್ವ, ಜನನ, ಮರಣಗಳ, ಪರಂಪರೆಯು, ವಿಸ್ತಾರವಾಗಿ ಏರ್ಪಡಿಸಲ್ಪಟ್ಟಿದೆ. ಈ ಕಾಮ್ಯಕರ್ಮಗಳನ್ನು ಮಾಡುವ ಕರ್ತೃಗಳು ಆಯಾಫಲ

|| ಜನಮೇಜಯ ಉವಾಚ ||

**ಸ್ವಾಮಿನ್ ಸೂರ್ಯಾನ್ವಯಾನಾಂ ಚ ರಾಜ್ಞಾಂ ವಂಶಸ್ಯ ವಿಸ್ತರಂ ।**
**ತಥಾ ಸೋಮಾನ್ವಯಾನಾಂ ಚ ಶ್ರೋತುಕಾಮೋಽಸ್ಮಿ ಸರ್ವಥಾ ॥೨॥**

---

ಗಳನ್ನು ಪಡೆಯುತ್ತಿರುತ್ತಾರೆ. ಆದರೆ ಮತ್ತೆ ಕೆಲವರು ಹೀಗೆ ಅನಂತವಾಗಿರುವ ಹುಟ್ಟುಸಾವುಗಳ ನಿರ್ಬಂಧದುಃಖದಿಂದ ಬೇಸರಪಟ್ಟು, ತತ್ವಗಳನ್ನು ವಿಮರ್ಶಿಸಿ, ನಿತ್ಯಾನಿತ್ಯ, ಧರ್ಮಾಧರ್ಮ, ಸುಖದುಃಖಗಳ ಸ್ವರೂಪವನ್ನು ವಿಮರ್ಶಿಸುತ್ತಾರೆ. ಅಂಥವರು ಈ ಕರ್ಮಫಲಗಳು, ಅವು ಐಹಿಕವಾಗಿರಲಿ ಅಥವಾ ಆಮುಷ್ಮಿಕಗಳಾಗಿರಲಿ, ದುಃಖಮಿಶ್ರಗಳಾಗಿವೆ ಎಂದೂ, ಸಾತಿಶಯಗಳಾದುದರಿಂದ ಅಸೂಯಾಕರಗಳೆಂದೂ, ಕಡೆಗೆ ನಾಶವನ್ನೂ ಪಡೆಯುತ್ತವೆ ಎಂದೂ, ಮನಗಂಡು, ನಿತ್ಯಶುದ್ಧಸುಖವಾದ ಮೋಕ್ಷವನ್ನು ಅಪೇಕ್ಷಿಸುತ್ತಾರೆ. ನಿಷ್ಕಾಮಕರ್ಮಾಚರಣೆಯಿಂದ ಚಿತ್ತವು ಶುದ್ಧವಾಗಿ ಜ್ಞಾನಿಗಳಾಗಿರುವ ಅಂಥವರಿಗೆ ಈ ಸಂಸಾರದುಃಖಸಂಬಂಧದ ನಿರ್ಬಂಧದಿಂದ ಬಿಡುಗಡೆ ಎಂಬ ಮೋಕ್ಷವನ್ನು ಅನುಗ್ರಹಿಸಲೂ ಆ ಸರ್ವಶಕ್ತಿಸ್ವರೂಪಳಾದ ದುರ್ಗಾದೇವಿಯೇ ಸಮರ್ಥಳಾಗಿರುತ್ತಾಳೆ. ಈ ಲೋಕದಲ್ಲೂ ಪ್ರಭುಗಳು ತಪ್ಪುಮಾಡಿದವರನ್ನು, ಎಂದರೆ ಧರ್ಮವನ್ನು ಅತಿಕ್ರಮಿಸಿ ಅಧರ್ಮವನ್ನು ಮಾಡಿದ ಜನರನ್ನು, ಶಿಕ್ಷಿಸಿ ಬುದ್ಧಿಕಲಿಸಲು ಶರೆಮನೆಯಲ್ಲಿಡುತ್ತಾರೆ. ಅಂಥಾ ಬಂದಿಗಳು ತಮ್ಮ ನಡತೆಯನ್ನು ಮಾರ್ಪಡಿಸಿಕೊಂಡು ಆ ಪ್ರಭುಗಳನ್ನೇ ಸಂತೋಷಪಡಿಸಿದರೆ, ಆ ಪ್ರಭುಗಳಿಂದಲೇ ಬಿಡುಗಡೆಯ ಸ್ವಾತಂತ್ರ್ಯದ ಸೌಖ್ಯವನ್ನೂ ಪುನಃ ಮುಂಚಿನಂತೆಯೇ ಪಡೆದು ಸುಖಿಗಳಾಗುತ್ತಾರೆ. ಅದರಂತೆಯೇ ಜಗನ್ಮಾತೆಯಾದ ದುರ್ಗಾದೇವೀ ಸ್ವರೂಪಳಾದ ರಾಜರಾಜೇಶ್ವರಿಯೂ ಈ ಲೋಕಗಳಲ್ಲಿರುವ ಎಲ್ಲ ಪ್ರಾಣಿಗಳಿಗೂ ಅವರ ಕರ್ಮಾನುಸಾರವಾಗಿ ಬಂಧವನ್ನೂ ಮೋಕ್ಷವನ್ನೂ ಉಂಟುಮಾಡಲು ಸಮರ್ಥಳಾಗಿರುವಳು. ಆ ತಾಯಿಯು ಎಲ್ಲರಿಗೂ ಸದ್ಬುದ್ಧಿಯನ್ನೂ ನಿತ್ಯಾನಂದವನ್ನೂ ಅನುಗ್ರಹಿಸುತ್ತಿರಲಿ.

ಸೂತಮುನಿಯು ಹೇಳಿದನು—ತಪಸ್ವಿಗಳಾದ ಶೌನಕಾದಿ ಋಷಿಗಳಿರಾ, ವ್ಯಾಸಮುನಿಯು ಹೇಳಿದ ದಿವ್ಯವಾದ ಈ ದೇವೀಕಥೆಯನ್ನು ಧರ್ಮಾತ್ಮನೂ, ಪರೀಕ್ಷಿದ್ರಾಜನ ಪುತ್ರನೂ ಅದ ಜನಮೇಜಯರಾಜನೂ ಕೇಳಿ, ಸಂತೋಷಗೊಂಡು ವ್ಯಾಸಮಹರ್ಷಿಯನ್ನು ಪುನಃ ಪ್ರಶ್ನೆ ಮಾಡಿದನು. ||೧||

ಜನಮೇಜಯರಾಜನು ಹೇಳಿದನು—ಸ್ವಾಮಿಯೇ, ಸೂರ್ಯ ಮತ್ತು ಚಂದ್ರವಂಶಗಳಲ್ಲಿ ಉತ್ಪನ್ನರಾದ ರಾಜರ ಚರಿತ್ರೆಯನ್ನು ವಿಸ್ತಾರವಾಗಿ ಕೇಳಲಿಚ್ಛಿ

**ಕಥಯಾನಘ ಸರ್ವಜ್ಞ ಕಥಾಂ ಪಾಪಪ್ರಣಾಶಿನೀಂ ।**
**ಚರಿತಂ ಭೂಪತೀನಾಂ ಚ ವಿಸ್ತರಾದ್ವಂಶಯೋರ್ದ್ವಯೋಃ ॥೩॥**

**ತೇ ಹಿ ಸರ್ವೇ ಪರಾಶಕ್ತಿಭಕ್ತಾ ಇತಿ ಮಯಾ ಶ್ರುತಂ ।**
**ದೇವೀಭಕ್ತಸ್ಯ ಚರಿತಂ ಶೃಣ್ವನ್ಕೋಽಸ್ತಿ ವಿರಕ್ತಿಭಾಕ್ ॥೪॥**

**ಇತಿ ರಾಜರ್ಷಿಣಾ ಪೃಷ್ಟೋ ವ್ಯಾಸಃ ಸತ್ಯವತೀಸುತಃ ।**
**ತಮುವಾಚ ಮುನಿಶ್ರೇಷ್ಠಃ ಪ್ರಸನ್ನವದನೋ ಮುನಿಃ ॥೫॥**

॥ ವ್ಯಾಸ ಉವಾಚ ॥

**ನಿಶಾಮಯ ಮಹಾರಾಜ ವಿಸ್ತರಾದ್ಗದತೋ ಮಮ ।**
**ಸೋಮಸೂರ್ಯಾನ್ವಯಾನಾಂ ಚ ತಥಾಽನ್ಯೇಷಾಂ ಸಮುದ್ಭವಂ ॥೬॥**

---

ಸುವೆನು. ಪಾಪರಹಿತನಾದ ಓ ವ್ಯಾಸಮುನಿಯೇ, ನೀನು ಸರ್ವಜ್ಞನು. ಆದುದರಿಂದ ಕೇಳುವುದರಿಂದಲೇ ಪಾಪಗಳನ್ನು ನಾಶಮಾಡುವುದಾದ, ಈ ಎರಡು ವಂಶಗಳ ರಾಜರ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ಹೇಳು. ಇವರಿಂದಲೂ ಹೆಚ್ಚು ಪ್ರಯೋಜನವಾಗುತ್ತದೆ. ಹೇಗೆಂದರೆ—ಆ ರಾಜರೆಲ್ಲರೂ ಪರಾಶಕ್ತಿಯಾದ ದೇವಿಯ ಭಕ್ತರೆಂದು ನಾನು ಕೇಳಿರುವೆನು. ಆದುದರಿಂದ "ಮದ್ಭಕ್ತ್ಯಪೇಕ್ಷಯಾ ಭಕ್ತೇ ಮಮ ಭಕ್ತಿಸ್ತು ಸಿದ್ಧಿದಾ॥" ಎಂದು ದೇವೀಪುರಾಣದಲ್ಲಿ ಹೇಳಿರುವಂತೆ ದೇವೀಭಕ್ತರ ಚರಿತ್ರೆಯನ್ನು ಶ್ರವಣಮಾಡುವ ಯಾವ ಪುರುಷನು ತಾನೇ ಅಂತಹ ಭಕ್ತರ ಕಥಾಶ್ರವಣವನ್ನು ಸಾಕೆಂದು ಹೇಳುವನು? ಏಕೆಂದರೆ ದೇವಿಯ ಚರಿತ್ರೆಯ ಕಥೆಗಳನ್ನು ಆದರದಿಂದ ಕೇಳುವುದು ದೇವಿಗೆ ಹೆಚ್ಚು ಪ್ರೀತಿಯನ್ನುಂಟುಮಾಡುತ್ತದೆ. ಆದುದರಿಂದ ದೇವಿಯು ಭಕ್ತಪರಾಧೀನಳೆಂದು ಚನ್ನಾಗಿ ವ್ಯಕ್ತವಾಗುತ್ತದೆಂದು ತಾತ್ಪರ್ಯವು. ॥೨-೩-೪॥

ಈ ರೀತಿಯಾಗಿ ಜನಮೇಜಯರಾಜನು ಕೇಳಲು, ಮುನಿಗಳಲ್ಲಿ ಶ್ರೇಷ್ಠನೂ, ಸತ್ಯವತಿಯ ಪುತ್ರನೂ ಆದ ವ್ಯಾಸಋಷಿಯು ಸಂತೋಷದಿಂದ ಕೂಡಿದ ಮುಖಮುದ್ರೆಯುಳ್ಳವನಾಗಿ ಆ ರಾಜನನ್ನು ಕುರಿತು ಹೀಗೆ ಹೇಳಿದನು. ॥೫॥

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ, ಸೋಮಸೂರ್ಯವಂಶಗಳಲ್ಲಿಯೂ, ಇತರ ವಂಶಗಳಲ್ಲಿಯೂ ಉತ್ಪನ್ನರಾದವರ ಚರಿತ್ರೆಯನ್ನು ವಿಸ್ತಾರವಾಗಿ ಹೇಳುವೆನು, ಕೇಳು. ॥೬॥

ವಿಷ್ಣೋರ್ನಾಭಿಸರೋಜಾದ್ವೈ ಬ್ರಹ್ಮಾಽಭೂಚ್ಚತುರಾನನಃ ।
ತಪಸ್ತಸ್ಮಾತ್ತು ಸಮಾರಾಧ್ಯ ಮಹಾದೇವೀಂ ಸುದುರ್ಗಮಾಂ ॥೭॥

ತಯಾ ದತ್ತವರೋ ಧಾತಾ ಜಗತ್ಕರ್ತುಂ ಸಮುದ್ಯತಃ ।
ನಾಶಕನ್ಮಾನುಷೀಂ ಸೃಷ್ಟಿಂ ಕರ್ತುಂ ಲೋಕಪಿತಾಮಹಃ ॥೮॥

ವಿಚಿಂತ್ಯ ಬಹುಧಾ ಚಿತ್ತೇ ಸೃಷ್ಟ್ಯರ್ಥಂ ಚತುರಾನನಃ ।
ನ ವಿಸ್ತಾರಂ ಜಗಾಮಾಶು ರಚಿತಾಽಪಿ ಮಹಾತ್ಮನಾ ॥೯॥

ಸಸರ್ಜ ಮಾನಸಾನ್ಪುತ್ರಾನ್ಸಪ್ತಸಂಖ್ಯಾನ್ಪ್ರಜಾಪತಿಃ ।
ಮರೀಚಿರಂಗಿರಾತ್ರಿಶ್ಚ ವಸಿಷ್ಠಃ ಪುಲಹಃ ಕ್ರತುಃ ।
ಪುಲಸ್ತ್ಯಶ್ಚೇತಿ ವಿಖ್ಯಾತಾಃ ಸಪ್ತೈತೇ ಮಾನಸಾಃ ಸುತಾಃ ॥೧೦॥

---

ಪೂರ್ವದಲ್ಲಿ ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖಬ್ರಹ್ಮನು ಜನಿಸಿದನು. ಆ ಬ್ರಹ್ಮನು ಸಾಮಾನ್ಯರಿಂದ ಹೊಂದಲಸಾಧ್ಯಳಾದ ಮಹಾದೇವಿಯನ್ನು ತಪಸ್ಸಿನಿಂದ ಆರಾಧಿಸಿ ಆ ಜಗನ್ಮಾತೆಯಿಂದ ವರವನ್ನು ಪಡೆದು ಜಗತ್ಸೃಷ್ಟಿಮಾಡಲುಪಕ್ರಮಿಸಿದನು. ಆದರೆ ಮನುಷ್ಯರೇ ಮೊದಲಾದ ಚರಾಚರಾತ್ಮಕವಾದ ಈ ಪ್ರಪಂಚದ ಸೃಷ್ಟಿಯನ್ನು ಮಾಡಲು ಅವನಿಗೆ ಸಾಧ್ಯವಾಗಲಿಲ್ಲ, ಎಂದರೆ ಸೃಷ್ಟಿಕಾರ್ಯವನ್ನು ಕ್ರಮವಾಗಿ ಮುಂದುವರಿಯಿಸಿ ಸಮಗ್ರವಾಗಿ ವಿವರಗಳೊಡನೆ ವಿಸ್ತಾರವಾಗಿ ನೆರವೇರಿಸಲು ಬ್ರಹ್ಮನೊಬ್ಬನಿಗೇ ಸಾಧ್ಯವಾಗಲಿಲ್ಲ. ಅದಕ್ಕಾಗಿ ಮಾನಸಪುತ್ರರನ್ನು ಸೃಜಿಸಿದನೆಂದು ತಾತ್ಪರ್ಯವು. ॥೭-೮॥

ಸೃಷ್ಟಿವಿಚಾರದಲ್ಲಿ ಬ್ರಹ್ಮನು ಬಹಳ ಚನ್ನಾಗಿ ಮನಸ್ಸಿನಲ್ಲಿ ಎಷ್ಟು ಯೋಚಿಸಿ ಪ್ರಾರಂಭಿಸಿದರೂ ಮಾನುಷಸೃಷ್ಟಿಯನ್ನು ಪೂರ್ಣವಾಗಿ ಮಾಡಲು ಅದರ ವಿವರವು ಅಪಾರವಾಗಿ ಅವನೊಬ್ಬನಿಂದ ಮುಗಿಯಲೇ ಇಲ್ಲವು. ಅದುದರಿಂದ, ॥೯॥

ಬ್ರಹ್ಮನು ಮೊದಲು, ಮರೀಚಿ, ಅಂಗಿರಸ್ಸು, ಅತ್ರಿ, ವಸಿಷ್ಠ, ಪುಲಹ, ಕ್ರತು, ಪುಲಸ್ತ್ಯ ಎಂಬ ಅಯೋನಿಜರಾದ, ಮನಶ್ಶಕ್ತಿಯಿಂದಲೇ ಹೊರಹೊಮ್ಮಿದ, ಏಳು ಜನ ಪುತ್ರರನ್ನು ಸೃಷ್ಟಿಸಿದನು. ಈ ಏಳು ಜನರೂ ಬ್ರಹ್ಮನ ಮಾನಸಪುತ್ರರೆಂದು ಪ್ರಸಿದ್ಧರಾಗಿರುವರು. ॥೧೦॥

**ರುದ್ರೋ ರೋಷಾತ್ಸಮುತ್ಪನ್ನೋಽಪ್ಯುತ್ಸಂಗಾನ್ನಾರದೋಽಭವತ್ ।**
**ದಕ್ಷೋಽಙ್ಗುಷ್ಠಾತ್ತಥಾನ್ಯೇಽಪಿ ಮಾನಸಾಃ ಸನಕಾದಯಃ ॥೧೧॥**

**ವಾಮಾಂಗುಷ್ಠಾದ್ದಕ್ಷಪತ್ನೀ ಜಾತಾ ಸರ್ವಾಂಗಸುಂದರೀ ।**
**ವೀರಿಣೀ ನಾಮ ವಿಖ್ಯಾತಾ ಪುರಾಣೇಷು ಮಹೀಪತೇ ॥೧೨॥**

**ಅಸಿಕ್ನೀತಿ ಚ ನಾಮ್ನಾ ಸಾ ಯಸ್ಯಾಂ ಜಾತೋಽಥ ನಾರದಃ ।**
**ದೇವರ್ಷಿಪ್ರವರಃ ಕಾಮಂ ಬ್ರಹ್ಮಣೋ ಮಾನಸಃ ಸುತಃ ॥೧೩॥**

॥ ಜನಮೇಜಯ ಉವಾಚ ॥

**ಅತ್ರ ಮೇ ಸಂಶಯೋ ಬ್ರಹ್ಮನ್ಯದುಕ್ತಂ ಭವತಾ ವಚಃ ।**
**ವೀರಿಣ್ಯಾಂ ನಾರದೋ ಜಾತೋ ದಕ್ಷಾದಿತಿ ಮಹಾತಪಾಃ ॥೧೪॥**

**ಕಥಂ ದಕ್ಷಸ್ಯ ಪತ್ನ್ಯಾಂ ತು ವೀರಿಣ್ಯಾಂ ನಾರದೋ ಮುನಿಃ ।**
**ಜಾತೋ ಹಿ ಬ್ರಹ್ಮಣಃ ಪುತ್ರೋ ಧರ್ಮಜ್ಞಸ್ತಾಪಸೋತ್ತಮಃ॥೧೫॥**

---

ಕೋಪದಿಂದ ರುದ್ರನೂ, ತೊಡೆಯಿಂದ ನಾರದನೂ, ಬಲದ ಅಂಗುಷ್ಠದಿಂದ ದಕ್ಷನೂ ಜನಿಸಿದರು. ಹಾಗೆಯೇ ಸನಕಾದಿ ಮಾನಸಪುತ್ರರೂ ಹುಟ್ಟಿದರು. ॥೧೧॥

ಎಡದ ಅಂಗುಷ್ಠದಿಂದ ದಕ್ಷನ ಪತ್ನಿಯಾದ ಓರ್ವ ಸರ್ವಾಂಗಸುಂದರಿಯು ಜನಿಸಿದಳು. ಇವಳು ವೀರಿಣೀ ಎಂಬ ಹೆಸರಿನಿಂದ ಪುರಾಣಗಳಲ್ಲಿ ಪ್ರಸಿದ್ಧಳಾಗಿರುವಳು. ॥೧೨॥

ಈ ವೀರಿಣೀದೇವಿಗೆ ಅಸಿಕ್ನೀಯೆಂದೂ ಹೆಸರು. ಬ್ರಹ್ಮನ ಮಾನಸಪುತ್ರನೂ ದೇವರ್ಷಿಗಳಲ್ಲಿ ಶ್ರೇಷ್ಠನೂ ಆದ ನಾರದಮುನಿಯು ಈ ಅಸಿಕ್ನಿಯಲ್ಲಿಯೇ ಜನಿಸಿದವನು. ॥೧೩॥

ಜನಮೇಜಯನು ಹೇಳಿದನು—ಓ ಬ್ರಹ್ಮನಿಷ್ಠನೇ, ಇಲ್ಲಿ ನನಗೆ ಒಂದು ಸಂಶಯವು ಬಂದಿರುವುದು. ದಕ್ಷನ ಪತ್ನಿಯಾದ ವೀರಿಣಿಯಲ್ಲಿ ಮಹಾತಪಸ್ವಿಯಾದ ನಾರದನು ದಕ್ಷನಿಂದ ಜನಿಸಿದನೆಂದು ಹೇಳಿದೆಯಲ್ಲವೇ? ಹಿಂದೆ ಧರ್ಮಜ್ಞನೂ, ತಪಸ್ವಿಗಳಲ್ಲಿ ಶ್ರೇಷ್ಠನೂ ಆದ ಈ ನಾರದಮುನಿಯು ಬ್ರಹ್ಮನ ಪುತ್ರನೆಂದು ಸಹ ನೀನೇ ಹೇಳಿರುವೆ. ಹೀಗಿರುವಲ್ಲಿ ದಕ್ಷಪತ್ನಿಯಾದ ವೀರಿಣೀದೇವಿಯಲ್ಲಿ ಈ ತಾಪಸಶ್ರೇಷ್ಠನಾದ ನಾರದಮುನಿಯು ಜನಿಸಿದ ಬಗೆಯೆಂತು? ॥೧೪-೧೫॥

ವಿಚಿತ್ರಮಿದಮಾಖ್ಯಾತಂ ಭವತಾ ನಾರದಸ್ಯ ಚ ।
ದಕ್ಷಾಜ್ಜನ್ಮಾಸ್ಯ ಭಾರ್ಯಾಯಾಂ ತದ್ವದಸ್ವ ಸವಿಸ್ತರಂ ॥೧೬॥

ಪೂರ್ವದೇಹಃ ಕಥಂ ಮುಕ್ತಃ ಶಾಪಾತ್ಕಸ್ಯ ಮಹಾತ್ಮನಾ ।
ನಾರದೇನ ಬಹುಜ್ಞೇನ ಕಸ್ಮಾಜ್ಜನ್ಮ ಕೃತಂ ಮುನೇ ॥೧೭॥

॥ ವ್ಯಾಸ ಉವಾಚ ॥

ಬ್ರಹ್ಮಣಾಽಸೌ ಸಮಾದಿಷ್ಟೋ ದಕ್ಷಃ ಸೃಷ್ಟ್ಯರ್ಥಮಾದಿತಃ ।
ಪ್ರಜಾಃ ಸೃಜೇತಿ ಸುಭೃಶಂ ವೃದ್ಧಿಹೇತೋಃ ಸ್ವಯಂಭುವಾ ॥೧೮॥

ತತಃ ಪಂಚಸಹಸ್ರಾಂಶ್ಚ ಜನಯಾಮಾಸ ವೀರ್ಯವಾನ್ ।
ದಕ್ಷಃ ಪ್ರಜಾಪತಿಃ ಪುತ್ರಾನ್ವೀರಿಣ್ಯಾಂ ಬಲವತ್ತರಾನ್ ॥೧೯॥

ದೃಷ್ಟ್ವಾ ತಾನ್ನಾರದಃ ಪುತ್ರಾನ್ಸರ್ವಾನ್ವರ್ಧಯಿಷೂನ್ಪ್ರಜಾಃ ।
ಉವಾಚ ಪ್ರಹಸನ್ವಾಚಂ ದೇವರ್ಷಿಃ ಕಾಲನೋದಿತಃ ॥೨೦॥

---

ನೀನು ಹೇಳಿದ ಈ ನಾರದನ ಜನನದ ವಿಚಾರವು ವಿಚಿತ್ರವಾಗಿರುವುದು. ಈ ನಾರದ ಮುನಿಯು ತನ್ನ ಪೂರ್ವದೇಹವನ್ನು ಹೇಗೆ ತ್ಯಜಿಸಿದನು? ಯಾರ ಶಾಪದಿಂದ ಜ್ಞಾನಿಯಾದ ಈ ನಾರದನು ದಕ್ಷಬ್ರಹ್ಮನ ಪತ್ನಿಯಲ್ಲಿ ಜನ್ಮಜನ್ನು ತಾಳಿದನು? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು. ॥೧೬-೧೭॥

ವ್ಯಾಸಮುನಿಯು ಹೇಳಿದನು—ಪೂರ್ವದಲ್ಲಿ ಪ್ರಜಾಸೃಷ್ಟಿಗಾಗಿ ಬ್ರಹ್ಮನು ಈ ದಕ್ಷಪ್ರಜಾಪತಿಗೆ ಪ್ರಜೆಗಳನ್ನು ಸೃಷ್ಟಿಮಾಡೆಂದು ಆಜ್ಞೆಮಾಡಿದನು. ॥೧೮॥

ಬಳಿಕ ಆ ದಕ್ಷಪ್ರಜಾಪತಿಯು ಬ್ರಹ್ಮನ ಅಪ್ಪಣೆಯಂತೆ ತನ್ನ ಪತ್ನಿಯಾದ ವೀರಣೀದೇವಿಯಲ್ಲಿ ಬಲಶಾಲಿಗಳಾದ ಐದುಸಹಸ್ರ ಪುತ್ರರನ್ನು ಉತ್ಪಾದನೆಮಾಡಿದನು. ॥೧೯॥

ಈ ಪುತ್ರರೂ ಇವರಿಂದ ಉತ್ಪತ್ತಿಯಾದ ಪ್ರಜೆಗಳೂ ಸಹ ಬೆಳೆದು ಅಭಿವೃದ್ಧಿಹೊಂದುತ್ತಿರುವುದನ್ನು ದೇವರ್ಷಿಯಾದ ನಾರದನು ನೋಡಿ ಕಾಲದಿಂದ ಪ್ರೇರಿತನಾಗಿ ನಗುತ್ತಾ ಹೀಗೆ ಹೇಳಿದನು. ॥೨೦॥

ಭುವಃ ಪ್ರಮಾಣಮಜ್ಞಾತ್ವಾ ಸ್ರಷ್ಟುಕಾಮಾಃ ಪ್ರಜಾಃ ಕಥಂ ।
ಲೋಕಾನಾಂ ಹಾಸ್ಯತಾಂ ಯೂಯಂ ಗಮಿಷ್ಯಥ ನ ಸಂಶಯಃ॥೨೧॥

ಪೃಥಿವ್ಯಾ ವೈ ಪ್ರಮಾಣಂ ತು ಜ್ಞಾತ್ವಾ ಕಾರ್ಯಃ ಸಮುದ್ಯಮಃ ।
ಕೃತೋಽಸೌ ಸಿದ್ಧಿಮಾಯಾತಿ ನಾನ್ಯಥೇತಿ ವಿನಿಶ್ಚಯಃ ॥೨೨॥

ಬಾಲಿಶಾ ಬತ ಯೂಯಂ ವೈ ಯದಜ್ಞಾತ್ವಾ ಭುವಸ್ತ್ವಲಂ ।
ಸಮುದ್ಯತಾಃ ಪ್ರಜಾಃ ಕರ್ತುಂ ಕಥಂ ಸಿದ್ಧಿರ್ಭವಿಷ್ಯತಿ ॥೨೩॥

॥ ವ್ಯಾಸ ಉವಾಚ ॥

ನಾರದೇನೈವಮುಕ್ತಾಸ್ತೇ ಹರ್ಯಶ್ವಾ ದೈವಯೋಗತಃ ।
ಅನ್ಯೋನ್ಯಮೂಚುಃ ಸಹಸಾ ಸಮ್ಯಗಾಹ ಮುನಿಃ ಕಿಲ ॥೨೪॥

---

ಭೂಮಿಯ ವಿಸ್ತಾರವನ್ನು ಎಂದರೆ ಭೂಮಿಯಲ್ಲಿ ಎಷ್ಟು ಜನರು ಪರಸ್ಪರ ಘರ್ಷಣೆ ಇಲ್ಲದ ಜೀವನದಿಂದ ನೆಮ್ಮದಿಯಾಗಿರಲು ತಕ್ಕ ಅವಕಾಶಸೌಕರ್ಯಗಳಿವೆ ಎಂಬುದನ್ನು ತಿಳಿಯದೆ ಸುಮ್ಮನೆ ಪ್ರಜೆಗಳನ್ನು ಏಕೆ ಸೃಷ್ಟಿಮಾಡುತ್ತಿದ್ದೀರಿ? ಈ ಅತಿಯಾದ ನಿಮ್ಮ ಪ್ರಜೋತ್ಪಾದನಕಾರ್ಯವು ಲೋಕದಲ್ಲಿ ನಗೆಗೀಡಾಗುವುದ ರಲ್ಲಿ ಸಂಶಯವಿಲ್ಲವು! ॥೨೧॥

ಆದುದರಿಂದ ಭೂಮಿಯ ವಿಸ್ತಾರವನ್ನು ತಿಳಿದೇ ಈ ಕಾರ್ಯವಲ್ಲಿ ತೊಡಗ ಬೇಕು. ಹಾಗೆ ಮಾಡಿದರೇ ಕಾರ್ಯವು ಯಶಸ್ವಿಯಾಗಿ ಸಾರ್ಥಕವಾಗಿ ಸಿದ್ಧಿ ಯಾಗುವುದಲ್ಲದೆ ಅನ್ಯಥಾ ಆಗಲಾರದು. ಇದು ನಿಶ್ಚಯವು. ॥೨೨॥

ಹಾಗೆ ಮಾಡುವುದನ್ನು ಬಿಟ್ಟು ಭೂಮಿಯ ವಿಸ್ತಾರವನ್ನು ತಿಳಿಯದೆ ಮನ ಸ್ವಿಯಾಗಿ ಪ್ರಜೆಗಳನ್ನು ಸೃಷ್ಟಿಸಲು ಹೊರಟಿರುವ ನಿಮ್ಮ ಪ್ರಯತ್ನವು ಹುಡು ಗಾಟಿಕೆಯಂತೆ ಇರುವುದು! ಇಂತಹ ಮಿತಿಮೀರಿದ ಕಾರ್ಯವು ಹೇಗೆ ತಾನೇ ಯಶಸ್ವಿಯಾಗುವುದು? ॥೨೩॥

ವ್ಯಾಸಮುನಿಯು ಹೇಳಿದನು—ನಾರದನು ಹೀಗೆ ಹೇಳಲು ಹರ್ಯಶ್ವಾದಿ ದಕ್ಷಪುತ್ರರು, ಈ ನಾರದಮುನಿಯು ಹೇಳುವುದು ಯೋಗ್ಯವಾಗಿದೆಯೆಂದು ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು. ॥೨೪॥

ಜ್ಞಾತ್ವಾ ಪ್ರಮಾಣಮುರ್ವ್ಯಾಸ್ತು ಸುಖಂ ಸ್ರಕ್ಷ್ಯಾಮಹೇ ಪ್ರಜಾಃ ।
ಇತಿ ಸಂಚಿಂತ್ಯ ತೇ ಸರ್ವೇ ಪ್ರಯಾತಾಃ ಪ್ರೇಕ್ಷಿತುಂ ಭುವಃ ॥೨೫॥

ತಲಂ ಸರ್ವಂ ಪರಿಜ್ಞಾತುಂ ವಚನಾನ್ನಾರದಸ್ಯ ಚ ।
ಪ್ರಾಚ್ಯಾಂ ಕೇಚಿದ್ಗತಾಃ ಕಾಮಂ ದಕ್ಷಿಣಸ್ಯಾಂ ತಥಾಽಪರೇ ॥೨೬॥

ಪ್ರತೀಚ್ಯಾಮುತ್ತರಸ್ಯಾಂ ತು ಕೃತೋತ್ಸಾಹಾಃ ಸಮಂತತಃ ।
ದಕ್ಷಪುತ್ರಾನ್ಗತಾನ್ ದೃಷ್ಟ್ವಾ ಪೀಡಿತಸ್ತು ಶುಚಾ ಭೃಶಂ ॥೨೭॥

ಅನ್ಯಾನುತ್ಪಾದಯಾಮಾಸ ಪ್ರಜಾರ್ಥಂ ಕೃತನಿಶ್ಚಯಃ ।
ತೇಽಪಿ ತತ್ರೋದ್ಯತಾಃ ಕರ್ತುಂ ಪ್ರಜಾರ್ಥಮುದ್ಯಮಂ ಸುತಾಃ॥೨೮॥

ನಾರದಃ ಪ್ರಾಹ ತಾನ್ದೃಷ್ಟ್ವಾ ಪೂರ್ವಂ ಯದ್ವಚನಂ ಮುನಿಃ ।
ಬಾಲಿಶಾ ಬತ ಯೂಯಂ ವೈ ಯದಜ್ಞಾತ್ವಾ ಭುವಃ ಕಿಲ ॥೨೯॥

---

ಭೂಮಿಯ ವಿಸ್ತಾರವನ್ನು ತಿಳಿದೇ ಪ್ರಜೆಗಳನ್ನು ಸೃಷ್ಟಿಮಾಡೋಣವೆಂದು ಯೋಚಿಸಿ ಅವರೆಲ್ಲರೂ ಭೂಮಿಯ ವಿಸ್ತಾರಸೌಕರ್ಯಗಳನ್ನು ನೋಡಿಕೊಂಡು ಬರಲು ಹೊರಟರು. ॥೨೫॥

ನಾರದಮುನಿಯ ಮಾತಿನಂತೆ ಭೂತಲವನ್ನು ತಿಳಿದುಬರಲು ಕೆಲವರು ಪೂರ್ವದಿಕ್ಕಿಗೂ, ಕೆಲವರು ದಕ್ಷಿಣದಿಕ್ಕಿಗೂ ಮತ್ತೆ ಕೆಲವರು ಪಶ್ಚಿಮೋತ್ತರದಿಕ್ಕುಗಳಿಗೂ ತಮಗೆ ಇಷ್ಟಬಂದಂತೆ ಎಲ್ಲೆಡೆಯಲ್ಲಿಯೂ ಭೂಮಿಯನ್ನು ಸುತ್ತಿಬರಲು ಉತ್ಸಾಹದಿಂದ ಹೊರಟುಹೋದರು. ॥೨೬॥

ತನ್ನ ಮಕ್ಕಳು ಈರೀತಿ ಭೂಸಂಚಾರಕ್ಕಾಗಿ ಹೊರಟುಹೋದುದನ್ನು ನೋಡಿ, ದಕ್ಷನು ದುಃಖಪೀಡಿತನಾಗಿ, ಪ್ರಜಾಸೃಷ್ಟಿಯನ್ನು ಮುಂದುವರಿಸಲು ಮತ್ತೆ ಬೇರೆ ಮಕ್ಕಳನ್ನು ಉತ್ಪಾದನೆಮಾಡಿದನು. ॥೨೭॥

ಹೊಸದಾಗಿ ಜನಿಸಿದ ಈ ದಕ್ಷಪುತ್ರರೂ ಪ್ರಜೋತ್ಪಾದನಕಾರ್ಯದಲ್ಲಿ ತೊಡಗಿರುವುದನ್ನು ನಾರದನು ನೋಡಿ, ತಾನು ಹಿಂದೆ ಹೇಳಿದ ಮಾತನ್ನು ಅವರಿಗೂ ಹೇಳಿದನು. ॥೨೮॥

ಭೂಮಿಯ ವಿಸ್ತಾರವನ್ನು ತಿಳಿಯದೆ ಪ್ರಜೆಗಳನ್ನು ಸೃಷ್ಟಿಮಾಡಲು ಹೊರಟಿರುವ ನಿಮ್ಮ ಉದ್ಯಮವು ಹುಡುಗರ ಆಟದಂತಿರುವುದು. ಹೀಗಿದ್ದರೂ ಏತಕ್ಕಾಗಿ ಪ್ರಜೆಗಳನ್ನು ಹೆಚ್ಚಿಸುವ ಕಾರ್ಯದಲ್ಲಿ ತೊಡಗಿರುವಿರಿ? ಎಂದು ಕೇಳಿದನು. ॥೨೯॥

ಪ್ರಮಾಣಂ ತು ಪ್ರಜಾಃ ಕರ್ತುಂ ಪ್ರವೃತ್ತಾಃ ಕೇನ ಹೇತುನಾ ।
ಶ್ರುತ್ವಾ ವಾಕ್ಯಂ ಮುನೇಸ್ತೇಽಪಿ ಮತ್ವಾ ಸತ್ಯಂ ವಿಮೋಹಿತಾಃ ॥೩೦॥

ಜಗ್ಮುಃ ಸರ್ವೇ ಯಥಾ ಪೂರ್ವಂ ಭ್ರಾತರಶ್ಚಲಿತಾಸ್ತಥಾ ।
ತಾನ್ಸುತಾನ್ಪ್ರಸ್ಥಿತಾನ್ದೃಷ್ಟ್ವಾ ದಕ್ಷಃ ಕೋಪಸಮನ್ವಿತಃ ॥೩೧॥

ಶಶಾಪ ನಾರದಂ ರೋಷಾತ್ಪುತ್ರಶೋಕಸಮುದ್ಭವಾತ್ ।

॥ ದಕ್ಷ ಉವಾಚ ॥

ನಾಶಿತಾ ಮೇ ಸುತಾ ಯಸ್ಮಾತ್ತಸ್ಮಾನ್ನಾಶಮವಾಪ್ನುಹಿ ॥೩೨॥

ಪಾಪೇನಾನೇನ ದುರ್ಬುದ್ಧೇ ಗರ್ಭವಾಸಂ ವ್ರಜೇತಿ ಚ ।
ಪುತ್ರೋ ಮೇ ಭವ ಕಾಮಂ ತ್ವಂ ಯತೋ ಮೇ ಭ್ರಂಶಿತಾಃ ಸುತಾಃ ॥೩೩॥

ಇತಿ ಶಪ್ತಸ್ತತೋ ಜಾತೋ ವೀರಿಣ್ಯಾಂ ನಾರದೋ ಮುನಿಃ ।
ಷಷ್ಟಿರ್ಭಾರ್ಯಯೋಽಸೃಜತ್ಕನ್ಯಾ ವೀರಿಣ್ಯಾಮಿತಿಃ ನಃ ಶ್ರುತಂ ॥೩೪॥

---

ನಾರದನ ಈ ವಿಧವಾದ ಮಾತನ್ನು ಕೇಳಿ ಆ ದಕ್ಷಪುತ್ರರೂ ಅದನ್ನು ನಿಜವೆಂದು ನಂಬಿ, ಹಿಂದೆ ತಮ್ಮ ಸಹೋದರರು ಹೋದಂತೆ ತಾವೂ ಭೂಸಂಚಾರಕ್ಕಾಗಿ ಹೊರಟುಹೋದರು. ॥೩೦॥

ತನ್ನ ಪುತ್ರರೆಲ್ಲರೂ ಈ ರೀತಿಯಲ್ಲಿ ಆ ನಾರದನ ಮಾತನ್ನು ಕೇಳಿ ಹೊರಟು ಹೋದುದನ್ನು ನೋಡಿ ದಕ್ಷನು ಪುತ್ರಶೋಕದಿಂದ ಕೋಪಗೊಂಡು ನಾರದನನ್ನು ಹೀಗೆ ಶಪಿಸಿದನು. ॥೩೧॥

ದಕ್ಷನು ಹೇಳಿದನು—ಎಲೈ ದುರ್ಬುದ್ಧಿಯುಳ್ಳ ನಾರದನೇ, ನೀನು ಮಾಡಿದ ಈ ಪಾಪಕಾರ್ಯದಿಂದ ನನ್ನ ಮಕ್ಕಳೆಲ್ಲರೂ ದೇಶಭ್ರಷ್ಟರಾಗಿ ಹೊರಟು ಹೋದರು. ಆದುದರಿಂದ ನೀನು ಮಾಡಿದ ಈ ಪಾಪಕ್ಕಾಗಿ ಗರ್ಭವಾಸದುಃಖವನ್ನು ಅನುಭವಿಸಲು ನನಗೇ ಪುತ್ರನಾಗಿ ಜನಿಸು ಎಂದು ಶಪಿಸಿದನು. ॥೩೩॥

ಹೀಗೆ ಶಾಪವನ್ನು ಹೊಂದಿ ನಾರದನು ವೀರಿಣೀದೇವಿಯಲ್ಲಿ ಜನಿಸಿದನು. ಮತ್ತು ಆ ವೀರಿಣಿಯಲ್ಲಿ ಅರವತ್ತು ಜನ ಕನ್ಯೆಯರು ಜನಿಸಿದರೆಂದು ಕೇಳಿರುವೆನು. ॥೩೪॥

ಶೋಕಂ ವಿಹಾಯ ಪುತ್ರಾಣಾಂ ದಕ್ಷಃ ಪರಮಧರ್ಮವಿತ್ ।
ತಾಸಾಂ ತ್ರಯೋದಶ ಪ್ರಾದಾತ್ಕಶ್ಯಪಾಯ ಮಹಾತ್ಮನೇ ॥೩೫॥

ದಶ ಧರ್ಮಾಯ ಸೋಮಾಯ ಸಪ್ತವಿಂಶತಿ ಭೂಪತೇ ।
ದ್ವೇ ಚೈವ ಭೃಗವೇ ಪ್ರಾದಾಚ್ಚತಸ್ರೋಽರಿಷ್ಟನೇಮಿನೇ ॥೩೬॥

ದ್ವೇ ಚೈವಾಂಗಿರಸೇ ಕನ್ಯೇ ತಥೈವಾಂಗಿರಸೇ ಪುನಃ ।
ತಾಸಾಂ ಪುತ್ರಾಶ್ಚ ಪೌತ್ರಾಶ್ಚ ದೇವಾಶ್ಚ ದಾನವಾಸ್ತಥಾ ॥೩೭॥

ಜಾತಾ ಬಲಸಮಾಯುಕ್ತಾಃ ಪರಸ್ಪರವಿರೋಧಕಾಃ ।
ರಾಗದ್ವೇಷಾನ್ವಿತಾಃ ಸರ್ವೇ ಪರಸ್ಪರವಿರೋಧಿನಃ ॥೩೮॥
ಸರ್ವೇ ಮೋಹಾವೃತಾಃ ಶೂರಾ ಹ್ಯಭವನ್ನತಿಮಾಯಿನಃ ।

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ ಪ್ರಥಮೋಽಧ್ಯಾಯಃ.**

---

ಬಳಿಕ ಧರ್ಮಜ್ಞನಾದ ದಕ್ಷನು ಪುತ್ರಶೋಕವನ್ನು ಬಿಟ್ಟು ತನ್ನ ಅರವತ್ತು ಕನ್ಯೆಯರಲ್ಲಿ ಹದಿಮೂರು ಮಂದಿಯನ್ನು ಮಹಾತ್ಮನಾದ ಕಶ್ಯಪಮುನಿಗೆ ಮದುವೆ ಮಾಡಿ ಕೊಟ್ಟನು. ॥೩೫॥

ಮತ್ತು ಎಲೈ ರಾಜನೇ, ಧರ್ಮನಿಗೆ ಹತ್ತು ಜನ ಕನ್ಯೆಯರನ್ನೂ, ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನೂ, ಭೃಗುಮುನಿಗೆ ಇಬ್ಬರನ್ನೂ, ಅರಿಷ್ಟನೇಮಿಗೆ ನಾಲ್ವರನ್ನೂ, ಅಂಗಿರಸ ಕೃಶಾಶ್ವನಿಗೆ ಇಬ್ಬರು ಕನ್ಯೆಯರನ್ನೂ ಮತ್ತು ಅಂಗಿರಸ್ಸಿಗೆ ಇಬ್ಬರು ಕನ್ಯೆಯರನ್ನೂ ಸಹ ಮದುವೆಮಾಡಿಕೊಟ್ಟನು. ಈ ವಿವರವನ್ನು ಕೂರ್ಮ ಪುರಾಣದಲ್ಲಿ ಹೇಳಿದೆ. ॥೩೬॥

ಆ ಅರವತ್ತು ಮಂದಿ ಕನ್ಯೆಯರ ಮಕ್ಕಳು ಮೊಮ್ಮಕ್ಕಳು ಇವರೇ ದೇವದಾನವರು. ಇವರೆಲ್ಲರೂ ಬಲಶಾಲಿಗಳಾಗಿ ಜನಿಸಿ ರಾಗದ್ವೇಷಾದಿಗಳಿಂದ ತಮ್ಮ ತಮ್ಮಲ್ಲೇ ವಿರೋಧದಿಂದ ಕೂಡಿ ಮಾಯೆಯಿಂದ ಮೋಹಗೊಂಡು ಪರಸ್ಪರ ದ್ವೇಷಿಗಳಾಗಿ ಕಪಟದಿಂದ ಮೋಸಮಾಡುವವರಾಗಿ ಪರಿಣಮಿಸಿದರು. ॥೩೭-೩೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಮನೂನಾಽಽಖ್ಯಾಹಿ ಮಹಾಭಾಗ ರಾಜ್ಞಾಂ ವಂಶಂ ಸುವಿಸ್ತರಂ ।**
**ಸೂರ್ಯಾನ್ವಯಪ್ರಸೂತಾನಾಂ ಧರ್ಮಜ್ಞಾನಾಂ ವಿಶೇಷತಃ ||೧||**

|| ವ್ಯಾಸ ಉವಾಚ ||

**ಶ್ರುಣು ಭಾರತ ವಕ್ಷ್ಯಾಮಿ ರವಿವಂಶಸ್ಯ ವಿಸ್ತರಂ।**
**ಯಥಾ ಶ್ರುತಂ ಮಯಾ ಪೂರ್ವಂ ನಾರದಾದೃಷಿಸತ್ತಮಾತ್ ||೨||**

**ಏಕದಾ ನಾರದಃ ಶ್ರೀಮಾನ್ಸರಸ್ವತ್ಯಾಸ್ತಟೇ ಶುಭೇ ।**
**ಆಜಗಾಮಾಶ್ರಮೇ ಪುಣ್ಯೇ ವಿಚರನ್ಸ್ವೇಚ್ಛಯಾ ಮುನಿಃ ||೩||**

---

ಜನಮೇಜಯರಾಜನು ಹೇಳಿದನು—ಎಲೈ ಪೂಜ್ಯನಾದ ಮುನಿಯೇ, ಧರ್ಮಜ್ಞರಾಗಿಯೂ ಸೂರ್ಯವಂಶೋತ್ಪನ್ನರಾಗಿಯೂ ಇರುವ ರಾಜರ ವಂಶ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ಹೇಳು. ||೧||

ವ್ಯಾಸಮುನಿಯು ಹೇಳಿದನು—ಎಲೈ ಭರತವಂಶೋತ್ಪನ್ನನಾದ ಜನಮೇಜಯನೇ, ಕೇಳು. ಹಿಂದೆ ನಾರದಋಷಿಯಿಂದ ನಾನು ಕೇಳಿರುವಂತೆಯೇ ಸೂರ್ಯ ವಂಶದ ಚರಿತ್ರೆಯನ್ನು ನಿನಗೆ ವಿಸ್ತಾರವಾಗಿ ಹೇಳುವೆನು. ||೨||

ಒಂದಾನೊಂದು ಕಾಲದಲ್ಲಿ ಪೂಜ್ಯನಾದ ನಾರದಮಹರ್ಷಿಯು ಸರಸ್ವತೀ ನದಿಯ ತೀರಪ್ರದೇಶದಲ್ಲಿ ಸ್ವೇಚ್ಛೆಯಾಗಿ ವಿಹಾರಮಾಡುತ್ತಾ ಅಲ್ಲಿರುವ ನನ್ನ ಒಂದು ಪುಣ್ಯಾಶ್ರಮದ ಬಳಿಗೆ ಬಂದನು. ||೩||

ಪ್ರಣಮ್ಯ ಶಿರಸಾ ಪಾದೌ ತಸ್ಯಾಗ್ರೇ ಸಂಸ್ಥಿತಸ್ತದಾ ।
ತತಸ್ತಸ್ಯಾಽಽಸನಂ ದತ್ವಾ ಕೃತ್ವಾಽರ್ಹಣಮಥಾದರಾತ್ ॥೪॥

ವಿಧಿವತ್ಪೂಜಯಿತ್ವಾ ತಮುಕ್ತವಾನ್ನಚನಂ ತ್ವಿದಂ ।
ಪಾವಿತೋಽಹಂ ಮುನಿಶ್ರೇಷ್ಠ ಪೂಜ್ಯಸ್ಯಾಗಮನೇನ ವೈ ॥೫॥

ಕಥಾಂ ಕಥಯ ಸರ್ವಜ್ಞ ರಾಜ್ಞಾಂ ಚರಿತಸಂಯುತಾಂ ।
ರಾಜಾನೋ ಯೇ ಸಮಾಖ್ಯಾತಾಃ ಸಪ್ತಮೇಽಸ್ಮಿನ್ಮನೋಃ ಕುಲೇ ॥೬॥

ತೇಷಾಮುತ್ಪತ್ತಿರತುಲಾ ಚರಿತಂ ಪರಮಾದ್ಭುತಂ ।
ಶ್ರೋತುಕಾಮೋಽಸ್ಮ್ಯಹಂ ಬ್ರಹ್ಮನ್ಸೂರ್ಯವಂಶಸ್ಯ ವಿಸ್ತರಂ ॥೭॥

ಸಮಾಖ್ಯಾಹಿ ಮುನಿಶ್ರೇಷ್ಠ ಸಮಾಸವ್ಯಾಸಪೂರ್ವಕಂ ।
ಇತಿ ಪೃಷ್ಟೋ ಮಯಾ ರಾಜನ್ನಾರದಃ ಪರಮಾರ್ಥವಿತ್ ॥೮॥
ಉವಾಚ ಪ್ರಹಸನ್ಪ್ರೀತಃ ಸಮಾಭಾಷ್ಯ ಮುದಾಽನ್ವಯಂ ।

---

ಹೀಗೆ ಬಂದ ನಾರದಮುನಿಯ ಪಾದಗಳಿಗೆರಗಿ ಕುಳಿತುಕೊಳ್ಳಲು ಆಸನ ವನ್ನು ಕೊಟ್ಟು ಭಕ್ತಿಯಿಂದ ಕ್ರಮವರಿತು ಸತ್ಕರಿಸಿ ಅವನ ಮುಂಗಡೆಯಲ್ಲಿ ಕುಳಿತು ಅವನನ್ನು ಕುರಿತು ಆದರದೊಡನೆ ಈ ಮಾತನ್ನಾಡಿದನು, ॥೪॥

ಹೇ ಋಷಿಪ್ರವರ, ಪೂಜ್ಯನಾದ ನಿನ್ನ ಆಗಮನದಿಂದ ನಾನು ಪವಿತ್ರನಾದೆನು. ನೀನು ಎಲ್ಲವನ್ನೂ ತಿಳಿದವನು. ಆದುದರಿಂದ ರಾಜರುಗಳ ಚರಿತ್ರೆಗಳಿಂದ ಕೂಡಿ ರುವ ಕಥೆಯನ್ನು ನನಗೆ ಹೇಳು. ॥೫॥

ಏಳನೆಯ ಮನುವಾದ ವೈವಸ್ವತಮನುವಿನ ಕುಲದಲ್ಲಿ ಪ್ರಸಿದ್ಧರಾದ ರಾಜರ ವಂಶವಿಸ್ತಾರವನ್ನೂ ಮತ್ತು ಸೂರ್ಯವಂಶದ ರಾಜರ ಅದ್ಭುತವಾದ ಚರಿತ್ರೆಯನ್ನೂ ಸಹ ಕೇಳಲಿಚ್ಛಿಸುವೆನು. ಓ ಮುನಿಶ್ರೇಷ್ಠನೇ ಈ ಚರಿತ್ರೆಯೆಲ್ಲವನ್ನೂ ಸಂದರ್ಭಾ ನುಸಾರವಾಗಿ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ನನಗೆ ಹೇಳುವವನಾಗು. ॥೬-೭॥

ಹೀಗೆ ನಾನು ಕೇಳಲು, ಪರಮಾರ್ಥತತ್ತ್ವವನ್ನು ತಿಳಿದ ಆ ನಾರದ ಮುನಿಯು ಸಂತೋಷಗೊಂಡು ವಂಶಚರಿತ್ರೆಯನ್ನು ಪ್ರೀತಿಯಿಂದ ಹೀಗೆ ಹೇಳಲು ಉಪಕ್ರಮಿಸಿದನು. ॥೮॥

|| ನಾರದ ಉವಾಚ ||

ಶೃಣು ಸತ್ಯವತೀಸೂನೋ ರಾಜ್ಞಾಂ ವಂಶಮನುತ್ತಮಂ ||೯||
ಪಾವನಂ ಕರ್ಣಸುಖದಂ ಧರ್ಮಜ್ಞಾನಾದಿಭಿರ್ಯುತಂ ।
ಬ್ರಹ್ಮಾ ಪೂರ್ವಂ ಜಗತ್ಕರ್ತಾ ನಾಭಿಪಂಕಜಸಂಭವಃ ||೧೦||

ವಿಷ್ಣೋರಿತಿ ಪುರಾಣೇಷು ಪ್ರಸಿದ್ಧಃ ಪರಿಕೀರ್ತಿತಃ ।
ಸರ್ವಜ್ಞಃ ಸರ್ವಕರ್ತಾಽಸೌ ಸ್ವಯಂಭೂಃ ಸರ್ವಶಕ್ತಿಮಾನ್ ||೧೧||

ತಪಸ್ತಪ್ತ್ವಾ ಸ ವಿಶ್ವಾತ್ಮಾ ವರ್ಷಾಣಾಮಯುತಂ ಪುರಾ ।
ಸೃಷ್ಟಿಕಾಮಃ ಶಿವಾಂ ಧ್ಯಾತ್ವಾ ಪ್ರಾಪ್ಯ ಶಕ್ತಿಮನುತ್ತಮಾಂ ||೧೨||

ಪುತ್ರಾನುತ್ಪಾದಯಾಮಾಸ ಮಾನಸಾಞ್ಛುಭಲಕ್ಷಣಾನ್ ।
ಮರೀಚಿಃ ಪ್ರಥಿತಸ್ತೇಷಾಮುಭವತ್ಸೃಷ್ಟಿಕರ್ಮಣಿ ||೧೩||

---

ನಾರದನು ಹೇಳಿದನು—ಎಲೈ ಸತ್ಯವತೀ ಪುತ್ರನೇ. ಕೇಳು, ಈ ಸೂರ್ಯಾನ್ವಯದ ರಾಜರ ಚರಿತ್ರೆಯು ಕೇಳುವುದಕ್ಕೆ ಆಹ್ಲಾದಕರವಾಗಿಯೂ ಪವಿತ್ರವಾದುದೂ, ಧರ್ಮಗಳ ತಿಳಿವಳಿಕೆಯೇ ಮುಂತಾದ ಒಳ್ಳೆಯ ಭಾವಗಳನ್ನು ಉಂಟುಮಾಡುವುದೂ ಆಗಿರುವುದು. ಅಂತಹ ಚರಿತ್ರೆಯನ್ನು ಹೇಳುವೆನು. ||೯||

ಪೂರ್ವದಲ್ಲಿ ಸೃಷ್ಟಿಕರ್ತನಾದ ಬ್ರಹ್ಮನು ವಿಷ್ಣುವಿನ ನಾಭಿಕಮಲದಲ್ಲಿ ಉತ್ಪನ್ನನಾದನೆಂದು ಪುರಾಣಗಳಲ್ಲಿ ಹೇಳಿರುವುದು ಪ್ರಸಿದ್ಧವಾಗಿಯೇ ಇರುವುದು. ||೧೦||

ಸರ್ವಜ್ಞನೂ, ಸೃಷ್ಟಿಕರ್ತನೂ ಸರ್ವಶಕ್ತನೂ ಆದ ಈ ಬ್ರಹ್ಮನು ಸೃಷ್ಟಿಕಾರ್ಯವನ್ನು ಮಾಡಲುದ್ದೇಶಿಸಿ ದೇವಿಯನ್ನು ಧ್ಯಾನಿಸುತ್ತಾ ಹತ್ತುಸಾವಿರ ವರ್ಷಗಳವರೆಗೆ ತಪಸ್ಸನ್ನು ಮಾಡಿ ದೇವಿಯ ಅನುಗ್ರಹದಿಂದ ಸೃಷ್ಟಿಮಾಡಲು ಉತ್ತಮವಾದ ಶಕ್ತಿಯನ್ನು ಪಡೆದನು. ||೧೧-೧೨||

ಹೀಗೆ ಶಕ್ತಿಯನ್ನು ಪಡೆದು ಆ ಬ್ರಹ್ಮನು ತನ್ನಂತೆಯೇ ಶುಭಲಕ್ಷಣಗಳಿಂದ ಕೂಡಿರುವ ಮಾನಸಪುತ್ರರನ್ನು ಉತ್ಪತ್ತಿಮಾಡಿದನು. ಆ ಪುತ್ರರಲ್ಲಿ ಮರೀಚಿಯು ಸೃಷ್ಟಿಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸುವುದರಲ್ಲಿ ತುಂಬ ಪ್ರಸಿದ್ಧನು. ||೧೩||

ತಸ್ಯ ಪುತ್ರೋಽತಿವಿಖ್ಯಾತಃ ಕಶ್ಯಪಃ ಸರ್ವಸಂಮತಃ ।
ತ್ರಯೋದಶೈವ ತಸ್ಯಾಽಽಸನ್ಭಾರ್ಯಾ ದಕ್ಷಸುತಾಃ ಕಿಲ ॥೧೪॥

ದೇವಾಃ ಸರ್ವೇ ಸಮುತ್ಪನ್ನಾ ದೈತ್ಯಾ ಯಕ್ಷಾಶ್ಚ ಪನ್ನಗಾಃ ।
ಪಶವಃ ಪಕ್ಷಿಣಶ್ಚೈವ ತಸ್ಮಾತ್ಸೃಷ್ಟಿಸ್ತು ಕಾಶ್ಯಪೀ ॥೧೫॥

ದೇವಾನಾಂ ಪ್ರಥಿತಃ ಸೂರ್ಯೋ ವಿವಸ್ವಾನ್ನಾಮ ತಸ್ಯ ತು ।
ತಸ್ಯ ಪುತ್ರ ಸ್ಸವಿಖ್ಯಾತೋ ವೈವಸ್ವತಮನುರ್ನೃಪಃ । ॥೧೬॥

ತಸ್ಯ ಪುತ್ರಸ್ತಥೇಕ್ಷ್ವಾಕುಃ ಸೂರ್ಯವಂಶವಿವರ್ಧನಃ ।
ನವಾಽಭವನ್ಸುತಾಸ್ತಸ್ಯ ಮನೋರಿಕ್ಷ್ವಾಕುಪೂರ್ವಜಾಃ ॥೧೭॥

ತೇಷಾಂ ನಾಮಾನಿ ರಾಜೇಂದ್ರ ಶೃಣುಷ್ವೈಕಮನಾಃ ಪುನಃ ।
ಇಕ್ಷ್ವಾಕುರಥ ನಾಭಾಗೋ ಧೃಷ್ಟಃ ಶರ್ಯಾತಿರೇವ ಚ ॥೧೮॥

---

ಆ ಮರೀಚಿಯ ಮಗನು ಕಶ್ಯಪನೆಂದು ಪ್ರಸಿದ್ಧನಾಗಿ ಸರ್ವರಿಂದಲೂ ಪೂಜ್ಯನಾಗಿದ್ದನು. ಅವನಿಗೆ ದಕ್ಷಬ್ರಹ್ಮನ ಹದಿಮೂರು ಜನ ಕನ್ಯೆಯರು ಪತ್ನಿಯರಾಗಿದ್ದರು. ||೧೪||

ಈ ಕಶ್ಯಪನಿಂದ ಸಮಸ್ತದೇವತೆಗಳೂ, ದೈತ್ಯರೂ, ಯಕ್ಷಪನ್ನಗರೂ ಪಶುಪಕ್ಷಿಗಳೂ ಉತ್ಪನ್ನರಾದರು. ಆದುದರಿಂದ ಇವರ ಸೃಷ್ಟಿಯು ಕಾಶ್ಯಪಸೃಷ್ಟಿಯೆಂದು ಪ್ರಸಿದ್ಧವಾಗಿರುವುದು. ||೧೫||

ಈ ದೇವತೆಗಳಲ್ಲಿ ಸೂರ್ಯನು ಪ್ರಸಿದ್ಧನು. ಇವನಿಗೆ ವಿವಸ್ವಾನ್ ಎಂದೂ ಹೆಸರು. ಆದುದರಿಂದ ಈ ಸೂರ್ಯನ ಪುತ್ರನೇ ವೈವಸ್ವತಮನುವೆಂಬ ಪ್ರಸಿದ್ಧ ರಾಜನು. ||೧೬||

ಆ ವೈವಸ್ವತಮನುವಿಗೆ ಇಕ್ಷ್ವಾಕುವೇ ಮೊದಲಾದ ಒಂಬತ್ತು ಮಂದಿ ಪುತ್ರರು ಕ್ರಮವಾಗಿ ರಾಜರಾದರು. ಅವರಲ್ಲಿ ಇಕ್ಷ್ವಾಕುವೇ ಸೂರ್ಯವಂಶಕ್ಕೆ ಮೂಲಪುರುಷನು. ಇವನಿಂದ ಸೂರ್ಯವಂಶವು ವೃದ್ಧಿಗೊಂಡಿತು. ||೧೭||

ಎಲೈ ರಾಜಶ್ರೇಷ್ಠನೇ, ಮನುವಿನ ಒಂಬತ್ತು ಮಂದಿ ಪುತ್ರರ ಹೆಸರುಗಳನ್ನು ಹೇಳುವೆನು ಏಕಾಗ್ರಚಿತ್ತದಿಂದ ಕೇಳು — ಇಕ್ಷ್ವಾಕು, ನಾಭಾಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ಪ್ರಾಂಶು, ನೃಗ, ಕರೂಷ, ಪೃಷಧ್ರ ಎಂಬ ಈ ಒಂಬತ್ತು ಮಂದಿಯೂ

ನರಿಷ್ಯಂತಸ್ತಥಾ ಪ್ರಾಂಶುರ್ನೃಗೋ ದಿಷ್ಟಶ್ಚ ಸಪ್ತಮಃ ।
ಕರೂಷಶ್ಚ ಪೃಷಧ್ರಶ್ಚ ನವೈತೇ ಮಾನವಾಃ ಸ್ಮೃತಾಃ ॥೧೯॥

ಇಕ್ಷ್ವಾಕುಸ್ತು ಮನೋಃ ಪುತ್ರಃ ಪ್ರಥಮಃ ಸಮಜಾಯತ ।
ತಸ್ಯ ಪುತ್ರಶತಂ ಚಾಸೀಜ್ಜ್ಯೇಷ್ಠೋ ವಿಕುಕ್ಷಿರಾತ್ಮವಾನ್ ॥೨೦॥

ನವಾನಾಂ ವಂಶವಿಸ್ತಾರಂ ಸಂಕ್ಷೇಪೇಣ ನಿಶಾಮಯ ।
ಶೂರಾಣಾಂ ಮನುಪುತ್ರಾಣಾಂ ಮನೋರಂತರಜನ್ಮನಾಂ ॥೨೧॥

ನಾಭಾಗಸ್ಯ ತು ಪುತ್ರೋಽಭೂದಂಬರೀಷಃ ಪ್ರತಾಪವಾನ್ ।
ಧರ್ಮಜ್ಞಃ ಸತ್ಯಸಂಧಶ್ಚ ಪ್ರಜಾಪಾಲನತತ್ಪರಃ ॥೨೨॥

ಧೃಷ್ಟಾತ್ತು ಧಾರ್ಷ್ಟಕಂ ಕ್ಷತ್ರಂ ಬ್ರಹ್ಮಭೂತಮಜಾಯತ ।
ಸಂಗ್ರಾಮಕಾತರಂ ಸಮ್ಯಗ್ಬ್ರಹ್ಮಕರ್ಮರತಂ ತಥಾ ॥೨೩॥

---

ವೈವಸ್ವತಮನುವಿನ ವಂಶದಲ್ಲಿ ಕ್ರಮವಾಗಿ ಉಂಟಾದ ಮಕ್ಕಳು. ಇವರಲ್ಲಿ ಇಕ್ಷ್ವಾಕುವೂ ಸೇರಿದರೆ ಹತ್ತು ಜನರೂ, ಅವನು ಹೊರತು ಒಂಬತ್ತು ಜನರೂ ಎಂದು ತಿಳಿಯಬೇಕು. ॥೧೮-೧೯॥

ಮನುವಿಗೆ ಇಕ್ಷ್ವಾಕುವು ಪ್ರಥಮದಲ್ಲಿ ಹುಟ್ಟಿದ ಹಿರಿಯ ಮಗನು. ಆ ಇಕ್ಷ್ವಾಕುವಿಗೆ ನೂರುಜನ ಮಕ್ಕಳು. ಅವರಲ್ಲಿ ವಿಕುಕ್ಷಿ ಎಂಬುವನು ಜ್ಯೇಷ್ಠ ಪುತ್ರನು. ॥೨೦॥

ಮನುಪುತ್ರರಾದ ಆ ಒಂಬತ್ತು ಮಂದಿ ಶೂರರ ವಂಶದ ಕಥೆಯನ್ನು ಸಂಕ್ಷೇಪವಾಗಿ ಹೇಳುವೆನು, ಕೇಳು. ॥೨೧॥

ನಾಭಾಗನಿಗೆ ಪರಾಕ್ರಮಶಾಲಿಯೂ, ಧರ್ಮಜ್ಞನೂ, ಸತ್ಯವಾದಿಯೂ, ಪ್ರಜೆಗಳನ್ನು ಪಾಲನೆಮಾಡುವುದರಲ್ಲಿ ಆಸಕ್ತನೂ ಆದ ಅಂಬರೀಷನೆಂಬ ಪುತ್ರನಾದನು. ॥೨೨॥

ಧೃಷ್ಟನೆಂಬುವನಿಗೆ ಧಾರ್ಷ್ಟಕನೆಂಬುವ ಪುತ್ರನು ಜನಿಸಿದನು. ಇವನು ಹುಟ್ಟಿನಲ್ಲಿ ಕ್ಷತ್ರಿಯನಾದರೂ ಸ್ವಭಾವದಲ್ಲಿ ಬ್ರಾಹ್ಮಣನಾಗಿದ್ದುದರಿಂದ ಯುದ್ಧದಲ್ಲಿ ಕಾತರನಾಗಿಯೂ ಬ್ರಾಹ್ಮಣಕರ್ಮಾಚರಣೆ ಮತ್ತು ಬ್ರಹ್ಮಜ್ಞಾನದಲ್ಲಿ ವಿಶೇಷವಾದ ಆಸಕ್ತಿಯಿಂದ ಕೂಡಿದವನಾಗಿಯೂ ಇದ್ದನು. ॥೨೩॥

**ಶರ್ಯಾತೇಸ್ತನಯಶ್ಚಾಭೂದಾನರ್ತೋ ನಾಮ ವಿಶ್ರುತಃ ।**
**ಸುಕನ್ಯಾ ಚ ತಥಾ ಪುತ್ರೀ ರೂಪಲಾವಣ್ಯಸಂಯುತಾ ॥೨೪॥**

**ಚ್ಯವನಾಯ ಸುತಾ ದತ್ತಾ ರಾಜ್ಞಾಽಪ್ಯಂಧಾಯ ಸುಂದರೀ ।**
**ಮುನಿಃ ಸುಲೋಚನೋ ಜಾತಸ್ತಸ್ಯಾಃ ಶೀಲಗುಣೇನ ಹ ॥೨೫॥**

**ವಿಹಿತೋ ರವಿಪುತ್ರಾಭ್ಯಾಮಶ್ವಿಭ್ಯಾಮಿತಿ ನಃ ಶ್ರುತಂ ।**

॥ ಜನಮೇಜಯ ಉವಾಚ ॥

**ಸಂದೇಹೋಽಯಂ ಮಹಾನ್ಬ್ರಹ್ಮನ್ ಕಥಾಯಾಂ ಕಥಿತಸ್ತ್ವಯಾ ॥೨೬॥**
**ಯದ್ರಾಜ್ಞಾ ಮುನಯೇಽನ್ಧಾಯ ದತ್ತಾ ಪುತ್ರೀ ಸುಲೋಚನಾ ।**
**ಕುರೂಪಾ ಗುಣಹೀನಾ ವಾ ನಾರೀ ಲಕ್ಷಣವರ್ಜಿತಾ ॥೨೭॥**

---

ಶರ್ಯಾತಿ ಎಂಬುವನಿಗೆ ಆನರ್ತನೆಂಬ ಹೆಸರಿನ ಪುತ್ರನೂ, ಸುಕನ್ಯಾ ಎಂಬ ರೂಪಸೌಂದರ್ಯಾದಿಗಳಿಂದ ಒಪ್ಪುವ ಪುತ್ರಿಯೂ ಜನಿಸಿದರು. ಶರ್ಯಾತಿರಾಜನು ತನ್ನ ಮಗಳಾದ ಆ ಸುಕನ್ಯೆಯನ್ನು ಕುರುಡನಾದ ಚ್ಯವನನೆಂಬ ಋಷಿಗೆ ಮದುವೆ ಮಾಡಿಕೊಟ್ಟನು. ॥೨೪॥

ಆ ಸುಕನ್ಯೆಯ ಶೀಲಗುಣಗಳಿಗೆ ಮೆಚ್ಚಿ ಸೂರ್ಯಪುತ್ರರಾದ ದೇವತೆಗಳ ವೈದ್ಯರಾದ ಅಶ್ವಿನೀದೇವತೆಗಳು ಆ ಚ್ಯವನಮುನಿಯ ಕಣ್ಣುಗಳು ಸುಂದರವಾಗಿರುವಂತೆಯೂ ಚನ್ನಾಗಿ ಕಾಣುವಂತೆಯೂ ಅನುಗ್ರಹವನ್ನು ಮಾಡಿದರು. ಎಂದು ನಾವು ಕೇಳಿರುವೆವು. ॥೨೫॥

ಜನಮೇಜಯರಾಜನು ಹೇಳಿದನು— ಓ ಬ್ರಾಹ್ಮಣನೇ, ನೀನು ಹೇಳಿದ ಈ ಕಥೆಯಲ್ಲಿ ನನಗೆ ದೊಡ್ಡದೊಂದು ಸಂದೇಹವುಂಟಾಗಿರುವುದು. ರಾಜನಾದ ಶರ್ಯಾತಿಯು ಸುಂದರಿಯೂ, ಒಳ್ಳೆಯ ನೇತ್ರಗಳೂ ಉಳ್ಳ ಆ ಸುಕನ್ಯೆಯನ್ನು ಕುರುಡನಾದ ಚ್ಯವನಮುನಿಗೆ ಕೊಟ್ಟನೆಂದು ಈಗ ಹೇಳಿದೆಯಲ್ಲವೇ ? ಸಾಧಾರಣವಾಗಿ ಲೋಕದಲ್ಲಿ ಕುರೂಪಿಯಾಗಿಯೂ ಗುಣಹೀನಳಾಗಿಯೂ ಒಳ್ಳೆಯ ಸ್ತ್ರೀಲಕ್ಷಣಗಳಿಲ್ಲದೆಯೂ ಇರುವ ಕನ್ಯೆಯು ಜನಿಸಿದರೆ ಅಂತಪ ಕನ್ಯೆಯನ್ನು ಕುರುಡನಿಗೂ ಕೊಡುವುದುಂಟು. ॥೨೭॥

**ಪುತ್ರೀ ಯದಾ ಭವೇದ್ರಾಜಾ ತದಾಽಂಧಾಯ ಪ್ರಯಚ್ಛತಿ ।**
**ಜ್ಞಾತ್ವಾಽಂಧಂ ಸುಮುಖೀಂ ಕಸ್ಮಾದ್ದತ್ತವಾನ್ನೃಪಸತ್ತಮಃ ॥೨೮॥**

**ಕಾರಣಂ ಬ್ರೂಹಿ ಮೇ ಬ್ರಹ್ಮನ್ನನುಗ್ರಾಹ್ಯೋಽಸ್ಮಿ ಸರ್ವದಾ ।**
**ಇತಿ ರಾಜ್ಞೋ ವಚಃ ಶ್ರುತ್ವಾ ಪರೀಕ್ಷಿತಸುತಸ್ಯ ವೈ ॥೨೯॥**

**ದ್ವೈಪಾಯನಃ ಪ್ರಸನ್ನಾತ್ಮಾ ತಮುವಾಚ ಹಸನ್ನಿವ ।**
**ವೈವಸ್ವತಸುತಃ ಶ್ರೀಮಾನ್ ಶರ್ಯಾತಿರ್ನಾಮ ಪಾರ್ಥಿವಃ ॥೩೦॥**

**ತಸ್ಯ ಸ್ತ್ರೀಣಾಂ ಸಹಸ್ರಾಣಿ ಚತ್ವಾರ್ಯಾಸನ್ಪರಿಗ್ರಹಾಃ**
**ರಾಜಪುತ್ರ್ಯಃ ಸುರೂಪಾಶ್ಚ ಸರ್ವಲಕ್ಷಣಸಂಯುತಾಃ ॥೩೧॥**

**ಪತ್ನ್ಯಃ ಪ್ರೇಮಯುತಾಃ ಸರ್ವಾಃ ಪ್ರಿಯಾ ರಾಜ್ಞಃ ಸುಸಂಮತಾಃ ।**
**ಏಕಾ ಪುತ್ರೀ ತು ತಾಸಾಂ ವೈ ಸುಕನ್ಯಾ ನಾಮ ಸುಂದರೀ ॥೩೨॥**

---

ಹೀಗಿರಲು ಸುಂದರವಾದ ಮುಖವುಳ್ಳ ಆ ಸುಕನ್ಯೆಯನ್ನು ಆ ಶರ್ಯಾತಿ ರಾಜಶ್ರೇಷ್ಠನು, ಕುರುಡನೆಂದು ತಿಳಿದೂ ಆ ಚ್ಯವನಮುನಿಗೆ ಹೇಗೆ ಕೊಟ್ಟನು? ಇದರ ಕಾರಣವನ್ನು ನನ್ನ ಮೇಲೆ ಕೃಪೆಯಿಟ್ಟು ಹೇಳು. ಏಕೆಂದರೆ ನೀನು ಯಾವಾಗಲೂ ನನಗೆ ಉಪಕಾರವನ್ನೇ ಮಾಡುತ್ತಿರುವೆ. ॥೨೮॥

ಸೂತನು ಹೇಳಿದನು—ಪರೀಕ್ಷಿದ್ರಾಜನ ಮಗನಾದ ಜನಮೇಜಯನ ಈ ಮಾತನ್ನು ಕೇಳಿ ವ್ಯಾಸಮುನಿಯು ಮಂದಹಾಸದಿಂದ ನಗುತ್ತಾ ಹೀಗೆ ಹೇಳಿದನು. ॥೨೯॥

ವ್ಯಾಸಮುನಿಯು ಹೇಳಿದನು—ವೈವಸ್ವತಮನುವಿನ ಪುತ್ರನಾದ ಆ ಶರ್ಯಾತಿಯೆಂಬ ರಾಜನಿಗೆ ಸಾವಿರಾರು ಸ್ತ್ರೀಯರು ಉಪಭೋಗಕ್ಕಾಗಿ ಇದ್ದರು. ಅವರಲ್ಲಿ ನಾಲ್ಕು ಜನರು ಮಾತ್ರ ವಿವಾಹಿತರಾದವರು. ॥೩೦॥

ಅವನ ಪತ್ನಿಯರೆಲ್ಲರೂ ರಾಜಪುತ್ರಿಯರು, ಒಳ್ಳೆಯ ಸೌಂದರ್ಯದಿಂದಲೂ ಸ್ತ್ರೀಲಕ್ಷಣಗಳಿಂದಲೂ ಕೂಡಿ ರಾಜನಿಗೆ ಯಾವಾಗಲೂ ಪ್ರೀತಿಪಾತ್ರರಾಗಿ ಅವನ ಮನಸ್ಸಿಗೆ ಒಪ್ಪುವಂತಿದ್ದರು. ॥೩೧॥

ಆ ಸ್ತ್ರೀಯರೆಲ್ಲರಿಗೂ ಈ ಸುಕನ್ಯಾ ಎಂಬ ಸುಂದರಿಯೊಬ್ಬಳೇ ಮಗಳು. ಆ ಕನ್ಯೆಯು ಯಾವಾಗಲೂ ತನ್ನ ನಗುಮುಖದಿಂದ ತಂದೆಯನ್ನೂ, ತಾಯಿಯರನ್ನೂ ಸಂತೋಷಪಡಿಸುತ್ತಾ ಇತರರಿಗೆಲ್ಲರಿಗೂ ಪ್ರೀತಿಪಾತ್ರಳಾಗಿದ್ದಳು. ॥೩೨॥

ಪಿತುಃ ಪ್ರಿಯಾ ಚ ಮಾತೄಣಾಂ ಸರ್ವಾಸಾಂ ಚಾರುಹಾಸಿನೀ ।
ನಗರಾನ್ನಾತಿದೂರೇಽಭೂತ್ಸರೋ ಮಾನಸಸನ್ನಿಭಂ ॥೩೩॥

ಬದ್ಧಸೋಪಾನಮಾರ್ಗಂ ಚ ಸ್ವಚ್ಛಪಾನೀಯಪೂರಿತಂ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ॥೩೪॥

ದಾತ್ಯೂಹಸಾರಸಾಕೀರ್ಣಂ ಸರ್ವಪಕ್ಷಿಗಣಾವೃತಂ ।
ಪಂಚಧಾ ಕಮಲೋಪೇತಂ ಚಂಚರೀಕಸುಸೇವಿತಂ ॥೩೫॥

ಪಾರ್ಶ್ವತಶ್ಚ ದ್ರುಮಾಕೀರ್ಣಂ ವೇಷ್ಟಿತಂ ಪಾದಪೈಃ ಶುಭೈಃ ।
ಸಾಲೈಸ್ತಮಾಲೈಃ ಸರಲೈಃ ಪುನ್ನಾಗಾಶೋಕಮಂಡಿತಂ ॥೩೬॥

ವಟಾಶ್ವತ್ಥಕದಂಬೈಶ್ಚ ಕದಲೀಖಂಡರಾಜಿತಂ ।
ಜಂಬೀರೈರ್ಬೀಜಪೂರೈಶ್ಚ ಖರ್ಜೂರೈಃ ಪನಸೈಸ್ತಥಾ ॥೩೭॥

ಕ್ರಮುಕೈರ್ನಾರಿಕೇಲೈಶ್ಚ ಕೇತಕೈಃ ಕಾಂಚನದ್ರುಮೈಃ ।
ಯೂಥಿಕಾಜಾಲಕೈಃ ಶುಭ್ರೈಃ ಸಂವೃತಂ ಮಲ್ಲಿಕಾಗಣೈಃ ॥೩೮॥

---

ಆ ಶರ್ಯಾತಿರಾಜನ ನಗರದ ಸಮೀಪದಲ್ಲಿಯೇ ಮಾನಸಸರೋವರದಂತೆ ಶೋಭಿಸುವ ಒಂದು ದಿವ್ಯವಾದ ಸರಸ್ಸಿದ್ದಿತು. ಅದು ಸುತ್ತಲೂ ಕಟ್ಟಿದ ಸೋಪಾನಗಳಿಂದಲೂ ಸ್ವಚ್ಛವಾದ ಜಲದಿಂದಲೂ ಮನೋಹರವಾಗಿತ್ತು. ಮತ್ತು ಆ ಸರೋವರವು, ಹಂಸ, ಕಾರಂಡವ, ಚಕ್ರವಾಕ, ನವಿಲು, ಸಾರಸ ಮೊದಲಾದ ಸಮಸ್ತ ಪಕ್ಷಿಗಳಿಂದಲೂ ಐದುವಿಧವಾದ ಕಮಲಗಳಿಂದಲೂ, ನಾದಮಾಡುತ್ತಿರುವ ಭ್ರಮರಗಳಿಂದಲೂ ಸೇವಿಸಲ್ಪಡುತ್ತ ಅತಿ ಮನೋಹರವಾಗಿ ಕಂಗೊಳಿಸುತ್ತಿತ್ತು. ||೩೩-೩೪-೩೫||

ಮತ್ತು ಆ ಸರೋವರದ ನಾಲ್ಕು ಪಕ್ಕಗಳಲ್ಲಿಯೂ, ಬೆಳೆದಿರುವ ಸಾಲ, ತಮಾಲ, ಸರಲ, ಪುನ್ನಾಗ, ಅಶೋಕ, ವಟ, ಅಶ್ವತ್ಥ, ಕದಂಬ, ಬಾಳೆ, ನೇರಲೆ, ದಾಳಿಂಬ, ಖರ್ಜೂರ, ಹಲಸು, ಅಡಕೆ, ತೆಂಗು, ಕೇತಕೀ, ಕಾಚನಾರ, ನೇರಳೆ, ಮಾವು, ಹುಣಸೆ, ಕರಂಜಕ, ಕುಟಜ, ಮುತ್ತುಗ, ನಿಂಬ, ಬದರ, ಬಿಲ್ವ, ನೆಲ್ಲಿ ಇವೇ

ಜಂಬ್ವಾಮ್ರತಿಂತ್ರಿಣೀಭಿಶ್ಚ ಕರಂಜಕುಟಕಾವೃತಂ ।
ಪಲಾಶನಿಂಬಖದಿರಬಿಲ್ವಾಮಲಕಮಂಡಿತಂ ॥೩೯॥

ಬಭೂವ ಕೋಕಿಲಾರಾವಕೇಕಾಸ್ವನವಿರಾಜಿತಂ ।
ತತ್ಸಮೀಪೇ ಶುಭೇ ದೇಶೇ ಪಾದಪಾನಾಂ ಗಣಾವೃತೇ ॥೪೦॥

ಭಾರ್ಗವಶ್ಚ್ಯವನಃ ಶಾಂತಸ್ತಾಪಸಃ ಸಂಸ್ಥಿತೋ ಮುನಿಃ ।
ಜ್ಞಾತ್ವಾಽಸೌ ವಿಜನಂ ಸ್ಥಾನಂ ತಪಸ್ತೇಪೇ ಸಮಾಹಿತಃ ॥೪೧॥

ಕೃತ್ವಾ ದೃಢಾಸನಂ ಮೌನಮಾಧಾಯ ಜಿತಮಾರುತಃ ।
ಇಂದ್ರಿಯಾಣಿ ಚ ಸಂಯಮ್ಯ ತ್ಯಕ್ತಾಹಾರಸ್ತಪೋನಿಧಿಃ ॥೪೨॥
ಜಲಪಾನಾದಿರಹಿತೋ ಧ್ಯಾಯನ್ನಾಸ್ತೇ ಪರಾಂಬಿಕಾಂ ।

---

ಮೊದಲಾದ ಅನೇಕ ವೃಕ್ಷಗಳಿಂದಲೂ ಈ ವೃಕ್ಷಗಳಿಗೆ ಹಬ್ಬಿ ಮನೋಹರವಾಗಿ ಕಾಣುವ ಮಲ್ಲಿಗೆಯೇ ಮೊದಲಾದ ಬಳ್ಳಿಗಳಿಂದಲೂ ಆ ಸರೋವರವು ಶೋಭಿಸುತ್ತಿದ್ದಿತು. ॥೩೬-೩೭-೩೮-೩೯॥

ಮತ್ತು ಕೋಗಿಲೆ, ನವಿಲು ಮೊದಲಾದ ಪಕ್ಷಿಗಳ ಮಧುರವಾದ ಧ್ವನಿಯಿಂದ ಅತಿಮನೋಹರವಾಗಿ ಒಪ್ಪುತ್ತಿರುವ ಆ ಸರೋವರದ ಸಮೀಪದಲ್ಲಿ ಅನೇಕ ವೃಕ್ಷಗಳಿಂದ ರಮ್ಯವಾದ ಒಂದು ನಿರ್ಜನಸ್ಥಾನದಲ್ಲಿ ಭೃಗುಋಷಿಯ ಪುತ್ರನಾದ ಚ್ಯವನನೆಂಬ ತಾಪಸೋತ್ತಮನು, ವಿವಿಕ್ತವಾಗಿರುವ ಈ ರಮ್ಯಪ್ರದೇಶವು ತಪಸ್ಸಿಗೆ ಅನುಕೂಲವಾಗಿರುವುದೆಂದು ತಿಳಿದು ಅಲ್ಲಿ ನಿಯಮದಿಂದ ತಪಸ್ಸನ್ನಾಚರಿಸುತ್ತಿದ್ದನು. ॥೪೦-೪೧॥

ತಪಸ್ಸುಮಾಡಲು ಆ ಚ್ಯವನಮುನಿಯು ಮೊದಲು ದೃಢವಾದ ಆಸನವನ್ನು ಕಲ್ಪಿಸಿಕೊಂಡು, ಮೌನವ್ರತನಿಷ್ಠನಾಗಿ ಪ್ರಾಣಾಯಾಮವನ್ನು ಮಾಡುತ್ತಾ, ಇಂದ್ರಿಯಗಳನ್ನು ಜಯಿಸಿ, ಆಹಾರವನ್ನೂ ಜಲವನ್ನೂ ಸಹ ಸೇವಿಸದೆ ಸಚ್ಚಿದಾನಂದರೂಪಿಣಿಯಾದ ಭಗವತೀದೇವಿಯನ್ನು ಏಕಾಗ್ರಮನಸ್ಸಿನಿಂದ ಧ್ಯಾನಮಾಡುತ್ತಾ ತಪಸ್ಸಿನಲ್ಲಿ ಲೀನನಾಗಿದ್ದನು. ॥೪೨॥

ಸವಲ್ಮೀಕೋಽಭವದ್ರಾಜನ್ ಲತಾಭಿಃ ಪರಿವೇಷ್ಟಿತಃ ॥೪೩॥

ಕಾಲೇನ ಮಹತಾ ರಾಜನ್ಸಮಾಕೀರ್ಣಃ ಪಿಪೀಲಿಕೈಃ ।
ತಥಾ ಸ ಸಂವೃತೋ ಧೀಮಾನ್ಮೃತ್ಪಿಂಡ ಇವ ಸರ್ವತಃ ॥೪೪॥

ಕದಾಚಿತ್ಸ ಮಹೀಪಾಲಃ ಕಾಮಿನೀಗಣಸಂವೃತಃ ।
ಆಜಗಾಮ ಸರೋ ರಾಜನ್ವಿಹರ್ತುಮಿದಮುತ್ತಮಂ ॥೪೫॥

ಶರ್ಯಾತಿಃ ಸುಂದರೀವೃಂದಸಂಯುತಃ ಸಲಿಲೇಽಮಲೇ ।
ಕ್ರೀಡಾಸಕ್ತೋ ಮಹೀಪಾಲೋ ಬಭೂವ ಕಮಲಾಕರೇ ॥೪೬॥

ಸುಕನ್ಯಾ ವನಮಾಸಾದ್ಯ ವಿಜಹಾರ ಸಖೀವೃತಾ ।
ಸುಮನಾಂಸಿ ವಿಚಿನ್ವಂತೀ ಚಂಚಲಾ ಚಂಚಲೋಪಮಾ ॥೪೭॥

---

ಎಲೈ ರಾಜನೇ, ಹೀಗೆ ತಪಸ್ಸುಮಾಡುತ್ತಿರುವ ಮುನಿಯ ಸುತ್ತಲೂ ಹುತ್ತವು ಬೆಳೆದು ಗಿಡಬಳ್ಳಿಗಳಿಂದ ಸುತ್ತಲೂ ಆವರಿಸಲ್ಪಟ್ಟು ಇರುವೆಗಳಿಂದ ತುಂಬಿ ಹೋಯಿತು. ಹೀಗೆ ಬಹುಕಾಲವು ಕಳೆದುಹೋಗಲು ವೃಕ್ಷಲತಾದಿಗಳಿಂದಲೂ ಹುತ್ತದಿಂದಲೂ ಆವೃತನಾದ ಆ ತಪಸ್ವಿಯು ಒಂದು ದೊಡ್ಡ ಮಣ್ಣಿನ ರಾಶಿಯಂತೆ ಕಾಣಿಸಿದನು. ॥೪೩-೪೪॥

ಒಂದಾನೊಂದು ಕಾಲದಲ್ಲಿ ಆ ರಾಜನು ತನ್ನ ಸ್ತ್ರೀಯರೊಡಗೂಡಿ ವಿಹಾರ ಮಾಡುವುದಕ್ಕಾಗಿ ಆ ಶ್ರೇಷ್ಠವಾದ ಸರೋವರದ ಸಮೀಪಕ್ಕೆ ಬಂದನು. ॥೪೫॥

ಸುಂದರಸ್ತ್ರೀಯರಿಂದ ಪರಿವೃತನಾದ ಆ ಶರ್ಯಾತಿರಾಜನು ಆ ಸರೋವರದ ಸಮೀಪಕ್ಕೆ ಬಂದು ನಿರ್ಮಲೋದಕವುಳ್ಳ ಆ ಸರಸ್ಸಿನಲ್ಲಿ ಜಲಕ್ರೀಡೆಯಲ್ಲಿ ಆಸಕ್ತ ನಾಗಿದ್ದನು. ॥೪೬॥

ಈ ಸಮಯದಲ್ಲಿ ಬಳ್ಳಿಮಿಂಚಿನಂತೆ ಸೌಂದರ್ಯದಿಂದೊಪ್ಪುವ ಆ ರಾಜ ಪುತ್ರಿಯಾದ ಸುಕನ್ಯೆಯು ತನ್ನ ಸಖಿಯರೊಡಗೂಡಿ ವನದಲ್ಲಿ ಪುಷ್ಪಗಳನ್ನು ಕೊಯ್ಯುತ್ತಾ ವಿಹರಿಸುತ್ತಿದ್ದಳು. ॥೪೭॥

ಸರ್ವಾಭರಣಸಂಯುಕ್ತಾ ರಣಚ್ಚರಣನೂಪುರಾ ।
ಚಂಕ್ರಮಮಾಣಾ ವಲ್ಮೀಕಂ ಚ್ಯವನಸ್ಯ ಸಮಾಸದತ್ ॥೪೮॥

ಕ್ರೀಡಾಸಕ್ತೋಪವಿಷ್ಟಾ ಸಾ ವಲ್ಮೀಕಸ್ಯ ಸಮೀಪತಃ ।
ದದರ್ಶ ಚಾಸ್ಯ ರಂಧ್ರೇ ವೈ ಖದ್ಯೋತ ಇವ ಜ್ಯೋತಿಷೀ ॥೪೯॥

ಕಿಮೇತದಿತಿ ಸಂಚಿಂತ್ಯ ಸಮುದ್ಧರ್ತುಂ ಮನೋ ದಧೇ ।
ಗೃಹೀತ್ವಾ ಕಂಟಕಂ ತೀಕ್ಷ್ಣಂ ತ್ವರಮಾಣಾ ಕೃಶೋದರೀ ॥೫೦॥

ಸಾ ದೃಷ್ಟಾ ಮುನಿನಾ ಬಾಲಾ ಸಮೀಪಸ್ಥಾ ಕೃತೋದ್ಯಮಾ ।
ವಿಚರಂತೀ ಸುಕೇಶಾಂತಾ ಮನ್ಮಥಸ್ಯೇವ ಕಾಮಿನೀ ॥೫೧॥

ತಾಂ ವೀಕ್ಷ್ಯ ಸುದತೀಂ ತತ್ರ ಕ್ಷಾಮಕಂಠಸ್ತಪೋನಿಧಿಃ ।
ತಾಮಭಾಷತ ಕಲ್ಯಾಣೀಂ ಕಿಮೇದಿತಿ ಭಾರ್ಗವಃ ॥೫೨॥

---

ಆ ಸುಕನ್ಯೆಯು ಸರ್ವಾಭರಣಭೂಷಿತೆಯಾಗಿ, ಮನೋಹರವಾಗಿ ಧ್ವನಿಗೈಯ್ಯುತ್ತಿರುವ ಕಾಲಿನ ನೂಪುರಾಭರಣದಿಂದ ಒಪ್ಪುತ್ತಾ ಅಲ್ಲಲ್ಲಿ ಸಂಚರಿಸಿ ಕೊನೆಗೆ ಹುತ್ತದಂತೆ ತೋರುತ್ತಲಿದ್ದ ಚ್ಯವನಮುನಿಯ ಸಮೀಪಕ್ಕೆ ಬಂದಳು. ॥೪೮॥

ಆಟದಲ್ಲಿಯೇ ಗಮನವುಳ್ಳ ಆ ಸುಕನ್ಯೆಯು ಆ ಹುತ್ತದ ಸಮೀಪದಲ್ಲಿಯೇ ಕುಳಿತುಕೊಂಡಳು. ಮತ್ತು ಆ ಹುತ್ತದ ರಂಧ್ರದಲ್ಲಿ ಕಾಣಬರುತ್ತಿದ್ದ ಸೂರ್ಯನಂತೆ ಅತಿಪ್ರಕಾಶಮಾನವಾದ ಎರಡು ಬೆಳಕುಗಳನ್ನು ನೋಡಿದಳು. ಸಮಾಧಿಯಲ್ಲಿರುವಾಗಲೂ ಕಣ್ಣನ್ನು ತೆರೆದಿರುವುದುಂಟು. ಹೊಳೆಯುತ್ತಿರುವ ಈ ಜ್ಯೋತಿಯು ಏನಾಗಿರಬಹುದು? ಎಂದು ಯೋಚಿಸುತ್ತಾ, ಕೃಶಾಂಗಿಯಾದ ಸುಕನ್ಯೆಯು ಅದನ್ನು ಹುತ್ತದಿಂದ ಹೊರಗೆ ತೆಗೆಯಬೇಕೆಂದು ಉದ್ದೇಶಿಸಿ ಅಲ್ಲಿದ್ದ ಹರಿತವಾದ ಒಂದು ಮುಳ್ಳನ್ನು ತೆಗೆದುಕೊಂಡು ಬೇಗನೆ ಅಲ್ಲಿಗೆ ಬಂದಳು. ॥೪೯-೫೦॥

ಮನೋಹರವಾದ ಕೇಶಪಾಶಗಳಿಂದ ಒಪ್ಪುತ್ತಾ ಮನ್ಮಥನ ಪತ್ನಿಯಾದ ರತಿಯಂತೆ ಸುಂದರಳಾದ ಆ ಸುಕನ್ಯೆಯು ಮುಳ್ಳನ್ನು ಕೈಯ್ಯಲ್ಲಿ ಹಿಡಿದುಕೊಂಡು ತನ್ನ ಸಮೀಪಕ್ಕೆ ಬರುತ್ತಿರುವುದನ್ನು ಆ ಚ್ಯವನಮುನಿಯು ನೋಡಿದನು. ॥೫೧॥

ಸುಂದರವಾದ ದಂತಪಂಕ್ತಿಯಿಂದ ಒಪ್ಪುತ್ತಿರುವ ಆ ಮಂಗಳಾಂಗಿಯನ್ನು ನೋಡಿ ತಪಸ್ವಿಯಾದ ಆಗತಾನೇ ಸಮಾಧಿಯಿಂದ ಬಹಿರ್ಮುಖನಾಗಿದ್ದ ಆ ಚ್ಯವನ

ದೂರಂ ಗಚ್ಛ ವಿಶಾಲಾಕ್ಷಿ ತಾಪಸೋಽಹಂ ವರಾನನೇ ।
ಮಾ ಭಿಂದಸ್ವಾದ್ಯ ವಲ್ಮೀಕಂ ಕಂಟಕೇನ ಕೃಶೋದರಿ ॥೫೩॥

ತೇನೇದಂ ಪ್ರೋಚ್ಯಮಾನಾಽಪಿ ಸಾ ಚಾಸ್ಯ ನ ಶೃಣೋತಿ ವೈ ।
ಕಿಮು ಖಲ್ವಿದಮಿತ್ಯುಕ್ತ್ವಾ ನಿರ್ಬಿಭೇದಾಸ್ಯ ಲೋಚನೇ ॥೫೪॥

ದೈವೇನ ನೋದಿತಾ ಭಿತ್ವಾ ಜಗಾಮ ನೃಪಕನ್ಯಕಾ ।
ಕ್ರೀಡಂತೀ ಶಂಕಮಾನಾ ಸಾ ಕಿಂ ಕೃತಂ ತು ಮಯೇತಿ ಚ ॥೫೫॥

ಚುಕ್ರೋಧ ಸ ತಥಾ ವಿದ್ಧನೇತ್ರಃ ಪರಮಮನ್ಯುಮಾನ್ ।
ವೇದನಾಭ್ಯರ್ದಿತಃ ಕಾಮಂ ಪರಿತಾಪಂ ಜಗಾಮ ಹ ॥೫೬॥

ಶಕೃನ್ಮೂತ್ರನಿರೋಧೋಽಭೂತ್ಸೈನಿಕಾನಾಂ ತು ತತ್ಕ್ಷಣಾತ್ ।
ವಿಶೇಷೇಣ ತು ಭೂಪಸ್ಯ ಸಾಮಾತ್ಯಸ್ಯ ಸಮಂತತಃ ॥೫೭॥

---

ಮುನಿಯು ಸಣ್ಣ ಧ್ವನಿಯಿಂದ ಆ ಕನ್ಯೆಯನ್ನು ಕುರಿತು ಎಲೌ ವಿಶಾಲಾಕ್ಷಿ, ಇದೇ ನಿದು? ನಾನು ತಪಸ್ವಿಯು. ಈ ವಲ್ಮೀಕವು ನನ್ನ ಸುತ್ತಲೂ ಆವರಿಸಿರುವುದು. ಎಲೌ ಲತಾಂಗಿಯೇ, ನಿನ್ನ ಕೈಯಲ್ಲಿರುವ ಈ ಮುಳ್ಳಿನಿಂದ ನಾನು ಇರುವ ಈ ವಲ್ಮೀಕವನ್ನು ಛೇದಿಸಬೇಡ, ದೂರ ಹೋಗು. ಎಂದು ಹೇಳಿದನು. ॥೫೨-೫೩॥

ಆ ಮುನಿಯು ಹೀಗೆ ಹೇಳುತ್ತಿದ್ದರೂ ಆ ಕನ್ಯೆಗೆ ಅಶಕ್ತಿಯಿಂದ ಕುಗ್ಗಿದ್ದ ಧ್ವನಿಯುಳ್ಳ ಅವನ ಈ ಮಾತು ಕೇಳಿಸಲೇ ಇಲ್ಲವು. ಆದುದರಿಂದ ಇದೇನಿರಬಹು ದೆಂದು ಆ ಮುನಿಯ ಕಣ್ಣುಗಳನ್ನು ಮುಳ್ಳಿನಿಂದ ಚುಚ್ಚಿದಳು. ॥೫೪॥

ದೈವಪ್ರೇರಣೆಯಿಂದ ಈ ರೀತಿ ಚುಚ್ಚಿ ಭೇದಿಸಿ ಆ ರಾಜಪುತ್ರಿಯು—ನಾನು ಇದನ್ನೇಕೆ ಮಾಡಿದೆನೆಂದು ಶಂಕಿಸುತ್ತಾ ಆಟವಾಡಲು ಹೊರಟುಹೋದಳು. ॥೫೫॥

ಈರೀತಿಯಾಗಿ ನೇತ್ರಗಳಲ್ಲಿ ಗಾಯವನ್ನು ಹೊಂದಿದ ಆ ಮುನಿಯು ಆ ವೇದನೆಯಿಂದ ಸಂಕಟಪಡುತ್ತಾ ಬಹು ಯಾತನೆಯನ್ನು ಅನುಭವಿಸಿದನು. ಇದ ರಿಂದ ಅವನಿಗೆ ಬಹು ಕೋಪವುಂಟಾಯಿತು. ॥೫೬॥

ಆ ಮುನಿಯ ಕೋಪಪ್ರಭಾವದಿಂದ ಅಕ್ಷಣದಲ್ಲಿಯೇ ಅಲ್ಲಿದ್ದ ರಾಜ ಸೈನಿಕ ರಿಗೂ, ಅದರಲ್ಲೂ ಸಚಿವಸಹಿತನಾದ ರಾಜನಿಗೂ ಸಹ ಮಲಮೂತ್ರನಿರೋಧವು ಉಂಟಾಯಿತು. ॥೫೭॥

ಗಜೋಷ್ಟ್ರತುರಗಾಣಾಂ ಚ ಸರ್ವೇಷಾಂ ಪ್ರಾಣಿನಾಂ ತದಾ ।
ತತೋ ರುದ್ಧೇ ಶಕೃನ್ಮೂತ್ರೇ ಶರ್ಯಾತಿರ್ದುಃಖಿತೋಽಭವತ್ ॥೫೮॥

ಸೈನಿಕೈಃ ಕಥಿತಂ ತಸ್ಮೈ ಶಕೃನ್ಮೂತ್ರನಿರೋಧನಂ ।
ಚಿಂತಯಾಮಾಸ ಭೂಪಾಲಃ ಕಾರಣಂ ದುಃಖಸಂಭವೇ ॥೫೯॥

ವಿಚಿಂತ್ಯಾಹ ತತೋ ರಾಜಾ ಸೈನಿಕಾನ್ಸ್ವಜನಾಂಸ್ತಥಾ ।
ಗೃಹಮಾಗತ್ಯ ಚಿಂತಾರ್ತಃ ಕೇನೇದಂ ದುಷ್ಕೃತಂ ಕೃತಂ ॥೬೦॥

ಸರಸಃ ಪಶ್ಚಿಮೇ ಭಾಗೇ ವನಮಧ್ಯೇ ಮಹಾತಪಾಃ ।
ಚ್ಯವನಸ್ತಾಪಸಸ್ತತ್ರ ತಪಶ್ಚರತಿ ದುಶ್ಚರಂ ॥೬೧॥

ಕೇನಾಪ್ಯಪಕೃತಂ ತತ್ರ ತಾಪಸೇಽಗ್ನಿಸಮಪ್ರಭೇ ।
ತಸ್ಮಾತ್ಪೀಡಾ ಸಮುತ್ಪನ್ನಾ ಸರ್ವೇಷಾಮಿತಿ ನಿಶ್ಚಯಃ ॥೬೨॥

---

ಅಲ್ಲದೆ, ಆನೆ, ಒಂಟೆ, ಕುದುರೆ, ಮೊದಲಾದ ಸಮಸ್ತಪ್ರಾಣಿಗಳಿಗೂ ಸಹ ಮಲಮೂತ್ರಬಂಧನವು ಉಂಟಾಯಿತು. ಇದನ್ನು ನೋಡಿ ಶರ್ಯಾತಿರಾಜನು ಬಹಳ ದುಃಖಗೊಂಡನು. ॥೫೮॥

ಸಮಸ್ತಪ್ರಾಣಿಗಳಿಗೂ ಈರೀತಿಯಲ್ಲಿ ಮಲಮೂತ್ರನಿರೋಧನದಿಂದ ದುಃಖವುಂಟಾಗಿರುವುದನ್ನು ಸೈನಿಕರು ರಾಜನಿಗೆ ತಿಳಿಸಿದರು. ರಾಜನು ಈ ದುಃಖಕ್ಕೆ ಕಾರಣವೇನಿರಬಹುದೆಂದು ಯೋಚನೆಮಾಡಿದನು. ॥೫೯॥

ಹೀಗೆ ಆಲೋಚಿಸುತ್ತಾ ಮನೆಗೆ ಬಂದು ಸೈನಿಕರನ್ನೂ, ಸ್ವಜನರನ್ನೂ ಕುರಿತು, ಈ ದುಃಖಕ್ಕೆ ಕಾರಣವಾದ ಕೆಟ್ಟಕೆಲಸವನ್ನು ಮಾಡಿದವರಾರೆಂದು ಕೇಳಿದನು. ॥೬೦॥

ವನಮಧ್ಯದಲ್ಲಿರುವ ಸರೋವರದ ಪಶ್ಚಿಮಭಾಗದಲ್ಲಿ ಮಹಾತಪಸ್ವಿಯಾದ ಚ್ಯವನಮುನಿಯು ಉಗ್ರವಾದ ತಪಸ್ಸನ್ನಾಚರಿಸುತ್ತಿರುವನು. ಅಗ್ನಿಯಂತೆ ತೇಜಸ್ಸಿನಿಂದ ಪ್ರಕಾಶಮಾನನಾದ ಆ ತಪಸ್ವಿಯ ವಿಷಯದಲ್ಲಿ ಯಾರೋ ಅಪಚಾರವನ್ನು ಮಾಡಿರಬೇಕು. ಅದರಿಂದ ಈ ದುಃಖವು ಸರ್ವರಿಗೂ ಉಂಟಾಗಿರುವುದು. ಇದು ನಿಶ್ಚಯವು. ॥೬೧-೬೨॥

ತಪೋವೃದ್ಧಸ್ಯ ವೃದ್ಧಸ್ಯ ವರಿಷ್ಠಸ್ಯ ವಿಶೇಷತಃ ।
ಕೇನಾಪ್ಯಪಕೃತಂ ಮನ್ಯೇ ಭಾರ್ಗವಸ್ಯ ಮಹಾತ್ಮನಃ ॥೬೩॥

ಜ್ಞಾತಂ ವಾ ಯದಿ ವಾಽಜ್ಞಾತಂ ತಸ್ಯೇದಂ ಫಲಮುತ್ತಮಂ ।
ಕೈಶ್ಚ ದುಷ್ಟೈಃ ಕೃತಂ ತಸ್ಯ ಹೇಲನಂ ತಾಪಸಸ್ಯ ಹ ॥೬೪॥
ಇತಿ ಪೃಷ್ಟಾಸ್ತಮೂಚುಸ್ತೇ ಸೈನಿಕಾ ವೇದನಾರ್ದಿತಾಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ದ್ವಿತೀಯೋಽಧ್ಯಾಯಃ

---

ವೃದ್ಧನಾಗಿಯೂ ತುಂಬ ತಪಸ್ವಿಯಾಗಿಯೂ ಮಹಾತ್ಮನಾಗಿಯೂ ಇರುವ ಆ ಭಾರ್ಗವ ಮುನಿಯ ವಿಷಯದಲ್ಲಿ ಯಾರೋ ದುಷ್ಕೃತ್ಯವನ್ನು ಮಾಡಿರುವರೆಂದು ನನಗೆ ತೋರುತ್ತದೆ. ॥೬೩॥

ತಿಳಿದೇ ಆಗಲಿ, ತಿಳಿಯದೆಯೇ ಆಗಲಿ, ಆ ತಾಪಸೋತ್ತಮನಿಗೆ ಅವಮಾನ ವನ್ನು ಮಾಡಿದುದಕ್ಕೆ ಇದೇ ಫಲವು. ಈ ದುಷ್ಕೃತ್ಯವನ್ನು ಮಾಡಿದ ದುಷ್ಟರಾರು ? ॥೬೪॥

ರಾಜನು ಈ ರೀತಿಯಲ್ಲಿ ಎಲ್ಲರನ್ನೂ ಕೇಳಲು, ಅಲ್ಲಿದ್ದ ಸೈನಿಕರು ಬಾಧೆ ಯಿಂದ ತೊಂದರೆಪಡುತ್ತಾ ರಾಜನನ್ನು ಕುರಿತು, ಮನಸ್ಸಿನಿಂದಲಾಗಲಿ, ಮಾತಿನಿಂದ ಲಾಗಲಿ, ಕಾರ್ಯದಿಂದಲಾಗಲೀ ನಾವು ಯಾವ ವಿಧವಾದ ಅಪಕೃತ್ಯವನ್ನೂ ಮಾಡಿದವರಲ್ಲವೆಂದು ಹೇಳಿದರು. ॥೬೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ಪಪ್ರಚ್ಛ ತಾನ್ಸರ್ವಾನ್ರಾಜಾ ಚಿಂತಾಕುಲಸ್ತಥಾ ।**
**ಶರ್ಯಾಪೃಚ್ಛತ್ಸುಹೃದ್ವರ್ಗಂ ಸಾಮ್ನಾ ಚೋಗ್ರತಯಾಽಪಿ ಚ ॥೧॥**

**ಪೀಡ್ಯಮಾನಂ ಜನಂ ವೀಕ್ಷ್ಯ ಪಿತರಂ ದುಃಖಿತಂ ತಥಾ ।**
**ವಿಚಿಂತ್ಯ ಶೂಲಭೇದಂ ಸಾ ಸುಕನ್ಯಾ ಚೇದಮಬ್ರವೀತ್ ॥೨॥**

**ವನೇ ಮಯಾ ಪಿತಸ್ತತ್ರ ವಲ್ಮೀಕೋ ವೀರುಧಾವೃತಃ ।**
**ಕ್ರೀಡಂತ್ಯಾ ಸುದೃಢೋ ದೃಷ್ಟಶ್ಛಿದ್ರದ್ವಯಸಮನ್ವಿತಃ ॥೩॥**

---

ವ್ಯಾಸಮುನಿಯು ಹೇಳಿದನು—ಶರ್ಯಾತಿರಾಜನು ಈ ರೀತಿಯಲ್ಲಿ ಚಿಂತಾಯುಕ್ತನಾಗಿ ಎಲ್ಲರನ್ನೂ ಕೇಳಿದ ಬಳಿಕ ತನ್ನ ಬಂಧುವರ್ಗದವರನ್ನೂ ಆಪ್ತೇಷ್ಟರನ್ನೂ ಸಹ ನಯಭಯಾದಿಗಳಿಂದ ಕೂಡಿ ಪ್ರಶ್ನೆ ಮಾಡಿದನು. ॥೧॥

ಜನಗಳು ಹಿಂಸೆಪಡುತ್ತಿರುವುದನ್ನೂ, ತನ್ನ ತಂದೆಯು ದುಃಖಪಡುತ್ತಿರುವುದನ್ನೂ ನೋಡಿ ಸುಕನ್ಯೆಯು ತಾನು ವಿಹರಿಸುತ್ತಿದ್ದಾಗ ಆ ಹುತ್ತವನ್ನು ಮುಳ್ಳಿನಿಂದ ಚುಚ್ಚಿದ್ದುದನ್ನು ಮನಸ್ಸಿನಲ್ಲಿ ಯೋಚಿಸಿ ಜ್ಞಾಪಿಸಿಕೊಂಡು ತಂದೆಯನ್ನು ಕುರಿತು ಈ ಮಾತನ್ನು ಹೇಳಿದಳು. ॥೨॥

ಓ ತಂದೆಯೇ, ಕೇಳು—ವನದಲ್ಲಿ ನಾನು ವಿಹರಿಸುತ್ತಿದ್ದಾಗ ಅಲ್ಲಿ ಬಳ್ಳಿಗಳಿಂದ ಮುಚ್ಚಿಹೋಗಿ ಘಟ್ಟಿಯಾಗಿದ್ದ ಒಂದು ಹುತ್ತವನ್ನು ನೋಡಿದೆನು. ಅದಕ್ಕೆ ಎರಡು ರಂಧ್ರಗಳಿದ್ದುವು. ॥೩॥

ತತ್ರ ಖದ್ಯೋತವದ್ದೀಪ್ತಜ್ಯೋತಿಷೀ ವೀಕ್ಷಿತೇ ಮಯಾ ।
ಸೂಚ್ಯಾವಿದ್ಧೇ ಮಹಾರಾಜ ಪುನಃ ಖದ್ಯೋತಶಂಕಯಾ ॥೪॥

ಜಲಕ್ಲಿನ್ನಾ ತದಾ ಸೂಚೀ ಮಯಾ ದೃಷ್ಟ್ವಾ ಪಿತಃ ಕಿಲ ।
ಹಾ ಹೇತಿ ಚ ಶ್ರುತಃ ಶಬ್ದೋ ಮಂದೋ ವಲ್ಮೀಕಮಧ್ಯತಃ ॥೫॥

ತದಾಽಹಂ ವಿಸ್ಮಿತಾ ರಾಜನ್ಕಿಮೇತದಿತಿ ಶಂಕಯಾ ।
ನ ಜಾನೇ ಕಿಂ ಮಯಾ ವಿದ್ಧಂ ತಸ್ಮಿನ್ವಲ್ಮೀಕಮಂಡಲೇ ॥೬॥

ರಾಜಾ ಶ್ರುತ್ವಾ ತು ಶರ್ಯಾತಿಃ ಸುಕನ್ಯಾವಚನಂ ಮೃದು ।
ಮುನೇಸ್ತದ್ಧೇಲನಂ ಜ್ಞಾತ್ವಾ ವಲ್ಮೀಕಂ ಕ್ಷಿಪ್ರಮಭ್ಯಗಾತ್ ॥೭॥

ತತ್ರಾಪಶ್ಯತ್ತಪೋವೃದ್ಧಂ ಚ್ಯವನಂ ದುಃಖಿತಂ ಭೃಶಂ ।
ಸ್ಫೋಟಯಾಮಾಸ ವಲ್ಮೀಕಂ ಮುನಿದೇಹಾವೃತಂ ಭೃಶಂ ॥೮॥

---

ಆ ಛಿದ್ರಗಳಲ್ಲಿ ಮಿಂಚಿನಂತೆ ಹೊಳೆಯುತ್ತಿರುವ ಎರಡು ಬೆಳಕುಗಳನ್ನು ನೋಡಿದೆನು. ಅವು ಖದ್ಯೋತ ಎಂದರೆ ಮಿಣುಕು ಹುಳುಗಳಿರಬಹುದೆಂದು ಯೋಚಿಸಿ ಸೂಜಿಯಂತಿದ್ದ ಒಂದು ಮುಳ್ಳಿನ ಮೊನೆಯಿಂದ ಅವುಗಳನ್ನು ಚುಚ್ಚಿದೆನು. ॥೪॥

ಓ ತಂದೆಯೇ, ಆ ಸೂಜಿಯನ್ನು ನಾನು ತೆಗೆದು ನೋಡಿದಾಗ ಅದು ನೀರಿನಿಂದ ಒದ್ದೆಯಾಗಿದ್ದಿತು. ಮತ್ತು ಆ ಹುತ್ತದ ಮಧ್ಯದಿಂದ ಹಾ! ಅಯ್ಯೋ! ಎಂಬ ದುಃಖವನ್ನು ಸೂಚಿಸುವ ನಾದವು ಮೆಲ್ಲಗೆ ಕೇಳಿಸಿತು. ॥೫॥

ಇದೇನಿರಬಹುದೆಂದು ಆಗ ನನಗೆ ಬಹಳ ಭಯದಿಂದ ಆಶ್ಚರ್ಯವುಂಟಾಯಿತು! ಆ ಹುತ್ತದ ಮಧ್ಯದಲ್ಲಿ ನಾನು ಚುಚ್ಚಿದ ವಸ್ತುವು ಯಾವುದೆಂಬುದು ನನಗೆ ತಿಳಿಯದು. ॥೬॥

ಸುಕನ್ಯೆಯು ಮೆಲ್ಲನೆ ಹೇಳಿದ ಈ ಮಾತನ್ನು ಕೇಳಿ ಆ ಶರ್ಯಾತಿರಾಜನು, ಮುನಿಗೆ ಅಪಚಾರವಾಗಿರುವುದನ್ನು ತಿಳಿದು ಆಕ್ಷಣವೇ ಆ ಹುತ್ತದ ಬಳಿಗೆ ಹೊರಟು ಬಂದನು. ॥೭॥

ಅಲ್ಲಿಗೆ ಬಂದು ಆ ಶರ್ಯಾತಿರಾಜನು, ಬಹುವಾಗಿ ದುಃಖಪಡುತ್ತಿರುವ ತಪೋವೃದ್ಧನಾದ ಚ್ಯವನಮುನಿಯನ್ನು ನೋಡಿದನು ಮತ್ತು ಆ ಮುನಿಯ ಸುತ್ತಲೂ ಆವರಿಸಿದ್ದ ಹುತ್ತವನ್ನು ಒಡೆಯಿಸಿದನು. ॥೮॥

ಪ್ರಣಮ್ಯ ದಂಡವದ್ಭೂಮೌ ರಾಜಾ ತಂ ಭಾರ್ಗವಂ ಪ್ರತಿ ।
ತುಷ್ಟಾವ ವಿನಯೋಪೇತಸ್ತಮುವಾಚ ಕೃತಾಂಜಲಿಃ ॥೯॥

ಪುತ್ರ್ಯಾ ಮಮ ಮಹಾಭಾಗ ಕ್ರೀಡಂತ್ಯಾ ದುಷ್ಕೃತಂ ಕೃತಂ ।
ಅಜ್ಞಾನಾದ್ಬಾಲಯಾ ಬ್ರಹ್ಮನ್ಕೃತಂ ತತ್ಕ್ಷಂತುಮರ್ಹಸಿ ॥೧೦॥

ಆಕ್ರೋಧನಾ ಹಿ ಮುನಯೋ ಭವಂತೀತಿ ಮಯಾ ಶ್ರುತಂ ।
ತಸ್ಮಾತ್ತ್ವಮಪಿ ಬಾಲಾಯಾಃ ಕ್ಷಂತುಮರ್ಹಸಿ ಸಾಂಪ್ರತಂ ॥೧೧॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಚ್ಯವನೋ ವಾಕ್ಯಮಬ್ರವೀತ್ ।
ವಿನಯೋಪನತಂ ದೃಷ್ಟ್ವಾ ರಾಜಾನಂ ದುಃಖಿತಂ ಭೃಶಂ ॥೧೨॥

---

ಬಳಿಕ ಆ ರಾಜನು ಆ ಭಾರ್ಗವಮುನಿಗೆ, ಭೂಮಿಯಲ್ಲಿ ದಂಡದಂತೆ ಬಗ್ಗಿ ನಮಸ್ಕರಿಸಿ ವಿನಯದಿಂದ ಕೈಮುಗಿದುಕೊಂಡು ಸಾಂತ್ವವಚನಗಳಿಂದ ಹೀಗೆ ಹೇಳಿದನು. ॥೯॥

ಓ ಪೂಜ್ಯನೇ, ಆಟವಾಡುತ್ತಿದ್ದ ನನ್ನ ಪುತ್ರಿಯು ಈ ದುಷ್ಕಾರ್ಯವನ್ನು ಮಾಡಿರುವಳು. ಬ್ರಹ್ಮಜ್ಞಾನಿಯೇ, ಅಜ್ಞಾನದಿಂದಲೂ ಬಾಲಬುದ್ಧಿಯಿಂದಲೂ ತಿಳಿಯದೆ ಮಾಡಿರುವ ಈ ಅಪರಾಧವನ್ನು ಕೃಪೆಯಿಟ್ಟು ನೀನು ಕ್ಷಮಿಸಬೇಕು.॥೧೦॥

ತಪಸ್ವಿಗಳಾದವರು ಕೋಪವನ್ನು ಜಯಿಸಿ ಕೋಪವನ್ನು ಮಾಡದೆ ಇರುವರೆಂದು ನಾನು ಕೇಳಿರುವೆನು. ಆದುದರಿಂದ ಈ ಕನ್ಯೆಯು ಬಾಲಭಾವದಿಂದ ತಿಳಿಯದೆ ಈಗ ಮಾಡಿರುವ ಈ ಅಪರಾಧವನ್ನು ಕ್ಷಮಿಸುವುದು ಕೋಪವನ್ನು ಬಿಟ್ಟ ನಿಮ್ಮಂತಹ ದೊಡ್ಡವರಾದ ಮುನಿಗಳಿಗೆ ಉಚಿತವೇ ಆಗಿರುವುದು. ॥೧೧॥

ವ್ಯಾಸಮುನಿಯು ಹೇಳಿದನು—ಈರೀತಿಯಲ್ಲಿ ದುಃಖಿತನಾದ ರಾಜನು ವಿನಯದಿಂದ ಹೇಳುತ್ತಿರುವ ಮಾತನ್ನು ಕೇಳಿ ಚ್ಯವನಮುನಿಯು ರಾಜನನ್ನು ಕುರಿತು ಹೀಗೆ ಹೇಳಿದನು. ॥೧೨॥

॥ ಚ್ಯವನ ಉವಾಚ ॥

ರಾಜನ್ನಾಹಂ ಕದಾಚಿದ್ವೈ ಕರೋಮಿ ಕ್ರೋಧಮಣ್ವಪಿ ।
ನ ಮಯಾಽದ್ಯೈವ ಶಪ್ತಸ್ತ್ವಂ ದುಹಿತ್ರಾ ಪೀಡನೇ ಕೃತೇ ॥೧೩॥

ನೇತ್ರೇ ಪೀಡಾ ಸಮುತ್ಪನ್ನಾ ಮಮ ಚಾದ್ಯ ನಿರಾಗಸಃ ।
ತೇನ ಪಾಪೇನ ಜಾನಾಮಿ ದುಃಖಿತಸ್ತ್ವಂ ಮಹೀಪತೇ ॥೧೪॥

ಅಪರಾಧಂ ಪರಂ ಕೃತ್ವಾ ದೇವೀಭಕ್ತಸ್ಯ ಕೋ ಜನಃ ।
ಸುಖಂ ಲಭೇತ ಯದಪಿ ಭವೇತ್ತ್ರಾತಾ ಶಿವಃ ಸ್ವಯಂ ॥೧೫॥

ಕಿಂ ಕರೋಮಿ ಮಹೀಪಾಲ ನೇತ್ರಹೀನೋ ಜರಾವೃತಃ ।
ಅಂಧಸ್ಯ ಪರಿಚರ್ಯಾಂ ಚ ಕಃ ಕರಿಷ್ಯತಿ ಪಾರ್ಥಿವ ॥೧೬॥

---

ಎಲೈ ರಾಜನೇ, ನಾನು ಯಾವಾಗಲೂ ಅಲ್ಪಸ್ವಲ್ಪ ಕೋಪವನ್ನೂ ಸಹ ಮಾಡುವವನಲ್ಲ. ಆದುದರಿಂದ ನಿನ್ನ ಪುತ್ರಿಯು ಮಾಡಿದ ಹಿಂಸೆಗೆ ಪ್ರತೀಕಾರವಾಗಿ ನಾನು ನಿನ್ನನ್ನು ಶಪಿಸಿರುವುದಿಲ್ಲ. ಆದರೂ ॥೧೩॥

ನಾನು ಏನೊಂದು ಪಾಪಕೃತ್ಯ ಅಥವಾ ಅಪರಾಧವನ್ನು ಮಾಡಿಲ್ಲವಾದರೂ ನನ್ನ ಕಣ್ಣುಗಳಿಗೆ ಈ ರೀತಿಯಾಗಿ ಹಿಂಸೆಯುಂಟಾಯಿತು. ಆದುದರಿಂದ ಎಲೈ ರಾಜನೇ, ಈ ಪಾಪದಿಂದ ನಿನಗೆ ಈ ದುಃಖವು ಪ್ರಾಪ್ತವಾಗಿರುವುದೇ ಹೊರತು ನನ್ನ ಶಾಪದಿಂದ ಅಲ್ಲವೆಂದು ನನಗೆ ತೋರುತ್ತದೆ. ॥೧೪॥

ದೇವೀಭಕ್ತನಾದವನಿಗೆ ಅಪರಾಧವನ್ನು ಮಾಡಿದ ಯಾವ ಪುರುಷನು ತಾನೇ ಸುಖದಿಂದಿರಬಲ್ಲನು? ಅಂಥಾ ಅಪರಾಧದಿಂದ ದುಃಖಪ್ರಾಪ್ತಿಯು ತಾನಾಗಿಯೇ ತಪ್ಪದೆ ಆಗುತ್ತದೆ. ಸಾಕ್ಷಾತ್ ಪರಶಿವನೂ ಸಹ ಅವನನ್ನು ಕಾಪಾಡಲಾರನು. ॥೧೫॥

ಎಲೈ ರಾಜನೇ, ವೃದ್ಧನಾದ ನನಗೆ ನೇತ್ರಗಳೂ ಹೋದುದರಿಂದ ನಾನು ಏನನ್ನು ಮಾಡಲಿ? ಕುರುಡನಾದ ನನ್ನ ಶುಶ್ರೂಷೆಯನ್ನು ಯಾರು ಮಾಡುವರು? ॥೧೬॥

|| ರಾಜೋವಾಚ ||

**ಸೇವಕಾ ಬಹವಃ ಸೇವಾಂ ಕರಿಷ್ಯಂತಿ ತವಾನಿಶಂ ।**
**ಕ್ಷಮಸ್ವ ಮುನಿಶಾರ್ದೂಲ ಸ್ವಲ್ಪಕ್ರೋಧಾ ಹಿ ತಾಪಸಾಃ ||೧೭||**

|| ಚ್ಯವನ ಉವಾಚ ||

**ಅಂಧೋಽಹಂ ನಿರ್ಜನೋ ರಾಜಂಸ್ತಪಸ್ತಪ್ತುಂ ಕಥಂ ಕ್ಷಮಃ ।**
**ತ್ವದೀಯಾಃ ಸೇವಕಾಃ ಕಿಂ ತೇ ಕರಿಷ್ಯಂತಿ ಮಮ ಪ್ರಿಯಂ ||೧೮||**

**ಕ್ಷಮಾಪಯಸಿ ಚೇನ್ಮಾಂ ತ್ವಂ ಕುರು ಮೇ ವಚನಂ ನೃಪ ।**
**ದೇಹಿ ಮೇ ಪರಿಚರ್ಯಾರ್ಥಂ ಕನ್ಯಾಂ ಕಮಲಲೋಚನಾಂ ||೧೯||**

**ತುಷ್ಟೋಽನಯಾ ಮಹಾರಾಜ ಪುತ್ರ್ಯಾ ತವ ಮಹಾಮತೇ ।**
**ಕರಿಷ್ಯಾಮಿ ತಪಶ್ಚಾಹಂ ಸಾ ಮೇ ಸೇವಾಂ ಕರಿಷ್ಯತಿ ||೨೦||**

---

ರಾಜನು ಹೇಳಿದನು—ಓ ಮುನಿಶ್ರೇಷ್ಠನೇ, ನಿನ್ನ ಸೇವೆಯನ್ನು ಮಾಡಲು ಅನೇಕಮಂದಿ ಸೇವಕರು ಯಾವಾಗಲೂ ಸಿದ್ಧರಾಗಿರುವರು. ಆದುದರಿಂದ ಈ ಅಪರಾಧವನ್ನು ಕ್ಷಮಿಸು. ಕೋಪವಿಲ್ಲದಿರುವುದು ತಪಸ್ವಿಗಳಿಗೆ ಸ್ವಭಾವವಲ್ಲವೇ? ||೧೭||

ಚ್ಯವನಮುನಿಯು ಹೇಳಿದನು — ಎಲೈ ರಾಜನೇ, ಕುರುಡನಾಗಿರುವ ನಾನು ನಿರ್ಜನಪ್ರದೇಶವಾದ ಈ ವನದಲ್ಲಿ ತಪಸ್ಸನ್ನು ಮಾಡಲು ಹೇಗೆ ಸಾಧ್ಯವು? ನಿನ್ನ ಸೇವಕರು ನನಗೆ ಏನು ಸಹಾಯವನ್ನು ಮಾಡಬಲ್ಲರು? ||೧೮||

ಓ ರಾಜನೇ, ನನ್ನ ಕ್ಷಮೆಯನ್ನು ಬೇಡುವುದಾದರೆ, ನಾನು ಹೇಳುವ ಮಾತನ್ನು ನಡೆಯಿಸು. ಕಮಲದಂತೆ ಸುಂದರವಾದ ನೇತ್ರಗಳುಳ್ಳ ಆ ನಿನ್ನ ಸುಕನ್ಯೆಯೆಂಬ ಮಗಳನ್ನು ನನ್ನ ಶುಶ್ರೂಷೆಯನ್ನು ಮಾಡುತ್ತಿರುವುದಕ್ಕಾಗಿ ನನಗೆ ನೀನು ಮದುವೆಮಾಡಿಕೊಡು. ||೧೯||

ಓ ಬುದ್ಧಿಶಾಲಿಯಾದ ರಾಜನೇ, ನೀನು ಹೀಗೆ ಮಾಡಿದರೆ ನನಗೆ ಸಂತೋಷವಾಗುವುದು. ನಿನ್ನ ಪುತ್ರಿಯು ನನ್ನ ಸೇವೆಯನ್ನೂ ಮಾಡುವಳು. ಆದುದರಿಂದ ನಾನು ತಪಸ್ಸನ್ನು ಮಾಡಲೂ ಅನುಕೂಲವಾಗುವುದು. ||೨೦||

ಏವಂ ಕೃತೇ ಸುಖಂ ಮೇ ಸ್ಯಾತ್ತವ ಚೈವ ಭವಿಷ್ಯತಿ ।
ಸಂತುಷ್ಟೇ ಮಯಿ ರಾಜೇಂದ್ರ ಸೈನಿಕಾನಾಂ ನ ಸಂಶಯಃ ॥೨೧॥

ವಿಚಿಂತ್ಯ ಮನಸಾ ಭೂಪ ಕನ್ಯಾದಾನಂ ಸಮಾಚರ ।
ನ ಚಾತ್ರ ದೂಷಣಂ ಕಿಂಚಿತ್ತಾಪಸೋಽಹಂ ಯತವ್ರತಃ ॥೨೨॥

॥ ವ್ಯಾಸ ಉವಾಚ ॥

ಶರ್ಯಾತಿರ್ವಚನಂ ಶ್ರುತ್ವಾ ಮುನೇಶ್ಚಿಂತಾತುರೋಽಭವತ್ ।
ನ ದಾಸ್ಯೇಽಪ್ಯಥವಾ ದಾಸ್ಯೇ ಕಿಂಚಿನ್ನೋವಾಚ ಭಾರತ ॥೨೩॥

ಕಥಮಂಧಾಯ ವೃದ್ಧಾಯ ಕುರೂಪಾಯ ಸುತಾಮಿಮಾಂ ।
ದೇವಕನ್ಯೋಪಮಾಂ ದತ್ವಾ ಸುಖೀ ಸ್ಯಾಮಾತ್ಮಸಂಭವಾಂ ॥೨೪॥

---

ಹೀಗೆ ಮಾಡುವುದರಿಂದ ನನಗೂ ಸುಖವಾಗುವುದು. ನಾನುಸಂತುಷ್ಟನಾದರೆ ನಿನಗೂ ಸೈನಿಕರಿಗೂ ಈ ಬಾಧೆಯ ಪರಿಹಾರವಾಗುವುದು. ಇದರಲ್ಲಿ ಸಂಶಯು ವಿಲ್ಲವು. ॥೨೧॥

ಹೀಗೆ ಮಾಡುವುದರಲ್ಲಿ ಯಾವ ದೋಷವೂ ಇಲ್ಲ. ನಾನು ವ್ರತನಿಷ್ಠನು ಮತ್ತು ತಪಸ್ವಿಯು. ಇದೆಲ್ಲವನ್ನೂ ಮನಸ್ಸಿನಲ್ಲಿ ಚೆನ್ನಾಗಿ ಯೋಚಿಸಿ ಕನ್ಯಾದಾನ ವನ್ನು ಮಾಡು. ॥೨೨॥

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯನೇ, ಶರ್ಯಾತಿ ರಾಜನು ಮುನಿಯು ಹೇಳಿದ ಮಾತನ್ನು ಕೇಳಿ ತುಂಬ ಚಿಂತೆಗೊಳಗಾದನು. ಆದರೂ ಮಗಳನ್ನು ಕೊಡುವೆನೆಂದಾಗಲಿ, ಕೊಡುವುದಿಲ್ಲವೆಂದಾಗಲಿ ಆಗಲೇ ಯಾವುದನ್ನೂ ಹೇಳಲಿಲ್ಲ. ॥೨೩॥

ದೇವಕನ್ಯೆಯಂತೆ ಸೌಂದರ್ಯಶಾಲಿನಿಯಾದ ಈ ನನ್ನ ಮಗಳನ್ನು ಕುರುಡನೂ, ವೃದ್ಧನೂ ಆದ ಈ ಕುರೂಪಿಗೆ ಹೇಗೆ ಕೊಡಲಿ? ಅದರಿಂದಲೂ ನಾನು ಸುಖಿಯಾಗಿರುವ ಬಗೆಯೆಂತು? ॥೨೪॥

**ಕೋ ನಾಽಽತ್ಮನಃ ಸುಖಾರ್ಥಾಯ ಪುತ್ರ್ಯಾಃ ಸಂಸಾರಜಂ ಸುಖಂ ।**
**ಹರತೇಽಲ್ಪಮತಿಃ ಪಾಪೋ ಜಾನನ್ನಪಿ ಶುಭಾಶುಭಂ ॥೨೫॥**

**ಪ್ರಾಪ್ಯ ಸಾ ಚ್ಯವನಂ ಸುಭ್ರೂಃ ಪಂಚಬಾಣಶರಾರ್ದಿತಾ ।**
**ಅಂಧಂ ವೃದ್ಧಂ ಪತಿಂ ಪ್ರಾಪ್ಯ ಕಥಂ ಕಾಲಂ ನಯಿಷ್ಯತಿ ॥೨೬॥**

**ಯೌವನೇ ದುರ್ಜಯಃ ಕಾಮೋ ವಿಶೇಷೇಣ ಸುರೂಪಯಾ ।**
**ಆತ್ಮತುಲ್ಯಂ ಪತಿಂ ಪ್ರಾಪ್ಯ ಕಿಮು ವೃದ್ಧಂ ವಿಲೋಚನಂ ॥೨೭॥**

**ಗೌತಮಂ ತಾಪಸಂ ಪ್ರಾಪ್ಯ ರೂಪಯೌವನಸಂಯುತಾ ।**
**ಅಹಲ್ಯಾ ವಾಸವೇನಾಶು ವಂಚಿತಾ ವರವರ್ಣಿನೀ ॥೨೮॥**

**ಶಪ್ತಾ ಚ ಪತಿನಾ ಪಶ್ಚಾಜ್ಜ್ಞಾತ್ವಾ ಧರ್ಮವಿಪರ್ಯಯಂ ।**
**ತಸ್ಮಾದ್ಭವತು ಮೇ ದುಃಖಂ ನ ದದಾಮಿ ಸುಕನ್ಯಕಾಂ ॥೨೯॥**

---

ಯಾವ ಮನುಷ್ಯನು ತಾನೇ ಸ್ವಂತ ಸುಖಕ್ಕೋಸ್ಕರ ತನ್ನ ಮಗಳ ಸಂಸಾರ ಸುಖವನ್ನು ನಾಶಮಾಡುವನು ? ತನ್ನ ಪುತ್ರಿಯ ಶುಭಾಶುಭವನ್ನು ತಿಳಿದೂ ಹೀಗೆ ಮಾಡುವವನು, ಬುದ್ಧಿಯಿಲ್ಲದ ಮಹಾಪಾಪಿಯು. ॥೨೫॥

ಸುಂದರವಾದ ಭ್ರೂಯುಗ್ಮದಿಂದ ಶೋಭಿಸುವ ಆ ನನ್ನ ಮಗಳು ಈ ಕುರುಡನಾದ ವೃದ್ಧನನ್ನು ಪತಿಯಾಗಿ ಪಡೆದರೆ ಕಾಮಬಾಣಪೀಡಿತಳಾದಾಗ ಅವಳು ಕಾಲವನ್ನು ಕಳೆಯುವುದು ಹೇಗೆ ? ॥೨೬॥

ಯೌವನದಲ್ಲಿ ರೂಪಸಂಪನ್ನಳಾದ ಕನ್ಯೆಗೆ ಅನುರೂಪನಾದ ಪತಿಯು ಇದ್ದರೂ ಸಹ ಕಾಮಬಾಧೆಯನ್ನು ಸಹಿಸುವುದೂ ಜಯಿಸುವುದೂ ಕಷ್ಟಸಾಧ್ಯವಾಗಿರುವಲ್ಲಿ, ವೃದ್ಧನೂ ಕುರುಡನೂ ಆದ ಈ ಪತಿಯಿಂದ ಕಾಮತೃಪ್ತಿಯಾಗಿ ಸುಖವಾಗುವುದೇ ? ॥೨೭॥

ರೂಪಯೌವನಸಂಪನ್ನಳಾದ ಅಹಲ್ಯೆಗೆ ತಪಸ್ವಿಯಾದ ಗೌತಮನು ಪತಿಯಾಗಿದ್ದರೂ ಆ ಸುಂದರಿಯು ಇಂದ್ರನಿಂದ ವಂಚಿತಳಾದಳು. ॥೨೮॥

ಬಳಿಕ ಧರ್ಮಾತಿಕ್ರಮವು ನಡೆಯಿತೆಂದು ತಿಳಿದಮೇಲೆ ಅವಳ ಪತಿಯು ಅವಳನ್ನು ಶಪಿಸಿದನು. ಆದುದರಿಂದ ನನಗೆ ದುಃಖವಾದರೂ ಚಿಂತೆಯಿಲ್ಲ. ಸುಕನ್ಯೆಯನ್ನು ಈ ಮುದುಕನಿಗೆ ಕೊಡುವುದಿಲ್ಲ. ॥೨೯॥

**ಇತಿ ಸಂಚಿಂತ್ಯ ಶರ್ಯಾತಿರ್ವಿಮನಾಃ ಸ್ವಗೃಹಂ ಯಯೌ ।**
**ಸಚಿವಾಂಶ್ಚ ಸಮಾಹೂಯ ಮಂತ್ರಂ ಚಕ್ರೇಽತಿದುಃಖಿತಃ ॥೩೦॥**

**ಭೋ ಮಂತ್ರಿಣೋ ಬ್ರುವಂತ್ವದ್ಯ ಕಿಂ ಕರ್ತವ್ಯಂ ಮಯಾಽಧುನಾ ।**
**ಪುತ್ರೀ ದೇಯಾಽಥ ವಿಪ್ರಾಯ ಭೋಕ್ತವ್ಯಂ ದುಃಖಮೇವ ವಾ॥೩೧॥**

**ವಿಚಾರಯಧ್ವಂ ಮಿಲಿತಾ ಹಿತಂ ಸ್ಯಾನ್ಮಮ ವೈ ಕಥಂ ।**

॥ ಮಂತ್ರಿಣ ಊಚುಃ ॥

**ಕಿಂ ಬ್ರೂಮೋಽಸ್ಮಿನ್ಮಹಾರಾಜ ಸಂಕಟೇಽತಿದುರಾಸದೇ ॥೩೨॥**

**ದುರ್ಭಗಾಯ ಸುಕನ್ಯೈಷಾ ಕಥಂ ದೇಯಾಽತಿಸುಂದರೀ ।**

॥ ವ್ಯಾಸ ಉವಾಚ ॥

**ತಥಾ ಚಿಂತಾಕುಲಂ ವೀಕ್ಷ್ಯ ಪಿತರಂ ಮಂತ್ರಿಣಸ್ತದಾ ॥೩೩॥**
**ಸುಕನ್ಯಾ ತ್ವಿಂಗಿತಂ ಜ್ಞಾತ್ವಾ ಪ್ರಹಸ್ಯೇದಮುವಾಚ ಹ ।**

---

ಹೀಗೆ ನಿಶ್ಚಯಿಸಿ ಆ ಶರ್ಯಾತಿರಾಜನು ಚಿಂತಾಕ್ರಾಂತನಾಗಿ ತನ್ನ ಮನೆಗೆ ಹೋದನು. ಅಲ್ಲಿ ತನ್ನ ಮಂತ್ರಿಗಳನ್ನು ಕರೆಯಿಸಿ ಅವರೊಡನೆ ಆಲೋಚಿಸಿದನು. ॥೩೦॥

ಎಲೈ ಮಂತ್ರಿಗಳೇ, ಈಗ ನಾನು ಏನನ್ನು ಮಾಡಬೇಕು? ಆ ಬ್ರಾಹ್ಮಣನಿಗೆ ನನ್ನ ಪುತ್ರಿಯನ್ನು ಕೊಡಬೇಕೇ? ಅಥವಾ ಕೊಡಬಾರದೇ? ಹೀಗೆಯೇ ದುಃಖವನ್ನು ಅನುಭವಿಸುತ್ತಿರಬೇಕೇ? ಇದೆಲ್ಲವನ್ನೂ ನೀವುಗಳು ಒಟ್ಟಾಗಿ ಸೇರಿ ಚೆನ್ನಾಗಿ ವಿಚಾರಮಾಡಿ ನನಗೆ ಹಿತವಾಗುವ ರೀತಿಯನ್ನು ಹೇಳಿರಿ. ॥೩೧॥

ಮಂತ್ರಿಗಳು ಹೇಳಿದರು—ಓ ಮಹಾರಾಜನೇ, ಈ ಕಷ್ಟತರವಾದ ಪ್ರಸಂಗದಲ್ಲಿ ಏನನ್ನು ಹೇಳೋಣ? ಅತ್ಯಂತಸುಂದರಿಯಾದ ಆ ಸುಕನ್ಯೆಯನ್ನು ಆ ನಿರ್ಭಾಗ್ಯನಿಗೆ ಕೊಡು ಎಂದು ಹೇಳುವುದೆಂತು? ॥೩೨॥

ವ್ಯಾಸನು ಹೇಳಿದನು—ತಂದೆಯೂ, ಮಂತ್ರಿಗಳೂ ಹಾಗೆ ಚಿಂತಾಕ್ರಾಂತರಾಗಿರುವುದನ್ನು ನೋಡಿ ಆ ಸುಕನ್ಯೆಯು, ಅವನ ಚಿಂತೆಗೆ ಕಾರಣವನ್ನು ತಿಳಿದು ಹಸನ್ಮುಖದಿಂದ ಹೀಗೆ ಹೇಳಿದಳು. ॥೩೩॥

ಪಿತಃ ಕಸ್ಮಾದ್ಭವಾನದ್ಯ ಚಿಂತಾವ್ಯಾಕುಲಿತೇಂದ್ರಿಯಃ ॥೩೪॥

ಮತ್ಕೃತೇ ದುಃಖಸಂವಿಗ್ನೋ ವಿಷಣ್ಣವದನೋಽಪಿ ವೈ ।
ಅಹಂ ಗತ್ವಾ ಮುನಿಂ ತತ್ರ ಸಮಾಶ್ವಾಸ್ಯ ಮಯಾಽರ್ದಿತಂ ॥೩೫॥

ಕರಿಷ್ಯಾಮಿ ಪ್ರಸನ್ನಂ ತಮಾತ್ಮದಾನೇನ ವೈ ಪಿತಃ ।
ಇತಿ ರಾಜಾ ವಚಃ ಶ್ರುತ್ವಾ ಭಾಷಿತಂ ಯತ್ಸುಕನ್ಯಯಾ ॥೩೬॥

ತಾಮುವಾಚ ಪ್ರಸನ್ನಾತ್ಮಾ ಸಚಿವಾನಾಂ ಚ ಶೃಣ್ವತಾಂ ।
ಕಥಂ ಪುತ್ರಿ ತ್ವಮಂಧಸ್ಯ ಪರಿಚರ್ಯಾಂ ವನೇಽಬಲಾ ॥೩೭॥

ಕರಿಷ್ಯಸಿ ಜರಾರ್ತಸ್ಯ ಕ್ರೋಧನಸ್ಯ ವಿಶೇಷತಃ ।
ಕಥಮಂಧಾಯ ಚಾನೇನ ರೂಪೇಣ ರತಿಸಂನಿಭಾಂ ॥೩೮॥
ದದಾಮಿ ಜರಯಾ ಗ್ರಸ್ತದೇಹಾಯ ಸುಖವಾಂಛಯಾ ।

---

ಓ ತಂದೆಯೇ, ನೀನು ಈ ರೀತಿಯಲ್ಲಿ ಏತಕ್ಕಾಗಿ ಚಿಂತೆಯಿಂದ ದುಃಖಗೊಂಡಿರುವೆ? ನನ್ನ ಸಲುವಾಗಿ ಚಿಂತೆಯಿಂದ ದುಃಖಿಸುತ್ತಾ ನಿನ್ನ ಮುಖವು ಬಾಡಿಹೋಗಿ ಕಾಂತಿಹೀನವಾಗಿರುವುದು! ॥೩೪॥

ಓ ತಂದೆಯೇ, ನಾನು ಮಾಡಿದ ದುಷ್ಟಕೃತ್ಯದಿಂದ ಬಾಧೆಯನ್ನು ಅನುಭವಿಸುತ್ತಿರುವ ಆ ಮುನಿಯ ಸಮೀಪಕ್ಕೆ ನಾನೇ ಹೋಗಿ, ಅವನ ಭಾರ್ಯೆಯಾಗಿರಲೊಪ್ಪಿ, ಅವನನ್ನು ಸಮಾಧಾನ ಪಡಿಸಿ, ಸಂತುಷ್ಟನನ್ನಾಗಿ ಮಾಡುವೆನು. ॥೩೫॥

ಸುಕನ್ಯೆಯು ಹೀಗೆ ಹೇಳಿದ ಮಾತನ್ನು ಕೇಳಿ ರಾಜನು, ಹರ್ಷಿತನಾಗಿ ಮಂತ್ರಿಗಳೂ ಕೇಳುತ್ತಿರಲು, ಅವಳನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೩೬॥

ಓ ಪುತ್ರಿಯೇ, ವೃದ್ಧಾಪ್ಯದಿಂದ ಶಕ್ತಿಯಿಲ್ಲದವನೂ, ಕುರುಡನೂ ಆದರಲ್ಲೂ ಕೋಪಿಷ್ಠನೂ ಆದ ಆ ಮುನಿಯ ಸೇವೆಯನ್ನು ಅಬಲೆಯಾದ ನೀನು ಕಾಡಿನಲ್ಲಿ ಏಕಾಂಗಿಯಾಗಿರುತ್ತಾ ಹೇಗೆ ಮಾಡುವೆ? ॥೩೭॥

ಸುಂದರವಾದ ರೂಪಿನಿಂದ ರತಿಯಂತೆ ಇರುವ ನಿನ್ನನ್ನು ನನ್ನ ಸುಖಕ್ಕೋಸ್ಕರ ಮುಪ್ಪಿನಿಂದ ಕುಗ್ಗಿದ ಶರೀರವುಳ್ಳವನೂ ಕುರುಡನೂ ಆದವನಿಗೆ ಹೇಗೆ ತಾನೇ ಕೊಡಲಿ? ॥೩೮॥

**ಪಿತ್ರಾ ಪುತ್ರೀ ಪ್ರದಾತವ್ಯಾ ವಯೋಜ್ಞಾತಿಬಲಾಯ ಚ ॥೩೯॥**

**ಧನಧಾನ್ಯ ಸಮೃದ್ಧಾಯ ನಾಧನಾಯ ಕದಾಚನ ।**
**ಕ್ವ ತೇ ರೂಪಂ ವಿಶಾಲಾಕ್ಷಿ ಕ್ವಾಸೌ ವೃದ್ಧೋ ವನೇಚರಃ ॥೪೦॥**

**ಕಥಂ ದೇಯಾ ಮಯಾ ಪುತ್ರೀ ತಸ್ಮೈ ಚಾತಿವರಾಯ ಚ ।**
**ಉಟಜೇ ನಿಯತಂ ವಾಸೋ ಯಸ್ಯ ನಿತ್ಯಂ ಮನೋಹರೇ ॥೪೧॥**

**ಕಥಮಂಬುಜಪತ್ರಾಕ್ಷಿ ಕಲ್ಪನೀಯೋ ಮಯಾ ತವ ।**
**ಮರಣಂ ಮೇ ವರಂ ಪ್ರಾಪ್ತಂ ಸೈನಿಕಾನಾಂ ತಥೈವ ಚ ॥೪೨॥**

**ನ ತೇ ಪ್ರದಾನಮಂಧಾಯ ರೋಚತೇ ಪಿಕಭಾಷಿಣಿ ।**
**ಭವಿತವ್ಯಂ ಭವತ್ಯೇವ ಧೈರ್ಯಂ ನೈವ ತ್ಯಜಾಮ್ಯಹಂ ॥೪೩॥**
**ಸುಸ್ಥಿರಾ ಭವ ಸುಶ್ರೋಣಿ ನ ದಾಸ್ಯೇಽನ್ಧಾಯ ಕರ್ಹಿಚಿತ್ ।**

---

ತಂದೆಯಾದವನು ತನ್ನ ಮಗಳನ್ನು ವಯಸ್ಸಿನಲ್ಲಿಯೂ ಕುಲದಲ್ಲಿಯೂ ಅನುರೂಪನಾಗಿಯೂ ಧನಧಾನ್ಯಾದಿ ಐಶ್ವರ್ಯದಿಂದ ಅನುಕೂಲನಾಗಿಯೂ ಇರುವ ವರನಿಗೆ ಕೊಡಬೇಕು. ಇಂತಹ ಸಂಪತ್ತಿಲ್ಲದ ದರಿದ್ರನಿಗೆ ಎಂದಿಗೂ ಕೊಡಕೂಡದು. ಎಂದು ಶಾಸ್ತ್ರವೂ ಆಚರಣೆಯೂ ಇದೆ. ॥೩೯॥

ಎಲೌ ವಿಶಾಲಾಕ್ಷಿಯೇ, ನಿನ್ನ ಈ ಸುಂದರರೂಪವೆಲ್ಲಿ? ಕಾಡಿನಲ್ಲಿ ಅಲೆಯುವ ಆ ಮುದುಕನೆಲ್ಲಿ? ವರನ ಗುಣವೊಂದೂ ಇಲ್ಲದೆ ಅರ್ಹತೆಯನ್ನು ಅತಿಕ್ರಮಿಸಿರುವ ಅವನಿಗೆ ನಿನ್ನನ್ನು ಹೇಗೆ ಕೊಡಲಿ? ॥೪೦॥

ಅವನಿಗೆ ಯಾವಾಗಲೂ ಗುಡಿಸಲೇ ವಾಸಸ್ಥಾನವು. ಇಂತಹ ದರಿದ್ರನಿಗೆ ಕಮಲಲೋಚನೆಯಾದ ನಿನ್ನನ್ನು ನಾನು ಪರ್ಣಶಾಲೆಯಲ್ಲಿರುವಂತೆ ಮಾಡಿ ಕೊಡುವ ಬಗೆ ಹೇಗೆ? ॥೪೧॥

ಎಲೌ ಕೋಕಿಲಾಲಾಪೇ, ಇಂತಹ ಅಯೋಗ್ಯನಿಗೆ ನಿನ್ನನ್ನು ಕೊಡುವುದಕ್ಕಿಂತಲೂ ನನಗೂ ನನ್ನ ಸೈನಿಕರಿಗೂ ಮರಣವೇ ಸಂಭವಿಸಿದರೆ ಅದೇ ಲೇಸು. ಆದುದರಿಂದ ಆ ಕುರುಡನಿಗೆ ನಿನ್ನನ್ನು ಕೊಡಲು ನಾನು ಇಷ್ಟಪಡುವುದಿಲ್ಲ. ॥೪೨॥

ಓ ಕೃಶೋದರಿ, ಆಗುವುದಾಗಲಿ, ನಾನು ಧೈರ್ಯಗೆಡುವುದಿಲ್ಲ. ಹೇಗಾದರೂ ಆ ಅಂಧನಿಗೆ ನಿನ್ನನ್ನು ಎಂದಿಗೂ ಕೊಡಲಾರೆನು. ನೀನು ನಿಶ್ಚಿಂತೆಯಿಂದ ಇರು. ॥೪೩॥

ರಾಜ್ಯಂ ತಿಷ್ಠತು ವಾ ಯಾತು ದೇಹೋಽಯಂ ಚ ತಥೈವ ಮೇ॥೪೪॥
ನ ತ್ವಾಂ ದಾಸ್ಯಾಮ್ಯಹಂ ತಸ್ಮೈ ನೇತ್ರಹೀನಾಯ ಬಾಲಿಕೇ ।
ಸುಕನ್ಯಾ ತಂ ತದಾ ಪ್ರಾಹ ಶ್ರುತ್ವಾ ತದ್ವಚನಂ ಪಿತುಃ ॥೪೫॥

ಪ್ರಸನ್ನವದನಾಽತೀವ ಸ್ನೇಹಯುಕ್ತಮಿದಂ ವಚಃ ।

॥ ಸುಕನ್ಯೋವಾಚ ॥

ನ ಮೇ ಚಿಂತಾ ಪಿತಃ ಕಾರ್ಯಾ ದೇಹಿ ಮಾಂ ಮುನಯೇಽಧುನಾ॥೪೬॥

ಸುಖಂ ಭವತು ಸರ್ವೇಷಾಂ ಲೋಕಾನಾಂ ಮತ್ಕೃತೇನ ಹಿ ।
ಸೇವಯಿಷ್ಯಾಮಿ ಸಂತುಷ್ಟಾ ಪತಿಂ ಪರಮಪಾವನಂ ॥೪೭॥

ಭಕ್ತ್ಯಾ ಪರಮಯಾ ಚಾಪಿ ವೃದ್ಧಂ ಚ ವಿಜನೇ ವನೇ ।
ಸತೀಧರ್ಮಪರಾ ಚಾಹಂ ಚರಿಷ್ಯಾಮಿ ಸುಸಂಮತಂ ॥೪೮॥
ನ ಭೋಗೇಚ್ಛಾಸ್ತಿ ಮೇ ತಾತ ಸ್ವಸ್ಥಂ ಚಿತ್ತಂ ಮಮಾನಘ ।

---

ನನ್ನ ರಾಜ್ಯವೂ, ಕಡೆಗೆ ನನ್ನ ಶರೀರವೂ ಸಹ ಇದ್ದರೆ ಇರಲಿ, ಇಲ್ಲದಿದ್ದರೆ ಹೋಗಲಿ. ಓ ಬಾಲೆಯೇ, ಕಣ್ಣಿಲ್ಲದ ಆ ಮುನಿಗೆ ನಿನ್ನನ್ನು ಕೊಡುವುದಿಲ್ಲ. ॥೪೪॥

ತನ್ನ ತಂದೆಯು ಹೇಳಿದ ಈ ಮಾತನ್ನು ಕೇಳಿ, ಸುಕನ್ಯೆಯು ನಗುಮುಖದಿಂದ ಹೆಚ್ಚಾದ ಪ್ರೀತಿಪೂರ್ವಕವಾಗಿ ಈ ಮಾತನ್ನಾಡಿದಳು. ॥೪೫॥

ಸುಕನ್ಯೆಯು ಹೇಳಿದಳು—ಓ ತಂದೆಯೇ, ನನ್ನ ವಿಷಯವಾಗಿ ಸ್ವಲ್ಪವೂ ಚಿಂತಿಸದೆ ನನ್ನನ್ನು ಆ ಮುನಿಗೆ ಕೊಡು. ನನ್ನಿಂದ ಆಗುವ ಮುನಿಯ ಸೇವೆಯಿಂದ ಸಮಸ್ತಜನರಿಗೂ ಸುಖವುಂಟಾಗಲಿ. ॥೪೬॥

ಆ ನಿರ್ಜನವಾದ ಅರಣ್ಯದಲ್ಲಿದ್ದುಕೊಂಡು ವೃದ್ಧನಾದರೂ ಪತಿಯಾದ ಆ ಮುನಿಯನ್ನು ಪರಮಪಾವನನೆಂದು ತಿಳಿದು ಅತಿಭಕ್ತಿಯಿಂದ ಸಂತೋಷಚಿತ್ತಳಾಗಿ ಅವನಿಗೆ ಸೇವೆಯನ್ನು ಮಾಡುವೆನು! ॥೪೭॥

ಸತೀಧರ್ಮವನ್ನು ಅನುಸರಿಸುತ್ತಾ ಆ ಮುನಿಯನ್ನು ಉಪಚರಿಸುತ್ತಾ ಸಂತೋಷದಿಂದ ಅವನಿಗೆ ಶುಶ್ರೂಷೆಯನ್ನು ಮಾಡುವೆನು. ನನಗೆ ವಿಷಯಭೋಗಾನುಭವದಲ್ಲಿ ಮನಸ್ಸಿಲ್ಲವು. ಪೂಜ್ಯನಾದ ಓ ತಂದೆಯೇ, ನೀನು ನಿಶ್ಚಿಂತನಾಗಿರು. ॥೪೮॥

|| ವ್ಯಾಸ ಉವಾಚ ||

ತಚ್ಛ್ರುತ್ವಾ ಭಾಷಿತಂ ತಸ್ಯಾ ಮಂತ್ರಿಣೋ ವಿಸ್ಮಯಂ ಗತಾಃ ||೪೯||

ರಾಜಾ ಚ ಪರಮಪ್ರೀತೋ ಜಗಾಮ ಮುನಿಸನ್ನಿಧೌ ।
ಗತ್ವಾ ಪ್ರಣಮ್ಯ ಶಿರಸಾ ತಮುವಾಚ ತಪೋಧನಂ ||೫೦||

ಸ್ವಾಮಿನ್ಗೃಹಾಣ ಪುತ್ರೀಂ ಮೇ ಸೇವಾರ್ಥಂ ವಿಧಿವದ್ವಿಭೋ ।
ಇತ್ಯುಕ್ತ್ವಾಽಸ್ಮೈ ದದೌ ಪುತ್ರೀಂ ವಿವಾಹವಿಧಿನಾ ನೃಪಃ ||೫೧||

ಪ್ರತಿಗೃಹ್ಯ ಮುನಿಃ ಕನ್ಯಾಂ ಪ್ರಸನ್ನೋಽಭಾರ್ಗವೋಽಭವತ್ ।
ಪಾರಿಬರ್ಹಂ ನ ಜಗ್ರಾಹ ದೀಯಮಾನಂ ನೃಪೇಣ ಹ ||೫೨||

ಕನ್ಯಾಮೇವಾಗ್ರಹೀತ್ಕಾಮಂ ಪರಿಚರ್ಯಾರ್ಥಮಾತ್ಮನಃ ।
ಪ್ರಸನ್ನೇಽಸ್ಮಿನ್ಮುನೌ ಜಾತಂ ಸೈನಿಕಾನಾಂ ಸುಖಂ ತದಾ ||೫೩||
ರಾಜ್ಞಶ್ಚ ಪರಮಾಹ್ಲಾದಃ ಸಂಜಾತಸ್ತತ್ಕ್ಷಣಾದಪಿ ।

---

ವ್ಯಾಸಮುನಿಯು ಹೇಳಿದನು—ಸುಕನ್ಯೆಯು ಹೀಗೆ ಹೇಳಿದುದನ್ನು ಕೇಳಿ ಮಂತ್ರಿಗಳಿಗೆ ಆಶ್ಚರ್ಯವಾಯಿತು. ರಾಜನೂ ಸಹ ಸಂತೋಷಗೊಂಡು ಆ ಚ್ಯವನ ಮುನಿಯ ಸಮೀಪಕ್ಕೆ ಹೋಗಿ, ಆ ತಪಸ್ವಿಯನ್ನು ಶಿರಸ್ಸಿನಿಂದ ನಮಸ್ಕರಿಸಿ, ಹೀಗೆ ಹೇಳಿದನು. ||೫೦||

ಓ ಸ್ವಾಮಿಯೇ, ಇಗೋ ಈ ನನ್ನ ಪುತ್ರಿಯನ್ನು ನಿನ್ನ ಸೇವಾರ್ಥವಾಗಿ ಸ್ವೀಕರಿಸು. ಎಂದು ಹೇಳಿ, ತನ್ನ ಮಗಳಾದ ಸುಕನ್ಯೆಯನ್ನು ಆ ರಾಜನು ಚ್ಯವನ ಮುನಿಗೆ ವಿವಾಹವಿಧಿಯಿಂದ ಮದುವೆಮಾಡಿಕೊಟ್ಟನು. ||೫೧||

ಭೃಗುಪುತ್ರನಾದ ಆ ಚ್ಯವನಮುನಿಯು ಸುಕನ್ಯೆಯನ್ನು ಪ್ರತಿಗ್ರಹಮಾಡಿ ಸಂತುಷ್ಟನಾದನು. ವಿವಾಹಕಾಲದಲ್ಲಿ ರಾಜನು ಮಗಳಿಗಾಗಿ ಕೊಟ್ಟ ಐಶ್ವರ್ಯಾದಿ ಯಾವ ಬಳುವಳಿಯನ್ನೂ ಸಹ ಆ ಮುನಿಯು ತೆಗೆದುಕೊಳ್ಳಲಿಲ್ಲ. ||೫೨||

ಆ ಮುನಿಯು ತನ್ನ ಶುಶ್ರೂಷೆಗಾಗಿ ಆ ಕನ್ಯೆಯನ್ನು ಮಾತ್ರ ಸ್ವೀಕರಿಸಿದನು. ಮತ್ತೇನನ್ನೂ ತೆಗೆದುಕೊಳ್ಳಲಿಲ್ಲವು! ಈ ರೀತಿಯಲ್ಲಿ ಆ ಮುನಿಯು ಸಂತುಷ್ಟನಾಗಲು, ಸೈನಿಕರೆಲ್ಲರಿಗೂ ಬಾಧೆಯು ಪರಿಹಾರವಾಗಿ ಸುಖವುಂಟಾಯಿತು. ರಾಜನೂ ಸಹ ಆಕ್ಷಣದಲ್ಲಿಯೇ ತುಂಬ ಹರ್ಷಿತನಾದನು. ||೫೩||

ದತ್ವಾ ಪುತ್ರೀಂ ಯದಾ ರಾಜಾ ಗಮನಾಯ ಗೃಹಂ ಪ್ರತಿ ॥೫೪॥
ಮತಿಂ ಚಕಾರ ತನ್ವಂಗೀ ತದೋವಾಚ ನೃಪಂ ಸುತಾ ।

॥ ಸುಕನ್ಯೋವಾಚ ॥

ಗೃಹಾಣ ಮನು ವಾಸಾಂಸಿ ಭೂಷಣಾನಿ ಚ ಮೇ ಪಿತಃ ॥೫೫॥
ವಲ್ಕಲಂ ಪರಿಧಾನಾಯ ಪ್ರಯಚ್ಛಾಜಿನಮುತ್ತಮಂ ।
ವೇಷಂ ತು ಮುನಿಪತ್ನೀನಾಂ ಕೃತ್ವಾ ತಪಸಿ ಸೇವನಂ ॥೫೬॥
ಕರಿಷ್ಯಾಮಿ ತಥಾ ತಾತ ಯಥಾ ತೇ ಕೀರ್ತಿರಚ್ಯುತಾ ।
ಭವಿಷ್ಯತಿ ಭುವಃ ಪೃಷ್ಠೇ ತಥಾ ಸ್ವರ್ಗೇ ರಸಾತಲೇ ॥೫೭॥
ಪರಲೋಕಸುಖಾಯಾಹಂ ಚರಿಷ್ಯಾಮಿ ದಿವಾನಿಶಂ ।
ದತ್ವಾಽಂಧಾಯ ಚ ವೃದ್ಧಾಯ ಸುಂದರೀಂ ಯುವತೀಂ ತು ಮಾಂ ॥೫೮॥
ಚಿಂತಾ ತ್ವಯಾ ನ ಕರ್ತವ್ಯಾ ಶೀಲನಾಶಸಮುದ್ಭವಾ ।

---

ಮಗಳನ್ನು ಮುನಿಗೆ ಕೊಟ್ಟಬಳಿಕ ರಾಜನು ಹೊರಡಲುದ್ಯುಕ್ತನಾದುದನ್ನು ಕಂಡು ಸುಂದರಾಗಿಯಾದ ಸುಕನ್ಯೆಯು ರಾಜನನ್ನು ಕುರಿತು ಈ ರೀತಿಯಾಗಿ ಹೇಳಿದಳು. ॥೫೪॥

ಸುಕನ್ಯೆಯು ಹೇಳಿದಳು— ಓ ತಂದೆಯೇ, ಈ ನನ್ನ ದಿವ್ಯವಸ್ತ್ರಗಳನ್ನೂ ಆಭರಣಗಳನ್ನೂ ತೆಗೆದುಕೊಂಡು ನಾನು ಈಗ ಧರಿಸಲು ಯೋಗ್ಯವಾದ ನಾರುಮಡಿಯನ್ನೂ ಉತ್ತಮವಾದ ಕೃಷ್ಣಾಜಿನವನ್ನೂ ನನಗೆ ಕೊಡು. ॥೫೫॥

ಮುನಿಪತ್ನಿಯರಿಗೆ ಉಚಿತವಾದ ವೇಷವನ್ನು ಧರಿಸಿ ಪತಿಯನ್ನು ಸೇವಿಸುತ್ತಾ ನಿನ್ನ ಕೀರ್ತಿಯು ಭೂಮಿಯಲ್ಲಿಯೂ ಸ್ವರ್ಗದಲ್ಲಿಯೂ ರಸಾತಲದಲ್ಲಿಯೂ ಶಾಶ್ವತವಾಗಿರುವಂತೆ ಮಾಡುವೆನು ! ॥೫೬-೫೭॥

ನಾನು ಪತಿಯನ್ನು ಸೇವಿಸುತ್ತಾ ಪರಲೋಕಸುಖಕ್ಕಾಗಿ ಯಾವಾಗಲೂ ಯತ್ನಿಸುವೆನು. ಅಂಧನೂ ವೃದ್ಧನೂ ಆದವನಿಗೆ ಸುಂದರಿಯೂ ಯುವತಿಯೂ ಆದ ನನ್ನನ್ನು ಕೊಟ್ಟೆನೆಂದೂ, ಇದರಿಂದ ನನ್ನ ಪಾತಿವ್ರತ್ಯಾದಿಶೀಲಕ್ಕೆ ಭಂಗಬರಹುದೆಂದೂ, ನೀನು ಯಾವಾಗಲೂ ಚಿಂತಿಸಬೇಡ. ॥೫೮॥

ಅರುಂಧತೀ ವಸಿಷ್ಠಸ್ಯ ಧರ್ಮಪತ್ನೀ ಯಥಾ ಭುವಿ ॥೫೯॥

ತಥೈವಾಹಂ ಭವಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ।
ಅನಸೂಯಾ ಯಥಾ ಸಾಧ್ವೀ ಭಾರ್ಯಾಽತ್ರೇಃ ಪ್ರಥಿತಾ ಭುವಿ॥೬೦॥

ತಥೈವಾಹಂ ಭವಿಷ್ಯಾಮಿ ಪುತ್ರೀ ಕೀರ್ತಿಕರೀ ತವ ।
ಸುಕನ್ಯಾವಚನಂ ಶ್ರುತ್ವಾ ರಾಜಾ ಪರಮಧರ್ಮವಿತ್ ॥೬೧॥

ದತ್ವಾಽಜಿನಂ ರುರೋದಾಶು ವೀಕ್ಷ್ಯ ತಾಂ ಚಾರುಹಾಸಿನೀಂ ।
ತ್ಯಕ್ತ್ವಾ ಭೂಷಣವಾಸಾಂಸಿ ಮುನಿವೇಷಧರಾಂ ಸುತಾಂ ॥೬೨॥

ವಿವರ್ಣವದನೋ ಭೂತ್ವಾ ಸ್ಥಿತಸ್ತತ್ರೈವ ಪಾರ್ಥಿವಃ ।
ರಾಜ್ಞ್ಯಃ ಸರ್ವಾಃ ಸುತಾಂ ದೃಷ್ಟ್ವಾ ವಲ್ಕಲಾಜಿನಧಾರಿಣೀಂ ॥೬೩॥
ರುರುದುರ್ಭೃಶಶೋಕಾರ್ತಾ ವೇಪಮಾನಾ ಇವಾಭವನ್ ।

---

ಓ ತಂದೆಯೇ, ವಸಿಷ್ಠಮುನಿಗೆ ಅರುಂಧತಿಯು ಹೇಗೆ ಧರ್ಮಪತ್ನಿಯಾಗಿದ್ದಳೋ ಅದರಂತೆ ನಾನೂ ಪತಿವ್ರತೆಯಾಗಿರುವೆನು. ಈ ವಿಚಾರದಲ್ಲಿ ಸಂಶಯಪಡಬೇಕಾಗಿಲ್ಲವು. ||೫೯||

ಅತ್ರಿಋಷಿಗೆ ಸಾಧ್ವಿಯಾದ ಅನುಸೂಯೆಯು ಪತ್ನಿಯಾಗಿ ಭೂಮಿಯಲ್ಲಿ ಪತಿವ್ರತೆಯೆಂದು ಹೇಗೆ ಪ್ರಸಿದ್ಧಿ ಹೊಂದಿರುವಳೋ, ನಾನೂ ಅದರಂತೆ ಪತಿವ್ರತೆಯಾಗಿರುತ್ತಾ ತಂದೆಯಾದ ನಿನಗೂ ಕೀರ್ತಿಯನ್ನು ತರುವೆನು ! ||೬೦||

ಸುಕನ್ಯೆಯು ಹೇಳಿದ ಮಾತನ್ನು ಕೇಳಿ ಧರ್ಮಜ್ಞನಾದ ಶರ್ಯಾತಿರಾಜನೂ ಮಗಳ ಮಾತಿನಂತೆ ಅವಳಿಗೆ ಅಜಿನಾದಿಗಳನ್ನು ಕೊಟ್ಟನು. ಆ ಕನ್ಯೆಯೂ ಸಹ ತನ್ನ ವಸ್ತ್ರಾಭರಣಗಳನ್ನು ಬಿಸುಟು ಮುನಿವೇಷವನ್ನು ಧರಿಸಿದಳು. ಆದರೆ ಮಂದಸ್ಮಿತೆಯಾದ ತನ್ನ ಮಗಳು ಮುನಿವೇಷಧಾರಿಣಿಯಾದುದನ್ನು ಕಂಡು ರಾಜನು ದುಃಖದಿಂದ ರೋದನಮಾಡಿದನು. ||೬೧-೬೨||

ಅಳುತ್ತಲಿದ್ದ ಆ ರಾಜನ ಮುಖವು ಕಳೆಗುಂದಿತು. ಅವನು ಅಲ್ಲಿಯೇ ಹಾಗೆ ಇರಲು, ಅವನ ರಾಣಿಯರೆಲ್ಲರೂ ತಮ್ಮ ಮಗಳು ವಲ್ಕಲಾಜಿನಗಳನ್ನು ಧರಿಸಿ ನಿಂತಿರುವುದನ್ನು ನೋಡಿ ಅತಿದುಃಖದಿಂದ ಅಳುತ್ತಿದ್ದರು. ಅವರ ಹೃದಯಗಳು ದುಃಖಭಾರದಿಂದ ನಡುಗುತ್ತಿದ್ದುವು ! ಹೀಗೆ ಒಳ್ಳೆಯ ಹುಡುಗಿಯಾದ ಆ ಸುಕನ್ಯೆಯು

ತಾಮಾಪೃಚ್ಛ್ಯ ಮಹೀಪಾಲೋ ಮಂತ್ರಿಭಿಃ ಪರಿವಾರಿತಃ ॥೬೪॥
ಯಯೌ ಸ್ವನಗರಂ ರಾಜನ್ಮುಕ್ತ್ವಾ ಪುತ್ರೀಂ ಶುಚಾಽರ್ಪಿತಾಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ತೃತೀಯೋಽಧ್ಯಾಯಃ.

---

ನಡೆನುಡಿಗಳು ಎಲ್ಲರಿಗೂ ಸುಖವನ್ನುಂಟುಮಾಡಿ ಆಶ್ಚರ್ಯದಿಂದ ಎಲ್ಲರ ಮನಸ್ಸನ್ನೂ ಕರಗಿಸಿದುವು ! ॥೬೩॥

ತರುವಾಯ ಆ ಶರ್ಯಾತಿರಾಜನೂ ಮಗಳ ಅನುಮತಿಯನ್ನು ಕೇಳಿಕೊಂಡು, ಪುತ್ರಿಯನ್ನು ಅಲ್ಲಿಯೇ ಬಿಟ್ಟು, ಮಂತ್ರಿಗಳೊಡನೆ ತನ್ನ ಪಟ್ಟಣಕ್ಕೆ ದುಃಖದಿಂದ ಹಿಂತಿರುಗಿ ಹೋದನು. ॥೬೪॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ಚತುರ್ಥೋಽಧ್ಯಾಯಃ ॥

### ನಾಲ್ಕನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಗತೇ ರಾಜನಿ ಸಾ ಬಾಲಾ ಪತಿಸೇವಾಪರಾಯಣಾ ।**
**ಬಭೂವ ಚ ತಥಾಗ್ನೀನಾಂ ಸೇವನೇ ಧರ್ಮತತ್ಪರಾ ॥೧॥**

**ಫಲಾನ್ಯಾದಾಯ ಸ್ವಾದೂನಿ ಮೂಲಾನಿ ವಿವಿಧಾನಿ ಚ ।**
**ದದೌ ಸಾ ಮುನಯೇ ಬಾಲಾ ಪತಿಸೇವಾಪರಾಯಣಾ ॥೨॥**

---

ವ್ಯಾಸಮುನಿಯು ಹೇಳಿದನು—ರಾಜನು ತನ್ನ ಊರಿಗೆ ಹೊರಟುಹೋದ ಮೇಲೆ ಆ ಸುಕನ್ಯೆಯು ಗೃಹಿಣಿಯ ಧರ್ಮದಲ್ಲಿ ಆದರದಿಂದ ಕೂಡಿ ಪತಿಸೇವೆಯಲ್ಲಿ ಆಸಕ್ತಿಯುಳ್ಳವಳಾಗಿಯೂ ಗಾರ್ಹಪತ್ಯ ಆಹವನೀಯ, ದಕ್ಷಿಣಾಗ್ನಿ, ಎಂಬ ಅಗ್ನಿಗಳ ಪರಿಚರ್ಯದಲ್ಲಿ ಭಕ್ತಿಯಿಂದ ಕೂಡಿದವಳಾಗಿಯೂ, ಆಚರಿಸುತ್ತಿದ್ದಳು. ತಾನು ಬಾಲ್ಯದಲ್ಲಿ ಆಟಕ್ಕಾಗಿ ಮಾಡಿದ ಚೇಷ್ಟೆಯಿಂದ ಆ ಮುನಿಯ ಕಣ್ಣುಗಳು ಹೋದುದನ್ನು ತಿಳಿದು, ಅವನ ಧರ್ಮಾಚರಣೆಗೆ ಲೋಪಬಾರದಂತೆ ತಾನು ಅವನನ್ನು ಸೇವಿಸುತ್ತಿರುವುದೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತವೆಂಬುದನ್ನು ಆ ಸುಕನ್ಯೆಯು ಮನಗಂಡು ಹಾಗೆ ಮಾಡಿದಳು. ॥೧॥

ಪತಿಸೇವೆಯಲ್ಲಿ ನಿರತಳಾದ ಆ ಸುಕನ್ಯೆಯು ವನದಲ್ಲಿ ದೊರಕುವ ನಾನಾ ವಿಧವಾದ ಮಧುರಫಲಗಳನ್ನೂ ಕಂದಮೂಲಾದಿಗಳನ್ನೂ ತನ್ನ ಪತಿಗೆ ತಂದು ಕೊಡುತ್ತಿದ್ದಳು. ॥೨॥

ಪತಿಂ ತಪ್ತೋದಕೇನಾಶು ಸ್ನಾಪಯಿತ್ವಾ ಮೃಗತ್ವಚಾ ।
ಪರಿವೇಷ್ಟ್ಯ ಶುಭಾಯಾಂ ತು ಬೃಸ್ಯಾಂ ಸ್ಥಾಪಿತವತ್ಯಪಿ ॥೩॥

ತಿಲಾನ್ಯವಕುಶಾನಗ್ರೇ ಪರಿಕಲ್ಪ್ಯ ಕಮಂಡಲುಂ ।
ತಮುವಾಚ ನಿತ್ಯಕರ್ಮ ಕುರುಷ್ವ ಮುನಿಸತ್ತಮ ॥೪॥

ತಮುತ್ಥಾಪ್ಯ ಕರೇ ಕೃತ್ವಾ ಸಮಾಪ್ತೇ ನಿತ್ಯಕರ್ಮಣಿ ।
ಬೃಸ್ಯಾಂ ವಾ ಸಂಸ್ತರೇ ಬಾಲಾ ಭರ್ತಾರಂ ಸುನ್ಯವೇಶಯತ್ ॥೫॥

ಪಶ್ಚಾದಾನೀಯ ಪಕ್ವಾನಿ ಫಲಾನಿ ಚ ನೃಪಾತ್ಮಜಾ ।
ಭೋಜಯಾಮಾಸ ಚ್ಯವನಂ ನೀವಾರಾನ್ನಂ ಸುಸಂಸ್ಕೃತಂ ॥೬॥

ಭುಕ್ತವಂತಂ ಪತಿಂ ತೃಪ್ತಂ ದತ್ವಾಽಽಚಮನಮಾದರಾತ್ ।
ಪಶ್ಚಾಚ್ಚ ಪೂಗಂ ಪತ್ರಾಣಿ ದದೌ ಚಾದರಸಂಯುತಾ ॥೭॥

---

ಪತಿಯಾದ ಚ್ಯವನಮುನಿಗೆ ಬಿಸಿನೀರಿನಿಂದ ಸ್ನಾನಮಾಡಿಸಿ, ಕೃಷ್ಣಾಜಿನವನ್ನೂ ಹೊದಿಸಿ ನಿತ್ಯಕರ್ಮಗಳನ್ನು ಮಾಡಲು ಉತ್ತಮವಾದ ಋಷಿಗಳಿಗೆ ತಕ್ಕ ಆಸನದಲ್ಲಿ ಕುಳ್ಳಿರಿಸುತ್ತಿದ್ದಳು. ॥೩॥

ಆ ಪತಿಯನ್ನು ಆಸನದಲ್ಲಿ ಕುಳ್ಳಿರಿಸಿ, ಎಳ್ಳು ಅಕ್ಕಿ, ದರ್ಭೆ, ಕಮಂಡಲು ಇವುಗಳನ್ನು ಅವನ ಮುಂದೆ ತಂದಿರಿಸಿ, ಓ ಮುನಿಶ್ರೇಷ್ಠನೇ, ನಿತ್ಯಕರ್ಮವನ್ನು ಆಚರಿಸುವವನಾಗು. ಎಂದು ತನ್ನ ಪತಿಗೆ ಹೇಳುತ್ತಿದ್ದಳು. ॥೪॥

ನಿತ್ಯಕರ್ಮಗಳನ್ನು ಮುಗಿಸಿದ ಮೇಲೆ, ತನ್ನ ಪತಿಯಾದ ಆ ಮುನಿಯನ್ನು ಎಬ್ಬಿಸಿ ಅವನ ಕೈಯನ್ನು ಹಿಡಿದು ಕರೆದುಕೊಂಡು ಹೋಗಿ, ಬೇರೆ, ಒಂದು ಆಸನದಲ್ಲಾಗಲೀ, ದರ್ಭಾಸನದಲ್ಲಾಗಲೀ ಭೋಜನಕ್ಕಾಗಿ ಕುಳ್ಳಿರಿಸುತ್ತಿದ್ದಳು. ॥೫॥

ಬಳಿಕ ಆ ರಾಜಕುವರಿಯು, ಪಕ್ವವಾಗಿರುವ ಹಣ್ಣುಗಳನ್ನು ತಂದಿರಿಸಿ ಅವುಗಳಿಂದಲೂ, ಚನ್ನಾಗಿ ಪಾಕಮಾಡಿರುವ ನೀವಾರ (ನವಣೆ) ಧಾನ್ಯದ ಅನ್ನದಿಂದಲೂ ಆ ಚ್ಯವನಮುನಿಗೆ ಭೋಜನಮಾಡಿಸುತ್ತಿದ್ದಳು. ॥೬॥

ಪತಿಯು ತೃಪ್ತಿಯಾಗಿ ಭೋಜನಮಾಡಿದಮೇಲೆ ಆಚಮನಾದಿಗಳನ್ನು ಮಾಡಿಸಿ ಅಡಿಕೆ ವೀಳ್ಯದೆಲೆ ಇವುಗಳಿಂದ ಕೂಡಿದ ತಾಂಬೂಲವನ್ನು ವಿಶ್ವಾಸದಿಂದ ತಂದುಕೊಡುತ್ತಿದ್ದಳು ! ॥೭॥

ಗೃಹೀತಮುಖವಾಸಂ ತಂ ಸಂವೇಶ್ಯ ಚ ಶುಭಾಸನೇ ।
ಗೃಹೀತ್ವಾಽಜ್ಞಾಂ ಶರೀರಸ್ಯ ಚಕಾರ ಸಾಧನಂ ತತಃ ॥೮॥

ಫಲಾಹಾರಂ ಸ್ವಯಂ ಕೃತ್ವಾ ಪುನರ್ಗತ್ವಾ ಚ ಸಂನಿಧೌ ।
ಪ್ರೋವಾಚ ಪ್ರಣಯೋಪೇತಾ ಕಿಮಾಜ್ಞಾಪಯಸೇ ಪ್ರಭೋ ॥೯॥

ಪಾದಸಂವಾಹನಂ ತೇಽದ್ಯ ಕರೋಮಿ ಯದಿ ಮನ್ಯಸೇ ।
ಏವಂ ಸೇವಾಪರಾ ನಿತ್ಯಂ ಬಭೂವ ಪತಿತತ್ಪರಾ ॥೧೦॥

ಸಾಯಂ ಹೋಮಾವಸಾನೇ ಸಾ ಫಲಾನ್ಯಾಹೃತ್ಯ ಸುಂದರೀ ।
ಅರ್ಪಯಾಮಾಸ ಮುನಯೇ ಸ್ವಾದೂನಿ ಚ ಮೃದೂನಿ ಚ ॥೧೧॥

---

ಆ ಋಷಿಯು ತಾಂಬೂಲವನ್ನು ಸೇವಿಸಿದ ಅನಂತರದಲ್ಲಿ ಮುಖದ ಸುವಾಸನೆಗಾಗಿ ಪರಿಮಳದ್ರವ್ಯವನ್ನೂ ತಂದು ಕೊಟ್ಟು, ಉತ್ತಮವಾದ ಆಸನದಲ್ಲಿ ಮಲಗಿಸಿ, ಅವನ ಆಜ್ಞೆಯನ್ನು ಪಡೆದು ಆ ಸುಕನ್ಯೆಯು ತನ್ನ ಶರೀರದ ರಕ್ಷಣೆಗೆ ಬೇಕಾದ ಉಪಚಾರವನ್ನೂ ಮಾಡಿಕೊಳ್ಳುತ್ತಿದ್ದಳು. ||೮||

ತಾನೂ ಫಲಾಹಾರವನ್ನು ಮಾಡಿ, ಪುನಃ ಪತಿಸನ್ನಿಧಿಗೆ ಹೋಗಿ, ಓ ಪ್ರಭುವೇ, ತಮ್ಮ ಅಪ್ಪಣೆ ಏನು? ಎಂದು ಪ್ರೀತಿಯಿಂದ ಆ ಮುನಿಯನ್ನು ಕೇಳುತ್ತಿದ್ದಳು. ||೯||

ನಿನಗೆ ಇಷ್ಟವಾದರೆ ನಿನ್ನ ಪಾದಗಳನ್ನು ಒತ್ತುವೆನು. ಎಂದು ಹೇಳುತ್ತಾ ಹೀಗೆ ಆ ಸುಕನ್ಯೆಯು ಯಾವಾಗಲೂ ಪತಿಯ ಸೇವೆಯಲ್ಲಿಯೇ ಆಸಕ್ತಳಾಗಿರುತ್ತಿದ್ದಳು. ಆ ರೀತಿಯಲ್ಲಿ ಪ್ರತಿದಿನವೂ ಆ ಸುಕನ್ಯೆಯು ಪತಿಶುಶ್ರೂಷೆಯಲ್ಲಿಯೇ ಮಗ್ನಳಾಗಿದ್ದಳು. ||೧೦||

ಸಾಯಂಕಾಲದಲ್ಲಿಯೂ ಸಹ ಅಗ್ನಿಹೋತ್ರದ ಹೋಮವು ಮುಗಿದ ಮೇಲೆ ಆ ಸುಂದರಾಂಗಿಯು ಮೃದುಮಧುರವಾದ ಫಲಗಳನ್ನು ತಂದು ಆ ಮುನಿಗೆ ಅರ್ಪಿಸುತ್ತಿದ್ದಳು. ||೧೧||

ತತಃ ಶೇಷಾಣಿ ಬುಭುಜೇ ಪ್ರೇಮಯುಕ್ತಾ ತದಾಜ್ಞಯಾ ।
ಸುಸ್ಪರ್ಶಾಸ್ತರಣಂ ಕೃತ್ವಾ ಶಾಯಯಾಮಾಸ ತಂ ಮುದಾ ॥೧೨॥

ಸುಪ್ತೇ ಸುಖಂ ಪ್ರಿಯೇ ಕಾಂತಾ ಪಾದಸಂವಾಹನಂ ತದಾ ।
ಚಕಾರ ಪೃಚ್ಛತೀ ಧರ್ಮಂ ಕುಲಸ್ತ್ರೀಣಾಂ ಕೃಶೋದರೀ ॥೧೩॥

ಪಾದಸಂವಾಹನಂ ಕೃತ್ವಾ ನಿಶಿ ಭಕ್ತಿಪರಾಯಣಾ ।
ನಿದ್ರಿತಂ ಚ ಮುನಿಂ ಜ್ಞಾತ್ವಾ ಸುಷ್ವಾಪ ಚರಣಾಂತಿಕೇ ॥೧೪॥

ಶುಚೌ ಪ್ರತಿಷ್ಠಿತಂ ವೀಕ್ಷ್ಯ ತಾಲವೃಂತೇನ ಭಾಮಿನೀ ।
ಕುರ್ವಾಣಾ ಶೀತಲಂ ವಾಯುಂ ಸಿಷೇವೇ ಸ್ವಪತಿಂ ತದಾ ॥೧೫॥

ಹೇಮಂತೇ ಕಾಷ್ಠಸಂಭಾರಂ ಕೃತ್ವಾಽಗ್ನಿಜ್ವಲನಂ ಪುರಃ ।
ಸ್ಥಾಪಯಿತ್ವಾ ತಥಾಽಪೃಚ್ಛತ್ಸುಖಂ ತೇಽಸ್ತೀತಿ ಚಾಸಕೃತ್ ॥೧೬॥

---

ಬಳಿಕ ಮುನಿಯು ಭುಜಿಸಿ ಉಳಿದ ಫಲಗಳನ್ನು ಅವನ ಅಪ್ಪಣೆಯನ್ನು ಪಡೆದು ಪ್ರೀತಿಯೊಡನೆ ತಾನೂ ಭುಜಿಸಿ, ಮೆತ್ತಗಿರುವ ಹಾಸಿಗೆಯನ್ನು ರಚಿಸಿ ಆದರಲ್ಲಿ ಪತಿಯನ್ನು ಪ್ರೀತಿಯಿಂದ ಮಲಗಿಸುತ್ತಿದ್ದಳು. ॥೧೨॥

ಪತಿಯು ಸುಖವಾಗಿ ಮಲಗಿದ ಮೇಲೆ, ಆ ಲತಾಂಗಿಯು ಅವನ ಪಾದ ಸೇವೆಯನ್ನು ಮಾಡುತ್ತಾ, ಕುಲಸ್ತ್ರೀಯರು ಆಚರಿಸಬೇಕಾದ ಪತಿವ್ರತೆಯರಾದ ಗೃಹಿಣಿಯರ ಧರ್ಮಗಳನ್ನೂ ಸಾಮಾನ್ಯ ನೀತಿಯ ನಡವಳಿಕೆಗಳನ್ನೂ ಆ ಮುನಿಯನ್ನು ಕೇಳಿ ತಿಳಿದುಕೊಳ್ಳುತ್ತಿದ್ದಳು. ॥೧೩॥

ಪತಿಸೇವೆಯಲ್ಲಿ ನಿರತಳಾದ ಆ ಸುಕನ್ಯೆಯು ಹೀಗೆ ಪತಿಯ ಕಾಲುಗಳನ್ನು ಒತ್ತುತ್ತಿದ್ದು ಆ ಮುನಿಗೆ ನಿದ್ರೆ ಬಂದಮೇಲೆ ತಾನೂ ಅವನ ಪಾದಸಮೀಪದಲ್ಲಿಯೇ ಮಲಗಿಕೊಳ್ಳುತ್ತಿದ್ದಳು. ॥೧೩॥

ಮತ್ತು ಸುಖವಾಗಿ ಮಲಗಿರುವ ತನ್ನ ಪತಿಗೆ ಹೆಚ್ಚಾದ ಸೆಕೆಯುಳ್ಳ ಬೇಸಗೆಯ ಕಾಲದಲ್ಲಿ ಬೀಸಣಿಗೆಯಿಂದ ತಂಪಾದ ಗಾಳಿಯನ್ನು ಬೀಸುತ್ತಾ ಋತುಧರ್ಮವನ್ನು ಅನುಸರಿಸಿ ಅವನ ಸೇವೆಯನ್ನು ಯಥೋಚಿತವಾಗಿ ಮಾಡುತ್ತಿದ್ದಳು. ॥೧೫॥

ಹಾಗೆಯೇ ಹೇಮಂತಋತುವಿನಲ್ಲಿ ಎಂದರೆ ಚಳಿಗಾಲದಲ್ಲಿ ಸೌದೆಗಳನ್ನು ಕೂಡಿಸಿ ತಂದು ಆ ಮುನಿಯ ಮುಂದೆ ಬೆಂಕಿಯನ್ನು ಮಾಡಿ ಅವನು ಮೈಯ್ಯನ್ನು

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಜಲಂ ಪಾತ್ರಂ ಚ ಮೃತ್ತಿಕಾಂ ।
ಸಮರ್ಪಯಿತ್ವಾ ಶೌಚಾರ್ಥಂ ಸಮುತ್ಥಾಪ್ಯ ಪತಿಂ ಪ್ರಿಯಾ ॥೧೭॥

ಸ್ಥಾನಾದ್ದೂರೇ ಚ ಸಂಸ್ಥಾಪ್ಯ ದೂರಂ ಗತ್ವಾ ಸ್ಥಿರಾಽಭವತ್ ।
ಕೃತಶೌಚಂ ಪತಿಂ ಜ್ಞಾತ್ವಾ ಗತ್ವಾ ಜಗ್ರಾಹ ತಂ ಪುನಃ ॥೧೮॥

ಆನೀಯಾಶ್ರಮಮುವ್ಯಗ್ರಾ ಚೋಪವೇಶ್ಯಾಽಽಸನೇ ಶುಭೇ ।
ಮೃಜ್ಜಲಾಭ್ಯಾಂ ಚ ಪ್ರಕ್ಷಾಲ್ಯ ಪಾದಾವಸ್ಯ ಯಥಾವಿಧಿ ॥೧೯॥

ದತ್ವಾಚಮನಮಾತ್ರಂ ತು ದಂತಧಾವನಮಾಹರತ್ ।
ಸಮರ್ಪ್ಯ ದಂತಕಾಷ್ಠಂ ಚ ಯಥೋಕ್ತಂ ನೃಪನಂದಿನೀ ॥೨೦॥

ಚಕಾರೋಷ್ಣಂ ಜಲಂ ಶುದ್ಧಂ ಸಮಾನೀತಂ ಸುಪಾವನಂ ।
ಸ್ನಾನಾರ್ಥಂ ಜಲಮಾಹೃತ್ಯ ಪಪ್ರಚ್ಛ ಪ್ರಣಯಾನ್ವಿತಾ ॥೨೧॥

---

ಕಾಯಿಸಿಕೊಳ್ಳುತ್ತಿರುವಾಗ, ಉಪ್ಪು ಹೆಚ್ಚಾಗದಿರಲೆಂದು, ಶಾಖವು ತಕ್ಕಷ್ಟಿದೆಯೇ? ಸುಖವಾಗಿರುವುದೇ? ಎಂದು ಅವನನ್ನು ಆಗಾಗ ಕೇಳುತ್ತಿದ್ದಳು. ||೧೬||

ಆ ಸುಕನ್ಯೆಯು ಪ್ರತಿದಿನವೂ ಬೆಳಗಿನ ಜಾವದಲ್ಲಿ ಎದ್ದು ಪತಿಯನ್ನೂ ಎಬ್ಬಿಸಿ ಆಶ್ರಮದಿಂದ ಸ್ವಲ್ಪ ದೂರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಕುಳ್ಳಿರಿಸಿ ನೀರಿನ ಪಾತ್ರೆಯನ್ನೂ ಮಣ್ಣನ್ನೂ ಇಟ್ಟು, ತಾನು ದೂರದಲ್ಲಿಯೇ ನಿಂತಿರುತ್ತಿದ್ದಳು. ಪತಿಯ ಶೌಚವಿಧಾನವು ಮುಗಿಯಿತೆಂದು ತಿಳಿದನಂತರ ಮತ್ತೆ ಪತಿಯ ಹತ್ತಿರಕ್ಕೆ ಹೋಗಿ ಅವನ ಕೈಯ್ಯನ್ನು ಹಿಡಿದುಕೊಂಡು ಆಶ್ರಮಕ್ಕೆ ಕರೆತಂದು, ಒಳ್ಳೆಯ ಆಸನದಲ್ಲಿ ಕೂಡಿಸಿ, ಸ್ವಲ್ಪವೂ ಹೆಚ್ಚುಕಡಿಮೆಯಾಗದಂತೆ ಶಾಸ್ತ್ರವಿಧಿಗನುಸಾರವಾಗಿ ಅವನ ಪಾದಗಳನ್ನು ಮಣ್ಣು ನೀರು ಇವುಗಳಿಂದ ಚೆನ್ನಾಗಿ ತೊಳೆಯುತ್ತಿದ್ದಳು. ||೧೮-೧೯||

ಪಾದಪ್ರಕ್ಷಾಲನವು ಮುಗಿದ ಮೇಲೆ ಪತಿಯ ಕೈಯಲ್ಲಿ ಆಚಮನಕ್ಕಾಗಿ ನೀರನ್ನು ಕೊಟ್ಟು, ಆ ಮೇಲೆ ಹಲ್ಲನ್ನು ಉಜ್ಜಿಕೊಳ್ಳುವುದಕ್ಕೆ ವೈದ್ಯಶಾಸ್ತ್ರ ಧರ್ಮಶಾಸ್ತ್ರಗಳಲ್ಲಿ ಹೇಳಿರುವಂತೆ ಬೇಕಾದ ಕಾಷ್ಠವನ್ನು ತಂದು ಅವನ ಕೈಗೆ ಕೊಡುತ್ತಿದ್ದಳು. ||೨೦||

ದಂತಧಾವನವು ಮುಗಿದಮೇಲೆ ಶುದ್ಧವಾದ ನೀರನ್ನು ತಂದು ಸ್ನಾನಕ್ಕಾಗಿ ಕಾಯಿಸಿ, ಪತಿಯನ್ನು ಕುರಿತು ಓ ಬ್ರಹ್ಮನಿಷ್ಠನೇ, ಮುಂದೇನಪ್ಪಣೆ? ದಂತಧಾವ

ಕಿಮಾಜ್ಞಾಪಯಸೇ ಬ್ರಹ್ಮನ್ಕೃತಂ ವೈ ದಂತಧಾವನಂ ।
ಉಷ್ಣೋದಕಂ ಸುಸಂಪನ್ನಂ ಕುರು ಸ್ನಾನಂ ಸಮಂತ್ರಕಂ ॥೨೨॥

ವರ್ತತೇ ಹೋಮಕಾಲೋಽಯಂ ಸಂಧ್ಯಾ ಪೂರ್ವಾ ಪ್ರವರ್ತತೇ ।
ವಿಧಿವದ್ಧವನಂ ಕೃತ್ವಾ ದೇವತಾಪೂಜನಂ ಕುರು ॥೨೩॥

ಏವಂ ಕನ್ಯಾ ಪತಿಂ ಲಬ್ಧ್ವಾ ತಪಸ್ವಿನಮನಿಂದಿತಾ ।
ನಿತ್ಯಂ ಪರ್ಯಚರತ್ಪ್ರೀತ್ಯಾ ತಪಸಾ ನಿಯಮೇನ ಚ ॥೨೪॥

ಅಗ್ನೀನಾಮತಿಥೀನಾಂ ಚ ಶುಶ್ರೂಷಾಂ ಕುರ್ವತೀ ಸದಾ ।
ಆರಾಧಯಾಮಾಸ ಮುದಾ ಚ್ಯವನಂ ಸಾ ಶುಭಾನನಾ ॥೨೫॥

ಕಸ್ಮಿಂಶ್ಚಿದಥ ಕಾಲೇ ತು ರವಿಜಾವಶ್ವಿನಾವುಭೌ ।
ಚ್ಯವನಸ್ಯಾಶ್ರಮಾಭ್ಯಾಶೇ ಕ್ರೀಡಮಾನೌ ಸಮಾಗತೌ ॥೨೬॥

---

ನವು ಆಯಿತೇ ? ಸ್ನಾನಕ್ಕಾಗಿ ಉಷ್ಣೋದಕವು ಸಿದ್ಧವಾಗಿರುವುದು. ಮಂತ್ರಪೂರ್ವಕವಾಗಿ ಸ್ನಾನವನ್ನು ಮಾಡು ಎಂದು ವಿನಯದಿಂದ ಕೇಳಿಕೊಳ್ಳುತ್ತಿದ್ದಳು. ॥೨೧-೨೨॥

ಓ ಪತಿಯೇ, ಈಗ ಹೋಮಕಾಲವು ಪ್ರಾಪ್ತವಾಗಿರುವುದು. ಪ್ರಾತಃಸಂಧ್ಯಾವಂದನೆಯನ್ನೂ ವಿಧ್ಯುಕ್ತವಾಗಿ ಹೋಮವನ್ನೂ ಮಾಡಿ ಬಳಿಕ ದೇವತಾರ್ಚನೆಯನ್ನು ನೆರವೇರಿಸು. ॥೨೩॥

ಈ ರೀತಿಯಾಗಿ ಹೇಳಿ ಸಚ್ಚರಿತ್ರಳಾದ ಆ ಸುಕನ್ಯೆಯು ಪ್ರತಿದಿವಸವೂ ಆ ತಪಸ್ವಿಯಾದ ಚ್ಯವನಮುನಿಯನ್ನು ತಪಸ್ಸಿನಿಂದಲೂ, ನಿಯಮದಿಂದಲೂ ಅನುರಾಗದಿಂದ ಕೂಡಿದ ಭಕ್ತಿಯಿಂದಲೂ ಶುಶ್ರೂಷೆಮಾಡುತ್ತಿದ್ದಳು. ॥೨೪॥

ಸುಂದರವಾದ ಮುಖವುಳ್ಳ ಆ ಸುಕನ್ಯೆಯು ಈ ರೀತಿಯಲ್ಲಿ ಅಗ್ನಿಪರಿಚರ್ಯೆಯನ್ನೂ, ಅತಿಥಿ ಪೂಜೆಯನ್ನೂ, ಪತಿಯಾದ ಚ್ಯವನಋಷಿಯ ಶಿಶ್ರೂಷೆಯನ್ನೂ ಸಂತೋಷದಿಂದ ಮಾಡುತ್ತಾ ಪತಿಯನ್ನು ಸೇವೆಮಾಡುತ್ತಿದ್ದಳು.

ಹೀಗಿರುವಾಗ ಒಂದಾನೊಂದು ಕಾಲದಲ್ಲಿ ಸೂರ್ಯಪುತ್ರರಾದ ಅಶ್ವಿನೀ ದೇವತೆಗಳು ಅಲ್ಲಲ್ಲಿ ವಿಹಾರಮಾಡುತ್ತಾ ಚ್ಯವನಮುನಿಯ ಆಶ್ರಮದ ಸಮೀಪಕ್ಕೆ ಬಂದರು. ॥೨೬॥

ಜಲೇ ಸ್ನಾತ್ವಾ ತು ತಾಂ ಕನ್ಯಾಂ ನಿವೃತ್ತಾಂ ಸ್ವಾಶ್ರಮಂ ಪ್ರತಿ ।
ಗಚ್ಛಂತೀಂ ಚಾರುಸರ್ವಾಂಗೀಂ ರವಿಪುತ್ರಾವಪಶ್ಯತಾಂ ॥೨೭॥

ತಾಂ ದೃಷ್ಟ್ವಾ ದೇವಕನ್ಯಾಭಾಂ ಗತ್ವಾ ಚಾಂತಿಕಮಾದರಾತ್ ।
ಊಚತುಃ ಸಮಭಿದ್ರುತ್ಯ ನಾಸತ್ಯಾವತಿನೋಹಿತೌ ॥೨೮॥

ಕ್ಷಣಂ ತಿಷ್ಠ ವರಾರೋಹೇ ಪ್ರಷ್ಟುಂ ತ್ವಾಂ ಗಜಗಾಮಿನಿ ।
ಆವಾಂ ದೇವಸುತೌ ಪ್ರಾಪ್ತೌ ಬ್ರೂಹಿ ಸತ್ಯಂ ಶುಚಿಸ್ಮಿತೇ ॥೨೯॥

ಪುತ್ರೀ ಕಸ್ಯ ಪತಿಃ ಕಸ್ತೇ ಕಥಮುದ್ಯಾನಮಾಗತಾ ।
ಏಕಾಕಿನೀ ತಡಾಗೇಽಸ್ಮಿನ್ಸ್ನಾನಾರ್ಥಂ ಚಾರುಲೋಚನೇ ॥೩೦॥

ದ್ವಿತೀಯಾ ಶ್ರೀರಿವಾಽಽಭಾಸಿ ಕಾಂತ್ಯಾ ಕಮಲಲೋಚನೇ ।
ಇಚ್ಛಾಮಸ್ತು ವಯಂ ಜ್ಞಾತುಂ ತತ್ತ್ವಮಾಖ್ಯಾಹಿ ಶೋಭನೇ ॥೩೧॥

---

ಆಗ ಸರ್ವಾಂಗಸುಂದರಿಯಾದ ಸುಕನ್ಯೆಯು ನೀರಿನಲ್ಲಿ ಸ್ನಾನಮಾಡಿ ತನ್ನ ಆಶ್ರಮಕ್ಕೆ ತಿರುಗಿ ಬರುತ್ತಲಿರುವುದನ್ನು ಆ ಸೂರ್ಯಪುತ್ರರು ನೋಡಿದರು. ||೨೭||

ದೇವಕನ್ಯೆಯಂತೆ ಸೌಂದರ್ಯಾತಿಶಯದಿಂದ ಬೆಳಗುತ್ತಿರುವ ಆ ಸುಕನ್ಯೆಯನ್ನು ನೋಡಿ ಮೋಹಗೊಂಡ ಆ ಅಶ್ವಿನೀದೇವತೆಗಳು ಅವಳ ಸಮೀಪಕ್ಕೆ ಬಂದು ಪ್ರೀತಿಯಿಂದ ಹೀಗೆ ಹೇಳಿದರು. ||೨೮||

ಗಜದಂತೆ ಮಂದಗಮನೆಯಾದ ಓ ಸುಂದರಿ, ಸ್ವಲ್ಪ ನಿಲ್ಲು. ನಾವು ದೇವ ಕುಮಾರರು. ನಿನ್ನನ್ನು ಒಂದು ವಿಷಯದಲ್ಲಿ ಪ್ರಶ್ನಿಸಬೇಕೆಂದಿರುವೆವು. ಆದುದರಿಂದ ನಿರ್ಮಲವಾದ ಮಂದಹಾಸವುಳ್ಳ ಓ ಸುಮುಖಿ, ಸತ್ಯವನ್ನೇ ಹೇಳು. ||೨೯||

ಎಲೈ ಸುಂದರವಾದ ಕಣ್ಣುಗಳುಳ್ಳ ಯುವತಿಯೇ, ನೀನಾರ ಮಗಳು? ನಿನ್ನ ಪತಿಯು ಯಾರು? ನಿರ್ಜನವಾದ ಕಾಡಿನಲ್ಲಿರುವ ಈ ಸರೋವರದಲ್ಲಿ ಸ್ನಾನಮಾಡಲು ಒಬ್ಬಂಟಿಗಳಾಗಿ ಬಂದಿರುವುದೇಕೆ? ||೩೦||

ಓ ಶೋಭನಾಂಗಿಯೇ, ಕಮಲದಂತೆ ಸುಂದರವಾದ ಕಣ್ಣುಗಳುಳ್ಳ ನೀನು ನಿನ್ನ ಶರೀರಕಾಂತಿಯಿಂದ ಎರಡನೆಯ ಲಕ್ಷ್ಮಿಯಂತೆ ಬೆಳಗುತ್ತಿರುವೆ. ಇದನ್ನು ಎಂದರೆ ನಿನ್ನ ಸಮಾಚಾರವನ್ನು ತಿಳಿಯಬೇಕೆಂದು ನಾವು ಕುತೂಹಲಪಡುತ್ತಿರುವೆವು. ಯಥಾರ್ಥವನ್ನು ಹೇಳು. ||೩೧||

ಕೋಮಲೌ ಚರಣೌ ಕಾಂತೇ ಸ್ಥಿತೌ ಭೂಮಾವನಾವೃತೌ ।
ಹೃದಯೇ ಕುರುತಃ ಪೀಡಾಂ ಚಲಂತೌ ಚಲಲೋಚನೇ ॥೩೨॥

ವಿಮಾನಾರ್ಹಾಽಸಿ ತನ್ವಂಗಿ ಕಥಂ ಪದ್ಭ್ಯಾಂ ವ್ರಜಸ್ಯದಃ ।
ಅನಾವೃತಾಽತ್ರ ವಿಪಿನೇ ಕಿಮರ್ಥಂ ಗಮನಂ ತವ ॥೩೩॥

ದಾಸೀಶತಸಮಾಯುಕ್ತಾ ಕಥಂ ನ ತ್ವಂ ವಿನಿರ್ಗತಾ ।
ರಾಜಪುತ್ರ್ಯಪ್ಸರಾ ವಾಽಪಿ ವದ ಸತ್ಯಂ ವರಾನನೇ ॥೩೪॥

ಧನ್ಯಾ ಮಾತಾ ಯತೋ ಜಾತಾ ಧನ್ಯೋಽಸೌ ಜನಕಸ್ತವ ।
ವಕ್ತುಂ ತ್ವಾಂ ನೈವ ಶಕ್ತೌ ಚ ಭರ್ತುರ್ಭಾಗ್ಯಂ ತವಾಽನಘೇ ॥೩೫॥

---

ಓ ಚಂಚಲವಾದ ನೇತ್ರಗಳುಳ್ಳ ಶೋಭನಾಂಗಿಯೇ, ಅತಿ ಕೋಮಲವಾದ ಈ ನಿನ್ನ ಪಾದಗಳಿಗೆ ಪಾದರಕ್ಷೆ ಮುಂತಾದ ರಕ್ಷಣೆಯ ಆಚ್ಛಾದನೆಯಿಲ್ಲದೆ ಕಠಿಣ ವಾದ ಈ ಭೂಮಿಯಲ್ಲಿ ನಡೆಯುತ್ತಿರುವುದನ್ನು ನೋಡಿ ನಮ್ಮ ಹೃದಯವು ಕರಗಿ ಕನಿಕರಗೊಳ್ಳುತ್ತಿರುವುದು. ॥೩೨॥

ಓ ಶೋಭನಾಂಗಿಯೇ, ನೀನು ವಿಮಾನದಲ್ಲಿ ಕುಳಿತು ಸಂಚಾರ ಮಾಡಲು ಅರ್ಹಳು. ಇಂತಹ ನೀನು ಮೇಲು ಹೊದಿಕೆಯ ವಸ್ತ್ರವನ್ನು ಹೊದಿಯದೆ ಎಂದರೆ ಕೋಮಲವಾದ ಶರೀರವನ್ನು ಕಾಪಾಡಿಕೊಳ್ಳದೆ ಈ ಕಾಡಿನಲ್ಲಿ ಕಾಲುನಡಿಗೆಯಿಂದ ಹೋಗುತ್ತಿರುವುದೇಕೆ ? ॥೩೩॥

ನೂರಾರು ಜನ ದಾಸಿಯರಿಂದ ಸೇವಿಸಲ್ಪಡಲು ಯೋಗ್ಯಳಾದ ನೀನು ಇಲ್ಲಿಗೆ ಬಂದ ಕಾರಣವೇನು? ನೀನು ರಾಜಕುಮಾರಿಯೋ? ಅಥವಾ ಅಪ್ಸರ ಸ್ತ್ರೀಯೋ? ಯಾವುದನ್ನೂ ನಿಜವಾಗಿ ಹೇಳು. ॥೩೪॥

ನಿನ್ನಂತಹ ಸುಂದರಿಯನ್ನು ಪಡೆದ ತಂದೆತಾಯಿಗಳು ಧನ್ಯರು! ಎಲೌ ದೋಷವಿಲ್ಲದಿರುವ ಪೂಜ್ಯಳೇ, ನಿನ್ನಂತಹ ಪತ್ನಿಯನ್ನು ಹೊಂದಿರುವ ಪತಿಯ ಒಳ್ಳೆಯ ಅದೃಷ್ಟವನ್ನು ವಿವರಿಸಲು ನಾವು ಸಮರ್ಥರಲ್ಲ! ॥೩೫॥

ದೇವಲೋಕಾಧಿಕಾ ಭೂಮಿರಿಯಂ ಚೈವ ಸುಲೋಚನೇ ।
ಪ್ರಚಲಂಶ್ಚರಣಸ್ತೇಽದ್ಯ ಸಂಧಾವಯತಿ ಭೂತಲಂ ॥೩೬॥

ಸೌಭಾಗ್ಯಾಶ್ಚ ಮೃಗಾಃ ಕಾಮಂ ಯೇ ತ್ವಾಂ ಪಶ್ಯಂತಿ ವೈ ವನೇ ।
ಯೇ ಚಾನ್ಯೇ ಪಕ್ಷಿಣಸ್ಸರ್ವೇ ಭೂರಿಯಂ ಚಾತಿಪಾವನಾ ॥೩೭॥

ಸ್ತುತ್ಯಾಽಲಂ ತವ ಚಾತ್ಯರ್ಥಂ ಸತ್ಯಂ ಬ್ರೂಹಿ ವರಾನನೇ ।
ಪಿತಾ ಕಸ್ತೇ ಪತಿಃ ಕ್ವಾಸೌ ದ್ರಷ್ಟುಮಿಚ್ಛಾಽಸ್ತಿ ಸಾದರಂ ॥೩೮॥

॥ ವ್ಯಾಸ ಉವಾಚ ॥

ತಯೋರಿತಿ ವಚಃ ಶ್ರುತ್ವಾ ರಾಜಕನ್ಯಾಽತಿಸುಂದರೀ ।
ತಾವುವಾಚ ತ್ರಪಾಕ್ರಾಂತಾ ದೇವಪುತ್ರೌ ನೃಪಾತ್ಮಜಾ ॥೩೯॥

ಶರ್ಯಾತಿತನಯಾಂ ಮಾಂ ನಾಂ ವಿತ್ತಂ ಭಾರ್ಯಾಂ ಮುನೇರಿಹ ।
ಚ್ಯವನಸ್ಯ ಸತೀಂ ಕಾಂತಾಂ ಪಿತ್ರಾ ದತ್ತಾಂ ಯದೃಚ್ಛಯಾ ॥೪೦॥

---

ಓ ಸುಂದರನಯನೆಯೇ, ನಿನ್ನಂತಹ ಸುಂದರಿಯಿಂದ ಈ ಭೂಮಿಯು ದೇವಲೋಕಕ್ಕಿಂತಲೂ ಹೆಚ್ಚಿನದಾಗಿ ಮಾಡಲ್ಪಟ್ಟಂತಿರುವುದು. ನಿನ್ನ ಪಾದಸಂಚಾರದಿಂದ ಈ ಭೂತಲವು ಪವಿತ್ರವಾಗಿರುವುದು! ॥೩೬॥

ಈ ಕಾಡಿನಲ್ಲಿ ಇರುವ ಪ್ರಾಣಿಗಳೂ, ಇತರ ಪಕ್ಷಿಗಳೂ ನಿನ್ನನ್ನು ಮನದಣಿಯುವಂತೆ ನೋಡುತ್ತಿರುವುದರಿಂದ ಅವೂ ತುಂಬ ಭಾಗ್ಯಶಾಲಿಗಳು! ಈ ಭೂಪ್ರದೇಶವೂ ನಿನ್ನ ಸಂಪರ್ಕದಿಂದ ಅತಿ ಪಾವನವಾಗಿರುವುದು! ॥೩೭॥

ಎಲೈ ಸುಂದರಮುಖಿಯೇ, ನಿನ್ನನ್ನು ಹೆಚ್ಚಾಗಿ ಹೊಗಳುವುದು ಅನಾವಶ್ಯಕವಾಗಿದೆ. ನಿನ್ನ ತಂದೆ ಯಾರು? ಪತಿ ಯಾರು? ಅವರನ್ನು ನೋಡಬೇಕೆಂದು ನಾವು ಆದರವುಳ್ಳವರಾಗಿ ಅಪೇಕ್ಷಿಸುತ್ತಿರುವೆವು! ॥೩೮॥

ವ್ಯಾಸನು ಹೇಳಿದನು—ದೇವಕುಮಾರರಾದ ಅಶ್ವಿನೀದೇವತೆಗಳು ಹೀಗೆ ಹೇಳಿದ ಮಾತನ್ನು ಕೇಳಿ ಸುಂದರಿಯಾದ ಆ ರಾಜಕುಮಾರಿಯು ಲಜ್ಜೆಯಿಂದ ಅವರನ್ನು ಕುರಿತು ಹೀಗೆ ಹೇಳಿದಳು. ॥೩೯॥

ಓ ಪೂಜ್ಯರೇ, ನಾನು ಶರ್ಯಾತಿರಾಜನ ಮಗಳು. ಇಲ್ಲಿರುವ ಚ್ಯವನ ಮುನಿಯ ಇಷ್ಟಳೂ ಪತಿವ್ರತೆಯೂ ಆಗಿರುವ ಪತ್ನಿಯು. ಅದೃಷ್ಟವಿಶೇಷದಿಂದ

ಪತಿರಂಧೋಽಸ್ತಿ ಮೇ ದೇವೌ ವೃದ್ಧಶ್ಚಾತೀವ ತಾಪಸಃ ।
ತಸ್ಯ ಸೇವಾಮಹೋರಾತ್ರಂ ಕರೋಮಿ ಪ್ರೀತಮಾನಸಾ ॥೪೧॥

ಕೌ ಯುವಾಂ ಕಿಮಿಹಾಽಽಯಾತೌ ಪತಿಸ್ತಿಷ್ಠತಿ ಚಾಶ್ರಮೇ ।
ತತ್ರಾಗತ್ಯ ಪ್ರಕುರುತಮಾಶ್ರಮಂ ಚಾದ್ಯ ಪಾವನಂ ॥೪೨॥

ತದಾಕರ್ಣ್ಯ ವಚೋ ದಸ್ರಾವೂಚತುಸ್ತಾಂ ನರಾಧಿಪ ।
ಕಥಂ ತ್ವಮಪಿ ಕಲ್ಯಾಣಿ ಪಿತ್ರಾ ದತ್ತಾ ತಪಸ್ವಿನೇ ॥೪೩॥

ಭ್ರಾಜಸೇಽಸ್ಮಿನ್ವನೋದ್ದೇಶೇ ವಿದ್ಯುತ್ಸೌದಾಮನೀ ಯಥಾ ।
ನ ದೇವೇಷ್ವಪಿ ತುಲ್ಯಾ ಹಿ ತವ ದೃಷ್ಟ್ವಾಽಸ್ತಿ ಭಾಮಿನೀ ॥೪೪॥

---

ನನ್ನನ್ನು ನನ್ನ ತಂದೆಯು ಈ ಚ್ಯವನಮುನಿಗೆ ನನ್ನ ಇಚ್ಛೆಯಿಂದಲೇ ಮದುವೆ ಮಾಡಿ ಕೊಟ್ಟಿರುವನು. ಎಂದು ನೀವು ತಿಳಿಯಿರಿ. ॥೪೦॥

ಎಲೈ ದೇವಪುತ್ರರೇ, ನನ್ನ ಪತಿಯು ಅಂಧನಾಗಿರುವನು, ವೃದ್ಧನು ಮತ್ತು ಮಹಾತಪಸ್ವಿಯು. ನಾನು ಅವನ ಸೇವೆಯನ್ನು ರಾತ್ರಿಯೂ ಹಗಲೂ ಸಂತೋಷದಿಂದ ಮಾಡುತ್ತಿರುವೆನು! ಇದೇ ನನ್ನ ಸಮಾಚಾರವೆಂದು ಗಮನಿಸಿರಿ. ॥೪೧॥

ನೀವು ಯಾರು? ಏನು ಕಾರಣ ಇಲ್ಲಿಗೆ ಬಂದಿರುವಿರಿ? ನನ್ನ ಪತಿಯು ಆಶ್ರಮದಲ್ಲಿರುವನು. ನೀವು ಅಲ್ಲಿಗೆ ಬಂದು ನಮ್ಮ ಆಶ್ರಮವನ್ನು ನಿಮ್ಮಾಗಮನ ದಿಂದ ಪವಿತ್ರವನ್ನಾಗಿ ಮಾಡಿರಿ. ॥೪೨॥

ಓ ರಾಜನೇ ಕೇಳು—ಆ ಮಾತನ್ನು ಕೇಳಿ ಆ ಅಶ್ವಿನೀಕುಮಾರರು ಅವ ಳನ್ನು ಕುರಿತು ಹೀಗೆ ಹೇಳಿದರು—ಓ ಶೋಭನಾಂಗಿಯೇ, ನಿನ್ನಂತಹ ಮಂಗಳ ಕರಳಾದ ರಾಜಪುತ್ರಿಯನ್ನೂ ನಿನ್ನ ತಂದೆಯು ತಪಸ್ವಿಯಾದ ಚ್ಯವನಮುನಿಗೆ ಹೇಗೆ ಕೊಟ್ಟನು? ॥೪೩॥

ಈ ವನಪ್ರದೇಶದಲ್ಲಿ ನೀನು ಮಿಂಚಿನಂತೆ ಪ್ರಕಾಶಿಸುತ್ತಿರುವೆ! ದೇವತೆಗಳ ಲ್ಲಿಯೂ ಕೂಡ ನಿನ್ನಂತಹ ಕಾಂತಿಯುಳ್ಳ ಸುಂದರಿಯು ಕಾಣಬರುತ್ತಿಲ್ಲವು! ॥೪೪॥

ತ್ವಂ ದಿವ್ಯಾಂಬರಯೋಗ್ಯಾಽಸಿ ಶೋಭಸೇ ನಾಜಿನೈರ್ವೃತಾ ।
ಸರ್ವಾಭರಣಸಂಯುಕ್ತಾ ನೀಲಾಲಕವರೂಥಿನೀ ॥೪೫॥

ಅಹೋ ವಿಧೇರ್ದುಷ್ಕಲಿತಂ ವಿಚೇಷ್ಟಿತಂ
ಯದತ್ರ ರಂಭೋರು ವನೇ ವಿಷೀದಸಿ ।
ವಿಶಾಲನೇತ್ರೇಽನ್ಧಮಿಮಂ ಪತಿಂ ಪ್ರಿಯೇ
ಮುನಿಂ ಸಮಾಸಾದ್ಯ ಜರಾತುರಂ ಭೃಶಂ ॥೪೬॥

ವೃಥಾ ವೃತಸ್ತೇನ ಭೃಶಂ ನ ಶೋಭಸೇ
ನವಂ ವಯಃ ಪ್ರಾಪ್ಯ ಸುನೃತ್ಯಪಂಡಿತೇ ।
ಮನೋಭವೇನಾಶು ಶರಾಃ ಸುಸಂಧಿತಾಃ
ಪತಂತಿ ಕಸ್ಮಿನ್ಪತಿರೀದೃಶಸ್ತವ ॥೪೭॥

ತ್ವಮಂಧಭಾರ್ಯಾ ನವಯೌವನಾನ್ವಿತಾ
ಕೃತಾಽಸಿ ಧಾತ್ರಾ ನನು ಮಂದಬುದ್ಧಿನಾ ।

---

ದಿವ್ಯವಾದ ವಸ್ತ್ರಗಳನ್ನು ಧರಿಸಲು ಯೋಗ್ಯಳಾದ ನಿನಗೆ ಈ ಒರಟಾದ ಕೃಷ್ಣಾಜಿನವು ತಕ್ಕುದಾಗಿಲ್ಲ. ಒಪ್ಪುವುದಿಲ್ಲ. ಕಪ್ಪಾದ ಕೇಶಪಾಶಗಳಿಂದ ಒಪ್ಪುವ ನೀನು ಸರ್ವಾಭರಣಗಳನ್ನೂ ಧರಿಸಿದರೆ ಇನ್ನೂ ಚೆನ್ನಾಗಿ ಶೋಭಿಸುವೆ! ॥೪೫॥

ಬಾಳೆಯ ಕಂಬದಂತೆ ನಯವಾದ ಊರುಪ್ರದೇಶವುಳ್ಳ ನಿನ್ನಂತಹ ಸುಂದರಿಯು ಕಾಡಿನಲ್ಲಿ ಸುತ್ತಬೇಕಾಗಿರುವುದು. ಸುಂದರವಾದ ನೇತ್ರಗಳುಳ್ಳ ನಿನಗೆ ಕುರುಡನೂ ವೃದ್ಧನೂ ಆಗಿರುವ ಮುನಿಯು ಪತಿಯಾಗಿರುವನು! ಆಹಾ! ಬ್ರಹ್ಮನ ಈ ಸೃಷ್ಟಿಕಾರ್ಯವು ಎಷ್ಟು ನಿಂದ್ಯವಾಗಿರುವುದು? ॥೪೬॥

ಹೊಸದಾದ ಯೌವನವನ್ನು ಪಡೆದು ನಾಟ್ಯಶಾಸ್ತ್ರವನ್ನು ಚೆನ್ನಾಗಿ ತಿಳಿದಿರುವ ನಿನ್ನನ್ನು ಆ ಮುನಿಯು ವ್ಯರ್ಥವಾಗಿ ಮದುವೆಯಾದನು. ಇದರಿಂದ ನೀನು ಚೆನ್ನಾಗಿ ಪ್ರಕಾಶಿಸುತ್ತಿಲ್ಲ. ನಿನ್ನ ಗಂಡನು ಇಂತಹನಾದ ಮೇಲೆ, ಮನ್ಮಥನು ಬಿಲ್ಲಿನಲ್ಲಿ ಜೋಡಿಸಿ ಪ್ರಯೋಗಿಸಿದ ಬಾಣಗಳು ವೇಗವಾಗಿ ಯಾರ ಮೇಲೆ ಬೀಳುವುವೋ? (ಮತ್ತೆ ಯಾರಾದರೂ ನಿನ್ನನ್ನು ಕಾಮಿಸುವರು ಎಂದು ಭಾವವು.) ॥೪೭॥

ಅಲ್ಪಬುದ್ಧಿಯುಳ್ಳ ಬ್ರಹ್ಮನು ನಿನ್ನನ್ನು ಕುರುಡನ ಹೆಂಡತಿಯನ್ನಾಗಿ ಮಾಡಿದನು. ಯೌವನವತಿಯೂ ಕಪ್ಪಾಗಿ, ನೀಳವಾಗಿ, ಸುಂದರವಾಗಿ ಇರುವ ಕಣ್ಣುಗ

ನ ಚೈನಮರ್ಹಸ್ಯಸಿತಾಯ ತೇಕ್ಷಣೇ
ಪತಿಂ ತ್ವಮನ್ಯಂ ಕುರು ಚಾರುಲೋಚನೇ ॥೪೮॥

ವೃಥೈವ ತೇ ಜೀವಿತಮಂಬುಜೇಕ್ಷಣೇ
ಪತಿಂ ಚ ಸಂಪ್ರಾಪ್ಯ ಮುನಿಂ ಗತೇಕ್ಷಣಂ ।
ವನೇ ನಿವಾಸಂ ಚ ತಥಾಽಜಿನಾಂಬರ
ಪ್ರಧಾರಣಂ ಯೋಗ್ಯತರಂ ನ ಮನ್ಮಹೇ ॥೪೯॥

ಅತೋಽನವದ್ಯಾಂಗ್ಯುಭಯೋಸ್ತ್ವಮೇಕಕಂ
ವರಂ ಕುರುಷ್ವಾವಹಿತಾ ಸುಲೋಚನೇ ।
ಕಿಂ ಯೌವನಂ ಮಾನಿನಿ ಸಂಕರೋಷಿ
ವೃಥಾ ಮುನಿಂ ಸುಂದರಿ ಸೇವಮಾನಾ ॥೫೦॥

ಕಿಂ ಸೇವಸೇ ಭಾಗ್ಯವಿವರ್ಜಿತಂ ತಂ
ಸಮುಜ್ಝಿತಂ ಪೋಷಣ ರಕ್ಷಣಾಭ್ಯಾಂ ।
ತ್ಯಕ್ತ್ವಾ ಮುನಿಂ ಸರ್ವಸುಖಾಪವರ್ಜಿತಂ
ಭಜಾಽನವದ್ಯಾಂಗ್ಯುಭಯೋಸ್ತ್ವಮೇಕಕಂ ॥೫೧॥

---

ಳುಳ್ಳ ನಿನಗೆ ಈ ಪತಿಯು ತಕ್ಕವನಾಗಿಲ್ಲವು. ಆದುದರಿಂದ ನೀನು ಮತ್ತೊಬ್ಬ ಪತಿಯನ್ನು ವರಿಸು. ॥೪೮॥

ಕಮಲದಂತೆ ಕಣ್ಣುಗಳುಳ್ಳ ಎಲೌ ಸುಕನ್ಯೆಯೇ, ಕಣ್ಣಿಲ್ಲದ ಮುನಿಯನ್ನು ಪತಿಯನ್ನಾಗಿ ಪಡೆದ ನಿನ್ನ ಜೀವನವು ವ್ಯರ್ಥವಾದುದಾಗಿರುವುದು ! ವನದಲ್ಲಿ ವಾಸ ಮಾಡುವುದೂ ಕೃಷ್ಣಾಜಿನವನ್ನು ವಸ್ತ್ರವಾಗಿ ಧರಿಸುವುದೂ ನಿನಗೆ ಯೋಗ್ಯವಾದು ದೆಂದು ನಾವು ತಿಳಿಯುವುದಿಲ್ಲ. ॥೪೯॥

ಆದುದರಿಂದ ಎಲೌ ಸುಂದರಾಂಗಿಯೇ, ನಮ್ಮಿಬ್ಬರಲ್ಲಿ ಒಬ್ಬನನ್ನು ಪತಿಯನ್ನಾಗಿ ವರಿಸು. ಮುನಿಯನ್ನು ವ್ಯರ್ಥವಾಗಿ ಸೇವಿಸುತ್ತಾ ನಿನ್ನ ಪ್ರಾಯವನ್ನು ಏತಕ್ಕೆ ಹಾಳುಮಾಡಿಕೊಳ್ಳುತ್ತೀಯೆ ? ॥೫೦॥

ನಿನ್ನ ರಕ್ಷಣೆಯನ್ನೂ ಪೋಷಣೆಯನ್ನೂ ಮಾಡಲಾರದ ಭಾಗ್ಯಹೀನನಾದ ಆ ಮುನಿಯನ್ನೇಕೆ ಸೇವಿಸುತ್ತಿರುವೆ? ಸಕಲ ಸುಖಗಳನ್ನೂ ಬಿಟ್ಟಿರುವ ಮುನಿಯನ್ನು ಬಿಟ್ಟು, ನಿಮ್ಮಿಬ್ಬರಲ್ಲಿ ಒಬ್ಬನನ್ನು ನೀನು ವರಿಸು. ॥೫೧॥

ತ್ವಂ ನಂದನೇ ಚೈತ್ರರಥೇ ವನೇ ಚ
ಕುರುಷ್ವ ಕಾಂತೇ ಪ್ರಥಿತಂ ವಿಹಾರಂ ।
ಅಂಧೇನ ವೃದ್ಧೇನ ಕಥಂ ಹಿ ಕಾಲಂ
ವಿನೇಷ್ಯಸೇ ಮಾನಿನಿ ಮಾನಹೀನಂ ॥೫೨॥

ಭೂಪಾತ್ಮಜಾ ತ್ವಂ ಶುಭಲಕ್ಷಣಾ ಚ
ಜಾನಾಸಿ ಸಂಸಾರವಿಹಾರಭಾವಂ ।
ಭಾಗ್ಯೇನ ಹೀನಾ ವಿಜನೇ ವನೇಽತ್ರ
ಕಾಲಂ ಕಥಂ ವಾಹಯಸೇ ವೃಥಾ ಚ ॥೫೩॥

ತಸ್ಮಾದ್ಧ್ವಜಸ್ತ್ವ ಪಿಕಭಾಷಿಣಿ ಚಾರುವಕ್ತ್ರೇ
ಏಕಂ ದ್ವಯೋಸ್ತವ ಸಖಾಯ ವಿಶಾಲನೇತ್ರೇ ।
ದೇವಾಲಯೇಷು ಚ ಕೃಶೋದರಿ ಭುಂಕ್ಷ್ವ ಭೋಗಾನ್
ತ್ಯಕ್ತ್ವಾ ಮುನಿಂ ಜರಠಮಾಶು ನೃಪೇಂದ್ರಪುತ್ರಿ ॥೫೪॥

---

ಎಲೌ ಗೌರವಶಾಲಿಯಾದವಳೇ, ನೀನು ದೇವೇಂದ್ರನ ನಂದನವನದಲ್ಲಿಯೂ, ಕುಬೇರನ ಚೈತ್ರರಥವೆಂಬ ವನದಲ್ಲಿಯೂ, ಪ್ರಸಿದ್ಧವಾದ ಆಟಗಳನ್ನು ಆಡು. ಕುರುಡನೂ ಮುದುಕನೂ ಆದ ಈ ಪತಿಯೊಡನೆ ಮಾನವಿಲ್ಲದೆ ಹೇಗೆ ತಾನೆ ಕಾಲವನ್ನು ಕಳೆಯುವೆ? ॥೫೨॥

ನೀನು ರಾಜನ ಮಗಳು, ಸುಂದರಿಯು, ಸಂಸಾರದಲ್ಲಿ ಹೇಗೆ ವಿಹರಿಸಬೇಕೆಂಬುದನ್ನು ತಿಳಿದಿರುವೆ! ಇಂತಹ ನೀನು ಭಾಗ್ಯಹೀನಳಾಗಿ ನಿರ್ಜನವಾದ ಈ ಕಾಡಿನಲ್ಲಿ ವ್ಯರ್ಥವಾಗಿ ಹೇಗೆ ಕಾಲವನ್ನು ಕಳೆಯುವೆ? ॥೫೩॥

ಆದುದರಿಂದ ಕೋಗಿಲೆಯಂತೆ ಮಾತನಾಡುವ, ಸುಂದರವಾದ ಮುಖವುಳ್ಳ, ಸುಕನ್ಯೆಯೇ ನಮ್ಮಿಬ್ಬರಲ್ಲಿ ಒಬ್ಬನನ್ನು ನಿನ್ನ ಪ್ರೇಮಕ್ಕೆ ಸ್ನೇಹಿತನನ್ನಾಗಿ ವರಿಸು. ಬಡನಡುವುಳ್ಳ ರಾಜಪುತ್ರಿಯಾದ ನೀನು ಈ ಮುದಿಮುನಿಯನ್ನು ಬಿಟ್ಟು ದೇವತೆಗಳ ಮನೆಯಾದ ಸ್ವರ್ಗಲೋಕವನ್ನು ಸೇರಿ ಸಕಲಸುಖಗಳನ್ನೂ ಅನುಭವಿಸು. ॥೫೪॥

ಕಿಂ ತೇ ಸುಖಂ ಯತ್ರ ವನೇ ಸುಕೇಶಿ
ವೃದ್ಧೇನ ಸಾರ್ಧಂ ವಿಜನೇ ಮೃಗಾಕ್ಷಿ ।
ಸೇವಾ ತಥಾಂಧಸ್ಯ ನವಂ ವಯಶ್ಚ
ಕಿಂ ತೇ ಮತಂ ಭೂಪತಿಪುತ್ರಿ ದುಃಖಂ ॥೫೫॥

ಶಶಿಮುಖಿ ತ್ವಮತೀವ ಸುಕೋಮಲಾ
ಫಲಜಲಾಹರಣಂ ತವ ನೋಚಿತಂ ।
(ಸುಭಗನೇಕಮತೋ ವೃಣು ಚಾವಯೋಃ ।
ಸುಖವಿವೇಕವತಿ ತ್ವಯಿ ಕಾಮಿನೋಃ ॥೫೬॥)

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಚತುರ್ಥೋಽಧ್ಯಾಯಃ.

---

ಜಿಂಕೆಯ ಕಣ್ಣುಗಳಂತೆ ಸುಂದರವಾದ ಕಣ್ಣುಗಳೂ, ಉದ್ದವಾದ ತಲೆಯ ಕೂದಲುಗಳೂ ಉಳ್ಳ, ಸುಕನ್ಯೆಯೇ, ಪ್ರಾಯದವಳಾದ ನೀನು ಈ ವನದಲ್ಲಿ ಮುದುಕನೂ ಕುರುಡನೂ ಆದ ಪತಿಯ ಸೇವೆಯನ್ನು ಮಾಡುತ್ತಾ ಅವನಲ್ಲಿ ಏನು ಸುಖವನ್ನನುಭವಿಸುವೆ? ,ಎಲೌ ರಾಜಪುತ್ರಿಯೇ, ದುಃಖವನ್ನೇ ಅನುಭವಿಸಬೇಕೆಂದು ನಿನಗೆ ಆಸೆಯಾಗಿದೆಯೇ? ॥೫೫॥

ಚಂದ್ರಮುಖಿಯಾದ ನೀನು ಅತ್ಯಂತ ಮೃದುವಾದ ಅವಯವಗಳುಳ್ಳವಳು! ಆದುದರಿಂದ ಕಾಡಿನಲ್ಲಿ ಹಣ್ಣುಗಳನ್ನೂ ನೀರನ್ನೂ ತಂದುಕೊಡುವ ಕಷ್ಟವಾದ ಕೆಲಸವು ನಿನಗೆ ಯೋಗ್ಯವಾದುದಲ್ಲವು. ಆದುದರಿಂದ ಸುಖದ ವಿವೇಚನೆಯನ್ನು ಮಾಡಬಲ್ಲ ಬುದ್ಧಿಶಾಲಿನಿಯಾದ ಸುಕನ್ಯೆಯೇ, ನಿನ್ನಲ್ಲಿ ಅಪೇಕ್ಷೆಯುಳ್ಳ ನಮ್ಮಿಬ್ಬರಲ್ಲಿ ಸುಂದರನೂ ಸೌಭಾಗ್ಯಶಾಲಿಯೂ ಆಗಿರುವ ನಿನಗೂ ಒಪ್ಪಿ ಬರುವ ಒಬ್ಬನನ್ನು ವರಿಸು. ॥೫೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಯೋಸ್ತದ್ಭಾಷಿತಂ ಶ್ರುತ್ವಾ ವೇಪಮಾನಾ ನೃಪಾತ್ಮಜಾ ।**
**ಧೈರ್ಯಮಾಲಂಬ್ಯ ತೌ ತತ್ರ ಬಭಾಷೇ ಮಿತಭಾಷಿಣೀ ||೧||**

**ದೇವೌ ವಾಂ ರವಿಪುತ್ರೌ ಚ ಸರ್ವಜ್ಞೌ ಸುರಸಂಮತೌ ।**
**ಸತೀಂ ಮಾಂ ಧರ್ಮಶೀಲಾಂ ಚ ನೈವಂ ವದಿತುಮರ್ಹಥ ||೨||**

**ಪಿತ್ರಾ ದತ್ತಾ ಸುರಶ್ರೇಷ್ಠೌ ಮುನಯೇ ಯೋಗಧರ್ಮಿಣೇ ।**
**ಕಥಂ ಗಚ್ಛಾಮಿ ತಂ ಮಾರ್ಗಂ ಪುಂಶ್ಚಲೀಗಣಸೇವಿತಂ ||೩||**

---

ಆ ಅಶ್ವಿನೀದೇವತೆಗಳ ಮಾತನ್ನು ಕೇಳಿ ರಾಜಪುತ್ರಿಯು ನಡುಗುತ್ತಾ ಧೈರ್ಯವನ್ನು ಆಶ್ರಯಿಸಿ ಅವರಿಬ್ಬರನ್ನೂ ಕುರಿತು ಮಿತವಾಗಿ ಮಾತನಾಡುತ್ತಾ ಹೀಗೆ ಹೇಳಿದಳು. ||೧||

ದೇವತೆಗಳೂ ಸೂರ್ಯನ ಪುತ್ರರೂ ಧರ್ಮ ಮುಂತಾದ ಎಲ್ಲವನ್ನೂ ತಿಳಿದಿರುವ ಜ್ಞಾನಿಗಳೂ ದೇವತೆಗಳಲ್ಲಿ ಪೂಜ್ಯರೂ ಆದ ನೀವಿಬ್ಬರೂ ಧರ್ಮಾಚರಣೆಯನ್ನು ಮಾಡುತ್ತಿರುವ, ಪತಿವ್ರತೆಯಾದ, ನನಗೆ ಇಂತಹ ಮಾತುಗಳನ್ನು ಹೇಳಬಾರದು. ||೨||

ಎಲೈ ಅಶ್ವಿನೀದೇವತೆಗಳೇ, ನನ್ನ ತಂದೆಯು ಯೋಗಾಭ್ಯಾಸವನ್ನು ಮಾಡುತ್ತಿರುವ ಈ ಮುನಿಗೆ ನನ್ನನ್ನು ಕೊಟ್ಟಿರುವನು. ನೀವು ಹೇಳುವಂತೆ ಪರಪುರುಷರನ್ನು ಕೂಡುವ ದುಷ್ಟಸ್ತ್ರೀಯರ ಮಾರ್ಗದಲ್ಲಿ ನಾನು ಹೇಗೆ ಹೋಗಲಿ ? ಸಮಸ್ತರೂ

ದ್ರಷ್ಟಾಽಯಂ ಸರ್ವಲೋಕಸ್ಯ ಕರ್ಮಸಾಕ್ಷೀ ದಿವಾಕರಃ ।
ಕಶ್ಯಪಾಚ್ಚೈವ ಸಂಭೂತೌ ನೈವಂ ಭಾಷಿತುಮರ್ಹಥಃ ॥೪॥

ಕುಲಕನ್ಯಾ ಪತಿಂ ತ್ಯಕ್ತ್ವಾ ಕಥಮನ್ಯಂ ಭಜೇನ್ನರಂ ।
ಅಸಾರೇಽಸ್ಮಿನ್ಹಿ ಸಂಸಾರೇ ಜಾನಂತೌ ಧರ್ಮನಿರ್ಣಯಂ ॥೫॥

ಯಥೇಚ್ಛಂ ಗಚ್ಛತಂ ದೇವೌ ಶಾಪಂ ದಾಸ್ಯಾಮಿ ನಾಽನಘೌ ।
ಸುಕನ್ಯಾಽಹಂ ಚ ಶರ್ಯಾತೇಃ ಪತಿಭಕ್ತಿಪರಾಯಣಾ ॥೬॥

ಇತ್ಯಾಕರ್ಣ್ಯ ವಚಸ್ತಸ್ಯಾ ನಾಸತ್ಯೌ ವಿಸ್ಮಿತೌ ಭೃಶಂ ।
ತಾವಬ್ರೂತಾಂ ಪುನಸ್ತ್ವೇನಾಂ ಶಂಕಮಾನೌ ಭಯಂ ಮುನೇಃ ॥೭॥

ರಾಜಪುತ್ರಿ ಪ್ರಸನ್ನೌ ತೇ ಧರ್ಮೇಣ ವರವರ್ಣಿನಿ ।
ವರಂ ವರಯ ಸುಶ್ರೋಣಿ ದಾಸ್ಯಾವಃ ಶ್ರೇಯಸೇ ತವ ॥೮॥

---

ಮಾಡುವ ಎಲ್ಲ ಕರ್ಮಗಳನ್ನೂ ಈ ಸೂರ್ಯದೇವನು ನೋಡುತ್ತಿರುವನು! ಕಶ್ಯಪ ಮುನಿಯ ವಂಶದಲ್ಲಿ ಹುಟ್ಟಿದ ಸೂರ್ಯಪುತ್ರರಾದ ನೀವು ಇಂತಹ ಮಾತುಗಳನ್ನಾಡ ಬಾರದು. ||೩-೪||

ಸತ್ಕುಲದಲ್ಲಿ ಹುಟ್ಟಿದ ಕನ್ಯೆಯು ಪತಿಯನ್ನು ಬಿಟ್ಟು ಪರಪುರುಷನನ್ನು ಹೇಗೆ ಸೇರುವಳು ? ನಾನು ಶರ್ಯಾತಿರಾಜನ ಮಗಳಾದ ಸುಕನ್ಯೆಯು ಪತಿಭಕ್ತಿ ಯಲ್ಲಿ ಆಸಕ್ತಳಾಗಿರುವೆನು. ಸಾರವಿಲ್ಲದ ಈ ಸಂಸಾರದಲ್ಲಿ ನೀವು ಧರ್ಮಸ್ವರೂಪದ ನಿರ್ಣಯವನ್ನು ತಿಳಿದವರಲ್ಲವೆ? ಎಲೈ ದೇವತೆಗಳೇ, ಸುಮ್ಮನೆ ನಿಮ್ಮಿಷ್ಟಾನುಸಾರ ವಾಗಿ ಹೊರಡಿ! ಹಾಗಿಲ್ಲದಿದ್ದರೆ ನಾನು ನಿಮಗೆ ಶಾಪವನ್ನು ಕೊಡುವೆನು! ||೫-೬||

ಹೀಗೆಂದು ಹೇಳಿದ ಆ ಸುಕನ್ಯೆಯ ಮಾತನ್ನು ಕೇಳಿ ಆ ಅಶ್ವಿನೀದೇವತೆಗಳು ಆಶ್ಚರ್ಯಪಡುತ್ತಾ, ಮುನಿಯು ಎಲ್ಲಿ ಶಾಪವನ್ನು ಕೊಡುವನೋ ಎಂದು ಭಯ ಪಡುತ್ತಾ, ಮತ್ತೆ ಆ ಸುಕನ್ಯೆಯನ್ನು ಕುರಿತು ಹೀಗೆ ಹೇಳಿದರು. ||೭||

ಉತ್ತಮಸ್ತ್ರೀಯಾದ ರಾಜಪುತ್ರಿಯೇ, ನಿನ್ನ ಧರ್ಮಾಚರಣೆಗೆ ನಾವಿಬ್ಬರೂ ಸಂತೋಷಪಟ್ಟೆವು! ನೀನು ವರವನ್ನು ಕೇಳಿಕೋ. ನಿನ್ನ ಶ್ರೇಯಸ್ಸಿಗೋಸ್ಕರವಾಗಿ ನಾವು ವರವನ್ನು ಕೊಡುವೆವು! ||೮||

ಜಾನೀಹಿ ಪ್ರಮದೇ ನೂನಮಾವಾಂ ದೇವಭಿಷಗ್ವರೌ ।
ಯುವಾನಂ ರೂಪಸಂಪನ್ನಂ ಪ್ರಕುರ್ಯಾವ ಪತಿಂ ತವ ॥೯॥

ತತಸ್ತ್ರಯಾಣಾಮಸ್ಮಾಕಂ ಪತಿಮೇಕತಮಂ ವೃಣು ।
ಸಮಾನರೂಪದೇಹಾನಾಂ ಮಧ್ಯೇ ಚಾತುರ್ಯಪಂಡಿತೇ ॥೧೦॥

ಸಾ ತಯೋರ್ವಚನಂ ಶ್ರುತ್ವಾ ವಿಸ್ಮಿತಾ ಸ್ವಪತಿಂ ತದಾ ।
ಗತ್ವೋವಾಚ ತಯೋರ್ವಾಕ್ಯಂ ತಾಭ್ಯಾಮುಕ್ತಂ ಯದದ್ಭುತಂ॥೧೧॥

॥ ಸುಕನ್ಯೋವಾಚ ॥

ಸ್ವಾಮಿನ್ಸೂರ್ಯಸುತೌ ದೇವೌ ಸಂಪ್ರಾಪ್ತೌ ಚ್ಯವನಾಶ್ರಮೇ ।
ದೃಷ್ಟೌ ಮಯಾ ದಿವ್ಯದೇಹೌ ನಾಸತ್ಯೌ ಭೃಗುನಂದನ ॥೧೨॥

ವೀಕ್ಷ್ಯ ಮಾಂ ಚಾರುಸರ್ವಾಂಗೀಂ ಜಾತೌ ಕಾಮಾತುರಾವುಭೌ ।
ಕಥಿತಂ ವಚನಂ ಸ್ವಾಮಿನ್ ಪತಿಂ ತೇ ನವಯೌವನಂ ॥೧೩॥

ದಿವ್ಯದೇಹಂ ಕರಿಷ್ಯಾವಶ್ಚಕ್ಷುಷ್ಮಂತಂ ಮುನಿಂ ಕಿಲ ।
ಏತೇನ ಸಮಯೇನಾದ್ಯ ತಂ ಶೃಣು ತ್ವಂ ಮಯೋದಿತಂ ॥೧೪॥

---

ಎಲೌ ಯೌವನವತಿಯೇ, ನಾವಿಬ್ಬರೂ ದೇವತೆಗಳ ವೈದ್ಯರೆಂದು ತಿಳಿ. ನಿನ್ನ ಪತಿಯನ್ನು ಯೌವನವಂತನೂ ರೂಪವಂತನೂ ಆಗುವಂತೆ ಮಾಡುತ್ತೇವೆ.॥೯॥

ಆ ಮೇಲೆ ಸಮಾನವಾದ ರೂಪವುಳ್ಳ ನಮ್ಮ ಮೂರು ಜನರ ನಡುವೆ ಒಬ್ಬನನ್ನು ತಿಳಿವಳಿಕೆಯುಳ್ಳವಳೂ ಚತುರೆಯೂ ಆದ ನೀನು ಪತಿಯನ್ನಾಗಿ ವರಿಸು.॥೧೦॥

ಆ ರಾಜಪುತ್ರಿಯು ಆ ಅಶ್ವಿನೀದೇವತೆಗಳ ಮಾತನ್ನು ಕೇಳಿ ಆಶ್ಚರ್ಯಪಡುತ್ತಾ ತನ್ನ ಪತಿಯ ಸಮೀಪಕ್ಕೆ ಹೋಗಿ ಅವರಿಬ್ಬರೂ ಹೇಳಿದ ಅಚ್ಚರಿಯನ್ನುಂಟು ಮಾಡುವ ಆ ಮಾತನ್ನು ಹೀಗೆ ಹೇಳಿದಳು. ॥೧೧॥

ಓ ಸ್ವಾಮಿಯೇ, ಸೂರ್ಯಪುತ್ರರಾದ ದಿವ್ಯದೇಹವನ್ನು ಧರಿಸಿರುವ ಅಶ್ವಿನೀ ದೇವತೆಗಳು ಈ ಚ್ಯವನಾಶ್ರಮಕ್ಕೆ ಬಂದರು. ಅವರನ್ನು ನಾನು ನೋಡಿದೆನು. ಅವರಿಬ್ಬರೂ ಸರ್ವಾಂಗಸುಂದರಿಯಾದ ನನ್ನನ್ನು ನೋಡಿ ಕಾಮಾತುರರಾದರು. ॥೧೨॥

ಓ ಸ್ವಾಮಿಯೇ, ಅವರು ನನ್ನನ್ನು ಕುರಿತು ಹೀಗೆ ಹೇಳಿದರು. ಓ ಸುಂದರಿಯೇ, ನಿನ್ನ ಪತಿಯನ್ನು ಕಣ್ಣುಗಳಲ್ಲಿ ನೋಡುವ ಶಕ್ತಿಯುಳ್ಳವನೂ ಯೌವನ

ಸಮಾವಯುವರೂಪಂ ಚ ಕರಿಷ್ಯಾವಃ ಪತಿಂ ತವ ।
ತತ್ರ ತ್ರಯಾಣಾಮಸ್ಮಾಕಂ ಪತಿಮೇಕತಮಂ ವೃಣು ॥೧೫॥

ತಚ್ಛ್ರುತ್ವಾಽಹಮಿಹಾಯಾತಾ ಪ್ರಷ್ಟುಂ ತ್ವಾಂ ಕಾರ್ಯಮದ್ಭುತಂ ।
ಕಿಂ ಕರ್ತವ್ಯಮತಃ ಸಾಧೋ ಬ್ರೂಹ್ಯಸ್ಮಿನ್ಕಾರ್ಯಸಂಕಟೇ ॥೧೬॥

ದೇವಮಾಯಾಽಪಿ ದುಜ್ಞೇಯಾ ನ ಜಾನೇ ಕಪಟಂ ತಯೋಃ ।
ಯಥಾಜ್ಞಾಪಯ ಸರ್ವಜ್ಞ ತತ್ಕರೋಮಿ ತವೇಪ್ಸಿತಂ ॥೧೭॥

॥ ಚ್ಯವನ ಉವಾಚ ॥

ಗಚ್ಛ ಕಾಂತೇಽದ್ಯ ನಾಸತ್ಯಾ ವಚನಾನ್ಮಮ ಸುವ್ರತೇ ।
ಆನಯಸ್ವ ಸಮೀಪಂ ಮೇ ಶೀಘ್ರಂ ದೇವಭಿಷಗ್ವರೌ ॥೧೮॥
ಕ್ರಿಯತಾಮಾಶು ತದ್ವಾಕ್ಯಂ ನಾತ್ರ ಕಾರ್ಯಾ ವಿಚಾರಣಾ ।

---

ವಂತನೂ, ಶ್ರೇಷ್ಠವಾದ ದೇಹವುಳ್ಳವನೂ ಆಗುವಂತೆ ಮಾಡುವೆವು! ಆದರೆ ಹೀಗೆ ನಾವು ಮಾಡಬೇಕಾದರೆ ಒಂದು ನಿಯಮವನ್ನು ನೀನು ಒಪ್ಪಬೇಕು. ಆ ನಿಯಮವನ್ನು ಹೇಳುತ್ತೇನೆ ಕೇಳು. ॥೧೪॥

ನಿನ್ನ ಪತಿಯನ್ನು ನಮ್ಮ ಅಂಗಗಳಿಗೆ ಸಮಾನವಾದ ಅವಯವಗಳುಳ್ಳವನನ್ನಾಗಿಯೂ ಸುಂದರವಾದ ರೂಪವುಳ್ಳವನನ್ನಾಗಿಯೂ ಮಾಡುತ್ತೇವೆ. ಆಮೇಲೆ ನೀನು ನಮ್ಮ ಮೂವರಲ್ಲಿ ಒಬ್ಬನನ್ನು ನಿನ್ನ ಪತಿಯನ್ನಾಗಿ ವರಿಸಬೇಕು. ಎಂದರು. ಓ ಪ್ರಿಯನೇ, ಆ ಮಾತನ್ನು ಕೇಳಿ ಈ ಆಶ್ಚರ್ಯಕರವಾದ ಕಾರ್ಯದವಿಷಯದಲ್ಲಿ ಹೇಗೆ ಮಾಡಬೇಕೆಂಬುದನ್ನು ತಿಳಿಯಲು ನಿನ್ನನ್ನು ಕೇಳುವುದಕ್ಕಾಗಿ ನಾನು ಇಲ್ಲಿಗೆ ಬಂದೆನು. ಧರ್ಮಸಂಕಟದಿಂದ ಕೂಡಿ ಸಂದೇಹಾಸ್ಪದವಾದ ಈ ಕಾರ್ಯದ ವಿಷಯದಲ್ಲಿ ಓ ಸತ್ಪುರುಷನೇ, ನಾನು ಏನನ್ನು ಮಾಡಬೇಕು ? ದೇವತೆಗಳ ಮಾಯೆಯೂ ಕೂಡ ತಿಳಿಯಲಸಾಧ್ಯವಾದುದು! ಅವರ ಮನಸ್ಸಿನಲ್ಲಿರಬಹುದಾದ ಮೋಸವನ್ನು ನಾನು ತಿಳಿಯಲಾರೆನು. ನಿನ್ನ ಇಷ್ಟವೇನು ? ಅದನ್ನು ಅಪ್ಪಣೆಮಾಡು. ಸರ್ವಜ್ಞನಾದ ನೀನು ಅಪ್ಪಣೆಮಾಡಿದಂತೆ ನಡೆವೆನು. ॥೧೫-೧೬-೧೭॥

ಚ್ಯವನನು ಹೇಳಿದನು—ಎಲೌ ಪ್ರಿಯೇ, ಒಳ್ಳೆಯ ವ್ರತಾನುಷ್ಠಾನವುಳ್ಳ ನೀನು ಈಗಲೇ ಆ ಅಶ್ವಿನೀದೇವತೆಗಳ ಸಮೀಪಕ್ಕೆ ಹೋಗಿ, ದೇವವೈದ್ಯಶ್ರೇಷ್ಠರಾದ, ಯಾವಾಗಲೂ ನಿಜವನ್ನೇ ಹೇಳುವವರಾದ, ಅವರನ್ನು ನನ್ನ ಸಮೀಪಕ್ಕೆ

|| ವ್ಯಾಸ ಉವಾಚ ||

ಏವಂ ಸಾ ಸಮನುಜ್ಞಾತಾ ತತ್ರ ಗತ್ವಾ ವಚೋಽಬ್ರವೀತ್ ||೧೯||

ಕ್ರಿಯತಾಮಾಶು ನಾಸತ್ಯೌ ಸಮಯೇನ ಸುರೋತ್ತಮೌ ।
ತಚ್ಛ್ರುತ್ವಾ ಚಾಶ್ವಿನೌ ವಾಕ್ಯಂ ತಸ್ಯಾಸ್ತೌ ತತ್ರ ಚಾಗತೌ ||೨೦||

ಊಚತೂ ರಾಜಪುತ್ರೀಂ ತಾಂ ಪತಿಸ್ತವ ವಿಶತ್ವಪಃ ।
ರೂಪಾರ್ಥಂ ಚ್ಯವನಸ್ತೂರ್ಣಂ ತತೋಽಂಭಃ ಪ್ರವಿವೇಶ ಹ ||೨೧||

ಅಶ್ವಿನಾವಪಿ ಪಶ್ಚಾತ್ತತ್ಪ್ರವಿಷ್ಟೌ ಸರ ಉತ್ತಮಂ ।
ತತಸ್ತೇ ನಿಸ್ಸೃತಾಸ್ತಸ್ಮಾತ್ಸರಸಸ್ತತ್ಕ್ಷಣಾತ್ತ್ರಯಃ ||೨೨||

ತುಲ್ಯರೂಪಾ ದಿವ್ಯದೇಹಾ ಯುವಾನಃ ಸದೃಶಾಃ ಕಿಲ ।
ದಿವ್ಯಕುಂಡಲಭೂಷಾಢ್ಯಾಃ ಸಮಾನಾವಯವಾಸ್ತಥಾ ||೨೩||

---

ನಾನು ಹೇಳಿದೆನೆಂದು ಹೇಳಿ, ನನ್ನ ಸಮೀಪಕ್ಕೆ ಕರೆದುಕೊಂಡು ಬಾ. ಈ ಸಂದರ್ಭದಲ್ಲಿ ಸಂದೇಹಪಡದೆ ಅವರು ಹೇಳಿದಮಾತನ್ನು ನೀನು ನಡೆಯಿಸು. ಎಂದನು. ||೧೮||

ಈ ರೀತಿಯಲ್ಲಿ ಆ ಸುಕನ್ಯೆಯು ಪತಿಯ ಅಪ್ಪಣೆಯನ್ನು ಪಡೆದು, ಅಶ್ವಿನೀ ದೇವತೆಗಳ ಸಮೀಪಕ್ಕೆ ಹೋಗಿ ಅವರನ್ನು ಕುರಿತು, ದೇವಶ್ರೇಷ್ಠರೇ, ನೀವು ಹೇಳಿದ ನಿಯಮದಂತೆ ಆಗಲಿ. ಅದಕ್ಕಾಗಿ ಏನನ್ನು ಮಾಡಬೇಕೋ ಅದನ್ನು ಬೇಗನೆ ಮಾಡಿರಿ. ಎಂದಳು. ||೧೯||

ಆ ಅಶ್ವಿನೀದೇವತೆಗಳು ಆ ಸುಕನ್ಯೆಯ ಮಾತನ್ನು ಕೇಳಿ ಅಲ್ಲಿಗೆ ಬಂದರು. ಮತ್ತು ಆ ರಾಜಪುತ್ರಿಯನ್ನು ಕುರಿತು, ಉತ್ತಮವಾದ ರೂಪವುಂಟಾಗುವುದಕ್ಕಾಗಿ ನಿನ್ನ ಪತಿಯಾದ ಚ್ಯವನನು ಈ ನೀರಿನಲ್ಲಿ ಮುಳುಗಲಿ. ಎಂದರು. ಆ ಚ್ಯವನನೂ ಅವರು ಹೇಳಿದಂತೆ ಜಾಗ್ರತೆಯಾಗಿ ನೀರಿನಲ್ಲಿ ಮುಳುಗಿದನು. ||೨೦-೨೧||

ಆ ಮೇಲೆ ಆ ಅಶ್ವಿನೀದೇವತೆಗಳೂ ಆ ಉತ್ತಮವಾದ ಸರೋವರದ ನೀರಿನಲ್ಲಿ ಮುಳುಗಿದರು. ಆ ಮರುಕ್ಷಣದಲ್ಲಿಯೇ ಆ ಮೂವರೂ ದಿವ್ಯವಾದ ಶರೀರವನ್ನು ಧರಿಸಿ ಯೌವನವಂತರಾಗಿ, ಒಬ್ಬರಿಗೊಬ್ಬರು ಸಮಾನವಾದ ರೂಪವುಳ್ಳವರಾಗಿ, ದೇವಯೋಗ್ಯವಾದ ಕುಂಡಲವೇ ಮೊದಲಾದ ಆಭರಣಗಳನ್ನು ಧರಿಸಿದವರಾಗಿ ಆ ಸರೋವರದಿಂದ ಎದ್ದು ಹೊರಕ್ಕೆ ಬಂದರು ! ||೨೨-೨೩||

ತೇಽಬ್ರುವನ್ಸಹಿತಾಃ ಸರ್ವೇ ವೃಣೀಷ್ವ ವರವರ್ಣಿನಿ ।
ಅಸ್ಮಾಕಮೀಪ್ಸಿತಂ ಭದ್ರೇ ಪತಿಂ ತ್ವಮಮುಲಾನನೇ ॥೨೪॥

ಯಸ್ಮಿನ್ವಾಽಪ್ಯಧಿಕಾ ಪ್ರೀತಿಸ್ತಂ ವೃಣುಷ್ವ ವರಾನನೇ ।
ಸಾ ದೃಷ್ಟ್ವಾ ತುಲ್ಯರೂಪಾಂಸ್ತಾನ್ಸಮಾನವಯಸಸ್ತಥಾ ॥೨೫॥

ಏಕಸ್ವರಾಂಸ್ತುಲ್ಯವೇಷಾಂಸ್ತ್ರೀನ್ವೈ ದೇವಸುತೋಪಮಾನ್ ।
ಸಾ ತು ಸಂಶಯಮಾಪನ್ನಾ ವೀಕ್ಷ್ಯ ತಾನ್ಸದೃಶಾಕೃತೀನ್ ॥೨೬॥

ಅಜಾನತೀ ಪತಿಂ ಸಮ್ಯಗ್ವ್ಯಾಕುಲಾ ಸಮಚಿಂತಯತ್ ।
ಕಿಂ ಕರೋಮಿ ತ್ರಯಸ್ತುಲ್ಯಾಃ ಕಂ ವೃಣೋಮಿ ನ ವೇದ್ಮ್ಯಹಂ ॥೨೭॥

ಪತಿಂ ದೇವಸುತಾ ಹ್ಯೇತೇ ಸಂಶಯೇ ಪತಿತಾಽಸ್ಮ್ಯಹಂ ।
ಇಂದ್ರಜಾಲಮಿದಂ ಸಮ್ಯಗ್ದೇವಾಭ್ಯಾಮಿಹ ಕಲ್ಪಿತಂ ॥೨೮॥
ಕರ್ತವ್ಯಂ ಕಿಂ ಮಯಾ ಚಾತ್ರ ಮರಣಂ ಸಮುಪಾಗತಂ ।

---

ಅವರೆಲ್ಲರೂ ಸೇರಿ ಎಲೌ ಉತ್ತಮ ಸ್ತ್ರೀಯಾದ ಸುಂದರಮುಖಿಯೇ, ಈ ನಮ್ಮ ಪೈಕಿ ಯಾವ ಒಬ್ಬನಲ್ಲಿ ನಿನ್ನ ಪ್ರೀತಿಯು ಹೆಚ್ಚಾಗಿರುವುದೋ ಅವನನ್ನು ಪತಿಯನ್ನಾಗಿ ವರಿಸು! ಎಂದರು. ||೨೪||

ಆ ಸುಕನ್ಯೆಯು ಸಮಾನವಾದ ರೂಪ ಮತ್ತು ಅವಯವಗಳಿಂದಲೂ, ಒಂದೇ ತೆರನಾದ ಧ್ವನಿಯಿಂದಲೂ, ದೇವಪುತ್ರರಂತಿರುವ ಮೂವರನ್ನೂ ನೋಡಿ, ತನ್ನ ಪತಿಯನ್ನು ಚೆನ್ನಾಗಿ ಗುರುತು ಹಿಡಿಯಲಾರದೆ ಸಂದೇಹದಿಂದ ಮನಸ್ಸಿನಲ್ಲಿ ವಿಷಾದಪಡುತ್ತಾ ಯೋಚಿಸುತ್ತಿದ್ದಳು. ||೨೫-೨೬||

ಈಗ ಏನನ್ನು ಮಾಡಲಿ? ಮೂವರೂ ಸಮಾನರಾಗಿರುವರು! ಇವರಲ್ಲಿ ಯಾರನ್ನು ಪತಿಯನ್ನಾಗಿ ವರಿಸಲಿ? ನಾನು ಏನನ್ನು ಮಾಡಲೂ ತಿಳಿಯದೆ ಸಂದೇಹದಲ್ಲಿ ಬಿದ್ದಿರುವೆನು! ದೇವತೆಗಳು ಇಂತಹ ಇಂದ್ರಜಾಲವನ್ನು ಮಾಡಿರುವರು! ಈ ಸಂದರ್ಭದಲ್ಲಿ ನಾನು ಮಾಡುವುದೇನು. ನನಗೆ ಮರಣವೇ ಪ್ರಾಪ್ತವಾದಂತಾಯಿತು! ||೨೭-೨೮||

ನ ಮಯಾ ಪತಿಮುತ್ಸೃಜ್ಯ ವರಣೀಯಃ ಕಥಂ ಚ ನ ॥೨೯॥

ದೇವಸ್ತ್ವಾಧುನಿಕಃ ಕಶ್ಚಿದಿತ್ಯೇಷಾ ಮಮ ಧಾರಣಾ।
ಇತಿ ಸಂಚಿಂತ್ಯ ಮನಸಾ ಪರಾಂ ವಿಶ್ವೇಶ್ವರೀಂ ಶಿವಾಂ ॥೩೦॥

ದಧ್ಯೌ ಭಗವತೀಂ ದೇವೀಂ ತುಷ್ಟಾವ ಚ ಕೃಶೋದರೀ ।

॥ ಸುಕನ್ಯೋವಾಚ ॥

ಶರಣಂ ತ್ವಾಂ ಜಗನ್ಮಾತಃ ಪ್ರಾಪ್ತಾಽಸ್ಮಿ ಭೃಶದುಃಖಿತಾ ॥೩೧॥

ರಕ್ಷ ಮೋಽದ್ಯ ಸತೀಧರ್ಮಂ ನಮಾಮಿ ಚರಣೌ ತವ ।
ನಮಃ ಪದ್ಮೋದ್ಭವೇ ದೇವಿ ನಮಃ ಶಂಕರವಲ್ಲಭೇ ॥೩೨॥
ವಿಷ್ಣುಪ್ರಿಯೇ ನಮೋ ಲಕ್ಷ್ಮಿ ವೇದಮಾತಃ ಸರಸ್ವತಿ ।

---

ಹೇಗಾದರೂ ಪತಿಯನ್ನು ಬಿಟ್ಟು ಹೊಸಬನಾದ ಈ ದೇವನನ್ನು ನಾನೆಂದಿಗೂ ವರಿಸುವುದಿಲ್ಲವು. ಇದೇ ನನ್ನ ನಿಶ್ಚಯವು. ಹೀಗೆಂದು ಯೋಚಿಸಿ, ಆ ಕೃಶಾಂಗಿಯು ಮನಸ್ಸಿನಲ್ಲಿ ಜಗದಂಬೆಯೂ ಪರಬ್ರಹ್ಮಸ್ವರೂಪಳೂ ಮಂಗಳಕರಳೂ ಆದ ಭುವನೇಶ್ವರೀದೇವಿಯನ್ನು ಧ್ಯಾನಿಸಿ, ಸ್ತುತಿಸಿ, ಹೀಗೆ ಸಂತೋಷಪಡಿಸಿದಳು. ॥೨೯-೩೦॥

ಓ ಜಗದಂಬೆಯೇ, ವಿಶೇಷವಾದ ದುಃಖವನ್ನು ಪಡೆದಿರುವ ನಾನು ನಿನ್ನನ್ನು ಶರಣುಹೊಂದಿರುವೆನು. ನಿನ್ನ ಪಾದಗಳಿಗೆ ನಮಸ್ಕಾರಮಾಡುತ್ತಿರುವೆನು. ನನ್ನ ಪತಿವ್ರತಾಧರ್ಮವನ್ನು ಕಾಪಾಡು! ಕಮಲದಲ್ಲಿ ಹುಟ್ಟಿದವಳೇ, ಶಿವನ ಪ್ರೀತಿಪಾತ್ರಳೇ, ವಿಷ್ಣುವಿಗೆ ಪ್ರಿಯಳಾದವಳೇ, ಲಕ್ಷ್ಮೀದೇವಿಯೇ, ವೇದಕ್ಕೆ ತಾಯಿಯಾದ ಸರಸ್ವತೀಸ್ವರೂಪಳೂ ಆದವಳೇ, ನಿನಗೆ ನಮಸ್ಕಾರಮಾಡುತ್ತಿರುವೆನು. ॥೩೧-೩೨॥

ಇಲ್ಲಿ ಧರ್ಮಸಂಕಟದ ಸ್ವರೂಪವೇನೆಂದರೆ, ಸುಕನ್ಯೆಯು ತನ್ನ ಗಂಡನಿಗೆ ಕಣ್ಣೂ ಯೌವನವೂ ಬರುವುದರಿಂದ ಅವನ ದುಃಖವು ತಪ್ಪಿ ಅವನಿಗೂ ತನಗೂ ಸುಖವಾಗುವುದೆಂದು ಅಶ್ವಿನೀದೇವತೆಗಳ ನಿಯಮಕ್ಕೆ ಒಪ್ಪಿದಳು. ಸಮಾನ ರೂಪರಾದ ಆ ಮೂವರಲ್ಲಿ ತನ್ನ ನಿಜಪತಿಯನ್ನೇ ಗುರುತಿಸದಂತಾಗಲು, ತಾನು ಸತೀಧರ್ಮದಿಂದ ಚ್ಯುತಳಾದೇನೆಂದು ಆತಂಕವು ಬಂದೊದಗಿತು!

ಇದಂ ಜಗತ್ತ್ವಯಾ ಸೃಷ್ಟಂ ಸರ್ವಂ ಸ್ಥಾವರಜಂಗಮಂ ॥೩೩॥

ಪಾಸಿ ತ್ವಮಿದಮವ್ಯಗ್ರಾ ತಥಾಽತ್ಸಿ ಲೋಕಶಾಂತಯೇ ।
ಬ್ರಹ್ಮವಿಷ್ಣುಮಹೇಶಾನಾಂ ಜನನೀ ತ್ವಂ ಸುಸಂಮತಾ ॥೩೪॥

ಬುದ್ಧಿದಾಽಸಿ ತ್ವಮಜ್ಞಾನಾಂ ಜ್ಞಾನಿನಾಂ ಮೋಕ್ಷದಾ ಸದಾ ।
ಆದ್ಯಾ ತ್ವಂ ಪ್ರಕೃತಿಃ ಪೂರ್ಣಾ ಪುರುಷಪ್ರಿಯದರ್ಶನಾ ॥೩೫॥

ಭುಕ್ತಿಮುಕ್ತಿಪ್ರದಾಽಸಿ ತ್ವಂ ಪ್ರಾಣಿನಾಂ ವಿಶದಾತ್ಮನಾಂ ।
ಅಜ್ಞಾನಾಂ ದುಃಖದಾ ಕಾಮಂ ಸತ್ವಾನಾಂ ಸುಖಸಾಧನಾ ॥೩೬॥

ಸಿದ್ಧಿದಾ ಯೋಗಿನಾಮಂಬ ಜಯದಾ ಕೀರ್ತಿದಾ ಪುನಃ ।
ಶರಣಂ ತ್ವಾಂ ಪ್ರಪನ್ನಾಽಸ್ಮಿ ವಿಸ್ಮಯಂ ಪರಮಂ ಗತಾ ॥೩೭॥

ಪತಿಂ ದರ್ಶಯ ಮೇ ಮಾತರ್ಮಗ್ನಾಽಸ್ಮಿನ್ ಶೋಕಸಾಗರೇ ।
ದೇವಾಭ್ಯಾಂ ಚರಿತಂ ಕೂಟಂ ಕಿಂ ವೃಣೋಮಿ ವಿಮೋಹಿತಾ ॥೩೮॥

---

ಈ ಚರಾಚರವಾದ ಜಗತ್ತನ್ನು ನೀನು ಸೃಷ್ಟಿಮಾಡಿರುವೆ. ಮತ್ತು ಇದನ್ನು ಆಯಾಸ ಅಕ್ರಮ ಭ್ರಾಂತಿಗಳಿಲ್ಲದೆ ಕಾಪಾಡುತ್ತಿರುವೆ. ಲೋಕಶಾಂತಿಗಾಗಿಯೇ ಇದನ್ನು ಕಡೆಗೆ ನೀನೇ ಉಪಸಂಹರಿಸುವೆ! ಬ್ರಹ್ಮ ವಿಷ್ಣು ಮಹೇಶ್ವರರಿಗೂ ನೀನೇ ತಾಯಿಯು. ಅಜ್ಞಾನಿಗಳಿಗೆ ಬುದ್ಧಿಯನ್ನೂ, ಜ್ಞಾನಿಗಳಿಗೆ ಮೋಕ್ಷವನ್ನೂ ಕೊಡುವೆ. ನೀನು ಎಲ್ಲಕ್ಕೂ ಮೊದಲನವಳಾಗಿರುತ್ತಾ ಮೂಲಪ್ರಕೃತಿರೂಪಳಾಗಿ ಪ್ರತಿ ಸೃಷ್ಟಿಯ ಪ್ರಾರಂಭಕಾಲದಲ್ಲಿ ಪರಬ್ರಹ್ಮನ ನೋಟಕ್ಕೆ ಪಾತ್ರಳಾಗಿ ಶಕ್ತಿಯಿಂದ ಕೂಡಿರುವ ಬ್ರಹ್ಮಸ್ವರೂಪನಾದ ಆಪುರುಷನಿಗೆ ಸಂತೋಷವನ್ನುಂಟುಮಾಡುತ್ತಿರುವೆ! ॥೩೩-೩೪-೩೫॥

ಪರಿಶುದ್ಧವಾದ ಮನಸ್ಸುಳ್ಳ ಪ್ರಾಣಿಗಳಿಗೆ ನೀನು ಭುಕ್ತಿ ಮುಕ್ತಿಗಳೆರಡನ್ನೂ ಕೊಡುತ್ತಿರುವೆ. ಜ್ಞಾನಹೀನರಾದ ಪ್ರಾಣಿಗಳಿಗೆ ವಿಶೇಷವಾಗಿ ದುಃಖವನ್ನೂ ಕೊಡುವೆ. ಆದರಿಂದ ಅವರಿಗೆ ಒಳ್ಳೆಯ ಬುದ್ಧಿಯನ್ನು ಕಲಿಸುವೆ. ಓ ತಾಯಿಯೇ, ಯೋಗಿಗಳಿಗೆ ಸಿದ್ಧಿಯನ್ನೂ ಜಯವನ್ನೂ ಯಶಸ್ಸನ್ನೂ ಕೊಡುತ್ತಿರುವೆ. ಆಶ್ಚರ್ಯವನ್ನು ಹೊಂದಿದವಳಾಗಿರುವ ನಾನು ನಿನ್ನನ್ನು ಮರೆಹೊಕ್ಕಿರುವೆನು. ॥೩೬-೩೭॥

ಓ ತಾಯಿಯೇ, ನನಗೆ ನನ್ನ ಪತಿಯನ್ನು ತೋರಿಸು. ನಾನು ದುಃಖವೆಂಬ ಸಮುದ್ರದಲ್ಲಿ ಮುಳುಗಿರುವೆನು. ಈ ಅಶ್ವಿನೀದೇವತೆಗಳ ನಡತೆಯು ಈಗ

ಪತಿಂ ದರ್ಶಯ ಸರ್ವಜ್ಞೇ ವಿದಿತ್ವಾ ಮೇ ಸತೀವ್ರತಂ ।

॥ ವ್ಯಾಸ ಉವಾಚ ॥

ಏವಂ ಸ್ತುತಾ ತದಾ ದೇವೀ ತಥಾ ತ್ರಿಪುರಸುಂದರೀ ॥೩೯॥

ಹೃದಯೇಽಸ್ಯಾಸ್ತದಾ ಜ್ಞಾನಂ ದದಾವಾಶು ಸುಖೋದಯಂ ।
ನಿಶ್ಚಿತ್ಯ ಮನಸಾ ತುಲ್ಯ ವಯೋರೂಪಧರಾನ್ ಸತೀ ॥೪೦॥

ಪ್ರಸಮೀಕ್ಷ್ಯ ತು ತಾನ್ಸರ್ವಾನ್ವವ್ರೇ ಬಾಲಾ ಸ್ವಕಂ ಪತಿಂ ।
ವೃತೇಽಥ ಚ್ಯವನೇ ದೇವೌ ಸಂತುಷ್ಟೌ ತೌ ಬಭೂವತುಃ ॥೪೧॥

ಸತೀಧರ್ಮಂ ಸಮಾಲೋಕ್ಯ ಸಂಪ್ರೀತೌ ದದತುರ್ವರಂ ।
ಭಗವತ್ಯಾಃ ಪ್ರಸಾದೇನ ಪ್ರಸನ್ನೌ ತೌ ಸುರೋತ್ತಮೌ ॥೪೨॥

ಮುನಿಮಾಮಂತ್ರ್ಯ ತರಸಾ ಗಮನಾಯೋದ್ಯತಾವುಭೌ ।
ಲಬ್ಧ್ವಾ ತು ಚ್ಯವನೋ ರೂಪಂ ನೇತ್ರೇ ಭಾರ್ಯಾಂ ಚ ಯೌವನಂ॥೪೩॥

---

ಭ್ರಾಂತಿ ಮೋಸಕರವಗಿರುವುದು ! ಈಗ ನಾನು ಯಾರನ್ನು ವರಿಸಲಿ ? ಸರ್ವಜ್ಞಳಾದ ನೀನು ನನ್ನ ಪತಿವ್ರತಾಧರ್ಮವನ್ನು ತಿಳಿದು ನನಗೆ ನನ್ನ ಪತಿಯನ್ನು ತೋರಿಸಿಕೊಡುವ ಅನುಗ್ರಹವನ್ನು ಮಾಡು. ॥೩೮॥

ಈ ರೀತಿಯಲ್ಲಿ ಸ್ತೋತ್ರಮಾಡುತ್ತಲು ತ್ರಿಪುರಸುಂದರೀದೇವಿಯು ಆ ಸುಕನ್ಯೆಯ ಮನಸ್ಸಿನಲ್ಲಿ ಸುಖಕರವಾದ ಪತಿಯನ್ನು ಗುರುತಿಸುವ ಜ್ಞಾನವನ್ನುಂಟು ಮಾಡಿದಳು ! ಆ ಪತಿವ್ರತೆಯು ಸಮಾನವಾದ ವಯಸ್ಸು ಮತ್ತು ರೂಪಗಳಿಂದ ಕೂಡಿದ ಅವರೆಲ್ಲರನ್ನೂ ನೋಡಿ, ತನ್ನ ಪತಿಯನ್ನು ನಿಶ್ಚಯಿಸಲಾರದಿದ್ದರೂ ತನ್ನ ಪತಿಯನ್ನೇ ತನಗೆ ದೊರಕುವಂತೆ ಮಾಡಿ ಅನುಗ್ರಹಿಸಬೇಕೆಂದು ಅವರನ್ನೇ ಪ್ರಾರ್ಥಿಸಿದಳು ! ॥೩೯-೪೦॥

ದೇವಿಯ ಅನುಗ್ರಹದಿಂದ ಸುಕನ್ಯೆಯು ಹಾಗೆ ಪ್ರಾರ್ಥಿಸಲು ಅವಳ ಪತಿವ್ರತಾಧರ್ಮಕ್ಕೆ ಸಂತೋಷಪಟ್ಟ ಅಶ್ವಿನೀದೇವತೆಗಳು ಆಕೆಗೆ ಹಾಗೆಯೇ ವರವನ್ನು ಕೊಟ್ಟರು. ಅದರಿಂದ ಅವಳು ತನ್ನ ಪತಿಯನ್ನು ಗುರುತಿಸಿ ಪಡೆದಳು ! ॥೪೧-೪೨॥

ಅಶ್ವಿನೀದೇವತೆಗಳು ಚ್ಯವನಮುನಿಯನ್ನು ಕೇಳಿ ಪ್ರಯಾಣಕ್ಕೆ ಸಿದ್ಧರಾದರು. ತೇಜಸ್ವಿಯಾದ ಚ್ಯವನನು ರೂಪವನ್ನೂ ಕಣ್ಣುಗಳನ್ನೂ ಯೌವನವನ್ನೂ ಹೆಂಡತಿ

**ಹೃಷ್ಟೋಽಬ್ರವೀನ್ಮಹಾತೇಜಾಸ್ತೌ ನಾಸತ್ಯಾವಿದಂ ವಚಃ ।**
**ಉಪಕಾರಃ ಕೃತೋಽಯಂ ಮೇ ಯುವಾಭ್ಯಾಂ ಸುರಸತ್ತಮೌ ॥೪೪॥**

**ಕಿಂಬ್ರವೀಮಿ ಸುಖಂ ಪ್ರಾಪ್ತಂ ಸಂಸಾರೇಽಸ್ಮಿನ್ನನುತ್ತಮೇ ।**
**ಪ್ರಾಪ್ಯಭಾರ್ಯಾಂ ಸುಕೇಶಾಂತಾಂ ದುಃಖಂ ನೇಽಭವದನ್ವಹಂ ॥೪೫॥**

**ಅಂಧಸ್ಯ ಚಾಽತಿವೃದ್ಧಸ್ಯ ಭೋಗಹೀನಸ್ಯ ಕಾನನೇ ।**
**ಯುವಾಭ್ಯಾಂ ನಯನೇ ದತ್ತೇ ಯೌವನಂ ರೂಪಮದ್ಭುತಂ ॥೪೬॥**

**ಸಂಪಾದಿತಂ ತತಃ ಕಿಂಚಿದುಪಕರ್ತುಮಹಂ ಬ್ರುವೇ ।**
**ಉಪಕಾರಿಣಿ ಮಿತ್ರೇ ಯೋ ನೋಪಕುರ್ಯಾತ್ಕಥಂಚನ ॥೪೭॥**

**ತಂ ಧಿಗಸ್ತು ನರಂ ದೇವೌ ಭವೇಚ್ಚ ಋಣವಾನ್ಭುವಿ ।**
**ತಸ್ಮಾದ್ವಾಂ ವಾಂಛಿತಂ ಕಿಂಚಿದ್ದಾತುಮಿಚ್ಛಾಮಿ ಸಾಂಪ್ರತಂ ॥೪೮॥**

**ಆತ್ಮನೋ ಋಣಮೋಕ್ಷಾಯ ದೇವೇಶೌ ನೂತನಸ್ಯ ಚ ।**
**ಪ್ರಾರ್ಥಿತಂ ವಾಂ ಪ್ರದಾಸ್ಯಾಮಿ ಯದಲಭ್ಯಂ ಸುರಾಸುರೈಃ ॥೪೯॥**
**ಬ್ರುವಾಥಾಂ ವಾಂ ಮನೋದ್ದಿಷ್ಟಂ ಪ್ರೀತೋಽಸ್ಮಿ ಸುಕೃತೇನ ವಾಂ ।**

---

ಯನ್ನೂ ಪಡೆದು ಕೃತಜ್ಞತೆಯಿಂದ ಕೂಡಿದ ಸಂತೋಷದಿಂದ ಅಶ್ವಿನೀದೇವತೆಗಳನ್ನು ಕುರಿತು ಹೀಗೆ ಮಾತನಾಡಿದನು. ॥೪೩॥

ದೇವಶ್ರೇಷ್ಠರಾದ ನೀವಿಬ್ಬರೂ ನನಗೆ ಉಪಕಾರವನ್ನು ಮಾಡಿದಿರಿ. ಮುದುಕನೂ ಕುರುಡನೂ ಸುಖಹೀನನೂ ಆಗಿದ್ದ ನಾನು ಸುಂದರಿಯಾದ ಪತ್ನಿಯನ್ನು ಪಡೆದು ಈ ಕಾಡಿನಲ್ಲಿ ಯಾವಾಗಲೂ ದುಃಖಿಸುತ್ತಿದ್ದೆನು. ನೀವು ನನಗೆ ಕಣ್ಣನ್ನೂ ಯೌವನವನ್ನೂ ರೂಪವನ್ನೂ ಕೊಟ್ಟು ಈ ಸಂಸಾರದಲ್ಲಿ ಸುಖಾನುಭವಮಾಡಲು ಶಕ್ತನನ್ನಾಗಿ ಮಾಡಿದಿರಿ! ನಾನು ಹೆಚ್ಚಾಗಿ ಇನ್ನೇನನ್ನು ಹೇಳಲಿ. ॥೪೪-೪೫-೪೬॥

ನನ್ನ ಕೈಯಲ್ಲಾಗುವ ಉಪಕಾರವನ್ನು ನಿಮಗೂ ನಾನು ಮಾಡಬೇಕೆಂದಿರುವೆನು! ಉಪಕಾರ ಮಾಡಿದ ಮಿತ್ರನಿಗೆ ಯಾರು ಪ್ರತ್ಯುಪಕಾರ ಮಾಡುವುದಿಲ್ಲವೋ ಅಂಥವನನ್ನು ನಿಂದಿಸಬೇಕು. ಅವನು ಸಾಲಗಾರನಂತಿರುವನು. ಆದುದರಿಂದ ಎಲೌ ದೇವತೆಗಳೇ, ನಿಮಗಿಷ್ಟವಾದುದನ್ನು ನಾನು ಕೊಡಬೇಕೆಂದಿರುವೆನು. ॥೪೭-೪೮॥

ನನ್ನ ಈ ಸಾಲವನ್ನು ತೀರಿಸುವುದಕ್ಕಾಗಿ ಸುರಾಸುರರಿಂದಲೂ ಹೊಂದಲಸಾಧ್ಯವಾದ ಹೊಸದಾದ ಯಾವ ಇಷ್ಟಾರ್ಥವನ್ನಾದರೂ ನಿಮಗೆ ಕೊಡಬಲ್ಲೆನು. ನೀವು

ಶ್ರುತ್ವಾ ತೌ ತು ಮುನೇರ್ವಾಕ್ಯಮಭಿಮಂತ್ರ್ಯ ಪರಸ್ಪರಂ ॥೫೦॥

ತಮೂಚತು ರ್ಮುನಿಶ್ರೇಷ್ಠಂ ಸುಕನ್ಯಾಸಹಿತಂ ಸ್ಥಿತಂ ।
ಮುನೇ ಪಿತುಃ ಪ್ರಸಾದೇನ ಸರ್ವಂ ನೋ ಮನಸೇಪ್ಸಿತಂ ॥೫೧॥

ಉತ್ಕಂಠಾ ಸೋಮಪಾನಸ್ಯ ವರ್ತತೇ ನೌ ಸುರೈಃ ಸಹ ।
ಭಿಷಜಾವಿತಿ ದೇವೇನ ನಿಷಿದ್ಧೌ ಚಮಸಗ್ರಹೇ ॥೫೨॥

ಶಕ್ರೇಣ ವಿತತೇ ಯಜ್ಞೇ ಬ್ರಹ್ಮಣಃ ಕನಕಾಚಲೇ ।
ತಸ್ಮಾತ್ತ್ವಮಪಿ ಧರ್ಮಜ್ಞ ಯದಿ ಶಕ್ತೋಽಸಿ ತಾಪಸ ॥೫೩॥

ಕಾರ್ಯಮೇತದ್ಧಿ ಕರ್ತವ್ಯಂ ವಾಂಛಿತಂ ನೌ ಸುಸಂಮತಂ ।
ಏತದ್ವಿಜ್ಞಾಯ ವಾ ಬ್ರಹ್ಮನ್ಕುರು ವಾಂ(ನೌ) ಸೋಮಪಾಯಿನೌ ॥೫೪॥

ಪಿಪಾಸಾಽಸ್ತಿ ಸುದುಷ್ಪ್ರಾಪಾ ತ್ವತ್ತಃ ಸಮುಪಯಾಸ್ಯತಿ ।
ಚ್ಯವನಸ್ತು ತಯೋಃ ಪ್ರಾಹ ತಚ್ಛ್ರುತ್ವಾ ವಚನಂ ಮೃದು ॥೫೫॥

---

ಮಾಡಿದ ಕೆಲಸದಿಂದ ನಾನು ಸಂತೋಷ ಹೊಂದಿರುವೆನು. ನಿಮ್ಮ ಇಷ್ಟಾರ್ಥವನ್ನು ಹೇಳಿರಿ. ಎಂದನು. ||೪೯||

ಅವರಿಬ್ಬರೂ ಆ ಮುನಿಯ ಮಾತನ್ನು ಕೇಳಿ, ತಮ್ಮಲ್ಲಿಯೇ ಆಲೋಚಿಸಿ, ಸುಕನ್ಯಾಸಹಿತನಾದ ಆ ಮುನಿಶ್ರೇಷ್ಠನನ್ನು ಕುರಿತು, ಓ ಮುನಿಯೇ, ನಮ್ಮ ಇಷ್ಟಾರ್ಥಗಳೆಲ್ಲವೂ ಬ್ರಹ್ಮನ ಕೃಪೆಯಿಂದ ಪೂರ್ಣವಾಗಿರುವುದು. ಆದರೆ ನಮ್ಮಿಬ್ಬರಿಗೂ ದೇವತೆಗಳೊಡನೆ ಸೋಮಪಾನವನ್ನು ಮಾಡಬೇಕೆಂಬ ಆಸೆಯು ಮಾತ್ರ ಇರುವುದು. ||೫೦-೫೧||

ಮೇರುಪರ್ವತದಲ್ಲಿ ಬ್ರಹ್ಮನು ಯಜ್ಞಮಾಡುವಾಗ ವೈದ್ಯರಾದುದರಿಂದ ಸೋಮರಸದ ಚಮಸಪಾತ್ರೆಯನ್ನು ಮುಟ್ಟಬಾರದೆಂದು ದೇವೇಂದ್ರನು ನಮ್ಮನ್ನು ನಿಷೇಧಿಸಿದನು. ಧರ್ಮವನ್ನು ತಿಳಿದ ತಪಸ್ವಿಯಾದ ನೀನು ಶಕ್ತನಾಗಿರುವುದಾದರೆ ನಮಗೆ ಸೋಮಪಾನವನ್ನು ಮಾಡಿಸಿ ನಮ್ಮ ಇಷ್ಟವನ್ನು ಪೂರ್ಣಮಾಡು. ಅಸಾಧ್ಯವಾದ ಈ ನಮ್ಮ ಆಸೆಯು ನಿನ್ನಿಂದಲೇ ಸಫಲವಾಗಬೇಕಾಗಿರುವುದು. ||೫೨-೫೪||

ಚ್ಯವನನು ಅವರು ಹೇಳಿದ ಮೃದುವಾದ ಮಾತನ್ನು ಕೇಳಿ ಅವರನ್ನು ಕುರಿತು ಹೇಳಿದನು. ನೀವಿಬ್ಬರೂ ನನ್ನನ್ನು ರೂಪಯೌವನಗಳಿಂದ ಕೂಡಿದವನ

ಯದಹಂ ರೂಪಸಂಪನ್ನೋ ವಯಸಾ ಚ ಸಮನ್ವಿತಃ ।
ಕೃತೋ ಭವದ್ಭ್ಯಾಂ ವೃದ್ಧಃ ಸನ್ಭಾರ್ಯಾಂ ಚ ಪ್ರಾಪ್ತವಾನಿತಿ॥೫೬॥

ತಸ್ಮಾದ್ಯುವಾಂ ಕರಿಷ್ಯಾಮಿ ಪ್ರೀತ್ಯಾಽಹಂ ಸೋಮಪಾಯಿನೌ ।
ಮಿಷತೋ ದೇವರಾಜಸ್ಯ ಸತ್ಯಮೇತದ್ಬ್ರವೀಮ್ಯಹಂ ॥೫೭॥

ರಾಜ್ಞಸ್ತು ವಿತತೇ ಯಜ್ಞೇ ಶರ್ಯಾತೇರಮಿತದ್ಯುತೇಃ ।
ಇತ್ಯಾಕರ್ಣ್ಯ ವಚೋ ಹೃಷ್ಟೌ ತೌ ದಿವಂ ಪ್ರತಿ ಜಗ್ಮತುಃ ॥೫೮॥
ಚ್ಯವನಸ್ತಾಂ ಗೃಹೀತ್ವಾ ತು ಜಗಾಮಾಶ್ರಮಮಂಡಲಂ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಪಂಚಮೋಽಧ್ಯಾಯಃ

---

ನ್ನಾಗಿ ಮಾಡಿದುದರಿಂದ ಪತ್ನಿಯನ್ನು ಹೊಂದಿ ಸುಖವನ್ನನುಭವಿಸುವಂತಾದೆನು. ||೫೫-೫೬||

ಆದುದರಿಂದ ನಾನು ಶರ್ಯಾತಿರಾಜನು ಮಾಡುವ ವಿಸ್ತಾರವಾದ ದೊಡ್ಡ ಯಜ್ಞದಲ್ಲಿ ದೇವರಾಜನಾದ ದೇವೇಂದ್ರನ ಇದುರಿಗೆ ನಿಮಗೂ ಪ್ರೀತಿಯಿಂದ ಸೋಮಪಾನವನ್ನು ಮಾಡಿಸುವೆನು. ಇದು ಸತ್ಯವಾದುದೆಂದು ಪ್ರತಿಜ್ಞೆಮಾಡಿ ಹೇಳುವೆನು! ಎಂದನು. ಈ ಮಾತನ್ನು ಕೇಳಿ ಆ ಅಶ್ವಿನೀದೇವತೆಗಳು ತೃಪ್ತಿ ಸಮಾಧಾನಗಳೊಡನೆ ಸ್ವರ್ಗಕ್ಕೆ ಪ್ರಯಾಣ ಮಾಡಿದರು. ||೫೭-೫೮||

ಚ್ಯವನಋಷಿಯು ಆ ಸುಕನ್ಯೆಯನ್ನು ಕರೆದುಕೊಂಡು ತನ್ನಾಶ್ರಮಕ್ಕೆ ಹೋದನು.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

|| ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಚ್ಯವನೇನ ಕಥಂ ವೈದ್ಯೌ ತೌ ಕೃತೌ ಸೋಮಪಾಯಿನೌ ।**
**ವಚನಂ ಚ ಕಥಂ ಸತ್ಯಂ ಜಾತಂ ತಸ್ಯ ಮಹಾತ್ಮನಃ ॥೧॥**

**ಮಾನುಷಸ್ಯ ಬಲಂ ಕೀದೃಗ್ದೇವರಾಜಬಲಂ ಪ್ರತಿ ।**
**ನಿಷಿದ್ಧೌ ಭಿಷಜೌ ತೇನ ಕೃತೌ ತೌ ಸೋಮಪಾಯಿನೌ ॥೨॥**

**ಧರ್ಮನಿಷ್ಠ ತದಾಶ್ಚರ್ಯಂ ವಿಸ್ತರೇಣ ವದ ಪ್ರಭೋ ।**
**ಚರಿತಂ ಚ್ಯವನಸ್ಯಾದ್ಯ ಶ್ರೋತುಕಾಮೋಽಸ್ಮಿ ಸರ್ವಥಾ ॥೩॥**

---

ಜನಮೇಜಯರಾಜನು ಹೇಳಿದನು—ಚ್ಯವನನು ಆ ದೇವವೈದ್ಯರಿಗೆ ಹೇಗೆ ಸೋಮಪಾನವನ್ನು ಮಾಡಿಸಿದನು ? ಆ ಮಹಾತ್ಮನ ಮಾತು ಹೇಗೆ ನಿಜವಾಯಿತು ? ||೧||

ಧರ್ಮಾಸಕ್ತನಾದ ವ್ಯಾಸಮುನಿಯೇ, ದೇವರಾಜನಾದ ದೇವೇಂದ್ರನ ಬಲದ ಮುಂದೆ ಮನುಷ್ಯನ ಬಲವು ಎಷ್ಟರದು? ದೇವೇಂದ್ರನು ನಿಷೇಧ ಮಾಡಿದ್ದ ವೈದ್ಯರಿಗೆ ಚ್ಯವನನು ಹೇಗೆ ಸೋಮಪಾನವನ್ನು ಮಾಡಿಸಿದನು ? ಈ ಚ್ಯವನನ ಚರಿತ್ರೆಯನ್ನು ಸಮಗ್ರವಾಗಿ ಕೇಳಬೇಕೆಂದು ಆಶಿಸುವೆನು. ವಿಸ್ತಾರವಾಗಿ ಹೇಳಬೇಕು. ಎಂದನು. ||೨-೩||

|| ವ್ಯಾಸ ಉವಾಚ ||

**ನಿಶಾಮಯ ಮಹಾರಾಜ ಚರಿತಂ ಪರಮಾದ್ಭುತಂ ।**
**ಚ್ಯವನಸ್ಯ ಮಖೇ ತಸ್ಮಿನ್ಶರ್ಯಾತೇರ್ಭುವಿ ಭಾರತ ||೪||**

**ಸುಕನ್ಯಾಂ ಸುಂದರೀಂ ಪ್ರಾಪ್ಯ ಚ್ಯವನಃ ಸುರಸನ್ನಿಭಃ ।**
**ವಿಜಹಾರ ಪ್ರಸನ್ನಾತ್ಮಾ ದೇವಕನ್ಯಾಮಿವಾಮರಃ ||೫||**

**ಕದಾಚಿದಥ ಶರ್ಯಾತಿ ಭಾರ್ಯಾ ಚಿಂತಾತುರಾ ಭೃಶಂ ।**
**ಪತಿಂ ಪ್ರಾಹ ವೇಪಮಾನಾ ವಚನಂ ರುದತೀ ಪ್ರಿಯಾ ||೬||**

**ರಾಜನ್ಪುತ್ರೀ ತ್ವಯಾ ದತ್ತಾ ಮುನಯೇಽಂಧಾಯ ಕಾನನೇ ।**
**ಮೃತಾ ಜೀವತಿ ವಾ ಸಾ ತು ದ್ರಷ್ಟವ್ಯಾ ಸರ್ವಥಾ ತ್ವಯಾ ||೭||**

**ಗಚ್ಛ ನಾಥ ಮುನೇಸ್ತಾವದಾಶ್ರಮಂ ದ್ರಷ್ಟುಮಾದರಾತ್ ।**
**ಕಿಂ ಕರೋತಿ ಸುಕನ್ಯಾ ಸಾ ಪ್ರಾಪ್ಯ ನಾಥಂ ತಥಾವಿಧಂ ||೮||**

---

ವ್ಯಾಸಮುನಿಯು ಹೇಳಿದನು—ಭರತವಂಶದಲ್ಲಿ ಹುಟ್ಟಿದ ಜನಮೇಜಯ ಮಹಾರಾಜನೇ, ಕೇಳು. ಶರ್ಯಾತಿ ಮಹಾರಾಜನ ಯಜ್ಞದಲ್ಲಿ ನಡೆದ ಚ್ಯವನ ಮುನಿಯ ಆಶ್ಚರ್ಯಕರವಾದ ಚರಿತ್ರೆಯನ್ನು ಹೇಳುವೆನು. ||೪||

ದೇವತೆಗಳಿಗೆ ಸಮಾನನಾದ ಆ ಚ್ಯವನನು ಸುಂದರಿಯಾದ ಸುಕನ್ಯೆಯನ್ನು ಪಡೆದು, ದೇವತೆಯು ದೇವಕನ್ಯೆಯೊಡನೆ ಕ್ರೀಡಿಸುವಂತೆ, ಸಂತೋಷದಿಂದ ವಿಹರಿಸುತ್ತಿದ್ದನು. ||೫||

ಒಂದಾನೊಂದು ದಿನದಲ್ಲಿ ಶರ್ಯಾತಿರಾಜನ ಹೆಂಡಿತಿಯು ಹೆಚ್ಚಾದ ಚಿಂತೆಯಿಂದ ಕೂಡಿ ನಡುಗುತ್ತ ಗಂಡನನ್ನು ಕುರಿತು ಮುಂದೆ ಹೇಳುವಂತೆ ಮಾತನಾಡಿದಳು. ||೬||

ಓ ರಾಜನೇ, ನೀನು ಮಗಳನ್ನು ಕಾಡಿನಲ್ಲಿರುವ ಕುರುಡನಾದ ಮುನಿಗೆ ಕೊಟ್ಟೆ. ಅವಳು ಸತ್ತಳೇ ಬದುಕಿರುವಳೇ ಎಂದು ಮುಂತಾಗಿ ಅವಳ ಯೋಗಕ್ಷೇಮಗಳನ್ನು ನೋಡಬೇಕಲ್ಲವೇ ? ಅಂತಹ ಗಂಡನನ್ನು ಪಡೆದು ಆ ಸುಕನ್ಯೆಯು ಏನನ್ನು ಮಾಡುತ್ತಿರುವಳೆಂದು ನೋಡಿಕೊಂಡು ಬರುವುದಕ್ಕಾಗಿ ಪ್ರೀತಿಯಿಂದ ಆ ಮುನಿಯ ಆಶ್ರಮಕ್ಕೆ ಹೋಗು. ||೭-೮||

ಪುತ್ರೀದುಃಖೇನ ರಾಜರ್ಷೇ ದಷ್ಟಾಽಸ್ಮಿ ಸರ್ವಥಾ ಹೃದಿ ।
ತಾಮಾನಯ ವಿಶಾಲಾಕ್ಷೀಂ ತಪಃಕ್ಷಾಮಾಂ ಮದಂತಿಕೇ ॥೯॥

ಪಶ್ಯಾಮಿ ಸರ್ವಥಾ ಪುತ್ರೀಂ ಕೃಶಾಂಗೀಂ ವಲ್ಕಲಾವೃತಾಂ ।
ಅಂಧಂ ಪತಿಂ ಸಮಾಸಾದ್ಯ ದುಃಖಭಾಜಾಂ ಕೃಶೋದರೀಂ ॥೧೦॥

॥ ಶರ್ಯಾತಿರುವಾಚ ॥

ಗಚ್ಛಾವೋಽದ್ಯ ವಿಶಾಲಾಕ್ಷಿ ಸುಕನ್ಯಾಂ ದ್ರಷ್ಟುಮಾದರಾತ್ ।
ಪ್ರಿಯಪುತ್ರೀಂ ವರಾರೋಹೇ ಮುನಿಂ ತಂ ಸಂಶಿತವ್ರತಂ ॥೧೧॥

॥ ವ್ಯಾಸ ಉವಾಚ ॥

ಏವಮುಕ್ತ್ವಾ ತು ಶರ್ಯಾತಿಃ ಕಾಮಿನೀಂ ಶೋಕಸಂಕುಲಾಂ ।
ಜಗಾಮ ರಥಮಾರುಹ್ಯ ತ್ವರಿತಶ್ಚಾಶ್ರಮಂ ಮುನೇಃ ॥೧೨॥

ಗತ್ವಾಽಽಶ್ರಮ ಸಮೀಪೇ ತು ತಮಪಶ್ಯನ್ಮಹೀಪತಿಃ ।
ನವ ಯೌವನ ಸಂಪನ್ನಂ ದೇವಪುತ್ರೋಪಮಂ ಮುನಿಂ ॥೧೩॥

---

ಓ ರಾಜರ್ಷಿಯೇ, ಮಗಳಿಗುಂಟಾಗಿರುವ ದುಃಖದಿಂದ ನನ್ನ ಹೃದಯವು ಸುಡುತ್ತಿರುವುದು. ತಪಸ್ಸಿನಿಂದ ಕೃಶಳಾದ, ವಿಸ್ತಾರವಾದ ಕಣ್ಣುಗಳುಳ್ಳ, ಅವಳನ್ನು ನನ್ನ ಸಮೀಪಕ್ಕೆ ಕರೆದುಕೊಂಡು ಬಾ. ನಾರುಮಡಿಯನ್ನುಟ್ಟು, ಕುರುಡ ಗಂಡ ನನ್ನು ಪಡೆದುದರಿಂದ ದುಃಖಪಡುತ್ತಾ ಕೃಶವಾಗಿರುವ, ಅವಳನ್ನು ನೋಡ ಬೇಕೆಂದಿರುವೆನು. ॥೯-೧೦॥

ಎಲೌ ಸುಂದರಿಯೇ, ಪ್ರೀತಿಪಾತ್ರಳಾದ ಮಗಳಾದ ಸುಕನ್ಯೆಯನ್ನೂ, ಕಠಿನ ವಾದ ವ್ರತನಿಯಮವನ್ನಾಚರಿಸುತ್ತಿರುವ ಅಳಿಯನಾದ ಚ್ಯವನಮುನಿಯನ್ನೂ ನೋಡಿಕೊಂಡು ಬರುವುದಕ್ಕಾಗಿ ಈ ದಿವಸವೇ ಹೊರಡೋಣ. ॥೧೧॥

ವ್ಯಾಸಮುನಿಯು ಹೇಳಿದನು —ಶರ್ಯಾತಿರಾಜನು ದುಃಖಪಡುತ್ತಿರುವ ತನ್ನ ಹೆಂಡಿತಿಗೆ ಹೀಗೆಂದು ಹೇಳಿ, ರಥವನ್ನೇರಿ ಬೇಗನೆ ಚ್ಯವನಮುನಿಯ ಆಶ್ರಮಕ್ಕೆ ಹೋದನು. ರಾಜನು ಆಶ್ರಮದ ಸಮೀಪಕ್ಕೆ ಹೋಗುತ್ತಲು, ಹೊಸದಾದ ಪ್ರಾಯ ದಿಂದ ಕೂಡಿ ದೇವತೆಗೆ ಸಮಾನನಾಗಿದ್ದ ಆ ಮುನಿಯನ್ನು ನೋಡಿದನು.॥೧೨-೧೩॥

ತಂ ವಿಲೋಕ್ಯಾಽಮರಾಕಾರಂ ವಿಸ್ಮಯಂ ನೃಪತಿರ್ಗತಃ ।
ಕಿಂ ಕೃತಂ ಕುತ್ಸಿತಂ ಕರ್ಮ ಪುತ್ರ್ಯಾ ಲೋಕವಿಗರ್ಹಿತಂ ॥೧೪॥

ನಿಹತೋಽಸೌ ಮುನಿರ್ವೃದ್ಧಸ್ತ್ವನಯಾಽನ್ಯಃ ಪತಿಃ ಕೃತಃ ।
ಕಾಮಪೀಡಿತಯಾ ಕಾಮಂ ಪ್ರಶಾಂತೋಽಪ್ಯತಿ ನಿರ್ಧನಃ ॥೧೫॥

ದುಸ್ಸಹೋಽಯಂ ಪುಷ್ಪಧನ್ವಾ ವಿಶೇಷೇಣ ಚ ಯೌವನೇ ।
ಕುಲೇ ಕಲಂಕಃ ಸುಮಹಾನನಯಾ ಮಾನವೇ ಕೃತಃ ॥೧೬॥

ಧಿಕ್ತಸ್ಯ ಜೀವಿತಂ ಲೋಕೇ ಯಸ್ಯ ಪುತ್ರೀ ಹಿ ಕುತ್ಸಿತಾ ।
ಸರ್ವಪಾಪೈಸ್ತು ದುಃಖಾಯ ಪುತ್ರೀ ಭವತಿ ದೇಹಿನಾಂ ॥೧೭॥

ಮಯಾ ತ್ವನುಚಿತಂ ಕರ್ಮ ಕೃತಂ ಸ್ವಾರ್ಥಸ್ಯ ಸಿದ್ಧಯೇ ।
ವೃದ್ಧಾಯಾಂಧಾಯ ಯಾ ದತ್ತಾ ಪುತ್ರೀ ಸರ್ವಾತ್ಮನಾ ಕಿಲ ॥೧೮॥

ಕನ್ಯಾ ಯೋಗ್ಯಾಯ ದಾತವ್ಯಾ ಪಿತ್ರಾ ಸರ್ವಾತ್ಮನಾ ಕಿಲ ।
ತಾದೃಶಂ ಹಿ ಫಲಂ ಪ್ರಾಪ್ತಂ ಯಾದೃಶಂ ವೈ ಕೃತಂ ಮಯಾ ॥೧೯॥

---

ದೇವತೆಯಂತೆ ಸುಂದರನಾಗಿದ್ದ ಆ ಮುನಿಯನ್ನು ನೋಡಿ ರಾಜನು ಆಶ್ಚರ್ಯವನ್ನು ಹೊಂದಿ ಹೀಗೆ ಯೋಚಿಸಿದನು. ನನ್ನ ಮಗಳು ಲೋಕದ ಜನರು ದೂಷಿಸುವ ಎಂತಹ ಕೆಟ್ಟ ಕೆಲಸವನ್ನು ಮಾಡಿರುವಳು! ವಿಶೇಷವಾಗಿ ಕಾಮಾಸಕ್ತಳಾಗಿ, ಶಾಂತಚಿತ್ತನೂ ದರಿದ್ರನೂ ಮುದುಕನೂ ಆದ ಪತಿಯನ್ನು ಕೊಂದು ಮತ್ತೊಬ್ಬ ಗಂಡನನ್ನು ಪ್ರಾಯಶಃ ಮಾಡಿಕೊಂಡಿರುವಳು! ॥೧೪-೧೫॥

ಕಾಮನ ಬಾಧೆಯು ಸಹಿಸಲಸಾಧ್ಯವಾದುದು! ಯೌವನವಂತರು ಇವನ ಬಾಧೆಯನ್ನು ಸಹಿಸುವುದು ಮತ್ತೂ ಕಷ್ಟವು! ಈ ನನ್ನ ಮಗಳು ನಮ್ಮ ಮನುವಂಶಕ್ಕೆ ದೊಡ್ಡದಾದ ಅಪಯಶಸ್ಸನ್ನು ತಂದಳು. ಯಾವವನಿಗೆ ಕೆಟ್ಟ ಹೆಣ್ಣುಮಕ್ಕಳಾಗುವರೋ ಅವನ ಜನ್ಮವು ವ್ಯರ್ಥವಾದುದು. ಲೋಕದಲ್ಲಿ ಮನುಜರಿಗೆ ಅನೇಕ ಪಾಪಗಳ ದುಃಖವನ್ನನುಭವಿಸುವುದಕ್ಕಾಗಿಯೇ ಹೆಣ್ಣುಮಕ್ಕಳಾಗುವರು! ಅಥವಾ ॥೧೬-೧೭॥

ನಾನಾದರೋ ಸ್ವಪ್ರಯೋಜನಕ್ಕಾಗಿ ಈ ಅಯೋಗ್ಯವಾದ ಕೆಲಸವನ್ನು ಮಾಡಿದೆನು! ಮುದುಕನೂ ಕುರುಡನೂ ಆದ ಮುನಿಗೆ ಮಗಳನ್ನು ನನ್ನ ಮನಃ

ಹನ್ಮಿ ಚೇದದ್ಯ ತನಯಾಂ ದುಃಶೀಲಾಂ ಪಾಪಕಾರಿಣೀಂ ।
ಸ್ತ್ರೀಹತ್ಯಾ ದುಸ್ತರಾ ಸ್ಯಾನ್ಮೇ ತಥಾ ಪುತ್ರ್ಯಾ ವಿಶೇಷತಃ ॥೨೦॥

ಮನುವಂಶಸ್ತು ವಿಖ್ಯಾತಃ ಸಕಲಂಕಃ ಕೃತೋ ಮಯಾ ।
ಲೋಕಾಪವಾದೋ ಬಲವಾನ್ ದುಸ್ತ್ಯಾಜ್ಯಾ ಸ್ನೇಹಶೃಂಖಲಾ॥೨೧॥

ಕಿಂ ಕರೋಮೀತಿ ಚಿಂತಾಬ್ಧೌ ಯದಾ ಮಗ್ನಃ ಸ ಪಾರ್ಥಿವಃ ।
ಸುಕನ್ಯಯಾ ತದಾ ದೈವಾದ್ದೃಷ್ಟಶ್ಚಿಂತಾಕುಲಃ ಪಿತಾ ॥೨೨॥

ಸಾ ದೃಷ್ಟ್ವಾ ತಂ ಜಗಾಮಾಶು ಸುಕನ್ಯಾ ಪಿತುರಂತಿಕೇ ।
ಗತ್ವಾ ಪಪ್ರಚ್ಛ ಭೂಪಾಲಂ ಪ್ರೇಮಪೂರಿತಮಾನಸಾ ॥೨೩॥

ಕಿಂ ವಿಚಾರಯಸೇ ರಾಜಂ ಶ್ಚಿಂತಾವ್ಯಾಕುಲಿತಾನನಃ ।
ಉಪವಿಷ್ಟಂ ಮುನಿಂ ವೀಕ್ಷ್ಯ ಯುವಾನಮಂಬುಜೇಕ್ಷಣಂ ॥೨೪॥

---

ಪೂರ್ವಕವಾಗಿ ಕೊಟ್ಟೆನು. ಆದರೆ ತಂದೆಯಾದವನು ತನ್ನ ಎಲ್ಲ ಪ್ರಯತ್ನವನ್ನೂ ಮಾಡಿ ಹುಡುಕಿ ಯೋಗ್ಯನಾದ ವರನಿಗೆ ಕನ್ಯೆಯನ್ನು ಕೊಡಬೇಕು. ನಾನು ಮಾಡಿದ ಕೆಲಸಕ್ಕೆ ತಕ್ಕಫಲವು ಪ್ರಾಪ್ತವಾಯಿತು! ||೧೮-೧೯||

ಈ ದಿನವೇ ಕೆಟ್ಟ ನಡತೆಯ ಮತ್ತು ಪಾಪಕಾರ್ಯವನ್ನು ಮಾಡಿದ ಮಗಳನ್ನು ಕೊಂದರೆ ನನಗೆ ಸ್ತ್ರೀಹತ್ಯೆಯನ್ನೂ ಕನ್ಯಾಹತ್ಯೆಯನ್ನೂ ಮಾಡಿದ ಪಾಪವೂ ಬರುವುದು. ಪ್ರಸಿದ್ಧವಾದ ಮನುವಂಶಕ್ಕೆ ನಾನೇ ದೋಷವನ್ನುಂಟುಮಾಡಿದೆನು. ಮಗಳ ಮೇಲಿನ ಪ್ರೀತಿಯನ್ನು ಬಿಡುವ ಹಾಗಿಲ್ಲ! ಲೋಕನಿಂದೆಯೋ ಬಲವಾದುದಾಗಿರುವುದು! ||೨೦-೨೧||

ಏನನ್ನು ಮಾಡಲಿ? ಎಂದು ರಾಜನು ಚಿಂತಾಸಮುದ್ರದಲ್ಲಿ ಮುಳುಗಿರಲು, ಸುಕನ್ಯೆಯು ಚಿಂತಿಸುತ್ತಿರುವ ತಂದೆಯನ್ನು ಸುದೈವದಿಂದ ಕಂಡು ಅವನ ಸಮೀಪಕ್ಕೆ ಹೋಗಿ ಪ್ರೀತಿಯಿಂದ ಕುಶಲಪ್ರಶ್ನೆಯನ್ನು ಮಾಡಿದಳು. ||೨೨-೨೩||

ಓ ರಾಜನೇ, ಚಿಂತೆಯಿಂದ ಕಂದಿದ ಮುಖವುಳ್ಳವನಾಗಿ ಏನನ್ನು ವಿಚಾರ ಮಾಡುತ್ತಿರುವೆ? ಯೌವನವಂತನೂ ಕಮಲದಂತೆ ಕಣ್ಣುಗಳುಳ್ಳವನೂ ಆದ ಮುನಿಯನ್ನು ನೋಡಿ ಸಂದೇಹಪಡುತ್ತಿರುವೆಯಾ? ಮನುವಂಶದಲ್ಲಿ ಹುಟ್ಟಿದ ರಾಜ

ಏಹ್ಯೇಹಿ ಪುರುಷವ್ಯಾಘ್ರ ಪ್ರಣಮಸ್ವ ಪತಿಂ ಮಮ ।
ಮಾ ವಿಷಾದಂ ನೃಪಶ್ರೇಷ್ಠ ಸಾಂಪ್ರತಂ ಕುರು ಮಾನವ ॥೨೫॥

॥ ವ್ಯಾಸ ಉವಾಚ ॥

ಇತಿ ಪುತ್ರ್ಯಾ ವಚಃ ಶ್ರುತ್ವಾ ಶರ್ಯಾತಿಃ ಕ್ರೋಧಪೀಡಿತಃ ।
ಪ್ರೋವಾಚ ವಚನಂ ರಾಜಾ ಪುರಸ್ಸ್ಥಾಂ ತನಯಾಂ ತತಃ ॥೨೬॥

॥ ರಾಜೋವಾಚ ॥

ಕ್ವ ಮುನಿಶ್ಚ್ಯವನಃ ಪುತ್ರೀ ವೃದ್ಧೋಽಂಧಸ್ತಾಪಸೋತ್ತಮಃ ।
ಕೋಽಯಂ ಯುವಾ ಮದೋನ್ಮತ್ತಃ ಸಂದೇಹೋಽತ್ರ ಮಹಾನ್ಮಮ॥೨೭॥

ಮುನಿಃ ಕಿಂ ನಿಹತಃ ಪಾಪೇ ತ್ವಯಾ ದುಷ್ಕೃತಕಾರಿಣಿ ।
ನೂತನೋಽಸೌ ಪತಿಃ ಕಾಮಾತ್ಕೃತಃ ಕುಲವಿನಾಶಿನಿ ॥೨೮॥

ಸೋಽಹಂ ಚಿಂತಾತುರಸ್ತ್ವಂ ನ ಪಶ್ಯಾಮ್ಯಾಶ್ರಮಸಂಸ್ಥಿತಂ ।
ಕಿಂ ಕೃತಂ ದುಷ್ಕೃತಂ ಕರ್ಮ ಕುಲಟಾಚರಿತಂ ಕಿಲ ॥೨೯॥

---

ಶ್ರೇಷ್ಠನಾದ ನೀನು ಈಗ ವಿಷಾದಪಡಬೇಕಾದುದಿಲ್ಲ. ಬಂದು ನನ್ನ ಪತಿಗೆ ನಮಸ್ಕಾರವನ್ನು ಮಾಡು. ॥೨೪-೨೫॥

ವ್ಯಾಸಮುನಿಯು ಹೇಳಿದನು—ಹೀಗೆಂದು ಹೇಳಿದ ಮಗಳ ಮಾತನ್ನು ಕೇಳಿ ಶರ್ಯಾತಿರಾಜನು ಕೋಪದಿಂದ ತನ್ನೆದುರಿಗಿರುವ ಮಗಳನ್ನು ಕುರಿತು ಹೀಗೆ ಮಾತನಾಡಿದನು. ॥೨೬॥

ರಾಜನು ಹೇಳಿದನು—ಎಲೈ ಮಗಳೇ, ಮುದುಕನೂ ಕುರುಡನೂ ತಪಸ್ವಿಗಳಲ್ಲಿ ಶ್ರೇಷ್ಠನೂ ಆಗಿದ್ದ ಚ್ಯವನಮುನಿಯು ಎಲ್ಲಿರುವನು? ಈ ಮದಿಸಿದ ಯೌವನವಂತನಾರು? ಈ ವಿಷಯದಲ್ಲಿ ನನಗೆ ದೊಡ್ಡ ಸಂದೇಹವು ಬಂದಿರುವುದು. ಕೆಟ್ಟ ಕೆಲಸವನ್ನು ಮಾಡುವ ಪಾಪಿಯಾದ ನೀನು ಮುನಿಯನ್ನು ಕೊಂದೆಯಾ? ಕುಲಕ್ಕೆ ಕೆಟ್ಟ ಹೆಸರನ್ನು ತರುವ ನೀನು ಕಾಮಾತುರಳಾಗಿ ಈ ಹೊಸ ಗಂಡನನ್ನು ವರಿಸಿದೆಯಾ? ॥೨೭-೨೮॥

ಚಿಂತೆಯಿಂದ ಕೂಡಿದ ನಾನು ಆ ಮುನಿಯನ್ನು ಆಶ್ರಮದಲ್ಲಿ ಕಾಣಲಿಲ್ಲ. ನೀನು ಕೆಟ್ಟನಡತೆಯನ್ನಾಶ್ರಯಿಸಿ ಎಂತಹ ಕೆಟ್ಟ ಕೆಲಸವನ್ನು ಮಾಡಿದೆ! ನೀನು

ನಿಮಗ್ನೋಽಹಂ ದುರಾಚಾರೇ ಶೋಕಾಬ್ಧೌ ತ್ವತ್ಕೃತೇಽಧುನಾ ।
ದೃಷ್ಟ್ವೈನಂ ಪುರುಷಂ ದಿವ್ಯಮುದ್ಧಿಷ್ಟಾಪ್ತ್ವಾ ಚ್ಯವನಂ ಮುನಿಂ ॥೩೦॥

ವಿಹಸ್ಯ ತನುವಾಚಾಽಸೌ ಸಾ ಶ್ರುತ್ವಾ ವಚನಂ ಪಿತುಃ ।
ಗೃಹೀತ್ವಾಽನೀಯ ಪಿತರಂ ಭರ್ತುರಂತಿಕಮಾದರಾತ್ ॥೩೧॥

ಚ್ಯವನೋಽಸೌ ಮುನಿಸ್ತಾತ ಜಾಮಾತಾ ತೇ ನ ಸಂಶಯಃ ।
ಅಶ್ವಿಭ್ಯಾಮೀದೃಶಃ ಕಾಂತಃ ಕೃತಃ ಕಮಲಲೋಚನಃ ॥೩೨॥

ಯದೃಚ್ಛಯಾಽತ್ರ ಸಂಪ್ರಾಪ್ತೌ ನಾಸತ್ಯಾವಾಶ್ರಮೇ ಮಮ ।
ತಾಭ್ಯಾಂ ಕರುಣಯಾ ನೂನಂ ಚ್ಯವನಸ್ತಾದೃಶಃ ಕೃತಃ ॥೩೩॥

ನಾಹಂ ತವ ಸುತಾ ತಾತ ತಥಾ ಸ್ಯಾಂ ಪಾಪಕಾರಿಣೀ ।
ಯಥಾ ತ್ವಂ ಮನ್ಯಸೇ ರಾಜನ್ನಿಮೂಢೋ ರೂಪಸಂಶಯೇ ॥೩೪॥

ಪ್ರಣಮ ತ್ವಂ ಮುನಿಂ ರಾಜನ್ಭಾರ್ಗವಂ ಚ್ಯವನಂ ಪಿತಃ ।
ಆಪೃಚ್ಛ ಕಾರಣಂ ಸರ್ವಂ ಕಥಯಿಷ್ಯತಿ ವಿಸ್ತರಂ ॥೩೫॥

---

ಮಾಡಿದ ಕೆಲಸದಿಂದ ನಾನು ಶ್ರೇಷ್ಠನಾದ ಚ್ಯವನಮುನಿಯನ್ನು ಕಾಣದೆ ದುಃಖ ಸಾಗರದಲ್ಲಿ ಮುಳುಗಿರುವೆನು. ||೨೯-೩೦||

ಆಕೆಯು ತಂದೆಯ ಮಾತನ್ನು ಕೇಳಿ ನಗುತ್ತಾ, ಅವನನ್ನು ಕರೆದುಕೊಂಡು ತನ್ನ ಗಂಡನ ಸಮೀಪಕ್ಕೆ ಬಂದು, ಓ ತಂದೆಯೇ, ಇವನೇ ಆ ಚ್ಯವನಮುನಿಯು, ನಿನ್ನ ಅಳಿಯನು. ಸಂದೇಹಪಡಬೇಡ. ಅಶ್ವಿನೀದೇವತೆಗಳು ಇವನನ್ನು ಈ ರೀತಿ ಯಾಗಿ ಮಾಡಿರುವರು. ||೩೧-೩೨||

ಅಶ್ವಿನೀದೇವತೆಗಳು ಅಕಸ್ಮಾತ್ತಾಗಿ ಈ ಆಶ್ರಮಕ್ಕೆ ಬಂದರು. ಅವರು ಕರುಣೆಯಿಂದ ಚ್ಯವನಮುನಿಯನ್ನು ಈ ರೀತಿಯಾಗಿ ಮಾಡಿದರು ! ಇದು ನಿಜವು. ನಿನ್ನಂತಹ ಸತ್ಕುಲದಲ್ಲಿ ಹುಟ್ಟಿದವನ ಮಗಳಾದ ನಾನು ಅಂತಹ ಪಾಪಕೆಲಸವನ್ನು ಮಾಡತಕ್ಕವಳಲ್ಲ. ರೂಪದ ವ್ಯತ್ಯಾಸದಿಂದ ಸರಿಯಾದ ತಿಳಿವಳಿಕೆಯನ್ನು ಹೊಂದದ ನೀನು ಈ ರೀತಿಯಲ್ಲಿ ಸಂದೇಹಪಡುತ್ತಿರುವೆ. ||೩೩-೩೪||

ಓ ತಂದೆಯೇ, ಭೃಗುವಂಶದಲ್ಲಿ ಹುಟ್ಟಿದ ಚ್ಯವನಮುನಿಗೆ ನಮಸ್ಕಾರ ಮಾಡಿ ಪ್ರಶ್ನೆಮಾಡು. ಅವನೂ ಎಲ್ಲವನ್ನೂ ವಿಸ್ತಾರವಾಗಿ ಕಾರಣಸಹಿತವಾಗಿ

ಇತಿ ಶ್ರುತ್ವಾ ವಚಃ ಪುತ್ರ್ಯಾಃ ಶರ್ಯಾತಿಸ್ತ್ವರಿತಸ್ತದಾ ।
ಪ್ರಣನಾಮ ಮುನಿಂ ತತ್ರ ಗತ್ವಾ ಪಪ್ರಚ್ಛ ಸಾದರಂ ॥೩೬॥

॥ ರಾಜೋವಾಚ ॥

ಕಥಯಸ್ವ ಸ್ವವೃತ್ತಾಂತಂ ಭಾರ್ಗವಾಽಶು ಯಥೋಚಿತಂ ।
ನಯನೇ ಚ ಕಥಂ ಪ್ರಾಪ್ತೇ ಕ್ವ ಗತಾ ತೇ ಜರಾ ಪುನಃ ॥೩೭॥

ಸಂಶಯೋಽಯಂ ಮಹಾನ್ಮೇಽಸ್ತಿ ರೂಪಂ ದೃಷ್ಟ್ವಾಽತಿಸುಂದರಂ ।
ವದವಿಸ್ತರತೋ ಬ್ರಹ್ಮನ್ ಶ್ರುತ್ವಾಽಹಂ ಸುಖಮಾಪ್ನುಯಾಂ ॥೩೮॥

॥ ಚ್ಯವನ ಉವಾಚ ॥

ನಾಸತ್ಯಾವತ್ರ ಸಂಪ್ರಾಪ್ತೌ ದೇವಾನಾಂ ಭಿಷಜಾವುಭೌ ।
ಉಪಕಾರಃ ಕೃತಸ್ತಾಭ್ಯಾಂ ಕೃಪಯಾ ನೃಪಸತ್ತಮ ॥೩೯॥

ಮಯಾ ತಾಭ್ಯಾಂ ವರೋ ದತ್ತ ಉಪಕಾರಸ್ಯ ಹೇತವೇ ।
ಕರಿಷ್ಯಾಮಿ ಮಖೇ ರಾಜ್ಞೋ ಭವಂತೌ ಸೋಮಪಾಯಿನೌ ॥೪೦॥

---

ಹೇಳುವನು. ಹೀಗೆಂದು ಹೇಳಿದ ಮಗಳ ಮಾತನ್ನು ಕೇಳಿದ ಶರ್ಯಾತಿಮಹಾರಾಜನು ಬೇಗನೆ ಮುನಿಗೆ ನಮಸ್ಕಾರವನ್ನು ಮಾಡಿ ಪ್ರೀತಿಪೂರ್ವಕವಾಗಿ ಅವನ ಸಮೀಪಕ್ಕೆ ಹೋಗಿ ಪ್ರಶ್ನೆಮಾಡಿದನು. ॥೩೫-೩೬॥

ರಾಜನು ಹೇಳಿದನು—ಓ ಭೃಗುವಂಶೋದ್ಭವನಾದ ಮುನಿಯೇ, ಬೇಗನೆ ನಿನ್ನ ವೃತ್ತಾಂತವನ್ನು ಹೇಳು. ನಿನಗೆ ಕಣ್ಣುಗಳು ಹೇಗೆ ಬಂದುವು? ಮುಪ್ಪು ಎಲ್ಲಿ ಹೋಯಿತು? ನಿನ್ನ ಸುಂದರವಾದ ರೂಪವನ್ನು ನೋಡಿ ನನಗೆ ದೊಡ್ಡ ಸಂದೇಹವು ಬಂದಿರುವುದು. ಎಲ್ಲವನ್ನೂ ವಿಸ್ತಾರವಾಗಿ ಹೇಳು. ಅದನ್ನು ಕೇಳಿ ನಾನು ಸುಖವನ್ನು ಹೊಂದುವೆನು. ಎಂದು ರಾಜನು ಹೇಳಿದನು. ॥೩೭-೩೮॥

ಚ್ಯವನನು ಹೇಳಿದನು—ರಾಜಶ್ರೇಷ್ಠನೇ, ಕೇಳು. ದೇವತೆಗಳ ವೈದ್ಯರಾದ ಅಶ್ವಿನೀದೇವತೆಗಳು ಇಲ್ಲಿಗೆ ಬಂದಿದ್ದರು. ಅವರು ದಯೆಯಿಂದ ನನಗೆ ಹೀಗೆ ಉಪಕಾರವನ್ನು ಮಾಡಿದರು. ಅದರ ಪ್ರತ್ಯುಪಕಾರಕ್ಕಾಗಿ "ರಾಜನು ಮಾಡುವ ಯಜ್ಞದಲ್ಲಿ ನಿಮಗೆ ನಾನು ಸೋಮಪಾನವನ್ನು ಮಾಡಿಸುವೆನು." ಎಂದು ಅವರಿಗೆ ವರವನ್ನು ಕೊಟ್ಟಿರುವೆನು. ॥೩೯-೪೦॥

ಏವಂ ಮಯಾ ವಯಃ ಪ್ರಾಪ್ತಂ ಲೋಚನೇ ವಿಮಲೇ ತಥಾ ।
ಸ್ವಸ್ಥೋ ಭವ ಮಹಾರಾಜ ಸಂವಿಶಸ್ವಾಽಽಸನೇ ಶುಭೇ ॥೪೧॥

ಇತ್ಯುಕ್ತಃ ಸ ತು ವಿಪ್ರೇಣ ಸಭಾರ್ಯಃ ಪೃಥಿವೀಪತಿಃ ।
ಸುಖೋಪವಿಷ್ಟಃ ಕಲ್ಯಾಣೀಃ ಕಥಾಶ್ಚಕ್ರೇ ಮಹಾತ್ಮನಾ ॥೪೨॥

ಅಥೈನಂ ಭಾರ್ಗವಃ ಪ್ರಾಹ ರಾಜಾನಂ ಪರಿಸಾಂತ್ವಯನ್ ।
ಯಾಜಯಿಷ್ಯಾಮಿ ರಾಜಂಸ್ತ್ವಾಂ ಸಂಭಾರಾನುಪಕಲ್ಪಯ ॥೪೩॥

ಮಯಾ ಪ್ರತಿಶ್ರುತಂ ತಾಭ್ಯಾಂ ಕರ್ತವ್ಯೌ ಸೋಮಪೌ ಯುವಾಂ ।
ತತ್ಕರ್ತವ್ಯಂ ನೃಪಶ್ರೇಷ್ಠ ತವ ಯಜ್ಞೇಽತಿವಿಸ್ತರೇ ॥೪೪॥

ಇಂದ್ರಂ ನಿವಾರಯಿಷ್ಯಾಮಿ ಕ್ರುದ್ಧಂ ತೇಜೋಬಲೇನ ವೈ ।
ಪಾಯಯಿಷ್ಯಾಮಿ ರಾಜೇಂದ್ರ ಸೋಮಂ ಸೋಮಮಖೇ ತವ॥೪೫॥

ತತಃ ಪರಮಸಂತುಷ್ಟಃ ಶರ್ಯಾತಿಃ ಪೃಥಿವೀಪತಿಃ ।
ಚ್ಯವನಸ್ಯ ಮಹಾರಾಜ ತದ್ವಾಕ್ಯಂ ಪ್ರತ್ಯಪೂಜಯತ್ ॥೪೬॥

---

ಎಲೈ ಮಹಾರಾಜನೇ, ಈ ರೀತಿಯಲ್ಲಿ ನನಗೆ ಯೌವನವೂ ಕಣ್ಣುಗಳೂ ಬಂದುವು ! ನೀನು ಶಾಂತಚಿತ್ತನಾಗಿ ಮಂಗಲಕರವಾದ ಪೀಠದ ಮೇಲೆ ಕುಳಿತುಕೋ. ಎಂದು ಹೇಳುತ್ತಲು, ರಾಜನು ಪತ್ನಿಯೊಡನೆ ಕುಳಿತುಕೊಂಡು, ಮಹಾತ್ಮನಾದ ಚ್ಯವನನೊಡನೆ ಮಂಗಲಕರವಾದ ಕಥಾಸಲ್ಲಾಪದ ಮಾತುಗಳನ್ನು ಆಡುತಿದ್ದನು. ||೪೧-೪೨||

ಆ ಮೇಲೆ ಚ್ಯವನನು ರಾಜನನ್ನು ಸಮಾಧಾನಪಡಿಸುತ್ತಾ, ಎಲೈ ರಾಜನೇ, ನಾನು ನಿನಗೆ ಯಜ್ಞವನ್ನು ಮಾಡಿಸುವೆನು. ಅದಕ್ಕೆ ಬೇಕಾದ ಪದಾರ್ಥಗಳನ್ನೆಲ್ಲ ವನ್ನೂ ಸಿದ್ಧಪಡಿಸು. ನಾನು ಅಶ್ವಿನೀ ದೇವತೆಗಳಿಗೆ ಸೋಮಪಾನವನ್ನು ಮಾಡಿಸು ವುದಾಗಿ ಪ್ರತಿಜ್ಞೆ ಮಾಡಿರುವೆನು. ದೊಡ್ಡದಾಗಿ ನೀನು ಮಾಡುವ ಅಗ್ನಿಷ್ಟೋಮ ಯಜ್ಞದಲ್ಲಿ ಆ ವಾಗ್ದಾನದ ಕೆಲಸವನ್ನೂ ಮಾಡಬೇಕಾಗಿರುವುದು. ||೪೩-೪೪||

ಕೋಪಗೊಂಡ ದೇವೇಂದ್ರನನ್ನು ನನ್ನ ತೇಜಸ್ಸಿನ ಬಲದಿಂದ ತಡೆಯು ವೆನು ! ನೀನು ಮಾಡುವ ಸೋಮಯಾಗದಲ್ಲಿ ಅಶ್ವಿನೀದೇವತೆಗಳಿಗೆ ಸಹ ಸೋಮ ಪಾನವನ್ನು ಮಾಡಿಸುವೆನು ! ಎಂದು ಹೇಳುತ್ತಲು, ಶರ್ಯಾತಿರಾಜನು ಚ್ಯವನನ

ಸಂಮಾನ್ಯ ಚ್ಯವನಂ ರಾಜಾ ಜಗಾಮ ನಗರಂ ಪ್ರತಿ ।
ಸಭಾರ್ಯಶ್ಚಾಽತಿ ಸಂತುಷ್ಟಃ ಕುರ್ವನ್ವಾರ್ತಾಂ ಮುನೇಃ ಕಿಲ ॥೪೭॥

ಪ್ರಶಸ್ತೇಽಹನಿ ಯಜ್ಞೀಯೇ ಸರ್ವಕಾಮಸಮೃದ್ಧಿಮಾನ್ ।
ಕಾರಯಾಮಾಸ ಶರ್ಯಾತಿರ್ಯಜ್ಞಾಯತನಮುತ್ತಮಂ ॥೪೮॥

ಸಮಾನೀಯ ಮುನೀನ್ಪೂಜ್ಯಾನ್ವಸಿಷ್ಠಪ್ರಮುಖಾನಸೌ ।
ಭಾರ್ಗವೋ ಯಾಜಯಾಮಾಸ ಚ್ಯವನಃ ಪೃಥಿವೀಪತಿಂ ॥೪೯॥

ವಿತತೇ ತು ತಥಾ ಯಜ್ಞೇ ದೇವಾಃ ಸರ್ವೇ ಸವಾಸವಾಃ ।
ಆಜಗ್ಮುಶ್ಚಾಽಶ್ವಿನೌ ತತ್ರ ಸೋಮಾರ್ಥಮುಪಜಗ್ಮತುಃ ॥೫೦॥

ಇಂದ್ರಸ್ತು ಶಂಕಿತಸ್ತತ್ರ ವೀಕ್ಷ್ಯ ತಾವಶ್ವಿನಾವುಭೌ ।
ಪಪ್ರಚ್ಛ ಚ ಸುರಾನ್ಸರ್ವಾನ್ಕಿಮೇತೌ ಸಮುಪಾಗತೌ ॥೫೧॥

ಚಿಕಿತ್ಸಕೌ ನ ಸೋಮಾರ್ಹೌ ಕೇನಾಽನೀತಾವಿಹೇತಿ ಚ ।
ನಾಽಬ್ರುವನ್ನಮರಾಸ್ತತ್ರ ರಾಜ್ಞಸ್ತು ವಿತತೇ ಮಖೇ ॥೫೨॥

---

ಆ ವಾಗ್ದಾನದ ಮಾತನ್ನು ಕೇಳಿ ಅತ್ಯಂತ ಸಂತೋಷಗೊಂಡು ಆ ಮಾತನ್ನು ಒಪ್ಪಿ ಶ್ಲಾಘಿಸಿದನು. ॥೪೫-೪೬॥

ಶರ್ಯಾತಿರಾಜನು ಚ್ಯವನಮುನಿಗೆ ಮರ್ಯಾದೆಯನ್ನು ಮಾಡಿ, ತನ್ನ ಪತ್ನಿಯೊಡನೆ ಮುನಿಯ ಮಹಿಮೆಯ ವಿಷಯದಲ್ಲಿ ಮಾತನಾಡುತ್ತಾ ಸಂತೋಷದಿಂದ ರಾಜಧಾನಿಗೆ ಪ್ರಯಾಣಮಾಡಿದನು. ಯಜ್ಞಕ್ಕೆ ಬೇಕಾದ ಸಕಲ ಪದಾರ್ಥಗಳಿಂದ ಕೂಡಿದ ಶ್ರೇಷ್ಠವಾದ ಯಜ್ಞಶಾಲೆಯನ್ನು ಶುಭದಿವಸದಲ್ಲಿ ಮಾಡಿಸಿದನು. ॥೪೭-೪೮॥

ಭೃಗುಪುತ್ರನಾದ ಚ್ಯವನನು ವಸಿಷ್ಠನೇ ಮುಂತಾದ ಮುಖ್ಯರಾದ ಋಷಿಗಳನ್ನು ಕರೆಯಿಸಿ ರಾಜನಿಂದ ಯಜ್ಞವನ್ನು ಮಾಡಿಸಿದನು. ವಿಸ್ತಾರವಾದ ಆ ಯಜ್ಞದಲ್ಲಿ ದೇವೇಂದ್ರನೊಡನೆ ಸಕಲ ದೇವತೆಗಳೂ ಬಂದರು. ಅಶ್ವಿನೀದೇವತೆಗಳೂ ಸೋಮಪಾನಮಾಡಬೇಕೆಂದು ಬಂದರು. ॥೪೯-೫೦॥

ದೇವೇಂದ್ರನು ಆ ಅಶ್ವಿನೀ ದೇವತೆಗಳಿಬ್ಬರನ್ನೂ ನೋಡಿ, ಸಂದೇಹದಿಂದ ದೇವತೆಗಳನ್ನು ಕುರಿತು ಇವರಿಬ್ಬರೂ ಇಲ್ಲಿಗೆ ಏಕೆ ಬಂದರು? ವೈದ್ಯರು ಸೋಮ

ಅಗೃಹ್ಣಾಚ್ಚ್ಯವನಃ ಸೋಮಮಶ್ವಿನೋರ್ದೇವಯೋಸ್ತದಾ ।
ಶಕ್ರಸ್ತಂ ವಾರಯಾಮಾಸ ಮಾ ಗೃಹಾಣೈತಯೋರ್ಗ್ರಹಂ ॥೫೩॥

ತಮಾಹ ಚ್ಯವನಸ್ತತ್ರ ಕಥಮೇತೌ ರವೇಃ ಸುತೌ ।
ನ ಗ್ರಹಾರ್ಹೌ ಚ ನಾಸತ್ಯೌ ಬ್ರೂಹಿ ಸತ್ಯಂ ಶಚೀಪತೇ ॥೫೪॥

ನ ಸಂಕರೌ ಸಮುತ್ಪನ್ನೌ ಧರ್ಮಪತ್ನೀ ಸುತೌ ರವೇಃ ।
ಕೇನ ದೋಷೇಣ ದೇವೇಂದ್ರ ನಾರ್ಹೌ ಸೋಮಂ ಭಿಷಗ್ವರೌ ॥೫೫॥

ನಿರ್ಣಯೋಽತ್ರ ಮಖೇ ಶಕ್ರ ಕರ್ತವ್ಯಃ ಸರ್ವದೈವತೈಃ ।
ಗ್ರಾಹಯಿಷ್ಯಾಮ್ಯಹಂ ಸೋಮಂ ಕೃತೌ ತೌ ಸೋಮಪೌ ಮಯಾ ॥೫೬॥

ಪ್ರೇರಿತೋಽಸೌ ಮಯಾ ರಾಜಾ ಮಖಾಯ ಮಘವನ್ನಿಲ ।
ಏತದರ್ಥಂ ಕರಿಷ್ಯಾಮಿ ಸತ್ಯಂ ಮೇ ವಚನಂ ವಿಭೋ ॥೫೭॥

---

ಪಾನಮಾಡಲು ಯೋಗ್ಯರಲ್ಲವು! ಯಾರು ಇವರನ್ನು ಕರೆದುಕೊಂಡು ಬಂದರು? ಎಂದು ಪ್ರಶ್ನೆಮಾಡಿದನು. ಆ ರಾಜನ ವಿಸ್ತಾರವಾದ ಯಜ್ಞದಲ್ಲಿ ದೇವತೆಗಳು ಯಾರೂ ಉತ್ತರವನ್ನು ಹೇಳಲಿಲ್ಲ. ॥೫೧-೫೨॥

ಆಗ ಚ್ಯವನನು ಅಶ್ವಿನೀದೇವತೆಗಳಿಗಾಗಿ ಸೋಮರಸವನ್ನು ಕೊಡಲು ಯಜ್ಞಪಾತ್ರೆಯಲ್ಲಿ ಪರಿಗ್ರಹಿಸಿದನು. ದೇವೇಂದ್ರನು ಇವರಿಬ್ಬರಿಗೂ ಸೋಮಗ್ರಹಣ ಮಾಡಕೂಡದೆಂದು ತಡೆದನು. ॥೫೩॥

ಆ ಸಂದರ್ಭದಲ್ಲಿ ಚ್ಯವನನು ದೇವೇಂದ್ರನನ್ನು ಕುರಿತು ಓ ದೇವೇಂದ್ರನೇ, ಸೂರ್ಯನ ಧರ್ಮಪತ್ನಿಯ ಮಕ್ಕಳಾದ ಈ ಅಶ್ವಿನೀದೇವತೆಗಳು ಸೋಮಪಾನ ಮಾಡಲು ಏಕೆ ಅರ್ಹರಲ್ಲವೆಂಬುದರ ನಿಜವನ್ನು ಹೇಳು. ವೈದ್ಯಶ್ರೇಷ್ಠರು ಸಂಕರಜಾತಿಯವರಲ್ಲವು. ಯಾವ ದೋಷದಿಂದ ಅವರಿಗೆ ಯೋಗ್ಯತೆಯಿಲ್ಲವೆಂದು ಹೇಳುವೆ? ಈ ಯಜ್ಞದಲ್ಲಿ ಸಮಸ್ತ ದೇವತೆಗಳೂ ಇದರ ನಿರ್ಣಯವನ್ನು ಮಾಡಬೇಕು. ನಾನು ಅವರನ್ನು ಸೋಮಪಾನಾರ್ಹರನ್ನಾಗಿ ಮಾಡಿರುತ್ತೇನೆ. ಅವರಿಗಾಗಿ ಸೋಮರಸವನ್ನು ಕೊಡಲು ಯಜ್ಞಪಾತ್ರೆಯಲ್ಲಿ ಪರಿಗ್ರಹಿಸಿರುತ್ತೇನೆ. ॥೫೪-೫೫-೫೬॥

ಎಲೈ ದೇವೇಂದ್ರನೇ, ಇದಕ್ಕಾಗಿಯೇ ಎಂದರೆ ಅಶ್ವಿನೀದೇವತೆಗಳಿಗೆ ಸೋಮಪಾನಮಾಡಿಸುವುದಕ್ಕಾಗಿಯೇ ಮಹಾರಾಜನನ್ನು ಯಜ್ಞಮಾಡಬೇಕೆಂದು ಪ್ರೇರಿಸಿ

ಆಭ್ಯಾಮುಪಕೃತಂ ಶಕ್ರ ತಥಾ ದತ್ತಂ ನವಂ ವಯಃ ।
ತಸ್ಮಾತ್ಪ್ರತ್ಯುಪಕಾರಸ್ತು ಕರ್ತವ್ಯಃ ಸರ್ವಥಾ ಮಯಾ ॥೫೮॥

॥ ಇಂದ್ರ ಉವಾಚ ॥

ಚಿಕಿತ್ಸಕೌ ಕೃತಾವೇತೌ ನಾಸತ್ಯೌ ನಿಂದಿತೌ ಸುರೈಃ ।
ಉಭಾವೇತೌ ನ ಸೋಮಾರ್ಹೌ ಮಾ ಗೃಹಾಣೈತಯೋರ್ಗ್ರಹಂ ॥೫೯॥

॥ ಚ್ಯವನ ಉವಾಚ ॥

ಅಹಲ್ಯಾಜಾರ ಸಂಯುಚ್ಛ ಕೋಪಂ ಚಾಽದ್ಯ ನಿರರ್ಥಕಂ ।
ವೃತ್ರಘ್ನ ಕಿಂ ಹಿ ತೌ ಸತ್ಯೌ ನ ಸೋಮಾರ್ಹೌ ಸುರಾತ್ಮಜೌ ॥೬೦॥

ಏವಂ ವಿವಾದೇ ಸಮುಪಸ್ಥಿತೇ ಚ ।
ನ ಕೋಽಪಿ ವಾಚಂ ತಮುವಾಚ ಭೂಪ ॥

---

ದೆನು. ಇವರಿಬ್ಬರೂ ನನಗೆ ಯೌವನವನ್ನು ಕೊಟ್ಟು ಉಪಕಾರಮಾಡಿದರು. ನಾನು ಪ್ರತ್ಯುಪಕಾರವನ್ನು ಆವಶ್ಯಕವಾಗಿ ಮಾಡಬೇಕು. ಈ ಕಾರಣದಿಂದ ನನ್ನ ಮಾತನ್ನು ನಿಜವಾಗಿ ಮಾಡಿ ಈ ಅಗ್ನಿಷ್ಟೋಮಯಾಗದಲ್ಲಿ ಇವರಿಗೆ ಸೋಮಪಾನ ವನ್ನು ಮಾಡಿಸುವೆನು. ॥೫೭-೫೮॥

ಇಂದ್ರನು ಹೇಳಿದನು—ಇವರಿಬ್ಬರೂ ವೃತ್ತಿಯಲ್ಲಿ ಚಿಕಿತ್ಸಕರಾಗಿ ಮಾಡ ಲ್ಪಟ್ಟಿರುವುದರಿಂದ ದೇವತೆಗಳೊಡನೆ ಕೂಡಿ ಸೋಮಪಾನವನ್ನು ಮಾಡಲು ಅರ್ಹ ರಲ್ಲವೆಂದು ನಿಂದಿಸಲ್ಪಟ್ಟಿರುವರು. ಇವರಿಬ್ಬರೂ ಸೋಮಾರ್ಹರಲ್ಲ. ಇವರಿಗಾಗಿ ಸೋಮಗ್ರಹಣವನ್ನು ಮಾಡಬೇಡ. ॥೫೯॥

ಚ್ಯವನನು ಹೇಳಿದನು--ಅಹಲ್ಯೆಯಲ್ಲಿ ಜಾರತನವನ್ನು ಮಾಡಿದ ದೇವೇಂ ದ್ರನೇ, ಈಗ ವ್ಯರ್ಥವಾದ ನಿನ್ನ ಕೋಪವನ್ನು ಬಿಡು. ವೃತ್ರಾಸುರನನ್ನು ಕೊಂದು ಬ್ರಹ್ಮಹತ್ಯಾದೋಷವನ್ನು ಪಡೆದ ನೀನು ದೇವಪುತ್ರರಾದ ಅಶ್ವಿನೀದೇವತೆಗಳು ಸೋಮಪಾನಮಾಡಲು ಅರ್ಹರಲ್ಲವೆಂದು ಹೇಗೆ ಹೇಳುವೆ ? ॥೬೦॥

ಎಲೈ ಜನಮೇಜಯರಾಜನೇ, ಈ ರೀತಿಯಲ್ಲಿ ವಿವಾದ ಉಂಟಾಗುತ್ತಲು ಆ ಸಭೆಯಲ್ಲಿ ಯಾರೊಬ್ಬರೂ ಒಂದು ಮಾತನ್ನೂ ಆಡಲು ಸಮರ್ಥರಾಗಲಿಲ್ಲ !

ಗ್ರಹಂ ತಯೋರ್ಭಾರ್ಗವತಿಗ್ಮತೇಜಾಃ ।
ಸಂಗ್ರಾಹಯಾಮಾಸ ತಪೋಬಲೇನ ॥೬೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಷಷ್ಠೋಽಧ್ಯಾಯಃ.

---

ತೀಕ್ಷ್ಣವಾದ ತಪಸ್ಸಿನ ತೇಜಸ್ಸುಳ್ಳ ಭೃಗುಪುತ್ರನಾದ ಆ ಚ್ಯವನಮುನಿಯು ತನ್ನ ತಪೋಬಲದಿಂದ ಅಶ್ವಿನೀದೇವತೆಗಳಿಗಾಗಿ ಯಜ್ಞಪಾತ್ರೆಯಲ್ಲಿ ಸೋಮಗ್ರಹಣವನ್ನು ಮಾಡಿಸಿದನು. ॥೬೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

|| ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ದತ್ತೇ ಗ್ರಹೇ ತು ರಾಜೇಂದ್ರ ವಾಸವಃ ಕುಪಿತೋ ಭೃಶಂ ।**
**ಪ್ರೋವಾಚ ಚ್ಯವನಂ ತತ್ರ ದರ್ಶಯನ್ಬಲಮಾತ್ಮನಃ ॥೧॥**

**ಮಾ ಬ್ರಹ್ಮಬಂಧೋ ಮರ್ಯಾದಾಮಿಮಾಂ ತ್ವಂ ಕರ್ತುಮರ್ಹಸಿ ।**
**ವಧಿಷ್ಯಾಮಿ ದ್ವಿಷಂತಂ ತ್ವಾಂ ವಿಶ್ವರೂಪಮಿವಾಪರಂ ॥೨॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಕೇಳು. ಚ್ಯವನಮುನಿಯು ಸೋಮಗ್ರಹಣಮಾಡಿದ ಪಾತ್ರೆಯನ್ನು ಅಶ್ವಿನೀದೇವತೆಗಳಿಗೆ ಕೊಡುತ್ತಲು ದೇವೇಂದ್ರನು ಬಹಳವಾಗಿ ಕೋಪಿಸಿಕೊಂಡು ತನ್ನ ಬಲವನ್ನು ತೋರಿಸುತ್ತಾ ಚ್ಯವನನನ್ನು ಕುರಿತು ಹೇಳಿದನು. ॥೧॥

ನಿಕೃಷ್ಟಬ್ರಾಹ್ಮಣನೇ, ಈ ಮರ್ಯಾದೆಯನ್ನು ಎಂದರೆ ಇತರ ದೇವತೆಗಳೊಡನೆ ಸೋಮಪಾನವನ್ನು ಮಾಡುವ ಗೌರವವನ್ನು ಅಶ್ವಿನೀದೇವತೆಗಳಿಗೆ ನೀನು ಮಾಡಬಾರದು. ಹಾಗೆ ಮಾಡಿದರೆ ನನ್ನನ್ನು ದ್ವೇಷಿಸುತ್ತಿರುವ ನಿನ್ನನ್ನೂ, ತ್ವಷ್ಟೃಬ್ರಹ್ಮನ ಮಗನಾದ ವಿಶ್ವರೂಪನನ್ನು ಸಂಹರಿಸಿದಂತೆ, ಕೊಂದುಹಾಕುವೆನು. (ವಿಶ್ವರೂಪನ ಕಥೆಯು ಆರನೆಯ ಸ್ಕಂಧದ ಪ್ರಾರಂಭದಲ್ಲಿದೆ). ॥೨॥

|| ಚ್ಯವನ ಉವಾಚ ||

ಮಾಽವಮಂಸ್ಥಾ ಮಹಾತ್ಮಾನೌ ರೂಪದ್ರವಿಣವರ್ಚಸಾ ।
ಯೌ ಚಕ್ರತುರ್ಮಾಂ ಮಘವನ್ ವೃಂದಾರಕಮಿವಾಪರಂ ॥೩॥

ಋತೇ ತ್ವಾಂ ವಿಬುಧಾಶ್ಚಾಽನ್ಯೇ ಕಥಂ ವಾಽಽದದತೇ ಗ್ರಹಂ ।
ಅಶ್ವಿನಾವಪಿ ದೇವೇಂದ್ರ ದೇವೌ ವಿದ್ಧಿ ಪರಂತಪೌ ॥೪॥

|| ಇಂದ್ರ ಉವಾಚ ||

ಭಿಷಜೌ ನಾರ್ಹತಃ ಕಾಮಂ ಗ್ರಹಂ ಯಜ್ಞೇ ಕಥಂಚನ ।
ಯದಿ ದಿತ್ಸಸಿ ಮಂದಾತ್ಮನ್ ಶಿರಶ್ಛೇತ್ಸ್ಯಾಮಿ ಸಾಂಪ್ರತಂ ॥೫॥

|| ವ್ಯಾಸ ಉವಾಚ ||

ಅನಾದೃತ್ಯ ತು ತದ್ವಾಕ್ಯಂ ವಾಸವಸ್ಯ ಚ ಭಾರ್ಗವಃ ।
ಗ್ರಹಂ ತು ಗ್ರಾಹಯಾಮಾಸ ಭರ್ತ್ಸಯನ್ನಿವ ತಂ ಭೃಶಂ ॥೬॥

---

ಚ್ಯವನನು ಹೇಳಿದನು — ಎಲೈ ದೇವೇಂದ್ರನೇ, ರೂಪ, ಧನ, ತೇಜಸ್ಸು, ಪದವೀ ಇವುಗಳ ಮದದಿಂದ ನೀನು ಮಹಾತ್ಮರಾದ ಅಶ್ವಿನೀದೇವತೆಗಳನ್ನು ಅಪಮಾನಪಡಿಸಬೇಡ. ಅವರಿಬ್ಬರೂ ನನ್ನನ್ನು ಬೇರೊಬ್ಬ ದೇವತೆಯೋ ಎನ್ನುವಂತೆ ಮಾಡಿರುವರು ! ನಿನ್ನನ್ನು ಬಿಟ್ಟು ಮಿಕ್ಕ ದೇವತೆಗಳೂ ದೇವತೆಗಳಾಗಿರುವುದರಿಂದ ಯಾಗಗಳಲ್ಲಿ ಸೋಮಗ್ರಹಣ ಮಾಡಿದುದನ್ನು ಹೇಗೆ ತೆಗೆದುಕೊಳ್ಳುವರೋ ಹಾಗೆಯೇ, ಮಹಾತಪಸ್ವಿಗಳಾದ ಅಶ್ವಿನೀದೇವತೆಗಳನ್ನೂ ದೇವತೆಗಳೆಂದೇ ತಿಳಿ. ಅವರಿಗೂ ಸೋಮಪಾನದಲ್ಲಿ ಭಾಗವು ದೊರೆಯಲಿ. ||೩-೪||

ಇಂದ್ರನು ಹೇಳಿದನು— ಸೋಮಯಾಗದಲ್ಲಿ ವೈದ್ಯವೃತ್ತಿಯಲ್ಲಿರುವವರು ಎಂದಿಗೂ ಸೋಮರಸವನ್ನು ಇತರದೇವತೆಗಳೊಡನೆ ಗ್ರಹಣಮಾಡಲು ಯೋಗ್ಯರಲ್ಲ ! ಬುದ್ಧಿಹೀನನಾದ ನೀನು ಅವರಿಗೆ ಸೋಮರಸಪಾನವನ್ನು ಕೊಡಲು ಅಪೇಕ್ಷಿಸಿದರೆ, ಇದುವರೆಗೂ ಆಚರಣೆಯಲ್ಲಿರುವ ಧರ್ಮಕ್ಕೆ ವಿರುದ್ಧನಾಗಿ ವರ್ತಿಸುತ್ತಿರುವ ನಿನ್ನ ತಲೆಯನ್ನು ಈಗಲೇ ಕತ್ತರಿಸುವೆನು ! ||೫||

ವ್ಯಾಸಮುನಿಯು ಹೇಳಿದನು— ಭೃಗುಪುತ್ರನಾದ ಚ್ಯವನನಾದರೋ ದೇವೇಂದ್ರನ ಆ ಮಾತನ್ನು ಕೇಳದೆ ತಿರಸ್ಕರಿಸಿ, ಅವನನ್ನು ವಿಶೇಷವಾಗಿ ಹೆದರಿ

ಸೋಮಪಾತ್ರಂ ಯದಾ ತಾಭ್ಯಾಂ ಗೃಹೀತಂ ತು ಪಿಪಾಸಯಾ ।
ಸವಿೂಕ್ಷ್ಯ ಬಲಭಿದ್ದೇವ ಇದಂ ವಚನಮಬ್ರವೀತ್ ॥೭॥

ಆಭ್ಯಾಮುರ್ಥಾಯ ಸೋಮಂ ತ್ವಂ ಗ್ರಾಹಯಿಷ್ಯಸಿ ಚೇತ್ಸ್ವಯಂ ।
ವಜ್ರಂ ತು ಪ್ರಹರಿಷ್ಯಾಮಿ ವಿಶ್ವರೂಪಮಿವಾಽಪರಂ ॥೮॥

ವಾಸವೇನೈವಮುಕ್ತಸ್ತು ಭಾರ್ಗವಶ್ಚಾಽತಿಗರ್ವಿತಃ ।
ಜಗ್ರಾಹ ವಿಧಿವತ್ಸೋಮಮಶ್ವಿಭ್ಯಾಮತಿಮನ್ಯುಮಾನ್ ॥೯॥

ಇಂದ್ರೋಽಪಿ ಪ್ರಾಕ್ಷಿಪತ್ಕೋಪಾದ್ವಜ್ರಮಸ್ಮೈ ಸ್ವಮಾಯುಧಂ ।
ಪಶ್ಯತಾಂ ಸರ್ವದೇವಾನಾಂ ಸೂರ್ಯಕೋಟಿಸಮಪ್ರಭಂ ॥೧೦॥

ಪ್ರೇರಿತಂ ಚಾಶನಿಂ ಪ್ರೇಕ್ಷ್ಯ ಚ್ಯವನಸ್ತಪಸಾ ತತಃ ।
ಸ್ತಂಭಯಾಮಾಸ ವಜ್ರಂ ಸ ಶಕ್ರಸ್ಯಾಮಿತತೇಜಸಃ ॥೧೧॥

---

ಸುತ್ತಾ, ಅಶ್ವಿನೀದೇವತೆಗಳಿಗೆ ಸೋಮಗ್ರಹಣವನ್ನು ಮಾಡಿಸಿದನು. ಅವರಿಬ್ಬರೂ ಸೋಮಪಾನ ಮಾಡಬೇಕೆಂದು ಸೋಮಪಾತ್ರೆಯನ್ನು ಹಿಡಿದುಕೊಂಡುದನ್ನು ನೋಡಿ, ಬಲಾಸುರನನ್ನು ಕೊಂದ ದೇವೇಂದ್ರನು ಮುಂದೆ ಹೇಳುವ ಮಾತುಗಳನ್ನು ಆಡಿದನು. ॥೬-೭॥

ಇವರಿಬ್ಬರಿಂದ ನಿನಗಾದ ಪ್ರಯೋಜನಕ್ಕಾಗಿ ಇವರಿಗೆ ನೀನು ಸೋಮಗ್ರಹಣ ಮಾಡಿಸಿದರೆ, ಈ ಅಧರ್ಮಾಚರಣೆಯಿಂದ ಬೇರೋಬ್ಬ ವಿಶ್ವರೂಪನಂತೆ ನಿನ್ನನ್ನೂ ಭಾವಿಸಿ, ವಜ್ರಾಯುಧದಿಂದ ಹೊಡೆಯುವೆನು. ಎಂದನು. ॥೮॥

ಇಂದ್ರನು ಹೀಗೆ ಹೇಳುತ್ತಲು ಭೃಗುಪುತ್ರನು ಅತ್ಯಂತ ಗರ್ವದಿಂದ ಕೂಡಿ ದೇವೇಂದ್ರನ ಮೇಲೆ ಬಹಳವಾಗಿ ಕೋಪಗೊಂಡು ಅಶ್ವಿನೀದೇವತೆಗಳಿಗಾಗಿ ವಿಧಿಗನುಸಾರವಾಗಿ ಸೋಮಗ್ರಹಣವನ್ನು ಮಾಡಿಸಿದನು. ॥೯॥

ದೇವೇಂದ್ರನೂ ಕೂಡ ಕೋಪದಿಂದ ಕೂಡಿ ಸಕಲ ದೇವತೆಗಳೂ ನೋಡುತ್ತಿರಲು ಕೋಟಿ ಸೂರ್ಯರಂತೆ ಪ್ರಕಾಶಿಸುತ್ತಿರುವ ತನ್ನ ವಜ್ರಾಯುಧವನ್ನು ಚ್ಯವನಮುನಿಯ ಮೇಲೆ ಪ್ರಯೋಗಿಸಿದನು! ॥೧೦॥

ಆಮೇಲೆ ಚ್ಯವನನು ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದುದನ್ನು ಕಂಡು ಮಹಾಪರಾಕ್ರಮಶಾಲಿಯಾದ ಆ ದೇವೇಂದ್ರನ ವಜ್ರಾಯುಧವನ್ನು ತನ್ನ ತಪಸ್ಸಿನ ಶಕ್ತಿಯಿಂದ ಸ್ತಂಭಿಸಿದನು, ಎಂದರೆ ಚಲಿಸದಂತೆ ಮಾಡಿದನು! ॥೧೧॥

ಕೃತ್ಯಯಾ ಸ ಮಹಾಬಾಹುರಿಂದ್ರಂ ಹಂತು ಮಿಹೋದ್ಯತಃ ।
ಜುಹಾವಾಗ್ನೌ ಶೃತಂ ಹವ್ಯಂ ಮಂತ್ರೇಣ ಮುನಿಸತ್ತಮಃ ॥೧೨॥

ತತ್ರ ಕೃತ್ಯಾ ಸಮುತ್ಪನ್ನಾ ಚ್ಯವನಸ್ಯ ತಪೋಬಲಾತ್ ।
ಪ್ರಬಲಃ ಪುರುಷಃ ಕ್ರೂರೋ ಬೃಹತ್ಕಾಯೋ ಮಹಾಸುರಃ ॥೧೩॥

ಮದೋ ನಾಮ ಮಹಾಘೋರೋ ಭಯದಃ ಪ್ರಾಣಿನಾಮಿಹ ।
ಶರೀರೇ ಪರ್ವತಾಕಾರ ಸ್ತೀಕ್ಷ್ಣದಂಷ್ಟ್ರೋ ಭಯಾನಕಃ ॥೧೪॥

ಚತಸ್ರಶ್ಚಾಯತಾ ದಂಷ್ಟ್ರಾ ಯೋಜನಾನಾಂ ಶತಂ ಶತಂ ।
ಇತರೇ ತ್ವಸ್ಯ ದಶನಾ ಬಭೂವುರ್ದಶಯೋಜನಾಃ ॥೧೫॥

ಬಾಹೂ ಪರ್ವತಸಂಕಾಶಾವಾಯತೌ ಕ್ರೂರದರ್ಶನೌ ।
ಜಿಹ್ವಾ ತು ಭೀಷಣಾ ಕ್ರೂರಾ ಲೇಲಿಹಾನಾ ನಭಸ್ಸ್ಥಲಂ ॥೧೬॥

---

ತಪೋಬಲದಿಂದ ಮಹಾಪರಾಕ್ರಮಶಾಲಿಯಾದ ಆ ಚ್ಯವನನೂ ಕೃತ್ಯಾ ಪ್ರಯೋಗ (ಮಾರಣಹೋಮ) ವನ್ನು ಮಾಡಿ ದೇವೇಂದ್ರನನ್ನು ಕೊಲ್ಲವುದಕ್ಕಾಗಿ ಈ ಸಂದರ್ಭದಲ್ಲಿ ಪ್ರಯತ್ನ ಮಾಡಿದನು. ಅಗ್ನಿಯಲ್ಲಿಯೇ ಪಕ್ವಮಾಡಿದ ಹವಿಸ್ಸನ್ನು ಆ ಮುನಿಶ್ರೇಷ್ಠನು ಮಂತ್ರಪೂರ್ವಕವಾಗಿ ಹೋಮ ಮಾಡಿದನು. ||೧೨||

ಚ್ಯವನಮುನಿಯ ತಪೋಬಲದಿಂದ ಹುಟ್ಟಿದ ಕೃತ್ಯಾದೇವತೆಯು ಮಹಾ ಬಲವುಳ್ಳದಾಗಿಯೂ ಪುರುಷಾಕಾರವಾದ ದೊಡ್ಡ ಶರೀರದ ಭಯಂಕರವಾದ ರಾಕ್ಷಸನಾಯಿತು ! ಆ ರಾಕ್ಷಸನಿಗೆ ಮದನೆಂಬ ಹೆಸರಾಯಿತು. ಅವನ ಶರೀರವು ಪರ್ವತದಂತೆ ಮಿತಿಮೀರಿ ದೊಡ್ಡದಾಗಿತ್ತು. ಹಲ್ಲುಗಳು ಹರಿತವಾಗಿದ್ದುವು. ಸಮಸ್ತ ಪ್ರಾಣಿಗಳೂ ಅವನನ್ನು ನೋಡಿ ಭಯಪಡುತ್ತಿದ್ದುವು. ||೧೩-೧೪||

ಆ ರಾಕ್ಷಸನ ನಾಲ್ಕು ಕೋರೆ ಹಲ್ಲುಗಳು ಒಂದೊಂದು ನೂರು ಗಾವುದದುದ್ದ ವಿದ್ದಿತು ! ಮಿಕ್ಕ ಹಲ್ಲುಗಳು ಒಂದೊಂದೂ ಹತ್ತುಗಾವುದದುದ್ದವಿದ್ದಿತು ! ತೋಳು ಗಳು ಪರ್ವತಗಳ ಸಾಲಿನಂತೆ ಉದ್ದವಾಗಿ ದಪ್ಪವಾಗಿ ನೋಡುವುದಕ್ಕೆ ಭಯಂಕರ ವಾಗಿದ್ದುವು. ನಾಲಗೆಯು ಕ್ರೂರವಾಗಿಯೂ ಭಯಂಕರವಾಗಿಯೂ ಇದ್ದುದಲ್ಲದೆ ಆಕಾಶವನ್ನು ನೆಕ್ಕುವಂತಿದ್ದಿತು ! ||೧೫-೧೬||

ಗ್ರೀವಾ ತು ಗಿರಿಶೃಂಗಾಭಾ ಕಠಿನಾ ಭೀಷಣಾ ಭೃಶಂ ।
ನಖಾ ವ್ಯಾಘ್ರನಖಪ್ರಖ್ಯಾಃ ಕೇಶಾಶ್ಚಾತೀವ ಭೀಷಣಾಃ ॥೧೭॥

ಶರೀರಂ ಕಜ್ಜಲಾಭಂ ಚ ತಸ್ಯ ಚಾಸ್ಯಂ ಭಯಾನಕಂ ।
ನೇತ್ರೇ ದಾವಾನಲಪ್ರಖ್ಯೇ ಭೀಷಣೇಽತಿಭಯಾನಕೇ ॥೧೮॥

ಹನುರೇಕಾ ಸ್ಥಿತಾ ತಸ್ಯ ಭೂಮಾವೇಕಂ ದಿವಂ ಗತಾ ।
ಏವಂವಿಧಃ ಸಮುತ್ಪನ್ನೋ ಮದೋ ನಾಮ ಬೃಹತ್ತನುಃ ॥೧೯॥

ತಂ ವಿಲೋಕ್ಯ ಸುರಾಃ ಸರ್ವೇ ಭಯಮಾಜಗ್ಮುರಂಹಸಾ ।
ಇಂದ್ರೋಽಪಿ ಭಯಸಂತ್ರಸ್ತೋ ಯುದ್ಧಾಯ ನ ಮನೋ ದಧೇ॥೨೦॥

ದೈತ್ಯೋಽಪಿ ವದನೇ ಕಾಮಂ ವಜ್ರಮಾದಾಯ ಸಂಸ್ಥಿತಃ ।
ವ್ಯಾಪ್ತಂ ನಭೋ ಘೋರದೃಷ್ಟಿ ರ್ಗ್ರಸನ್ನಿವ ಜಗತ್ತ್ರಯಂ ॥೨೧॥

ಸ ಭಕ್ಷಯಿಷ್ಯನ್ಸಂಕ್ರುದ್ಧಃ ಶತಕ್ರತುಮುಪಾದ್ರವತ್ ।
ಚುಕ್ರುಶುಶ್ಚ ಸುರಾಃ ಸರ್ವೇ ಹಾ ಹತಾಃ ಸ್ಮೇತಿ ಸಂಸ್ಥಿತಾಃ ॥೨೨॥

---

ಕುತ್ತಿಗೆಯು ಪರ್ವತಶಿಖರದಂತೆ ಒರಟಾಗಿ ಭಯಂಕರವಾಗಿದ್ದಿತು. ಉಗುರುಗಳು ಹುಲಿಯ ಉಗುರುಗಳಂತೆಯೂ, ಕೂದಲುಗಳು ಬಹಳ ಭಯಂಕರವಾಗಿಯೂ, ಶರೀರವು ಕಾಡಿಗೆಯ ಬಣ್ಣದಂತೆ ಕಪ್ಪಾಗಿಯೂ, ಕಣ್ಣುಗಳು ಕಾಡುಗಿಚ್ಚಿನಂತೆಯೂ, ಒಂದು ದವಡೆಯು ಆಕಾಶಕ್ಕೂ ಮತ್ತೊಂದು ಭೂಮಿಗೂ ಸೇರಿಕೊಂಡು, ಬಾಯಿಯು ಭಯಂಕರವಾಗಿಯೂ ಇದ್ದಿತು! ಇಂತಹ ದೊಡ್ಡ ಶರೀರದ ಮದನೆಂಬ ರಾಕ್ಷಸನು ಹುಟ್ಟಿದನು. ॥೧೭-೧೮-೧೯॥

ಆ ರಾಕ್ಷಸವನ್ನು ನೋಡಿ ಸಮಸ್ತ ದೇವತೆಗಳೂ ಬೇಗನೆ ಭಯವನ್ನು ಹೊಂದಿದರು. ಇಂದ್ರನೂ ಭಯದಿಂದ ಯುದ್ಧಮಾಡಲು ಕೂಡಲೇ ಮನಸ್ಸನ್ನು ಮಾಡಲಿಲ್ಲ. ಆ ಮದನೆಂಬ ದೈತ್ಯ ಪೆಡಂಭೂತನು ಇಂದ್ರನ ವಜ್ರಾಯುಧವನ್ನು ಬಾಯಿಯಲ್ಲಿ ಕಚ್ಚಿಕೊಂಡು ನಿಂತನು! ಮತ್ತು ಮೂರು ಲೋಕಗಳನ್ನೂ ನುಂಗುವಂತೆ ಭಯಂಕರವಾಗಿ ಆಕಾಶದ ಕಡೆಗೆ ನೋಡುತ್ತಿದ್ದನು! ॥೨೦-೨೧॥

ಆ ರಾಕ್ಷಸನು ಕೋಪದಿಂದ ದೇವೇಂದ್ರನನ್ನು ನುಂಗಬೇಕೆಂದು ಓಡಿಬಂದನು. ಅಲ್ಲಿದ್ದ ದೇವತೆಗಳೆಲ್ಲರೂ ಅಳುತ್ತಿದ್ದರು. ಇಂದ್ರನ ತೋಳುಗಳು

**ಇಂದ್ರಃ ಸ್ತಂಭಿತಬಾಹುಸ್ತು ಮುಮುಕ್ಷುರ್ವಜ್ರಮಂತಿಕಾತ್ ।**
**ನ ಶಶಾಕ ಪವಿಂ ತಸ್ಮಿನ್ಪ್ರಹರ್ತುಂ ಪಾಕಶಾಸನಃ ॥೨೩॥**

**ವಜ್ರಹಸ್ತಃ ಸುರೇಶಾನಸ್ತಂ ವೀಕ್ಷ್ಯ ಕಾಲಸನ್ನಿಭಂ ।**
**ಸಸ್ಮಾರ ಮನಸಾ ತತ್ರ ಗುರುಂ ಸಮಯಕೋವಿದಂ ॥೨೪॥**

**ಸ್ಮರಣಾದಾಜಗಾಮಾಶು ಬೃಹಸ್ಪತಿರುದಾರಧೀಃ ।**
**ಗುರುಸ್ತತ್ಸಮಯಂ ದೃಷ್ಟ್ವಾ ವಿಪತ್ತಿಸದೃಶಂ ಮಹತ್ ॥೨೫॥**

**ವಿಚಾರ್ಯ ಮನಸಾ ಕೃತ್ಯಂ ತಮುವಾಚ ಶಚೀಪತಿಂ ।**
**ದುಸ್ಸಾಧ್ಯೋಽಯಂ ಮಹಾಮಂತ್ರೈಃ ಸ್ತ್ವಯಂ ವಜ್ರೇಣ ವಾಸವ ॥೨೬॥**

**ಅಸುರೋ ಮದಸಂಜ್ಞಸ್ತು ಯಜ್ಞಕುಂಡಾತ್ಸಮುತ್ಥಿತಃ ।**
**ತಪೋಬಲಮೃಷೇಃ ಸಮ್ಯಕ್ ಚ್ಯವನಸ್ಯ ಮಹಾಬಲಃ ॥೨೭॥**
**ಅನಿವಾರ್ಯೋಽ ಹ್ಯಯಂ ಶತ್ರುಸ್ತ್ವಯಾ ದೇವೈಸ್ತಥಾ ಮಯಾ ।**

---

ಅಲುಗಾಡಲಾರದೆ ಇದ್ದುದರಿಂದ ಆ ರಾಕ್ಷಸನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಅವನಿಗೆ ಸಾಧ್ಯವಾಗಲಿಲ್ಲ. ॥೨೨-೨೩॥

ಯಮನಿಗೆ ಸಮಾನನಾದ ಆ ರಾಕ್ಷಸನನ್ನು ನೋಡಿ ವಜ್ರಾಯುಧವನ್ನು ಹಿಡಿದ ದೇವೇಂದ್ರನು ಸಮಯಕ್ಕೆ ತಕ್ಕ ಬುದ್ಧಿಯನ್ನು ಹೇಳುವ ಬೃಹಸ್ಪತಿಯನ್ನು ಮನಸ್ಸಿನಲ್ಲಿ ಸ್ಮರಿಸಿದನು. ॥೨೪॥

ದೇವೇಂದ್ರನು ಸ್ಮರಿಸುತ್ತಲು ಧಾರಾಳವಾದ ಮನಸ್ಸುಳ್ಳ ಬೃಹಸ್ಪತಿಯು ಅಲ್ಲಿಗೆ ಬಂದು ದೊಡ್ಡ ವಿಪತ್ತನ್ನುಂಟುಮಾಡುವ ಆ ಸಮಯವನ್ನು ಕಂಡು ಮನಸ್ಸಿನಲ್ಲಿ ಮಾಡಬೇಕಾದ ಕೆಲಸವೇನೆಂದು ಯೋಚಿಸಿ ದೇವೇಂದ್ರನನ್ನು ಕುರಿತು ಹೇಳಿದನು. ॥೨೫॥

ಎಲೈ ದೇವೇಂದ್ರನೇ, ಯಜ್ಞಕುಂಡದಲ್ಲಿ ಹುಟ್ಟಿದ ಮದನೆಂಬ ಈ ಅಸುರನನ್ನು ಮಹಾಮಂತ್ರಗಳಿಂದಲಾಗಲಿ ವಜ್ರಾಯುಧದಿಂದಲಾಗಲಿ ನಾಶಮಾಡಲು ಸಾಧ್ಯವಿಲ್ಲ. ಚ್ಯವನಮುನಿಯ ತಪಸ್ಸಿನ ಮಹಿಮೆಯಿಂದ ಇವನು ಮಹಾಬಲಶಾಲಿಯಾಗಿರುವನು. ನಿನಗಾಗಲಿ ದೇವತೆಗಳಿಗಾಗಲಿ ಈ ಶತ್ರುವನ್ನು ನಾಶಮಾಡಲಾಗುವುದಿಲ್ಲವು! ॥೨೬-೨೭॥

ಶರಣಂ ಯಾಹಿ ದೇವೇಶ ಚ್ಯವನಸ್ಯ ಮಹಾತ್ಮನಃ ॥೨೮॥

ಸ ನಿವಾರಯಿತಾ ನೂನಂ ಕೃತ್ಯಾಮಾತ್ಮಕೃತಾಂ ಕಿಲ ।
ನ ನಿವಾರಯಿತುಂ ಶಕ್ತಾಃ ಶಕ್ತಿಭಕ್ತರುಷಂ ಕ್ವಚಿತ್ ॥೨೯॥

॥ ವ್ಯಾಸ ಉವಾಚ ॥

ಇತ್ಯುಕ್ತೋ ಗುರುಣಾ ಶಕ್ರಸ್ತದಾಗಚ್ಛನ್ಮುನಿಂ ಪ್ರತಿ ।
ಪ್ರಣಮ್ಯ ಶಿರಸಾ ನಮ್ರಸ್ತಮುವಾಚ ಭಯಾನ್ವಿತಃ ॥೩೦॥

ಕ್ಷಮಸ್ವ ಮುನಿಶಾರ್ದೂಲ ಶಮಯಾಸುರಮುದ್ಯತಂ ।
ಪ್ರಸನ್ನೋ ಭವ ಸರ್ವಜ್ಞ ವಚನಂ ತೇ ಕರೋಮ್ಯಹಂ ॥೩೧॥

ಸೋಮಾರ್ಹಾವಶ್ವಿನಾವೇತಾವದ್ಯಪ್ರಭೃತಿ ಭಾರ್ಗವ ।
ಭವಿಷ್ಯತಃ ಸತ್ಯಮೇತದ್ವಚೋ ವಿಪ್ರ ಪ್ರಸೀದ ಮೇ ॥೩೨॥

---

ದೇವರಾಜನೇ, ಮಹಾತ್ಮನಾದ ಚ್ಯವನನನ್ನೇ ಶರಣುಹೊಂದು. ಅವನು ತಾನೇ ಮಾಡಿದ ಕೃತ್ಯಾದೇವತೆಯನ್ನು ತಾನೇ ನಿವಾರಣೆ ಮಾಡಲು ಶಕ್ತನಾಗಿರುವನು. ಶಕ್ತಿದೇವಿಯ ಭಕ್ತರ ಕೋಪವನ್ನು ಇತರರು ಯಾರಾದರೂ ಯಾವ ಸಂದರ್ಭದಲ್ಲಿಯೂ ನಿವಾರಿಸಲು ಶಕ್ತರಾಗುವುದಿಲ್ಲ. ಎಂದನು. ॥೨೮-೨೯॥

ಬೃಹಸ್ಪತಿಯು ಹೀಗೆ ಹೇಳುತ್ತಲು ದೇವೇಂದ್ರನು ಚ್ಯವನಮುನಿಯ ಸಮೀಪಕ್ಕೆ ಹೋಗಿ ಭಯಭಕ್ತಿಗಳಿಂದ ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹೀಗೆ ಹೇಳಿದನು. ॥೩೦॥

ಓ ಮುನಿಶ್ರೇಷ್ಠನೇ, ನನ್ನನ್ನು ಕ್ಷಮಿಸು, ಕೊಲ್ಲುವುದಕ್ಕೆ ಬರುತ್ತಿರುವ ಈ ರಾಕ್ಷಸನ ನಿವಾರಣೆಯನ್ನು ಮಾಡು. ಸರ್ವಜ್ಞನಾದ ನೀನು ಪ್ರಸನ್ನನಾಗು. ನಿನ್ನ ಮಾತನ್ನು ನಾನು ನಡೆಯಿಸುವೆನು. ಈ ದಿನ ಮೊದಲುಗೊಂಡು ಈ ಅಶ್ವಿನೀ ದೇವತೆಗಳು ಸೋಮಪಾನ ಮಾಡಲು ಯೋಗ್ಯರಾಗಲಿ! ನನ್ನ ಮಾತು ಸತ್ಯವಾದುದು. ಓ ಬ್ರಾಹ್ಮಣನೇ, ನನಗೆ ನೀನು ಪ್ರಸನ್ನನಾಗು. ॥೩೧-೩೨॥

ಮಿಥ್ಯಾ ತೇ ನೋದ್ಯಮೋ ಹ್ಯೇಷ ಭವತ್ವೇವ ತಪೋಧನ ।
ಜಾನೇ ತ್ವಮಪಿ ಧರ್ಮಜ್ಞ ಮಿಥ್ಯಾ ನೈವ ಕರಿಷ್ಯಸಿ ॥೩೩॥

ಸೋಮಪಾವಶ್ವಿನಾವೇತೌ ತ್ವತ್ಕೃತೌ ಚ ಸದೈವ ಹಿ ।
ಭವಿಷ್ಯತಶ್ಚ ಶರ್ಯಾತೇಃ ಕೀರ್ತಿಸ್ತು ವಿಪುಲಾ ಭವೇತ್ ॥೩೪॥

ಮಯಾ ಯದ್ಧಿ ಕೃತಂ ಕರ್ಮ ಸರ್ವಥಾ ಮುನಿಸತ್ತಮ ।
ಪರೀಕ್ಷಾರ್ಥಂ ತು ವಿಜ್ಞೇಯಂ ತವವೀರ್ಯಪ್ರಕಾಶನಂ ॥೩೫॥

ಪ್ರಸಾದಂ ಕುರು ಮೇ ಬ್ರಹ್ಮನ್ ಮದಂ ಸಂಹರ ಚೋತ್ಥಿತಂ ।
ಕಲ್ಯಾಣಂ ಸರ್ವದೇವಾನಾಂ ತಥಾ ಭೂಯೋ ವಿಧೀಯತಾಂ ॥೩೬॥

ಏವಮುಕ್ತಸ್ತು ಶಕ್ರೇಣ ಚ್ಯವನಃ ಪರಮಾರ್ಥವಿತ್ ।
ಸಂಜಹಾರ ತತಃ ಕೋಪಂ ಸಮುತ್ಪನ್ನಂ ವಿರೋಧಜಂ ॥೩೭॥

---

ತಪಸ್ಸೇ ಧನವಾಗಿರುವ ಚ್ಯವನಮಹಾಮುನಿಯೇ, ನಿನ್ನ ಪ್ರಯತ್ನವು ವ್ಯರ್ಥವಾಗದು. ಧರ್ಮವನ್ನು ಬಲ್ಲ ನೀನು ಭ್ರಾಂತರಾದವರ ಕೆಲಸವನ್ನು ಮಾಡತಕ್ಕವನಲ್ಲವೆಂದು ನಾನು ತಿಳಿದಿರುವೆನು. ನೀನು ಈಗ ಸೋಮಪಾನಮಾಡಿಸಿದ ಈ ಅಶ್ವಿನೀದೇವತೆಗಳು ಯಾವಾಗಲೂ ಸೋಮಪಾನಕ್ಕೆ ಯೋಗ್ಯರಾಗಿರುವರು. ಶರ್ಯಾತಿರಾಜನ ಯಶಸ್ಸೂ ವಿಸ್ತರಿಸುವುದು. ॥೩೩-೩೪॥

ಓ ಮುನಿಶ್ರೇಷ್ಠನೇ, ನಾನು ಮಾಡಿದ ಈ ಕೆಲಸವು ನಿನ್ನ ಮಹಿಮೆಯನ್ನು ಪ್ರಕಾಶಪಡಿಸುವ ಪರೀಕ್ಷಾರೂಪವಾದುದೆಂದು ತಿಳಿಯಬೇಕು. ಓ ಬ್ರಹ್ಮಜ್ಞಾನಿಯಾದ ಮುನಿಯೇ, ಮದನೆಂಬ ಈ ರಾಕ್ಷಸನ ನಿವಾರಣೆಯನ್ನು ಮಾಡು. ನನ್ನ ಮೇಲೆ ಅನುಗ್ರಹವಿಟ್ಟು ಸಮಸ್ತ ದೇವತೆಗಳಿಗೂ ಮೊದಲಿನಂತೆ ಮತ್ತೆ ಮಂಗಳವನ್ನುಂಟುಮಾಡು. ॥೩೫-೩೬॥

ಹೀಗೆ ದೇವೇಂದ್ರನು ಹೇಳುತ್ತಲು, ಪರತತ್ವದಸ್ವರೂಪವನ್ನು ತಿಳಿದ ಚ್ಯವನನು ವಿರೋಧದಿಂದುಂಟಾದ ಕೋಪವನ್ನು ಅಡಗಿಸಿಬಿಟ್ಟನು ! ॥೩೭॥

ಆಮೇಲೆ ಭೃಗುಪುತ್ರನು ಭಯಪಡುತ್ತಿರುವ ದೇವೇಂದ್ರನನ್ನು ಸಮಾಧಾನಪಡಿಸಿ, ಆ ಮದನನ್ನು ವಿಭಾಗಮಾಡಿ, ಸ್ತ್ರೀ, ಮದ್ಯಪಾನ, ಜೂಜು, ಬೇಟೆ, ಇವುಗ

ದೇವಮಾಶ್ವಾಸ್ಯ ಸಂವಿಗ್ನಂ ಭಾರ್ಗವಸ್ತು ಮುದಂ ತತಃ ।
ವ್ಯಭಜತ್ತ್ರಿಷು ಪಾನೇಷು ದ್ಯೂತೇಷು ಮೃಗಯಾಸು ಚ ॥೩೮॥

ಮುದಂ ವಿಭಜ್ಯ ದೇವೇಂದ್ರಮಾಶ್ವಾಸ್ಯ ಚಕಿತಂ ಭಿಯಾ ।
ಸಂಸ್ಥಾಪ್ಯ ಚ ಸುರಾನ್ಸರ್ವಾನ್ಮಖಂ ತಸ್ಯ ನ್ಯವರ್ತಯತ್ ॥೩೯॥

ತತಸ್ತು ಸಂಸ್ಕೃತಂ ಸೋಮಂ ವಾಸವಾಯ ಮಹಾತ್ಮನೇ ।
ಅಶ್ವಿಭ್ಯಾಂ ಸರ್ವಧರ್ಮಾತ್ಮಾ ಪಾಯಯಾಮಾಸ ಭಾರ್ಗವಃ ॥೪೦॥

ಏವಂ ತೌ ಚ್ಯವನೇನಾರ್ಯಾವಶ್ವಿನೌ ರವಿಪುತ್ರಕೌ।
ವಿಹಿತೌ ಸೋಮಪೌ ರಾಜನ್ಸರ್ವಥಾ ತಪಸೋ ಬಲಾತ್ ॥೪೧॥

ಸರಸ್ತದಪಿ ವಿಖ್ಯಾತಂ ಜಾತಂ ಯೂಪವಿಮಂಡಿತಂ।
ಆಶ್ರಮಸ್ತು ಮುನೇಃ ಸಮ್ಯಕ್ಪೃಥಿವ್ಯಾಂ ವಿಶ್ರುತೋಽಭವತ್ ॥೪೨॥

---

ಳಲ್ಲಿರುವಂತೆ ಹಂಚಿ, ದೇವತೆಗಳೆಲ್ಲರನ್ನೂ ಸ್ಥಿರಚಿತ್ತರನ್ನಾಗಿ ಮಾಡಿ, ಆ ಯಜ್ಞವನ್ನು ಪೂರ್ಣವಾಡಿದನು. ॥೩೮-೩೯॥

ಆಮೇಲೆ ಶಾಸ್ತ್ರೋಕ್ತವಾದ ರೀತಿಯಲ್ಲಿ ಸಂಸ್ಕಾರಮಾಡಿ ಪರಿಶುದ್ಧವಾದ ಸೋಮರಸವನ್ನು ಧರ್ಮಾತ್ಮನಾದ ಚ್ಯವನನು ಮಹಾತ್ಮನಾದ ದೇವೇಂದ್ರನಿಗೂ ಅಶ್ವಿನೀದೇವತೆಗಳಿಗೂ ಪಾನಮಾಡಿಸಿದನು. ॥೪೦॥

ಎಲೈ ಜನಮೇಜಯರಾಜನೇ, ಚ್ಯವನಮಹಾಮುನಿಯು ತನ್ನ ತಪಸ್ಸಿನ ಮಹಿಮೆಯಿಂದ ಸೂರ್ಯಪುತ್ರರಾದ ಅಶ್ವಿನೀದೇವತೆಗಳಿಗೆ ಈ ರೀತಿಯಲ್ಲಿ ಸೋಮಪಾನಮಾಡುವ ಯೋಗ್ಯತೆಯನ್ನುಂಟುಮಾಡಿದನು. ॥೪೧॥

ಆ ಚ್ಯವನನು ಸ್ನಾನಮಾಡಿ ಯೌವನವನ್ನು ಪಡೆದ ಸರೋವರವು ಪ್ರಸಿದ್ಧಿಯನ್ನು ಹೊಂದಿತು. ಆ ಮುನಿಯ ಆಶ್ರಮವು ಅನೇಕ ಯಜ್ಞಗಳನ್ನು ಮಾಡಿದ ಗುರುತಿಗಾಗಿ ಯೂಪಸ್ತಂಭಗಳಿಂದ ಅಲಂಕಾರವಾಗಿ ಭೂಮಿಯಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ॥೪೨॥

ಶರ್ಯಾತಿರಪಿ ಸಂತುಷ್ಟೋ ಹ್ಯಭವತ್ತೇನ ಕರ್ಮಣಾ ।
ಯಜ್ಞಂ ಸಮಾಪ್ಯ ನಗರೇ ಜಗಾಮ ಸಚಿವೈರ್ವೃತಃ ॥೪೩॥

ರಾಜ್ಯಂ ಚಕಾರ ಧರ್ಮಜ್ಞೋ ಮನುಪುತ್ರಃ ಪ್ರತಾಪವಾನ್ ।
ಆನರ್ತಸ್ತಸ್ಯ ಪುತ್ರೋಽಭೂದಾನರ್ತಾದ್ರೇವತೋಽಭವತ್ ॥೪೪॥

ಸೋಽಂತಃಸಮುದ್ರೇ ನಗರೀಂ ವಿನಿರ್ಮಾಯ ಕುಶಸ್ಥಲೀಂ ।
ಆಸ್ಥಿತೋಽಭುಂಜ್ತ ವಿಷಯಾನಾನರ್ತಾದೀನರಿಂದಮಃ ॥೪೫॥

ತಸ್ಯ ಪುತ್ರಶತಂ ಜಜ್ಞೇ ಕಕುದ್ಮಿಜ್ಯೇಷ್ಠಮುತ್ತಮಂ ।
ಪುತ್ರೀ ಚ ರೇವತೀ ನಾಮ್ನಾ ಸುಂದರೀ ಶುಭಲಕ್ಷಣಾ ॥೪೬॥

ವರಯೋಗ್ಯಾ ಯದಾ ಜಾತಾ ತದಾ ರಾಜಾ ಚ ರೇವತಃ ।
ಚಿಂತಯಾಮಾಸ ರಾಜೇಂದ್ರೋ ರಾಜಪುತ್ರಾನ್ಕುಲೋದ್ಭವಾನ್ ॥೪೭॥

---

ಧರ್ಮವನ್ನು ಬಲ್ಲವನೂ, ಮನುವಿನ ಮಗನೂ ಆದ ಆ ಶರ್ಯಾತಿರಾಜನೂ ಯಜ್ಞಾದಿಕರ್ಮಗಳು ಯಶಸ್ವಿಯಾಗಿ ನೆರವೇರಿದುದರಿಂದ ಸಂತೋಷವನ್ನು ಹೊಂದಿ ಯಜ್ಞಕರ್ಮವನ್ನು ಪೂರೈಸಿ, ಮಂತ್ರಿಗಳೊಡನೆ ತನ್ನ ರಾಜಧಾನಿಯನ್ನು ಪ್ರವೇಶಿಸಿ, ಧರ್ಮಮಾರ್ಗದಲ್ಲಿ ರಾಜ್ಯಭಾರವನ್ನು ನಡೆಯಿಸುತ್ತಿದ್ದನು. ||೪೩||

ಆ ಶರ್ಯಾತಿರಾಜನಿಗೆ ಆ ಆನರ್ತನೆಂಬ ಮಗನೂ, ಆ ಆನರ್ತನಿಗೆ ರೇವತನೆಂಬ ಮಗನೂ ಹುಟ್ಟಿದರು. ಆ ರೇವತನು ಸಮುದ್ರದೊಳಗೆ ಕುಶಿಸ್ಥಲೀ ಎಂಬ ಪಟ್ಟಣವನ್ನು ನಿರ್ಮಿಸಿ ಅಲ್ಲಿ ವಾಸಮಾಡುತ್ತಾ ಆನರ್ತ ಮುಂತಾದ ದೇಶಗಳನ್ನು ಆಳುತ್ತಾ ಎಲ್ಲರೊಡನೆ ತಾನೂ ಸುಖವನ್ನು ಅನುಭವಿಸುತ್ತಿದ್ದನು. ||೪೪-೪೫||

ಆ ರೇವತನಿಗೆ ನೂರು ಜನ ಮಕ್ಕಳಾದರು. ಅವರಲ್ಲಿ ಮೊದಲನೆಯವನು ಕಕುದ್ಮಿ ಎಂಬುವನು. ಅಲ್ಲದೆ ಸುಂದರಿಯೂ ಲಕ್ಷಣವತಿಯೂ ಆದ ರೇವತಿ ಎಂಬ ಮಗಳೂ ಆದಳು. ||೪೬||

ರೇವತಿಗೆ ಮದುವೆ ಮಾಡುವ ವಯಸ್ಸು ಬರುತ್ತಲು, ರೇವತರಾಜನು ಸತ್ಕುಲಪ್ರಸೂತರಾದ ರಾಜಪುತ್ರರಲ್ಲಿ ಆ ರೇವತಿಗೆ ತಕ್ಕವರಾದವರು ಯಾರು ಇರುವರೆಂದು ಯೋಚಿಸಿದನು. ||೪೭||

ರೈವತಂ ನಾಮ ಚ ಗಿರಿಮಾಶ್ರಿತಃ ಪೃಥಿವೀಪತಿಃ ।
ಚಕಾರ ರಾಜ್ಯಂ ಬಲವಾನಾನರ್ತೇಷು ನರಾಧಿಪಃ ॥೪೮॥

ವಿಚಿಂತ್ಯ ಮನಸಾ ರಾಜಾ ಕಸ್ಮೈ ದೇಯಾ ಮಯಾ ಸುತಾ ।
ಗತ್ವಾ ಪೃಚ್ಛಾಮಿ ಬ್ರಹ್ಮಾಣಂ ಸರ್ವಜ್ಞಂ ಸುರಪೂಜಿತಂ ॥೪೯॥

ಇತಿ ಸಂಚಿಂತ್ಯ ಭೂಪಾಲಃ ಸುತಾಮಾದಾಯ ರೇವತೀಂ।
ಬ್ರಹ್ಮಲೋಕಂ ಜಗಾಮಾಶು ಪ್ರಷ್ಟುಕಾಮಃ ಪಿತಾಮಹಂ ॥೫೦॥

ಯತ್ರ ದೇವಾಶ್ಚ ಯಜ್ಞಾಶ್ಚ ಛಂದಾಂಸಿ ಪರ್ವತಾಸ್ತಥಾ ।
ಅಬ್ಧಯಃ ಸರಿತಶ್ಚಾಽಪಿ ದಿವ್ಯರೂಪಧರಾಃ ಸ್ಥಿತಾಃ ॥೫೦॥

ಋಷಯಃ ಸಿದ್ಧಗಂಧರ್ವಾಃ ಪನ್ನಗಾಶ್ಚಾರಣಾಸ್ತಥಾ ।
ತಸ್ಥುಃ ಪ್ರಾಂಜಲಯಃ ಸರ್ವೇ ಸ್ತುವಂತಶ್ಚ ಪುರಾತನಾಃ ॥೫೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಸಪ್ತಮೋಽಧ್ಯಾಯಃ.

---

ಆ ರಾಜನು ರೈವತವೆಂಬ ಪರ್ವತವನ್ನಾಶ್ರಯಿಸಿ ಬಹಳ ಬಲಿಷ್ಠನಾಗಿ ಆನರ್ತ ದೇಶವನ್ನು ಕಾಪಾಡುತ್ತಿದ್ದನು. ॥೪೮॥

ಆ ರೇವತರಾಜನು, ನಾನು ಯಾರಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡಲಿ, ಎಂದು ಮನಸ್ಸಿನಲ್ಲಿ ಯೋಚಿಸಿ, ಸರ್ವಜ್ಞನೂ ದೇವತೆಗಳ ಪೂಜೆಯನ್ನು ಸ್ವೀಕರಿಸುವನೂ ಆದ ಬ್ರಹ್ಮನ ಸಮೀಪಕ್ಕೆ ಹೋಗಿ, ಆ ಬ್ರಹ್ಮನನ್ನೇ ಕೇಳಿ ತಿಳಿಯುವೆನೆಂದು ನಿಶ್ಚಯಿಸಿ, ಮಗಳಾದ ರೇವತಿಯನ್ನು ಕರೆದುಕೊಂಡು, ಬೇಗನೆ ಬ್ರಹ್ಮಲೋಕಕ್ಕೆ ಹೋದನು. ॥೫೦॥

ಆ ಬ್ರಹ್ಮನ ಸಭೆಯಲ್ಲಿ ದೇವತೆಗಳೂ, ಯಜ್ಞಗಳೂ, ವೇದಗಳೂ, ಪರ್ವತಗಳೂ, ಸಮುದ್ರಗಳೂ, ನದಿಗಳೂ ಇವರ ಅಭಿಮಾನದೇವತೆಗಳೂ ದಿವ್ಯವಾದ ಆಕಾರವನ್ನು ಹೊಂದಿ ಇದ್ದರು. ಋಷಿಗಳೂ ಸಿದ್ಧರೂ ಗಂಧರ್ವರೂ ಪನ್ನಗರೂ ಚಾರಣರೂ ಕೈಮುಗಿದುಕೊಂಡು ಆ ಬ್ರಹ್ಮದೇವನನ್ನು ಸ್ತೋತ್ರಮಾಡುತ್ತಿದ್ದರು.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಸಂಶಯೋಽಯಂ ಮಹಾನ್ ಬ್ರಹ್ಮನ್ವರ್ತತೇ ಮಮ ಮಾನಸೇ ।**
**ಬ್ರಹ್ಮಲೋಕಂ ಗತೋ ರಾಜಾ ರೇವತೀಸಂಯುತಃ ಸ್ವಯಂ ||೧||**

**ಮಯಾ ಪೂರ್ವಂ ಶ್ರುತಂ ಕೃತ್ಸ್ನಂ ಬ್ರಾಹ್ಮಣೇಭ್ಯಃ ಕಥಾಂತರೇ ।**
**ಬ್ರಾಹ್ಮಣೋ ಬ್ರಹ್ಮವಿಚ್ಛಾಂತೋ ಬ್ರಹ್ಮಲೋಕಮವಾಪ್ನುಯಾತ್ ||೨||**

**ರಾಜಾ ಕಥಂ ಗತಸ್ತತ್ರ ರೇವತೀಸಂಯುತಃ ಸ್ವಯಂ ।**
**ಸತ್ಯಲೋಕೇಽತಿದುಷ್ಪ್ರಾಪೇ ಭೂರ್ಲೋಕಾದಿತಿ ಸಂಶಯಃ ||೩||**

---

ಜನಮೇಜಯರಾಜನು ಹೇಳಿದನು—ಬ್ರಹ್ಮಜ್ಞಾನಿಯಾದ ವ್ಯಾಸಮುನಿಯೇ, ರೇವತರಾಜನು ತನ್ನ ಮಗಳಾದ ರೇವತಿಯೊಡನೆ ಬ್ರಹ್ಮಲೋಕಕ್ಕೆ ಹೋದನು ಎಂಬ ವಿಷಯದಲ್ಲಿ ನನಗೆ ಸಂದೇಹವು ಬಂದಿರುವುದು. ಶಾಂತನೂ ಬ್ರಹ್ಮಜ್ಞಾನಿಯೂ ಆದ ಬ್ರಾಹ್ಮಣನು ಬ್ರಹ್ಮಲೋಕಕ್ಕೆ ಹೋಗುವನೆಂದು ಹಿಂದೆ ಅನೇಕ ಕಥೆಗಳನ್ನು ಹೇಳುವಾಗ ಬ್ರಾಹ್ಮಣರು ನನಗೆ ಹೇಳಿದ್ದರು. ರಾಜನು ತನಗೆ ಪ್ರವೇಶಿಸಲಸಾಧ್ಯವಾದ ಬ್ರಹ್ಮಲೋಕಕ್ಕೆ ಮಗಳಾದ ರೇವತಿಯೊಡನೆ ಭೂಲೋಕದಿಂದ ಹೇಗೆ ಹೋದನು? ಇದೇ ನನ್ನ ಸಂದೇಹವು. ||೧-೨-೩||

ಮೃತಃ ಸ್ವರ್ಗಮವಾಪ್ನೋತಿ ಸರ್ವಶಾಸ್ತ್ರೇಷು ನಿರ್ಣಯಃ ।
ಮಾನುಷೇಣ ತು ದೇಹೇನ ಬ್ರಹ್ಮಲೋಕೇ ಗತಿಃ ಕಥಂ ।
ಸ್ವರ್ಗಾತ್ಪುನಃ ಕಥಂ ಲೋಕೇ ಮಾನುಷೇ ಜಾಯತೇ ಗತಿಃ ॥೪॥

ಏತನ್ಮೇ ಸಂಶಯಃ ವಿಧ್ವಂಸ್ಛೇತ್ತುಮರ್ಹಸಿ ಸಾಂಪ್ರತಂ ।
ಯಥಾ ರಾಜಾ ಗತಸ್ತತ್ರ ಪ್ರಷ್ಟುಕಾಮಃ ಪ್ರಜಾಪತಿಂ ॥೫॥

॥ ವ್ಯಾಸ ಉವಾಚ ॥

ಮೇರೋಸ್ತು ಶಿಖರೇ ರಾಜನ್ಸರ್ವೇ ಲೋಕಾಃ ಪ್ರತಿಷ್ಠಿತಾಃ ।
ಇಂದ್ರಲೋಕೋ ವಹ್ನಿಲೋಕೋ ಯಾ ಚ ಸಂಯಮಿನೀ ಪುರೀ ॥೬॥

ತಥೈವ ಸತ್ಯಲೋಕಶ್ಚ ಕೈಲಾಸಶ್ಚ ತಥಾ ಪುನಃ ।
ವೈಕುಂಠಶ್ಚ ಪುನಸ್ತತ್ರ ವೈಷ್ಣವಂ ಪದಮುಚ್ಯತೇ ॥೭॥

ಯಥಾಽರ್ಜುನಃ ಶಕ್ರಲೋಕೇ ಗತಃ ಪಾರ್ಥೋ ಧನುರ್ಧರಃ ।
ಪಂಚವರ್ಷಾಣಿ ಕೌಂತೇಯಃ ಸ್ಥಿತಸ್ತತ್ರ ಸುರಾಲಯೇ ॥೮॥

ಮಾನುಷೇಣೈವ ದೇಹೇನ ವಾಸವಸ್ಯ ಚ ಸನ್ನಿಧೌ ।
ತಥೈವಾನ್ಯೇಽಪಿ ಭೂಪಾಲಾಃ ಕಕುತ್ಸ್ಥಪ್ರಮುಖಾಃ ಕಿಲ ॥೯॥

---

ಮರಣಹೊಂದಿದ ಮೇಲೆ ಪುಣ್ಯವಂತನು ಸ್ವರ್ಗಕ್ಕೆ ಹೋಗುವನೆಂದು ಸಕಲ ಶಾಸ್ತ್ರಗಳೂ ಹೇಳುವುವು. ಮನುಷ್ಯ ಶರೀರದಿಂದ ಬ್ರಹ್ಮಲೋಕಕ್ಕೆ ಹೋಗುವುದು ಹೇಗೆ? ಸ್ವರ್ಗದಿಂದ ಮನುಷ್ಯಲೋಕಕ್ಕೆ ಮತ್ತೆ ಬರುವುದು ಹೇಗೆ? ಬ್ರಹ್ಮನನ್ನು ಕೇಳುವುದಕ್ಕೆ ರಾಜನು ಹೇಗೆ ಹೋದನು ? ಈ ನನ್ನ ಸಂದೇಹವನ್ನು ಈಗ ನೀನು ಪರಿಹರಿಸಬೇಕು. ||೪-೫||

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ, ಮೇರುಪರ್ವತದ ಶಿಖರ ದಲ್ಲಿ ಸಕಲ ಲೋಕಗಳೂ ಇರುವುವು. ಇಂದ್ರಲೋಕ, ಅಗ್ನಿಲೋಕ, ಸಂಯಮಿನೀ ಪಟ್ಟಣ, ಸತ್ಯಲೋಕ, ಕೈಲಾಸ, ವೈಕುಂಠ, ಇವೆಲ್ಲವೂ ಆ ಶಿಖರದಲ್ಲಿಯೇ ಇರುವುವು. ||೬-೭||

ಧನುಸ್ಸನ್ನು ಧರಿಸಿದ ಕುಂತಿಯ ಪುತ್ರನಾದ ಅರ್ಜುನನು ಇಂದ್ರಲೋಕಕ್ಕೆ ಹೋಗಿ ಐದು ವರ್ಷಗಳವರೆಗೆ ಅಲ್ಲಿ ವಾಸವಾಗಿದ್ದನು. ಅವನು ದೇವೇಂದ್ರನ

ಸ್ವರ್ಲೋಕಗತಯಃ ಪಶ್ಚಾದ್ದೈತ್ಯಾಶ್ಚಾಽಪಿ ಮಹಾಬಲಾಃ ।
ಜಿತ್ವೇಂದ್ರಸದನಂ ಪ್ರಾಪ್ಯ ಸಂಸ್ಥಿತಾಸ್ತತ್ರ ಕಾಮತಃ ॥೧೦॥

ಮಹಾಭಿಷಃ ಪುರಾ ರಾಜಾ ಬ್ರಹ್ಮಲೋಕಂ ಗತಃ ಸ್ವರಾಟ್ ।
ಆಗಚ್ಛಂತೀಂ ನೃಪೋ ಗಂಗಾಮಪಶ್ಯಚ್ಚಾತಿ ಸುಂದರೀಂ ॥೧೧॥

ವಾಯುನಾಽಂಬರಮಸ್ಯಾಸ್ತು ದೈವಾದಪಹೃತಂ ನೃಪ ।
ಕಿಂಚಿನ್ನಗ್ನಾ ನೃಪೇಣಾಽಥ ದೃಷ್ಟಾ ಸಾ ಸುಂದರೀ ತದಾ ॥೧೨॥

ಸ್ಮಿತಂ ಚಕಾರ ಕಾಮಾರ್ತಃ ಸಾ ಚ ಕಿಂಚಿಜ್ಜಹಾಸ ವೈ ।
ಬ್ರಹ್ಮಣಾ ತೌ ತದಾ ದೃಷ್ಟೌ ಶಪ್ತೌ ಯಾತೌ ವಸುಂಧರಾಂ ॥೧೩॥

ವೈಕುಂಠೇಽಪಿ ಸುರಾಃ ಸರ್ವೇ ಪೀಡಿತಾ ದೈತ್ಯದಾನವೈಃ ।
ಗತ್ವಾ ಹರಿಂ ಜಗನ್ನಾಥಮಸ್ತುವನ್ಕಮಲಾಪತಿಂ ॥೧೪॥

ಸಂದೇಹೋ ನಾಽತ್ರ ಕರ್ತವ್ಯಃ ಸರ್ವಥಾ ನೃಪಸತ್ತಮ ।
ಗಮ್ಯಾಃ ಸರ್ವೇಽಪಿ ಲೋಕಾಃಸ್ಯು ರ್ಮಾನವಾನಾಂ ನರಾಧಿಪ ॥೧೫॥

---

ಸಮೀಪದಲ್ಲಿ ಮನುಷ್ಯಶರೀರದಿಂದಲೇ ಇದ್ದನು. ಹಾಗೆಯೇ ಕಕುತ್ಸ್ಥ ಮುಂತಾದ ರಾಜರುಗಳೂ ಇಂದ್ರನ ಸಮೀಪದಲ್ಲಿದ್ದರು. ||೮-೯||

ಮಹಾಬಲಶಾಲಿಗಳಾದ ದೈತ್ಯರೂ ಕೂಡ ಸ್ವರ್ಗಕ್ಕೆ ಹೋಗುವ ಶಕ್ತಿಯುಳ್ಳವರಾಗಿ ದೇವೇಂದ್ರನನ್ನು ಜಯಿಸಿ ಅಲ್ಲಿಯೇ ತಮ್ಮ ಇಷ್ಟಬಂದಷ್ಟು ದಿನದವರೆಗೆ ಇದ್ದರು. ಪೂರ್ವದಲ್ಲಿ ಮಹಾಭಿಷನೆಂಬ ರಾಜನು ಬ್ರಹ್ಮಲೋಕಕ್ಕೆ ಹೋದನು. ಅಲ್ಲಿಂದ ಬರುತ್ತಿದ್ದ ಅತ್ಯಂತ ಸುಂದರಿಯಾದ ಗಂಗೆಯನ್ನು ನೋಡಿದನು. ||೧೦-೧೧||

ಅದೃಷ್ಟಪರಿಪಾಕದಿಂದ ಆ ಗಂಗೆಯ ವಸ್ತ್ರವು ಗಾಳಿಯಿಂದ ಹಾರಿಹೋಯಿತು. ಸ್ವಲ್ಪಮಟ್ಟಿಗೆ ಬೆತ್ತಲೆಯಾಗಿದ್ದ ಗಂಗೆಯನ್ನು ರಾಜನು ನೋಡಿದನು. ಕಾಮಬಾಧೆಯಿಂದ ಪೀಡಿತನಾಗಿ ನಕ್ಕನು. ಆ ಗಂಗೆಯೂ ಸ್ವಲ್ಪ ನಕ್ಕಳು. ಬ್ರಹ್ಮನು ಇದನ್ನು ನೋಡಿ ಅವರಿಬ್ಬರಿಗೂ ಶಾಪವನ್ನು ಕೊಡುತ್ತಲು ಅವರಿಬ್ಬರೂ ಭೂಮಿಗೆ ಬಂದರು. ||೧೨-೧೩||

ವೈಕುಂಠಲೋಕದಲ್ಲಿಯೂ ಕೂಡ ದೇವತೆಗಳು ದೈತ್ಯದಾನವರ ಬಾಧೆಯನ್ನು ಅನುಭವಿಸಿದರಾಗಿ ಆಮೇಲೆ ಹರಿಯ ಸಮೀಪಕ್ಕೆ ಹೋಗಿ ಲಕ್ಷ್ಮೀಪತಿ

ಅವಶ್ಯಂ ಕೃತಪುಣ್ಯಾನಾಂ ತಾಪಸಾನಾಂ ನರಾಧಿಪ ।
ಪುಣ್ಯಸದ್ಭಾವ ಏವಾತ್ರ ಗಮನೇ ಕಾರಣಂ ನೃಪ ॥೧೬॥

ತಥೈವ ಯಜಮಾನಾನಾಂ ಯಜ್ಞೇನ ಭಾವಿತಾತ್ಮನಾಂ ।

॥ ಜನಮೇಜಯ ಉವಾಚ ॥

ರೇವತೋ ರೇವತೀಂ ಕನ್ಯಾಂ ಗೃಹೀತ್ವಾ ಚಾರುಲೋಚನಾಂ ॥೧೭॥

ಬ್ರಹ್ಮಲೋಕಂ ಗತಃ ಪಶ್ಚಾತ್ಕಿಂ ಕೃತಂ ತೇನ ಭೂಭುಜಾ ।
ಬ್ರಹ್ಮಣಾ ಕಿಂ ಸಮಾದಿಷ್ಟಂ ಕಸ್ಮೈ ದತ್ತಾ ಸುತಾ ಪುನಃ ॥೧೮॥

ತತ್ಸರ್ವಂ ವಿಸ್ತರಾದ್ಬ್ರಹ್ಮನ್ಕಥಯ ತ್ವಂ ಮಮಾಧುನಾ ।

॥ ವ್ಯಾಸ ಉವಾಚ ॥

ನಿಶಾಮಯ ಮಹೀಪಾಲ ರಾಜಾ ರೇವತಕಃ ಕಿಲ ॥೧೯॥

ಪುತ್ರ್ಯಾ ವರಂ ಪರಿಪ್ರಷ್ಟುಂ ಬ್ರಹ್ಮಲೋಕಂ ಗತೋ ಯದಾ ।
ಆವರ್ತಮಾನೇ ಗಾಂಧರ್ವೇ ಸ್ಥಿತೋ ಲಬ್ಧಕ್ಷಣಃ ಕ್ಷಣಂ ॥೨೦॥

---

ಯಾದ ಅವನನ್ನು ಸ್ತೋತ್ರಮಾಡಿದರು. ರಾಜಶ್ರೇಷ್ಠನೇ, ಈ ವಿಷಯದಲ್ಲಿ ಸಂದೇಹ ಪಡಬೇಕಾದುದಿಲ್ಲ. ಮನುಷ್ಯರು ಸಕಲ ಲೋಕಕ್ಕೂ ಹೋಗಬಹುದು. ॥೧೪-೧೫॥

ಎಲೈ ರಾಜನೇ, ಪುಣ್ಯವನ್ನು ಮಾಡಿದ ತಪಸ್ವಿಗಳು ಕೂಡ ಸಮಸ್ತ ಲೋಕಗಳಿಗೂ ಆವಶ್ಯಕವಾದರೆ ಹೋಗಬಹುದು. ಹೀಗೆ ಲೋಕಾಂತರಗಮನ ಶಕ್ತಿಯು ಬರುವುದಕ್ಕೆ ಪುಣ್ಯವೇ ಕಾರಣವು. ಹಾಗೆಯೇ ಯಜ್ಞದಿಂದ ಪರಿಶುದ್ಧವಾದ ಶರೀರವನ್ನು ಪಡೆದ ಯಜಮಾನರೂ ಲೋಕಾಂತರಗಳಿಗೆ ಹೋಗಿಬರಬಹುದು. ॥೧೬॥

ಜನಮೇಜಯರಾಜನು ಹೇಳಿದನು—ರೇವತರಾಜನು ತನ್ನ ಮಗಳಾದ ರೇವತಿಯನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದನಷ್ಟೆ? ತರುವಾಯ ಆ ರಾಜನು ಏನನ್ನು ಮಾಡಿದನು? ಬ್ರಹ್ಮನು ಏನಪ್ಪಣೆ ಮಾಡಿದನು? ಮಗಳನ್ನು ಯಾರಿಗೆ ಕೊಟ್ಟು ವಿವಾಹಮಾಡಿದನು? ಇವುಗಳನ್ನೆಲ್ಲ ವಿಸ್ತಾರವಾಗಿ ನನಗೆ ಹೇಳಬೇಕು. ॥೧೭-೧೮॥

ವ್ಯಾಸನು ಹೇಳಿದನು—ಜನಮೇಜಯರಾಜನೇ ಕೇಳು, ರೇವತರಾಜನು ಮಗಳಿಗೆ ವರನಾರೆಂದು ಕೇಳುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋದಾಗ ಆ ಬ್ರಹ್ಮನ

ಶೃಣ್ವನ್ನ ತೃಪ್ತಿಮಧ್ಯಗಾತ್ ಸಭಾಯಾಂ ತು ಸಕನ್ಯಕಃ ।
ಸಮಾಪ್ತೇ ತತ್ರ ಗಾಂಧರ್ವೇ ಪ್ರಣಮ್ಯ ಪರಮೇಶ್ವರಂ ॥೨೧॥

ದರ್ಶಯಿತ್ವಾ ಸುತಾಂ ತಸ್ಮೈ ಸ್ವಾಭಿಪ್ರಾಯಂ ನ್ಯವೇದಯತ್ ।

॥ ರಾಜೋವಾಚ ॥

ವರಂ ಕಥಯ ದೇವೇಶ ಕನ್ಯೇಯಂ ಮಮ ಪುತ್ರಿಕಾ ॥೨೨॥

ದೇಯಾ ಕಸ್ಮೈ ಮಯಾ ಬ್ರಹ್ಮನ್ಪ್ರಷ್ಟುಂ ತ್ವಾಂ ಸಮುಪಾಗತಃ ।
ಬಹವೋ ರಾಜಪುತ್ರಾ ಮೇ ವೀಕ್ಷಿತಾಃ ಕುಲಸಂಭವಾಃ ॥೨೩॥

ಕಸ್ಮಿಂಶ್ಚಿನ್ಮೇ ಮನಃ ಕಾಮಂ ನೋಪತಿಷ್ಠತಿ ಚಂಚಲಂ ।
ತಸ್ಮಾತ್ತ್ವಾಂ ದೇವದೇವೇಶ ಪ್ರಷ್ಟುಮತ್ರಾಗತೋಽಸ್ಮ್ಯಹಂ ॥೨೪॥

ತದಾಜ್ಞಾಪಯ ಸರ್ವಜ್ಞ ಯೋಗ್ಯಂ ರಾಜಸುತಂ ವರಂ ।
ಕುಲೀನಂ ಬಲವಂತಂ ಚ ಸರ್ವಲಕ್ಷಣಸಂಯುತಂ ॥೨೫॥
ದಾತಾರಂ ಧರ್ಮಶೀಲಂ ಚ ರಾಜಪುತ್ರಂ ಸಮಾದಿಶ ।

---

ಸಭೆಯಲ್ಲಿ ಸಂಗೀತವು ನಡೆಯುತ್ತಿದ್ದಿತು. ಒಂದು ಕ್ಷಣಕಾಲ ತನ್ನ ಮಗಳೊಡನೆ ಆ ಗಂಧರ್ವರ ಸಂಗೀತವನ್ನು ಕೇಳಲು ಸಂತೋಷದಿಂದ ಇನ್ನೂ ಕೇಳಬೇಕೆನ್ನಿಸಿತು. ॥೧೯-೨೦॥

ಅಲ್ಲಿ ಸಂಗೀತವು ಮುಗಿದ ಮೇಲೆ ಬ್ರಹ್ಮನಿಗೆ ನಮಸ್ಕಾರಮಾಡಿ ಅವನಿಗೆ ತನ್ನ ಮಗಳನ್ನು ತೋರಿಸಿ ತನ್ನ ಅಭಿಪ್ರಾಯವನ್ನು ವಿಜ್ಞಾಪನೆ ಮಾಡಿದನು. ॥೨೧॥

ರಾಜನು ಹೇಳಿದನು—ದೇವತೆಗಳಿಗೆ ಒಡೆಯನಾದ ಬ್ರಹ್ಮನೇ, ಈ ಕನ್ಯೆಯು ನನ್ನ ಮಗಳು. ಇವಳನ್ನು ಯಾರಿಗೆ ಕೊಟ್ಟು ವಿವಾಹಮಾಡಲಿ? ಸತ್ಕುಲಪ್ರಸೂತರಾದ ಅನೇಕ ರಾಜಪುತ್ರರನ್ನು ನಾನು ನೋಡಿದೆನು. ಚಂಚಲವಾದ ನನ್ನ ಮನಸ್ಸು ಯಾರಲ್ಲಿಯೂ ನೆಲಸಲಿಲ್ಲ. ಆ ಕಾರಣದಿಂದ ದೇವಶ್ರೇಷ್ಠನೇದ ನಿನ್ನನ್ನೇ ಕೇಳುವುದಕ್ಕಾಗಿ ಇಲ್ಲಿಗೆ ಬಂದೆನು. ॥೨೨-೨೩-೨೪॥

ಆದುದರಿಂದ ಸರ್ವಜ್ಞನಾದ ನೀನು ಸತ್ಕುಲಪ್ರಸೂತನೂ ಶೂರನೂ ಸಮಸ್ತ ಶುಭ ಲಕ್ಷಣಗಳಿಂದ ಕೂಡಿದವನೂ ದಾನಧರ್ಮಶೀಲನೂ ರಾಜಪುತ್ರನೂ ಆದ ಯೋಗ್ಯನಾದ ವರನನ್ನು ಅಪ್ಪಣೆಕೊಡಿಸು. ॥೨೫॥

|| ವ್ಯಾಸ ಉವಾಚ ||

ತದಾಕರ್ಣ್ಯ ಜಗತ್ಕರ್ತಾ ವಚನಂ ನೃಪತೇಸ್ತದಾ ||೨೬||
ತಮುವಾಚ ಹಸನ್ವಾಕ್ಯಂ ದೃಷ್ಟ್ವಾ ಕಾಲಸ್ಯ ಪರ್ಯಯಂ ।

|| ಬ್ರಹ್ಮೋವಾಚ ||

ರಾಜಪುತ್ರಾಸ್ತ್ವಯಾ ರಾಜನ್ವರಾ ಯೇ ಹೃದಯೇ ಕೃತಾಃ ||೨೭||
ಗ್ರಸ್ತಾಃ ಕಾಲೇನ ತೇ ಸರ್ವೇ ಸಪಿತೃಪೌತ್ರಬಾಂಧವಾಃ ।
ಸಪ್ತವಿಂಶತಿಮೋಽದ್ಯೈವ ದ್ವಾಪರಸ್ತು ಪ್ರವರ್ತತೇ ||೨೮||

ವಂಶಜಾಸ್ತೇ ಮೃತಾಃ ಸರ್ವೇ ಪುರೀ ದೈತ್ಯೈರ್ವಿಲುಂಠಿತಾ ।
ಸೋಮವಂಶೋದ್ಭವಸ್ತತ್ರ ರಾಜಾ ರಾಜ್ಯಂ ಪ್ರಶಾಸ್ತಿ ಹಿ ||೨೯||

ಉಗ್ರಸೇನ ಇತಿ ಖ್ಯಾತೋ ಮಥುರಾಧಿಪತಿಃ ಕಿಲ ।
ಯಯಾತಿವಂಶಸಂಭೂತೋ ರಾಜಾ ಮಾಥುರಮಂಡಲೇ ||೩೦||

ಉಗ್ರಸೇನಾತ್ಮಜಃ ಕಂಸಃ ಸುರದ್ವೇಷೀ ಮಹಾಬಲಃ ।
ದೈತ್ಯಾಂಶಃ ಪಿತರಂ ಸೋಽಪಿ ಕಾರಾಗಾರಂ ನ್ಯವೇಶಯತ್ ||೩೧||

---

ವ್ಯಾಸಮುನಿಯು ಹೇಳಿದನು—ಪ್ರಪಂಚವನ್ನು ಸೃಷ್ಟಿಸುವ ಬ್ರಹ್ಮನು ಆ ರಾಜನ ಮಾತನ್ನು ಕೇಳಿ ಕಾಲಮಾನವನ್ನು ತಿಳಿದು ನಗುತ್ತಾ ಅವನ್ನು ಕುರಿತು ಹೇಳಿದನು. ||೨೬||

ಬ್ರಹ್ಮನು ಹೇಳಿದನು—ಎಲೈ ರಾಜನೇ, ನಿನ್ನ ಮನಸ್ಸಿನಲ್ಲಿ ಮಾಡಿ ಕೊಂಡಿದ್ದ ರಾಜಪುತ್ರರೆಲ್ಲರೂ ಅವರ ತಂದೆತಾಯಿಗಳು ಮಕ್ಕಳು ಮೊಮ್ಮಕ್ಕಳು ಸಹಿತವಾಗಿ ಕಾಲವಶರಾದರು. ಈಗ ಇಪ್ಪತ್ತೇಳನೆಯ ದ್ವಾಪರಯುಗವು ನಡೆಯುತ್ತಿರುವುದು. ನಿನ್ನ ವಂಶದವರೆಲ್ಲರೂ ಮರಣಹೊಂದಿದರು. ನಿನ್ನ ಪಟ್ಟಣವನ್ನು ರಾಕ್ಷಸರು ಲೂಟಿಮಾಡಿದರು. ||೨೭-೨೮||

ಆ ಪ್ರದೇಶದಲ್ಲಿ ಚಂದ್ರವಂಶದಲ್ಲಿ ಹುಟ್ಟಿದ ಯಯಾತಿಮಹಾರಾಜನ ವಂಶದ ಉಗ್ರಸೇನನೆಂಬ ರಾಜನು ಮಥುರಾ ನಗರಕ್ಕೆ ಅಧಿಪತಿಯಾಗಿದ್ದನು. ಆ ಉಗ್ರಸೇನನ ಮಗನಾದ ಕಂಸನೆಂಬವನು ದೈತ್ಯಾಂಶದಿಂದ ಹುಟ್ಟಿ ಮಹಾಬಲಶಾಲಿಯಾಗಿ

ಸ್ವಯಂ ರಾಜ್ಯಂ ಚಕಾರಾಽಸೌ ನೃಪಾಣಾಂ ಮದಗರ್ವಿತಃ ।
ಮೇದಿನೀ ಚಾತಿಭಾರಾರ್ತಾ ಬ್ರಹ್ಮಾಣಂ ಶರಣಂ ಗತಾ ॥೩೨॥

ದುಷ್ಟರಾಜನ್ಯಸೈನ್ಯಾನಾಂ ಭಾರೇಣಾತಿಸಮಾಕುಲಾ ।
ಅಂಶಾವತರಣಂ ತತ್ರ ಗದಿತಂ ಸುರಸತ್ತಮೈಃ ॥೩೩॥

ವಾಸುದೇವಃ ಸಮುತ್ಪನ್ನಃ ಕೃಷ್ಣಃ ಕಮಲಲೋಚನಃ ।
ದೇವಕ್ಯಾಂ ದೇವರೂಪಿಣ್ಯಾಂ ಯೋಽಸೌ ನಾರಾಯಣೋ ಮುನಿಃ ॥೩೪॥

ತಪಶ್ಚಚಾರ ದುಸ್ಸಾಧ್ಯಂ ಧರ್ಮಪುತ್ರಃ ಸನಾತನಃ ।
ಗಂಗಾತೀರಂ ನರಸಖಃ ಪುಣ್ಯೇ ಬದರಿಕಾಶ್ರಮೇ ॥೩೫॥

ಸೋಽವತೀರ್ಣೋ ಯದುಕುಲೇ ವಾಸುದೇವೋಽತಿವಿಶ್ರುತಃ ।
ತೇನಾಽಸೌ ನಿಹತಃ ಪಾಪಃ ಕಂಸಃ ಕೃಷ್ಣೇನ ಸತ್ತಮ ॥೩೬॥

ಉಗ್ರಸೇನಾಯ ರಾಜ್ಯಂ ವೈ ದತ್ತಂ ಹತ್ವಾ ಖಲಂಸುತಂ ।
ಕಂಸಸ್ಯ ಶ್ವಶುರಃ ಪಾಪೋ ಜರಾಸಂಧೋ ಮಹಾಬಲಃ ॥೩೭॥

---

ದೇವತೆಗಳನ್ನು ದ್ವೇಷಿಸುತ್ತಾ ತನ್ನ ತಂದೆಯನ್ನು ಸೆರೆಮನೆಯಲ್ಲಿಡಿಸಿದನು. ||೨೯-೩೦-೩೧||

ಆ ಕಂಸನು ಐಶ್ವರ್ಯದ ಗರ್ವದಿಂದ ಕೂಡಿದವನಾಗಿ ತಾನೇ ರಾಜ್ಯಭಾರವನ್ನು ನಡೆಸುತ್ತಿದ್ದನು. ಈ ಸಮಯದಲ್ಲಿ ಭೂಮಿಯು ದುಷ್ಟರಾಜರ ಸೈನ್ಯಭಾರದಿಂದ ಬಾಧೆಪಡುತ್ತಾ ಬ್ರಹ್ಮನನ್ನು ಮರೆಹೊಕ್ಕಳು. ||೩೨||

ದೇವತೆಗಳು ವಿಷ್ಣುವಿನ ಅಂಶಾವತಾರವು ಈ ಸಂದರ್ಭದಲ್ಲಿ ಆಗುವುದೆಂದು ಹೇಳಿದರು. ನಾರಾಯಣ ಮುನಿಯು ವಸುದೇವನ ಹೆಂಡಿತಿಯಾದ ದೇವಕಿಯ ಗರ್ಭದಲ್ಲಿ ಕಮಲಾಕ್ಷನಾದ ಕೃಷ್ಣನಾಗಿ ಹುಟ್ಟಿದನು ||೩೩-೩೪||

ಧರ್ಮದೇವನ ಮಕ್ಕಳಾದ ನರನಾರಾಯಣರೂ ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದರು. ಆ ನಾರಾಯಣಮುನಿಯೇ ಕೃಷ್ಣನಾಗಿ ಹುಟ್ಟಿ ಪಾಪಿಯಾದ ಕಂಸನನ್ನು ಕೊಂದನು. ||೩೫-೩೬||

ಕೃಷ್ಣನು ದುಷ್ಟನಾದ ಕಂಸನನ್ನು ಕೊಂದು ಉಗ್ರಸೇನನಿಗೆ ರಾಜ್ಯವನ್ನು ಕೊಟ್ಟನು. ಕಂಸನ ಮಾವನಾದ ಮಹಾಬಲಶಾಲಿಯೂ ದುಷ್ಟನೂ ಆದ ಜರಾ

ಆಗತ್ಯ ಮಥುರಾಂ ಕ್ರೋಧಾಚ್ಚಕಾರ ಸಂಗರಂ ಮುದಾ ।
ಕೃಷ್ಣೇನಾಸೌ ಜಿತಃ ಸಂಖ್ಯೇ ಜರಾಸಂಧೋ ಮಹಾಬಲಃ ॥೩೮॥

ಪ್ರೇಷಯಾಮಾಸ ಯುದ್ಧಾಯ ಸಬಲಂ ಯವನಂ ತತಃ ।
ಶ್ರುತ್ವಾಽಽಯಾತಂ ಮಹಾಶೂರಂ ಸಸೈನ್ಯಂ ಯವನಾಧಿಪಂ ॥೩೯॥

(ಕೃಷ್ಣಸ್ತು ಮಥುರಾಂ ತ್ಯಕ್ತ್ವಾ ಪುರೀಂ ದ್ವಾರವತೀಮಗಾತ್ ।
ಪ್ರಭಗ್ನಾಂ ತಾಂ ಪುರೀಂ ಕೃಷ್ಣಃ ಶಿಲ್ಪಿಭಿಃ ಸಹ ಸಂಗತೈಃ ॥

ಕಾರಯಾಮಾಸ ದುರ್ಗಾಢ್ಯಾಂ ಹಟ್ಟಶಾಲಾವಿಮಂಡಿತಾಂ ।
ಜೀರ್ಣೋದ್ಧಾರಂ ಪುರಃ ಕೃತ್ವಾ ವಾಸುದೇವಃ ಪ್ರತಾಪವಾನ್ ॥

ಉಗ್ರಸೇನಂ ಚ ರಾಜಾನಂ ಚಕಾರ ವಶವರ್ತಿನಂ) ।
ಯಾದವಾನ್ಸ್ಥಾಪಯಾಮಾಸ ದ್ವಾರವತ್ಯಾಂ ಯದೂತ್ತಮಃ ।
ವಾಸುದೇವಸ್ತು ತತ್ರಾದ್ಯ ವರ್ತತೇ ಬಾಂಧವೈಃ ಸಹ ॥೪೦॥

ತಸ್ಯಾಗ್ರಜಃ ಸ ವಿಖ್ಯಾತೋ ಬಲದೇವೋ ಹಲಾಯುಧಃ ।
ಶೇಷಾಂಶೋ ಮುಸಲೀ ವೀರೋ ವರೋಽಸ್ತು ತವ ಸಂಮತಃ ॥೪೧॥

---

ಸಂಧನು ಕೋಪದಿಂದ ಮಧುರಾಪಟ್ಟಣಕ್ಕೆ ಬಂದು ಯುದ್ಧಮಾಡಿದನು. ಕೃಷ್ಣನು ಅವನನ್ನು ಸಂತೋಷದಿಂದ ಜಯಿಸಿದನು. ||೩೭-೩೮||

ಆಮೇಲೆ ಜರಾಸಂಧನು ಯವನನನ್ನು ಸೇನಾಸಹಿತವಾಗಿ ಯುದ್ಧಕ್ಕೆ ಕಳುಹಿಸಿದನು. ಮಹಾಶೂರನಾದ ಯವನಾಧಿಪನು ಸೈನ್ಯಸಮೇತನಾಗಿ ಬಂದುದನ್ನು ಕೇಳಿ ಕೃಷ್ಣನು ಮಧುರಾಪಟ್ಟಣವನ್ನು ಬಿಟ್ಟು ದ್ವಾರಕೇಪಟ್ಟಣಕ್ಕೆ ಹೋದನು. ಯುದ್ಧದಲ್ಲಿ ನಾಶವಾದ ಮಧುರಾಪಟ್ಟಣವನ್ನು ಶಿಲ್ಪಿಗಳಿಂದ ಸರಿಮಾಡಿಸಿ ಕೋಟೆಕೊತ್ತಲಗಳನ್ನು ಕಟ್ಟಿಸಿ ಜೀರ್ಣೋದ್ಧಾರಮಾಡಿ ಉಗ್ರಸೇನರಾಜನ ವಶಪಡಿಸಿದನು. ಯಾದವರನ್ನು ದ್ವಾರವತೀಪಟ್ಟಣದಲ್ಲಿಟ್ಟು ಕೃಷ್ಣನು ಬಂಧುಗಳೊಡನೆ ಆ ಪಟ್ಟಣದಲ್ಲಿಯೇ ಇರುವನು. ||೩೯-೪೦||

ಅವರ ಅಣ್ಣನಾದ, ನೇಗಿಲನ್ನೇ ಆಯುಧವಾಗಿ ಧರಿಸಿರುವ, ಆದಿಶೇಷನ ಅಂಶದಿಂದ ಕೂಡಿ ಅವತರಿಸಿರುವ, ಮುಸಲಾಯುಧವನ್ನು ಪಡೆದಿರುವ, ಬಲದೇವನು ನಿನಗೆ ಸಂಮತನಾದ ವರನಾಗಿರುವನು. ||೪೧||

ಸಂಕರ್ಷಣಾಯ ದೇಹ್ಯಾಶು ಕನ್ಯಾಂ ಕಮಲಲೋಚನಾಂ ।
ರೇವತೀಂ ಬಲಭದ್ರಾಯ ವಿವಾಹವಿಧಿನಾ ತತಃ ॥೪೨॥

ದತ್ವಾ ಪುತ್ರೀಂ ನೃಪಶ್ರೇಷ್ಠ ಗಚ್ಛ ತ್ವಂ ಬದರಿಕಾಶ್ರಮಂ ।
ತಪಸ್ತಪ್ತುಂ ಸುರಾರಾಮಂ ಪಾವನಂ ಕಾಮದಂ ನೃಣಾಂ ॥೪೩॥

॥ ವ್ಯಾಸ ಉವಾಚ ॥

ಇತಿ ರಾಜಾ ಸಮಾದಿಷ್ಟೋ ಬ್ರಹ್ಮಣಾ ಪದ್ಮಯೋನಿನಾ ।
ಜಗಾಮ ತರಸಾ ರಾಜನ್ ದ್ವಾರಕಾಂ ಕನ್ಯಯಾಽನ್ವಿತಃ ॥೪೪॥

ದದೌ ತಾಂ ಬಲದೇವಾಯ ಕನ್ಯಾಂ ವೈ ಶುಭಲಕ್ಷಣಾಂ ।
ತತಸ್ತಪ್ತ್ವಾ ತಪಸ್ತೀವ್ರಂ ನೃಪತಿಃ ಕಾಲಪರ್ಯಯೇ ॥೪೫॥

ಜಗಾಮ ತ್ರಿದಶಾವಾಸಂ ತ್ಯಕ್ತ್ವಾ ದೇಹಂ ಸರಿತ್ತಟೇ ।

॥ ರಾಜೋವಾಚ ॥

ಭಗವನ್ಮಹದಾಶ್ಚರ್ಯಂ ಭವತಾ ಸಮುದಾಹೃತಂ ॥೪೬॥

---

ತಾವರೆಯ ಹೂವಿನಂತಿರುವ ಕಣ್ಣುಳ್ಳ ನಿನ್ನ ಮಗಳಾದ ರೇವತಿಯನ್ನು ಆ ಸಂಕರ್ಷಣನೆಂಬ ಹೆಸರುಳ್ಳ ಬಲಭದ್ರನಿಗೆ ವಿಧಿಪೂರ್ವಕವಾಗಿ ಜಾಗ್ರತೆಯಾಗಿ ವಿವಾಹಮಾಡಿಕೊಟ್ಟು ಓ ರಾಜೋತ್ತಮನೇ, ನೀನು ಪರಿಶುದ್ಧವಾದ, ದೇವತೆಗಳ ವಿಹಾರ ಸ್ಥಳವಾದ ಬದರಿಕಾಶ್ರಮಕ್ಕೆ ತಪಸ್ಸು ಮಾಡುವುದಕ್ಕಾಗಿ ಪ್ರಯಾಣಮಾಡು. ॥೪೨-೪೩॥

ವ್ಯಾಸಮುನಿಯು ಹೇಳಿದನು—ಕಮಲದಲ್ಲಿ ಹುಟ್ಟಿದ ಬ್ರಹ್ಮನು ರಾಜನಿಗೆ ಹೀಗೆ ಅಪ್ಪಣೆಮಾಡುತ್ತಲು, ರಾಜನು ಬೇಗನೆ ಕನ್ಯೆಯೊಡನೆ ದ್ವಾರಕಾಪಟ್ಟಣಕ್ಕೆ ಹೋಗಿ, ಮಂಗಲಕರವಾದ ಲಕ್ಷಣವುಳ್ಳ ಕನ್ಯೆಯನ್ನು ಬಲದೇವನಿಗೆ ವಿವಾಹ ಮಾಡಿಕೊಟ್ಟು, ಆ ರೇವತರಾಜನು ಆಮೇಲೆ ಬದರಿಕಾಶ್ರಮದಲ್ಲಿ ಕ್ರೂರವಾದ ತಪಸ್ಸನ್ನು ಮಾಡಿ, ಮರಣಕಾಲವು ಬರುತ್ತಲು ನದಿಯ ತೀರದಲ್ಲಿ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋದನು. ॥೪೪-೪೫॥

ಜನಮೇಜಯರಾಜನು ಹೇಳಿದನು— ಓ ವ್ಯಾಸಮುನಿಯೇ, ಮಹಾಜ್ಞಾನಿಯಾದ ನೀನು ಆಶ್ಚರ್ಯಕರವಾದ ಮಾತನ್ನು ಹೇಳಿರುವೆ! ರೇವತರಾಜನು ತನ್ನ

ರೇವತಸ್ತು ಸ್ಥಿತಸ್ತತ್ರ ಬ್ರಹ್ಮಲೋಕೇ ಸುತಾರ್ಥತಃ ।
ಯುಗಾನಾಂ ತು ಗತಂ ತತ್ರ ಶತಮಷ್ಟೋತ್ತರಂ ಕಿಲ ॥೪೭॥

ಕನ್ಯಾ ವೃದ್ಧಾ ನ ಸಂಜಾತಾ ರಾಜಾ ವಾಽತಿತರಾಂ ನು ಕಿಂ ।
ಏತಾವಂತಂ ತಥಾ ಕಾಲಮಾಯುಃ ಪೂರ್ಣಂ ತಯೋಃ ಕಥಂ॥೪೮॥

॥ ವ್ಯಾಸ ಉವಾಚ ॥

ನ ಜರಾ ಕ್ಷುತ್ಪಿಪಾಸಾ ವಾ ನ ಮೃತ್ಯುರ್ನ ಭಯಂ ಪುನಃ ।
ನ ತು ಗ್ಲಾನಿಃ ಪ್ರಭವತಿ ಬ್ರಹ್ಮಲೋಕೇ ಸದಾಽನಘ ॥೪೯॥

ಮೇರುಂ ಗತಸ್ಯ ಶರ್ಯಾತೇಃ ಸಂತತಿಃ ರಾಕ್ಷಸೈರ್ಹತಾ ।
ಗತಾ ಕುಶಸ್ಥಲೀಂ ತ್ಯಕ್ತ್ವಾ ಭಯಭೀತಾ ಇತಸ್ತತಃ ॥೫೦॥

ಮನೋಶ್ಚ ಕ್ಷುವತಃ ಪುತ್ರ ಉತ್ಪನ್ನೋ ವೀರ್ಯವತ್ತರಃ ।
ಇಕ್ಷ್ವಾಕುರಿತಿ ವಿಖ್ಯಾತಃ ಸೂರ್ಯವಂಶಕರಸ್ತು ಸಃ ॥೫೧॥

---

ಮಗಳ ಪ್ರಯೋಜನಕ್ಕಾಗಿ ಬ್ರಹ್ಮಲೋಕದಲ್ಲಿದ್ದ ಕಾಲದಲ್ಲಿ ನೂರೆಂಟು ಯುಗಗಳು ಕಳೆದುವೆಂದು ನೀನು ಹೇಳಲಿಲ್ಲವೇ ? ॥೪೬-೪೭॥

ಆ ಕನ್ಯೆಯು ಮುದುಕಿಯಾಗಲಿಲ್ಲವೆ? ರಾಜನು ಇನ್ನೂ ಮುದುಕನಾಗಲಿಲ್ಲವೆ? ಇಲ್ಲಿಯವರೆಗೂ ಅವರು ಆಯುಸ್ಸು ಪೂರ್ಣವಾಗಿ ಮುಗಿದಿದ್ದರೂ, ಹೇಗೆ ಇನ್ನೂ ಆಯುಸ್ಸಿನಿಂದ ಕೂಡಿದ್ದರು ? ॥೪೮॥

ವ್ಯಾಸಮುನಿಯು ಹೇಳಿದನು—ಎಲೈ ಪಾಪವಿಲ್ಲದ ರಾಜನೇ, ಕೇಳು. ಬ್ರಹ್ಮಲೋಕದಲ್ಲಿ ಯಾವಾಗಲೂ ಮುಪ್ಪು, ಹಸಿವು, ಬಾಯಾರಿಕೆ, ಮರಣ, ಭಯ, ಆಯಾಸ ಮುಂತಾದ ಬಾಧೆಗಳಾಗುವುದಿಲ್ಲವು! ॥೪೯॥

ಶರ್ಯಾತಿರಾಜನು ಸ್ವರ್ಗಕ್ಕೆ ಹೋಗುತ್ತಲು ಅವನ ಸಂತತಿಯ ರಾಜರನ್ನು ರಾಕ್ಷಸರು ಕೊಂದು ಹಾಕುತ್ತಿದ್ದರು. ಅಲ್ಲಿ ಉಳಿದಿದ್ದವರೆಲ್ಲರೂ ಕುಶಸ್ಥಲಿಯನ್ನು ಬಿಟ್ಟು ಭಯದಿಂದ ದಿಕ್ಕುದಿಕ್ಕಿಗೆ ಹೋದರು. ॥೫೦॥

ವೈವಸ್ವತಮನುವು ಸೀನುತ್ತಿರುವಾಗ ಅವನ ಮೂಗಿನಿಂದ ಮಹಾಪರಾಕ್ರಮಿಯಾದ ಇಕ್ಷ್ವಾಕು ಎಂಬ ರಾಜನು ಹುಟ್ಟಿದನು. ಅವನಿಂದ ಸೂರ್ಯವಂಶವು ಮುಂದುವರಿದು ಅಭಿವೃದ್ಧವಾಯಿತು. ॥೫೧॥

ವಂಶಾರ್ಥಂ ತಪ ಆತಿಷ್ಠದ್ದೇವೀಂ ಧ್ಯಾತ್ವಾ ನಿರಂತರಂ ।
ನಾರದಸ್ಯೋಪದೇಶೇನ ಪ್ರಾಪ್ಯ ದೀಕ್ಷಾಮನುತ್ತಮಾಂ ॥೫೨॥

ತಸ್ಯ ಪುತ್ರಶತಂ ರಾಜನ್ನಿಕ್ಷ್ವಾಕೋರಿತಿ ವಿಶ್ರುತಂ ।
ವಿಕುಕ್ಷಿಃ ಪ್ರಥಮಸ್ತೇಷಾಂ ಬಲವೀರ್ಯಸಮನ್ವಿತಃ ॥೫೩॥

ಅಯೋಧ್ಯಾಯಾಂ ಸ್ಥಿತೋ ರಾಜಾ ಇಕ್ಷ್ವಾಕುರಿತಿ ವಿಶ್ರುತಃ ।
ಶಕುನಿಪ್ರಮುಖಾಃ ಪುತ್ರಾಃ ಪಂಚಾಶದ್ಬಲವತ್ತರಾಃ ॥೫೪॥

ಉತ್ತರಾಪಥದೇಶಸ್ಯ ರಕ್ಷಿತಾರಃ ಕೃತಾಃ ಕಿಲ ।
ದಕ್ಷಿಣಸ್ಯಾಂ ತಥಾ ರಾಜನ್ನಾದಿಷ್ಟಾಸ್ತೇನ ತೇ ಸುತಾಃ ॥೫೫॥

---

ಆ ಇಕ್ಷ್ವಾಕು ರಾಜನು ನಾರದರ ಉಪದೇಶದಿಂದ ದೇವೀಮಂತ್ರವನ್ನು ಗ್ರಹಣಮಾಡಿ ವಂಶಾಭಿವೃದ್ಧಿಗಾಗಿ ಯಾವಾಗಲೂ ದೇವಿಯ ಧ್ಯಾನವನ್ನು ಮಾಡುತ್ತಾ ತಪಸ್ಸನ್ನು ಆಚರಿಸುತ್ತಿದ್ದನು. ॥೫೨॥

ಎಲೈ ರಾಜನೇ, ಆ ಇಕ್ಷ್ವಾಕು ರಾಜನಿಗೆ ನೂರು ಜನ ಮಕ್ಕಳಾದರು. ಅವರಲ್ಲಿ ಮೊದಲನೆಯವನಾದ ವಿಕುಕ್ಷಿ ಎಂಬವನು ಬಲಪರಾಕ್ರಮಗಳಿಂದ ಕೂಡಿದವನಾಗಿದ್ದನು. ॥೫೩॥

ಪ್ರಸಿದ್ಧನಾದ ಆ ಇಕ್ಷ್ವಾಕು ರಾಜನು ಅಯೋಧ್ಯಾಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಶಕುನಿ ಮುಂತಾದ ಐವತ್ತು ಜನ ಬಲಶಾಲಿಗಳಾದ ಮಕ್ಕಳು ಉತ್ತರ ಮತ್ತು ಪೂರ್ವಭಾಗದ ದೇಶಗಳನ್ನು ರಕ್ಷಿಸಬೇಕೆಂದೂ, ನಲವತ್ತೆಂಟು ಜನ ಮಕ್ಕಳು ದಕ್ಷಿಣ ಮತ್ತು ಪಶ್ಚಿಮಭಾಗದ ದೇಶಗಳನ್ನು ರಕ್ಷಿಸಬೇಕೆಂದೂ, ಗೊತ್ತು ಮಾಡಿದನು. ಮಿಕ್ಕ ಇಬ್ಬರು ಮಕ್ಕಳು ಆ ರಾಜನ ಸೇವೆಗೋಸ್ಕರ ಅವನ ಸಮೀಪದಲ್ಲಿಯೇ ಇದ್ದರು. ॥೫೪-೫೫॥

ಮಹಾತ್ಮನಾದ ಆ ಇಕ್ಷ್ವಾಕುರಾಜನು ಗೊತ್ತುಮಾಡಿದ ಏರ್ಪಾಡನ್ನು ಅನುಸರಿಸಿ ಶಕುನಿ ಮುಂತಾದ ಐವತ್ತು ಜನ ಬಲಶಾಲಿಗಳಾದ ಮಕ್ಕಳು ಉತ್ತರ ಮತ್ತು ಪೂರ್ವಭಾಗದ ದೇಶಗಳನ್ನೂ, ನಲವತ್ತೆಂಟುಜನ ಮಕ್ಕಳು ದಕ್ಷಿಣ ಮತ್ತು ಪಶ್ಚಿಮ ಭಾಗದ ದೇಶಗಳನ್ನೂ ರಕ್ಷಿಸುತ್ತಿದ್ದರು. ಮಿಕ್ಕ ಇಬ್ಬರು ಮಕ್ಕಳು ಆ ರಾಜನ

ಚತ್ವಾರಿಂಶತ್ತಥಾಽಷ್ಟೌ ಚ ರಕ್ಷಣಾರ್ಥಂ ಮಹಾತ್ಮನಾಂ ।
ಅನ್ಯೌ ದ್ವೌ ಸಂಸ್ಥಿತೌ ಪಾರ್ಶ್ವೇ ಸೇವಾರ್ಥಂ ತಸ್ಯ ಭೂಪತೇಃ ॥೫೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಅಷ್ಟಮೋಽಧ್ಯಾಯಃ.

---

ಸೇವೆಗೋಸ್ಕರ ಅವನ ಸಮಿಾಪದಲ್ಲಿಯೇ ಇದ್ದರು. ಹೀಗೆ ಇಕ್ಷ್ವಾಕುವಿನ ಏರ್ಪಾಡಿನಿಂದ ರಾಜ್ಯದ ಆಡಳಿತವು ಸುಲಲಿತವಾಗಿ ನೆರವೇರುತ್ತಿತ್ತು. ||೫೬||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### || ನವಮೋಽಧ್ಯಾಯಃ ||

### ಒಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಕದಾಚಿದಷ್ಟಕಾಶ್ರಾದ್ಧೇ ವಿಕುಕ್ಷಿಂ ಪೃಥಿವೀಪತಿಃ ।**
**ಆಜ್ಞಾಪಯದಸಂಮೂಢೋ ಮಾಂಸಮಾನಯ ಸತ್ವರಂ ||೧||**

**ಮೇಧ್ಯಂ ಶ್ರಾದ್ಧಾರ್ಥಮಧುನಾ ವನೇ ಗತ್ವಾ ಸುತಾದರಾತ್ ।**
**ಇತ್ಯುಕ್ತೋಽಸೌ ತಥೇತ್ಯಾಶು ಜಗಾಮ ವನಮಸ್ತ್ರಭೃತ್ ||೨||**

**ಗತ್ವಾ ಜಘಾನ ಬಾಣೈಃ ಸ ವರಾಹಾನ್ಸೂಕರಾನ್ಮೃಗಾನ್ ।**
**ಶಶಾಂಶ್ಚಾಪಿ ಪರಿಶ್ರಾಂತೋ ಬಭೂವಾಽಥ ಬುಭುಕ್ಷಿತಃ ||೩||**

---

ವ್ಯಾಸಮುನಿಯು ಹೇಳಿದನು—ಒಂದಾನೊಂದು ದಿನ ಅಷ್ಟಕಾಶ್ರಾದ್ಧವನ್ನು ಮಾಡುವುಕ್ಕಾಗಿ ಇಕ್ಷ್ವಾಕುಮಹಾರಾಜನು ತನ್ನ ಮಗನಾದ ವಿಕುಕ್ಷಿಯನ್ನು ಕುರಿತು, ಎಲೈ ಪುತ್ರನೇ, ಕಾಡಿಗೆ ಹೋಗಿ ಈಗಲೇ ಪರಿಶುದ್ಧವಾದ ಮಾಂಸವನ್ನು ಪಿತೃಗಳ ಶ್ರಾದ್ಧಕ್ಕೋಸ್ಕರವಾಗಿ ತೆಗೆದುಕೊಂಡು ಬಾರೆಂದು ಹೇಳುತ್ತಲು, ಆ ವಿಕುಕ್ಷಿಯು ಹಾಗೆಯೇ ಆಗಲೆಂದು ಹೇಳಿ, ಅಸ್ತ್ರಗಳನ್ನು ಧರಿಸಿ, ಕಾಡಿಗೆ ಹೋದನು. ||೧-೨||

ಅವನು ಕಾಡಿಗೆ ಹೋಗಿ ಬಾಣಗಳಿಂದ ಕಾಡುಹಂದಿಗಳನ್ನೂ ಊರುಹಂದಿಗಳನ್ನೂ ಜಿಂಕೆಗಳನ್ನೂ ಮೊಲಗಳನ್ನೂ ಹೊಡೆದನು. ತರುವಾಯ ತುಂಬ ಆಯಾಸವನ್ನು ಹೊಂದಿ ಹಸಿವಿನ ಬಾಧೆಯಿಂದ ಕೂಡಿದವನಾದನು. ಅಷ್ಟಕಾಶ್ರಾದ್ಧಕ್ಕಾಗಿ ತಾನು ಈ ಮೃಗಗಳನ್ನು ಕೊಂದೆನೆಂಬುದು ಆಗ ಅವನಿಗೆ ಮರೆತುಹೋಯಿತು!

ವಿಸ್ಮೃತಾ ಚಾಽಷ್ಟಕಾ ತಸ್ಯ ಶಶಂ ಚಾಽದದಸೌ ವನೇ ।
ಶೇಷಂ ನಿವೇದಯಾಮಾಸ ಪಿತ್ರೇ ಮಾಂಸಮನುತ್ತಮಂ ॥೪॥

ಪ್ರೋಕ್ಷಣಾಯ ಸಮಾನೀತಂ ಮಾಂಸಂ ದೃಷ್ಟ್ವಾ ಗುರುಸ್ತದಾ ।
ಅನರ್ಹಮಿತಿ ತಜ್ಜ್ಞಾತ್ವಾ ಚುಕೋಪ ಮುನಿಸತ್ತಮಃ ॥೫॥

ಭುಕ್ತಶೇಷಂ ತು ನ ಶ್ರಾದ್ಧೇ ಪ್ರೋಕ್ಷಣೀಯಮಿತಿ ಸ್ಥಿತಿಃ ।
ರಾಜ್ಞೇ ನಿವೇದಯಾಮಾಸ ವಸಿಷ್ಠಃ ಪಾಕದೂಷಣಂ ॥೬॥

ಪುತ್ರಸ್ಯ ಕರ್ಮ ತಜ್ಜ್ಞಾತ್ವಾ ಭೂಪತಿರ್ಗುರುಣೋದಿತಂ ।
ಚುಕೋಪ ವಿಧಿಲೋಪಾತ್ತಂ ದೇಶಾನ್ನಿಃ ಸ್ಸಾರಯತ್ತತಃ ॥೭॥

ಶಶಾದ ಇತಿ ವಿಖ್ಯಾತೋ ನಾಮ್ನಾ ಜಾತೋ ನೃಪಾತ್ಮಜಃ ।
ಗತೋ ವನೇ ಶಶಾದಸ್ತು ಪಿತೃಕೋಪಾದಸಂಭ್ರಮಃ ॥೮॥

---

ಹಸಿವಿನ ಹೆಚ್ಚಾದ ಬಾಧೆಯಿಂದ ಸೋತು ಮೊಲದ ಮಾಂಸವನ್ನು ತಿಂದನು! ಮಿಕ್ಕ ಶ್ರೇಷ್ಠವಾದ ಆ ಮಾಂಸವನ್ನು ತನ್ನ ತಂದೆಗೆ ತಂದುಕೊಟ್ಟನು. ||೩-೪||

ಗುರುವಾದ ವಸಿಷ್ಠನು ಶುದ್ಧಿಗಾಗಿ ಪ್ರೋಕ್ಷಣಕಾರ್ಯವನ್ನು ಮಾಡುವ ಸಮಯಕ್ಕೆ ತಂದ ಆ ಮಾಂಸವನ್ನು ಕಂಡು ಅಯೋಗ್ಯವಾದುದೆಂದು ತಿಳಿದು, ಕೋಪದಿಂದ ರಾಜನನ್ನು ಕುರಿತು, ತಿಂದು ಮಿಕ್ಕುದನ್ನು ಶ್ರಾದ್ಧಕ್ಕೆ ಉಪಯೋಗಿಸ ಬಾರದೆಂದು ಶಾಸ್ತ್ರವಿರುವುದೆಂದೂ, ಈ ಮಾಂಸವು ತಿಂದು ಮಿಕ್ಕುದಾದುದರಿಂದ ಅಡಿಗೆ ಎಲ್ಲವೂ ದೂಷ್ಯವಾದುದಾಯಿತೆಂದೂ, ದೊರೆಗೆ ಹೇಳಿದನು. ||೫-೬||

ಗುರುವು ಹೇಳಿದ, ತನ್ನ ಮಗನು ಮಾಡಿದ, ಕೆಲಸವನ್ನು ರಾಜನು ತಿಳಿದು ಕೋಪಗೊಂಡು, ತನ್ನ ಪಿತೃಗಳ ಶ್ರಾದ್ಧದಲ್ಲಿ ಅನುಸರಿಸಬೇಕಾಗಿದ್ದ ನಿಯಮವನ್ನು ಹಾಳುಮಾಡಿದುದರಿಂದ ಆ ಮಗನನ್ನು ದೇಶದಿಂದ ಹೊರಡಿಸಿಬಿಟ್ಟನು. ||೭||

ಆ ರಾಜಪುತ್ರನು ಶಶಾದನೆಂಬ ಪ್ರಸಿದ್ಧವಾದ ಹೆಸರನ್ನು ಹೊಂದಿ, ತಂದೆಯ ಕೋಪವು ತನ್ನ ತಪ್ಪಿನಿಂದ ಉಂಟಾಗಿದ್ದುದರಿಂದ, ಪ್ರತಿಯಾಗಿ ಕೋಪವನ್ನೂ ಮಾಡದೆ, ಕಂಗೆಡದೆ ಧೈರ್ಯದಿಂದ ಕಾಡಿನಲ್ಲಿ ವಾಸಮಾಡುತ್ತಾ ಧರ್ಮಮಾರ್ಗ ದಲ್ಲಿ ಕಾಡಿನ ಆಹಾರಗಳಿಂದಲೇ ಜೀವಿಸುತ್ತಾ ಕಾಲವನ್ನು ಕಳೆಯುತ್ತಿದ್ದನು.

**ವನ್ಯೇನ ವರ್ತಯನ್ಕಾಲಂ ನೀತವಾನ್ಧರ್ಮತತ್ಪರಃ ।**
**ಪಿತರ್ಯುಪರತೇ ರಾಜ್ಯಂ ಪ್ರಾಪ್ತಂ ತೇನ ಮಹಾತ್ಮನಾ ॥೯॥**

**ಶಶಾದಸ್ತ್ವಕರೋದ್ರಾಜ್ಯಮಯೋಧ್ಯಾಯಾಃ ಪತಿಃ ಸ್ವಯಂ ।**
**ಯಜ್ಞಾನನೇಕಶಃ ಪೂರ್ಣಾಂಶ್ಚಕಾರ ಸರಯೂತಟೇ ॥೧೦॥**

**ಶಶಾದಸ್ಯಾಭವತ್ಪುತ್ರಃ ಕಕುತ್ಸ್ಥ ಇತಿ ವಿಶ್ರುತಃ ।**
**ತಸ್ಯೈವ ನಾಮಭೇದಾದ್ವೈ ಇಂದ್ರವಾಹಃ ಪುರಂಜಯಃ ॥೧೧॥**

॥ ಜನಮೇಜಯ ಉವಾಚ ॥

**ನಾಮಭೇದಃ ಕಥಂ ಜಾತೋ ರಾಜಪುತ್ರಸ್ಯ ಚಾನಘ ।**
**ಕಾರಣಂ ಬ್ರೂಹಿ ಮೇ ಸರ್ವಂ ಕರ್ಮಣಾ ಯೇನ ಚಾಽಭವತ್ ॥೧೨॥**

॥ ವ್ಯಾಸ ಉವಾಚ ॥

**ಶಶಾದೇ ಸ್ವರ್ಗತೇ ರಾಜಾ ಕಕುತ್ಸ್ಥ ಇತಿ ಚಾಽಭವತ್ ।**
**ರಾಜ್ಯಂ ಚಕಾರ ಧರ್ಮಜ್ಞಃ ಪಿತೃಪೈತಾಮಹಂ ಬಲಾತ್ ।**
**ಏತಸ್ಮಿನ್ನಂತರೇ ದೇವಾ ದೈತ್ಯೈಃ ಸರ್ವೇ ಪರಾಜಿತಾಃ ॥೧೩॥**

---

ತಂದೆಯು ಸತ್ತಮೇಲೆ ದುಃಖದಲ್ಲೂ ಧರ್ಮಾಚರಣೆಯನ್ನು ಕೈಬಿಡದೆ ಇದ್ದ ಮಹಾಪುಣ್ಯವಂತನಾದ ಅವನಿಗೇ ರಾಜ್ಯವು ಬಂದಿತು. ॥೮-೯॥

ಆ ಶಶಾದ ರಾಜನು ಅಯೋಧ್ಯಾಪಟ್ಟಣದಲ್ಲಿ ರಾಜನಾಗಿ ಸರಯೂ ನದಿಯ ದಡದಲ್ಲಿ ಅನೇಕ ಯಜ್ಞಗಳನ್ನು ಮಾಡಿದನು. ॥೧೦॥

ಶಶಾದರಾಜನಿಗೆ ಕಕುತ್ಸ್ಥನೆಂಬ ಮಗನು ಹುಟ್ಟಿದನು. ಅವನಿಗೆ ಇಂದ್ರವಾಹನೆಂದೂ ಪುರಂಜಯನೆಂದೂ ಬೇರೆ ಹೆಸರುಗಳಿದ್ದುವು. ॥೧೧॥

ಜನಮೇಜಯನು ಹೇಳಿದನು—ಪುಣ್ಯವಂತನಾದ ವ್ಯಾಸಮುನಿಯೇ, ರಾಜಪುತ್ರನಿಗೆ ಯಾವ ಕಾರ್ಯಗಳನ್ನು ಮಾಡಿದುದರಿಂದ ಬೇರೆ ಬೇರೆ ಹೆಸರುಗಳು ಉಂಟಾದುವು? ಅದನ್ನು ನನಗೆ ಕಾರಣಸಹಿತವಾಗಿ ಹೇಳಬೇಕು. ॥೧೨॥

ವ್ಯಾಸಮುನಿಯು ಹೇಳಿದನು—ಆ ಶಶಾದನು ಸ್ವರ್ಗಕ್ಕೆ ಹೋದಮೇಲೆ ಕಕುತ್ಸ್ಥನು ರಾಜನಾಗಿ ತನ್ನ ಬಲದಿಂದ ತಂದೆ ಮತ್ತು ತಾತನಿಂದ ಬಂದ ರಾಜ್ಯ

ಜಗ್ಮುಸ್ತ್ರಿಲೋಕಾಧಿಪತಿಂ ವಿಷ್ಣುಂ ಶರಣಮವ್ಯಯಂ ।
ತಾನ್ಪ್ರೋವಾಚ ಮಹಾವಿಷ್ಣುಸ್ತದಾ ದೇವಾನ್ಸನಾತನಃ ॥೧೪॥

॥ ವಿಷ್ಣುರುವಾಚ ॥

ಪಾರ್ಷ್ಣಿಗ್ರಾಹಂ ಮಹೀಪಾಲಂ ಪ್ರಾರ್ಥಯಂತು ಶಶಾದಜಂ ।
ಸ ಹನಿಷ್ಯತಿ ವೈ ದೈತ್ಯಾನ್ಸಂಗ್ರಾಮೇ ಸುರಸತ್ತಮಾಃ ॥೧೫॥

ಆಗಮಿಷ್ಯತಿ ಧರ್ಮಾತ್ಮಾ ಸಾಹಾಯ್ಯಾರ್ಥೇ ಧನುರ್ಧರಃ ।
ಪರಾಶಕ್ತೇಃ ಪ್ರಸಾದೇನ ಸಾಮರ್ಥ್ಯಂ ತಸ್ಯ ಚಾತುಲಂ ॥೧೬॥

ಹರೇಃ ಸುವಚನಾದ್ದೇವಾ ಯಯುಃ ಸರ್ವೇ ಸವಾಸವಾಃ ।
ಅಯೋಧ್ಯಾಯಾಂ ಮಹಾರಾಜ ಶಶಾದತನಯಂ ಪ್ರತಿ ॥೧೭॥

---

ವನ್ನು ಚೆನ್ನಾಗಿ ಪಾಲಿಸುತ್ತಿದ್ದನು ಈ ಸಮಯದಲ್ಲಿ ದೇವತೆಗಳು ದೈತ್ಯರೊಡನೆ ಯುದ್ಧಮಾಡಿ ಸೋತು, ವಿಷ್ಣುವಿನ ಸಮೀಪಕ್ಕೆ ಹೋಗಿ ಮೂರು ಲೋಕಕ್ಕೂ ಒಡೆಯನಾದ ಅವನ ಮರೆಯನ್ನು ಹೊಕ್ಕರು. ಅನಾದಿಯಾದ ಆ ಮಹಾವಿಷ್ಣುವು ಆ ದೇವತೆಗಳನ್ನು ಕುರಿತು ಹೀಗೆ ಹೇಳಿದನು. ॥೧೩-೧೪॥

ಎಲೈ ದೇವತೆಗಳೇ, ಶಶಾದನ ಮಗನಾದ ಕಕುತ್ಸ್ಥರಾಜನನ್ನು ನಿಮ್ಮ ಸಹಾಯಕ್ಕೆ, ಎಂದರೆ ಹಿಂಭಾಗದಿಂದ ಶತ್ರುಸೇನೆಯ ಮೇಲೆ ಬಿದ್ದು ಸೋಲಿಸುವ ರೀತಿಯಿಂದ ಸಹಕರಿಸಲು ಮತ್ತು ಕಾಪಾಡಲೂ, ಬರಬೇಕೆಂದು ಕೇಳಿಕೊಳ್ಳಿರಿ. ಅವನು ಯುದ್ಧದಲ್ಲಿ ದೈತ್ಯರನ್ನು ಕೊಲ್ಲುವನು. ॥೧೫॥

ಆ ಧರ್ಮಾತ್ಮನಾದ ರಾಜನು ಧನುಸ್ಸನ್ನು ಧರಿಸಿ ನಿಮ್ಮ ಸಹಾಯಕ್ಕಾಗಿ ಬರುವನು. ಪರಾಶಕ್ತಿಯ ಅನುಗ್ರಹದಿಂದ ಅವನಿಗೆ ಅಸಮಾನವಾದ, ಎಲ್ಲರಿಗಿಂತ ಹೆಚ್ಚಾದ, ಪರಾಕ್ರಮವಿರುವುದು ! ॥೧೬॥

ಹರಿಯ ಈ ಒಳ್ಳೆಯ ಬುದ್ಧಿವಾದದ ಮಾತಿನಿಂದ ಸಮಸ್ತ ದೇವತೆಗಳೂ ದೇವೇಂದ್ರನೊಡನೆ ಅಯೋಧ್ಯಾಪಟ್ಟಣದಲ್ಲಿದ್ದ ಶಶಾದರಾಜನ ಮಗನ ಸಮೀಪಕ್ಕೆ ಹೋದರು. ॥೧೭॥

ತಾನಾಗತಾನ್ಸುರಾನ್ರಾಜಾ ಪೂಜಯಾಮಾಸ ಧರ್ಮತಃ ।
ಪಪ್ರಚ್ಛಾಗಮನೇ ರಾಜಾ ಪ್ರಯೋಜನಮತಂದ್ರಿತಃ ॥೧೮॥

॥ ರಾಜೋವಾಚ ॥

ಧನ್ಯೋಽಹಂ ಪಾವಿತಶ್ಚಾಽಸ್ಮಿ ಜೀವಿತಂ ಸಫಲಂ ಮಮ ।
ಯದಾಗತ್ಯ ಗೃಹೇ ದೇವಾ ದದುಶ್ಚ ದರ್ಶನಂ ಮಹತ್ ॥೧೯॥

ಬ್ರುವಂತು ಕೃತ್ಯಂ ದೇವೇಶಾ ದುಃಸಾಧ್ಯಮಪಿ ಮಾನವೈಃ ।
ಕರಿಷ್ಯಾಮಿ ಮಹತ್ಕಾರ್ಯಂ ಸರ್ವಥಾ ಭವತಾಂ ಮಹತ್ ॥೨೦॥

॥ ದೇವಾ ಊಚುಃ ॥

ಸಾಹಾಯ್ಯಂ ಕುರು ರಾಜೇಂದ್ರ ಸಖಾ ಭವ ಶಚೀಪತೇಃ ।
ಸಂಗ್ರಾಮೇ ಜಯ ದೈತ್ಯೇಂದ್ರಾನ್ ದುರ್ಜಯಾಂ ಸ್ತ್ರಿದಶೈರಪಿ॥೨೧॥

ಪರಾಶಕ್ತಿಪ್ರಸಾದೇನ ದುರ್ಲಭಂ ನಾಸ್ತಿ ತೇ ಕ್ವಚಿತ್ ।
ವಿಷ್ಣುನಾ ಪ್ರೇರಿತಾಶ್ಚೈವಮಾಗತಾಸ್ತವ ಸನ್ನಿಧೌ ॥೨೨॥

---

ಅಲ್ಲಿಗೆ ಬಂದ ಆ ದೇವತೆಗಳನ್ನು ಆ ರಾಜನು ಅತಿಥಿಧರ್ಮಕ್ಕೆ ಅನುಸಾರವಾಗಿ ಪೂಜಿಸಿ ಅವರು ಬಂದ ಕಾರಣವನ್ನು ಆಲಸ್ಯಮಾಡದೆ ಆದರದೊಡನೆ ಪ್ರಶ್ನೆಮಾಡಿದನು. ॥೧೮॥

ರಾಜನು ಹೇಳಿದನು— ಓ ದೇವತೆಗಳೇ, ನನ್ನ ಮನೆಗೆ ಬಂದು ನೀವು ದರ್ಶನ ಕೊಟ್ಟುದರಿಂದ ನಾನು ಕೃತಾರ್ಥನೂ ಪರಿಶುದ್ಧನೂ ಆದೆನು! ನಾನು ಹುಟ್ಟಿದುದು ಸಫಲವಾಯಿತು. ದೇವಶ್ರೇಷ್ಠರೇ, ನಾನು ನಿಮಗೋಸ್ಕರ ಮಾಡಬೇಕಾದ ಕೆಲಸವೇನಿರುವುದು? ಹೇಳಿರಿ. ನಿಮ್ಮ ಕೆಲಸವು ಮನುಷ್ಯರು ಮಾಡಲು ಕಷ್ಟಸಾಧ್ಯವಾದುದಾದರೂ ನಾನು ಅದನ್ನು ಮಾಡುವೆನು! ॥೧೯-೨೦॥

ದೇವತೆಗಳು ಹೇಳಿದರು—ರಾಜಶ್ರೇಷ್ಠನೇ, ದೇವೇಂದ್ರನಿಗೆ ಸ್ನೇಹಿತನಾಗಿ ನಮಗೆ ನೀನು ಸಾಹಾಯ್ಯವನ್ನು ಮಾಡು. ದೇವತೆಗಳಿಂದ ಜಯಿಸಲಸಾಧ್ಯರಾದ ದೈತ್ಯರನ್ನು ಯುದ್ಧದಲ್ಲಿ ಜಯಿಸು. ಪರಾಶಕ್ತಿಯ ಅನುಗ್ರಹದಿಂದ ನಿನಗೆ ಅಸಾಧ್ಯವಾದುದಾವುದೂ ಇರುವುದಿಲ್ಲವು. ಎಂದು ವಿಷ್ಣುವು ಹೇಳಿದುದರಿಂದ ನಾವು ನಿನ್ನ ಸಮೀಪಕ್ಕೆ ಬಂದಿರುತ್ತೇವೆ. ॥೨೧-೨೨॥

|| ರಾಜೋವಾಚ ||

ಪಾರ್ಷ್ಣಿಗ್ರಾಹೋ ಭವಾಮ್ಯದ್ಯ ದೇವಾನಾಂ ಸುರಸತ್ತಮಾಃ |
ಇಂದ್ರೋ ಮೇ ವಾಹನಂ ತತ್ರ ಭವೇದ್ಯದಿ ಸುರಾಧಿಪಃ ||೨೩||

ಸಂಗ್ರಾಮಂ ತು ಕರಿಷ್ಯಾಮಿ ದೈತ್ಯೈರ್ದೇವಕೃತೇಽಧುನಾ |
ಆರುಹ್ಯೇಂದ್ರಂ ಗಮಿಷ್ಯಾಮಿ ಸತ್ಯಮೇತದ್ಬ್ರವೀಮ್ಯಹಂ ||೨೪||

ತದೋಚುರ್ವಾಸವಂ ದೇವಾಃ ಕರ್ತವ್ಯಂ ಕಾರ್ಯಮದ್ಭುತಂ |
ಪತ್ರಂ ಭವ ನರೇಂದ್ರಸ್ಯ ತ್ಯಕ್ತ್ವಾ ಲಜ್ಜಾಂ ಶಚೀಪತೇ ||೨೫||

ಲಜ್ಜಮಾನಸ್ತದಾ ಶಕ್ರಃ ಪ್ರೇರಿತೋ ಹರಿಣಾ ಭೃಶಂ |
ಬಭೂವ ವೃಷಭಸ್ತೂರ್ಣಂ ರುದ್ರಸ್ಯೇವಾಪರೋ ಮಹಾನ್ ||೨೬||

ತಮಾರುರೋಹ ರಾಜಾಽಸೌ ಸಂಗ್ರಾಮಗಮನಾಯ ವೈ |
ಸ್ಥಿತಃ ಕಕುದಿ ಯೇನಾಽಸ್ಯ ಕಕುತ್ಸ್ಥಸ್ತೇನ ಚಾಽಭವತ್ ||೨೭||

ಇಂದ್ರೋ ವಾಹಃ ಕೃತೋ ಯೇನ ತೇನ ನಾಮ್ನೇಂದ್ರವಾಹಕಃ |
ಪುರಂ ಜಿತಂ ತು ದೈತ್ಯಾನಾಂ ತೇನಾಽಭೂಚ್ಚ ಪುರಂಜಯಃ ||೨೮||

---

ರಾಜನು ಹೇಳಿದನು----ದೇವಶ್ರೇಷ್ಠರೇ, ನಾನು ನಿಮಗೆ ಈದಿನ ರಕ್ಷಕನಾಗುತ್ತೇನೆ. ಆದರೆ ದೇವರಾಜನಾದ ದೇವೇಂದ್ರನೇ ನನಗೆ ವಾಹನವಾಗಬೇಕು! ದೇವತೆಗಳಿಗಾಗಿ ಈಗ ನಾನು ದೈತ್ಯರೊಡನೆ ಯುದ್ಧವನ್ನು ಮಾಡುತ್ತೇನೆ. ಇಂದ್ರನ ಮೇಲೇರಿ ನಾನು ಯುದ್ಧಕ್ಕೆ ಹೋಗುತ್ತೇನೆ. ಇದು ನಿಜವಾದ ಮಾತು. ||೨೩-೨೪||

ಆಗ ದೇವತೆಗಳು ದೇವೇಂದ್ರನನ್ನು ಕುರಿತು "ಶಚೀಪತಿಯಾದ ದೇವೇಂದ್ರನೇ, ನಾಚಿಕೆಯನ್ನು ಈಗ ಬಿಟ್ಟು, ರಾಜನಿಗೆ ನೀನು ವಾಹನವಾಗು" ಎಂದು ಅವನು ಮಾಡಬೇಕಾದ ಅದ್ಭುತವಾದ ಕೆಲಸವನ್ನು ಹೇಳಿದರು. ಆಗ ಇಂದ್ರನು ಹರಿಯಿಂದ ಪ್ರೇರಿತನಾಗಿ ನಾಚಿಕೆಯಿಂದ ಬೇಗನೆ ರುದ್ರನ ವಾಹನವಾದ ಬಸವನಂತೆ ಇವನೂ ಬೇರೊಂದು ಬಸವನ ರೂಪವನ್ನು ತಾಳಿದನು. ||೨೫-೨೬||

ರಾಜನು ಆ ಬಸವನ ಮೇಲೆ ಕುಳಿತು ಯುದ್ಧಕ್ಕೆ ಹೋದನು. ಕಕುತ್, ಎಂದರೆ ಬಸವನ ಹೆಗಲಿನಲ್ಲಿರುವ ಹಿಳಲು. ಅದನ್ನು ಪಡೆದಿರುವ ವೃಷಭದ ಮೇಲೆ ಕುಳಿತುದುದರಿಂದ ಅವನಿಗೆ ಕಕುತ್ಸ್ಥನೆಂದೂ, ಇಂದ್ರನು ವಾಹನವಾದುದರಿಂದ

ಜಿತ್ವಾ ದೈತ್ಯಾನ್ಮಹಾಬಾಹುರ್ಧನಂ ತೇಷಾಂ ಪ್ರದತ್ತವಾನ್ ।
ಪಪ್ರಚ್ಛ ಚೈವಂ ರಾಜರ್ಷೇರಿತಿ ಸಖ್ಯಂ ಬಭೂವ ಹ ॥೨೯॥

ಕಕುತ್ಸ್ಥಶ್ಚಾಃತಿವಿಖ್ಯಾತೋ ನೃಪತಿಸ್ತಸ್ಯ ವಂಶಜಾಃ ।
ಕಾಕುತ್ಸ್ಥಾ ಭುವಿ ರಾಜಾನೋ ಬಭೂವುರ್ಬಹುವಿಶ್ರುತಾಃ ॥೩೦॥

ಕಕುತ್ಸ್ಥಸ್ಯಾಃಭವತ್ಪುತ್ರೋ ಧರ್ಮಪತ್ನ್ಯಾಂ ಮಹಾಬಲಃ ।
ಅನೇನಾವಿಶ್ರುತಸ್ತಸ್ಯ ಪೃಥುಃ ಪುತ್ರಶ್ಚ ವೀರ್ಯವಾನ್ ॥೩೧॥

ವಿಷ್ಣೋರಂಶಃ ಸ್ಮೃತಃ ಸಾಕ್ಷಾತ್ಪರಾಶಕ್ತಿಪದಾರ್ಚಕಃ ।
ವಿಶ್ವರಂಧಿಸ್ತು ವಿಜ್ಞೇಯಃ ಪೃಥೋಃ ಪುತ್ರೋ ನರಾಧಿಪಃ ॥೩೨॥

ಚಂದ್ರಸ್ತಸ್ಯ ಸುತಃ ಶ್ರೀಮಾನ್ರಾಜಾ ವಂಶಕರಃ ಸ್ಮೃತಃ ।
ತತ್ಸುತೋ ಯುವನಾಶ್ವಸ್ತು ತೇಜಸ್ವೀ ಬಲವತ್ತರಃ ॥೩೩॥

---

ಇಂದ್ರವಾಹಕನೆಂದೂ, ದೈತ್ಯರ ಪುರವನ್ನು ಜಯಿಸಿದುದರಿಂದ ಪುರಂಜಯನೆಂದೂ, ಆ ರಾಜನಿಗೆ ಹೆಸರುಗಳಾದವು. ॥೨೭-೨೮॥

ಮಹಾಶೂರನಾದ ಆ ರಾಜನು ದೈತ್ಯರನ್ನು ಜಯಿಸಿ ಯುದ್ಧದಲ್ಲಿ ದೊರೆತ ದೈತ್ಯರ ಧನವನ್ನೆಲ್ಲವನ್ನೂ ದೇವತೆಗಳಿಗೆ ಕೊಟ್ಟನು! ಬಳಿಕ ತನ್ನ ಪಟ್ಟಣಕ್ಕೆ ಪ್ರಯಾಣಮಾಡುವೆನೆಂದು ಹೇಳಿ ದೇವತೆಗಳ ಅಪ್ಪಣೆಯನ್ನು ಪಡೆದನು. ಈ ರೀತಿಯಲ್ಲಿ ರಾಜರ್ಷಿಯಾದ ಕಕುತ್ಸ್ಥನಿಗೂ ದೇವೇಂದ್ರನಿಗೂ ಸ್ನೇಹವಾಯಿತು. ॥೨೯॥

ಹೀಗೆ ತುಂಬ ಗುಣಶಾಲಿಯಾಗಿ ಪ್ರಸಿದ್ಧನಾದ ಕಕುತ್ಸ್ಥನ ವಂಶದಲ್ಲಿ ಹುಟ್ಟಿದ ರಾಜರಿಗೆಲ್ಲರಿಗೂ ಕಾಕುತ್ಸ್ಥರೆಂದು ಹೆಸರು ಬಂದಿತು. ಕಕುತ್ಸ್ಥನ ಧರ್ಮಪತ್ನಿಯಲ್ಲಿ ಹುಟ್ಟಿದವನೇ ಮಹಾಬಲಶಾಲಿಯಾಗಿ ಪ್ರಸಿದ್ಧನಾದ ಕಾಕುತ್ಸ್ಥನು. ಅವನ ಮಗನು ಪೃಥು ಎಂಬವನು. ಇವನೂ ಪರಾಕ್ರಮಿಯಾಗಿದ್ದನು. ॥೩೦-೩೧॥

ಪೃಥುವು ವಿಷ್ಣುವಿನ ಅಂಶದಿಂದ ಹುಟ್ಟಿದವನು. ಸಾಕ್ಷಾತ್ಪರಾಶಕ್ತಿಯ ಪರಮಭಕ್ತನಾಗಿ ಆ ದೇವಿಯ ಪಾದಪೂಜೆಯನ್ನು ವಿಶೇಷವಾಗಿ ಮಾಡತಕ್ಕವನು. ಈ ಪೃಥುವಿಗೆ ವಿಶ್ವರಂಧಿ ಎಂಬವನು ಮಗನಾದನು. ॥೩೨॥

ಈ ವಿಶ್ವರಂಧಿಗೆ ಚಂದ್ರನೆಂಬವನೂ, ಆ ಚಂದ್ರನಿಗೆ ಬಲಶಾಲಿಯೂ ತೇಜೋವಂತನೂ ಆದ ಯುವನಾಶ್ವನೂ, ಆ ಯುವನಾಶ್ವನಿಗೆ ಮಹಾಧರ್ಮಾತ್ಮನಾದ

ಶಾವಂತೋ ಯುವನಾಶ್ವಸ್ಯ ಜಜ್ಞೇ ಪರಮಧಾರ್ಮಿಕಃ ।
ಶಾವಂತೀ ನಿರ್ಮಿತಾ ತೇನ ಪುರೀ ಶಕ್ರಪುರೀಸಮಾ ॥೩೪॥

ಬೃಹದಶ್ವಸ್ತು ಪುತ್ರೋಽಭೂತ್ ಶಾವಂತಸ್ಯ ಮಹಾತ್ಮನಃ ।
ಕುವಲಯಾಶ್ವಃ ಸುತಸ್ತಸ್ಯ ಬಭೂವ ಪೃಥಿವೀಪತಿಃ ॥೩೫॥

ಧುಂಧುರ್ನಾಮಾ ಹತೋ ದೈತ್ಯಸ್ತೇನಾಸೌ ಪೃಥಿವೀತಲೇ ।
ಧುಂಧುಮಾರೇತಿ ವಿಖ್ಯಾತಂ ನಾಮ ಪ್ರಾಪಾತಿವಿಶ್ರುತಂ ॥೩೬॥

ಪುತ್ರಸ್ತಸ್ಯ ದೃಢಾಶ್ವಸ್ತು ಪಾಲಯಾಮಾಸ ಮೇದಿನೀಂ ।
ದೃಢಾಶ್ವಸ್ಯ ಸುತಃ ಶ್ರೀಮಾನ್ ಹರ್ಯಶ್ವ ಇತಿ ಕೀರ್ತಿತಃ ॥೩೭॥

ನಿಕುಂಭಸ್ತತ್ಸುತಃ ಪ್ರೋಕ್ತೋ ಬಭೂವ ಪೃಥಿವೀಪತಿಃ ।
ಬರ್ಹಣಾಶ್ವೋ ನಿಕುಂಭಸ್ಯ ಕೃಶಾಶ್ವಸ್ತಸ್ಯ ವೈ ಸುತಃ ॥೩೮॥

ಪ್ರಸೇನಜಿತ್ಕೃಶಾಶ್ವಸ್ಯ ಬಲವಾನ್ಸತ್ಯವಿಕ್ರಮಃ ।
ತಸ್ಯ ಪುತ್ರೋ ಮಹಾಭಾಗೋ ಯೌವನಾಶ್ವೇತಿ ವಿಶ್ರುತಃ ॥೩೯॥

---

ಶಾವಂತನೂ ಮಕ್ಕಳಾದರು. ಈ ಶಾವಂತನು ಗೌಡದೇಶದಲ್ಲಿ ದೇವೇಂದ್ರನ ಪಟ್ಟಣಕ್ಕೆ ಸಮಾನವಾದ ಶಾವಂತೀ ಎಂಬ ಪಟ್ಟಣವನ್ನು ಕಟ್ಟಿಸಿದನು. ಶಾವಂತನಿಗೆ ಬೃಹದಶ್ವನು ಮಗನು. ಅವನಿಗೆ ಕುವಲಯಾಶ್ವನು ಮಗನು. ॥೩೩-೩೪-೩೫॥

ಕುವಲಯಾಶ್ವನು ಧುಂಧು ಎಂಬ ರಾಕ್ಷಸನನ್ನು ಕೊಂದುದರಿಂದ ಇವನಿಗೆ ಭೂಮಿಯಲ್ಲಿ ಧುಂಧುಮಾರನೆಂಬ ಪ್ರಸಿದ್ಧವಾದ ಹೆಸರಾಯಿತು. ಇವನ ಮಗನು ದೃಢಾಶ್ವನೆಂಬವನು. ದೃಡಾಶ್ವನಿಗೆ ಹರ್ಯಶ್ವನೂ, ಹರ್ಯಶ್ವನಿಗೆ ನಿಕುಂಭನೂ, ನಿಕುಂಭನಿಗೆ ಬರ್ಹಣಾಶ್ವನೂ, ಬರ್ಹಣಾಶ್ವನಿಗೆ ಕೃಶಾಶ್ವನೂ ಮಕ್ಕಳು, ಕ್ರಮವಾಗಿ ಆದರು. ॥೩೬-೩೭-೩೮॥

ಕೃಶಾಶ್ವನಿಗೆ ಪ್ರಸೇನಜಿತ್ ಎಂಬಾತನೂ, ಆ ಪ್ರಸೇನಜಿತ್ತಿಗೆ ಯೌವನಾಶ್ವನೂ, ಆ ಯೌವನಾಶ್ವನಿಗೆ ಮಾಂಧಾತನೆಂಬ ರಾಜನೂ, ಮಕ್ಕಳಾದರು. ॥೩೯॥

**ಯೌವನಾಶ್ವಸುತಃ ಶ್ರೀಮಾನ್ಮಾಂಧಾತೇತಿಮಹೀಪತಿಃ ।**
**ಅಷ್ಟೋತ್ತರಸಹಸ್ರಂ ತು ಪ್ರಾಸಾದಾ ಯೇನ ನಿರ್ಮಿತಾಃ ॥೪೦॥**

**ಭಗವತ್ಯಾಸ್ತು ತುಷ್ಟ್ಯರ್ಥಂ ಮಹಾತೀರ್ಥೇಷು ಮಾನದ ।**
**ಮಾತೃಗರ್ಭೇ ನ ಜಾತೋಽಸಾವುತ್ಪನ್ನೋ ಜನಕೋದರೇ ॥೪೧॥**

**ನಿಸ್ಸಾರಿತಃ ತತಃ ಪುತ್ರಃ ಕುಕ್ಷಿಂ ಭಿತ್ವಾ ಪಿತುಃ ಪುನಃ ।**

॥ ರಾಜೋವಾಚ ॥

**ನ ಶ್ರುತಂ ನ ಚ ದೃಷ್ಟಂ ವಾ ಭವತಾತದುದಾಹೃತಂ ॥೪೨॥**

**ಅಸಂಭಾವ್ಯಂ ಮಹಾಭಾಗ ತಸ್ಯ ಜನ್ಮ ಯಥೋದಿತಂ ।**
**ವಿಸ್ತರೇಣ ವದಸ್ವಾದ್ಯ ಮಾಂಧಾತುರ್ಜನ್ಮಕಾರಣಂ ॥೪೩॥**

---

ಮಾಂಧಾತರಾಜನು ದೇವಿಯನ್ನು ಸಂತೋಷಪಡಿಸುವುದಕ್ಕಾಗಿ ದೊಡ್ಡ ದೊಡ್ಡ ತೀರ್ಥಕ್ಷೇತ್ರಗಳಲ್ಲಿ ಸಾವಿರದ ಎಂಟು ದೇವಾಲಯಗಳನ್ನು ನಿರ್ಮಿಸಿ ಅಲ್ಲಿ ದೇವೀ ಪಂಚಾಯತನವನ್ನು ಸ್ಥಾಪಿಸಿದನು. (ವಿಷ್ಣುನಾಮ, ಶಿವನಾಮ, ದೇವೀನಾಮ ಜಪಗಳು, ದೇವೀದೇವಾಲಯ, ದೇವೀಪಂಚಾಯತನ ಪ್ರತಿಷ್ಠೆ, ಇವುಗಳು ಕ್ರಮವಾಗಿ ಒಂದಕ್ಕಿಂತ ಒಂದು ಕೋಟಿಪಾಲು ಹೆಚ್ಚಿನ ಪುಣ್ಯವನ್ನು ಕೊಡತಕ್ಕವು.) ಈ ಕಾರ್ಯದಿಂದ ಇವನಿಗೆ ಸಮಾನರಾದ ಪುಣ್ಯವಂತರಿಲ್ಲವೆಂದು ತಾತ್ಪರ್ಯವು. ಈ ಮಾಂಧಾತ ರಾಜನು ತಾಯಿಯ ಗರ್ಭದಲ್ಲಿ ಹುಟ್ಟಿದವನಲ್ಲವು. ಮತ್ತೇನೆಂದರೆ ತಂದೆಯ ಹೊಟ್ಟೆಯಲ್ಲಿ ಹುಟ್ಟಿದವನು. ಇವನು ಜನನಕಾಲದಲ್ಲಿ ತಂದೆಯ ಹೊಟ್ಟೆಯನ್ನು ಭೇದಿಸಿಕೊಂಡು ಹೊರಗೆ ಬಂದವನು. ॥೪೦-೪೧॥

ರಾಜನು ಹೇಳಿದನು— ಓ ವ್ಯಾಸಮುನಿಯೇ, ನೀನು ಹೇಳಿದ ಈ ಸಂಗತಿಯು ಹಿಂದೆ ನಾನು ಕೇಳಿದುದೂ ಅಲ್ಲ ನೋಡಿದುದೂ ಅಲ್ಲ! ಈ ರಾಜನ ಉತ್ಪತ್ತಿಯ ವಿಷಯದಲ್ಲಿ ನೀನು ಹೇಳಿದುದು ಅಸಂಭವವಾದುದೆಂದು ಕಾಣುವುದು. ಆದುದರಿಂದ ಮಾಂಧಾತನು ಸರ್ವಾಂಗಸುಂದರನಾಗಿ ರಾಜನ ಹೊಟ್ಟೆಯಿಂದ ಹೇಗೆ ಹೊರಹೊಮ್ಮಿಸಲ್ಪಟ್ಟು ಹುಟ್ಟಿದನು? ಅದಕ್ಕೆ ಕಾರಣವೇನು? ಎಂಬುದನ್ನು ವಿಸ್ತಾರವಾಗಿ ಹೇಳಬೇಕು. ॥೪೨-೪೩॥

ರಾಜೋದರೇ ಯಥೋತ್ಪನ್ನಃ ಪುತ್ರಃ ಸರ್ವಾಂಗಸುಂದರಃ ।

॥ ವ್ಯಾಸ ಉವಾಚ ॥

ಯೌವನಾಶ್ವೋಽನಪತ್ಯೋಽಭೂತ್ ರಾಜಾ ಪರಮಧಾರ್ಮಿಕಃ॥೪೪॥

ಭಾರ್ಯಾಣಾಂ ಚ ಶತಂ ತಸ್ಯ ಬಭೂವ ನೃಪತೇರ್ನೃಪ ।
ರಾಜಾ ಚಿಂತಾಪರಃ ಪ್ರಾಯಶ್ಚಿಂತಯಾಮಾಸ ನಿತ್ಯಶಃ ॥೪೫॥

ಅಪತ್ಯಾರ್ಥೇ ಯೌವನಾಶ್ವೋ ದುಃಖಿತಸ್ತು ವನಂ ಗತಃ ।
ಋಷೀಣಾಮಾಶ್ರಮೇ ಪುಣ್ಯೇ ನಿರ್ವಿಣ್ಣಃ ಸ ಚ ಪಾರ್ಥಿವಃ ॥೪೬॥

ಮುಮೋಚ ದುಃಖಿತಃ ಶ್ವಾಸಾಂಸ್ತಾಪಸಾನಾಂ ಚ ಪಶ್ಯತಾಂ ।
ದೃಷ್ಟ್ವಾ ತು ದುಃಖಿತಂ ವಿಪ್ರಾ ಬಭೂವುಶ್ಚ ಕೃಪಾಲವಃ ॥೪೭॥

ತಮೂಚುರ್ಬ್ರಾಹ್ಮಣಾ ರಾಜನ್ಕಸ್ಮಾಚ್ಛೋಚಸಿ ಪಾರ್ಥಿವ ।
ಕಿಂ ತೇ ದುಃಖಂ ಮಹಾರಾಜ ಬ್ರೂಹಿ ಸತ್ಯಂ ಮನೋಗತಂ ॥೪೮॥
ಪ್ರತೀಕಾರಂ ಕರಿಷ್ಯಾಮೋ ದುಃಖಸ್ಯ ತವ ಸರ್ವಥಾ ।

---

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ಅತ್ಯಂತ ಧರ್ಮಾತ್ಮನಾದ ಆ ಯೌವನಾಶ್ವನೆಂಬ ರಾಜನು ಮಕ್ಕಳಿಲ್ಲದವನಾಗಿದ್ದನು. ಅವನಿಗೆ ನೂರುಮಂದಿ ಹೆಂಡಿರಿದ್ದರು ! ಆದರೂ ರಾಜನು ಪ್ರತಿದಿನವೂ ಮಕ್ಕಳಾಗಲಿಲ್ಲವಲ್ಲ, ಎಂದು ಚಿಂತಿಸುತ್ತಿದ್ದನು. ॥೪೪-೪೫॥

ಹೀಗೆ ಯೌವನಾಶ್ವನು ಮಕ್ಕಳಿಗಾಗಿ ದುಃಖಪಡುತ್ತಾ ಕಾಡಿಗೆ ಹೋಗಿ, ಅಲ್ಲಿ ಋಷಿಗಳ ಪುಣ್ಯಕರವಾದ ಆಶ್ರಮದಲ್ಲಿ ವೈರಾಗ್ಯದಿಂದ ಕೂಡಿ ಅತ್ಯಂತ ದುಃಖದಿಂದ ಋಷಿಗಳು ನೋಡುತ್ತಿದ್ದ ಹಾಗೆ ನಿಟ್ಟುಸಿರನ್ನು ಬಿಡುತ್ತಿದ್ದನು. ಹೀಗೆ ದುಃಖಪಡುವವನನ್ನು ನೋಡಿ ದಯಾಶಾಲಿಗಳಾದ ಬ್ರಾಹ್ಮಣರು ಅವನನ್ನು ಕುರಿತು, ಎಲೈ ಮಹಾರಾಜನೇ, ಏತಕ್ಕಾಗಿ ದುಃಖಪಡುತ್ತಿರುವೆ? ನಿನ್ನ ಮನಸ್ಸಿನ ದುಃಖವನ್ನು ಹೇಳು. ನಿನ್ನ ದುಃಖಕ್ಕೆ ಪ್ರತೀಕಾರವನ್ನು ಹೇಗಾದರೂ ಮಾಡೋಣ ಎಂದರು. ॥೪೬-೪೭-೪೮॥

|| ಯೌವನಾಶ್ವ ಉವಾಚ ||

ರಾಜ್ಯಂ ಧನಂ ಸದಶ್ವಾಶ್ಚ ವರ್ತಂತೇ ಮುನಯೋ ಮಮ ||೪೯||

ಭಾರ್ಯಾಣಾಂ ಚ ಶತಂ ಶುದ್ಧಂ ವರ್ತತೇ ವಿಶದಪ್ರಭಂ ।
ನಾಽರಾತಿಸ್ತ್ರಿಷು ಲೋಕೇಷು ಕೋಽಪ್ಯಸ್ತಿ ಬಲವಾನ್ಮಮ ||೫೦||

ಆಜ್ಞಾಕರಾಸ್ತು ಸಾಮಂತಾ ವರ್ತಂತೇ ಮಂತ್ರಿಣಸ್ತಥಾ ।
ಏಕಂ ಸಂತಾನಜಂ ದುಃಖಂ ನಾನ್ಯತ್ಪಶ್ಯಾಮಿ ತಾಪಸಾಃ ||೫೧||

ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ ।
ತಸ್ಮಾಚ್ಚಿಂತಾಮಿ ವಿಪ್ರೇಂದ್ರಾಃ ಸಂತಾನಾರ್ಥಂ ಭೃಶಂ ತತಃ ||೫೨||

ವೇದಶಾಸ್ತ್ರಾರ್ಥತತ್ವಜ್ಞಾಃ ತಾಪಸಾಶ್ಚ ಕೃತಶ್ರಮಾಃ ।
ಇಷ್ಟಿಂ ಸಂತಾನಕಾಮಸ್ಯ ಯುಕ್ತಾಂ ಜ್ಞಾತ್ವಾ ದಿಶಂತು ಮೇ ||೫೩||
ಕುರ್ವಂತು ಮಮ ಕಾರ್ಯಂ ವೈ ಕೃಪಾಚೇದಸ್ತಿ ತಾಪಸಾಃ ।

---

ಯೌವನಾಶ್ವನು ಹೇಳಿದನು— ಓ ತಪಸ್ವಿಗಳೇ, ರಾಜ್ಯವೂ ಧನವೂ ಉತ್ತಮವಾದ ಕುದುರೆಗಳೂ ನನಗಿವೆ. ಪರಿಶುದ್ಧರೂ ಸುಂದರಿಯರೂ ಆದ ನೂರು ಜನ ಹೆಂಡಿತಿಯರಿರುವರು. ಮೂರು ಲೋಕದಲ್ಲಿಯೂ ನನಗೆ ಶತ್ರುಗಳು ಯಾರೂ ಇರುವುದಿಲ್ಲ. ನನ್ನ ಅಪ್ಪಣೆಯಂತೆ ನಡೆಯುವ ಸಾಮಂತರಾಜರೂ ಮಂತ್ರಿಗಳೂ ಇರುವರು. ಆದರೂ ಮಕ್ಕಳಿಲ್ಲವೆಂಬುದೊಂದು ಹೊರತು ನನಗೆ ಮತ್ತೊಂದು ದುಃಖ ವಿಲ್ಲವು. ||೪೯-೫೦-೫೧||

ಪುತ್ರರಿಲ್ಲದವರಿಗೆ ಪುತ್ ಎಂಬ ನರಕದ ಪ್ರಾಪ್ತಿಯು ತಪ್ಪಿ, ಸದ್ಗತಿಯ ಪ್ರಾಪ್ತಿಗೆ ತಕ್ಕ ಪುಣ್ಯವಿಲ್ಲ! ಸ್ವರ್ಗಸುಖವಂತೂ ಇಲ್ಲವೇ ಇಲ್ಲ. ಆದುದರಿಂದ ಓ ಬ್ರಾಹ್ಮಣರೇ, ಸಂತಾನಕ್ಕಾಗಿ ನಾನು ಬಹಳ ದುಃಖಪಡುತ್ತಿರುವೆನು. ||೫೨||

ವೇದಶಾಸ್ತ್ರಗಳ ತತ್ವವನ್ನು ತಿಳಿದ ತಪಸ್ವಿಗಳಾದ ನೀವು ಸಂತಾನ ಕಾಮನಾದ ನನಗೆ ಯೋಗ್ಯವಾದ ಯಜ್ಞವು ಯಾವುದೆಂದು ತಿಳಿದು ಅಪ್ಪಣೆಮಾಡಿ, ನನ್ನ ಮೇಲೆ ನಿಮಗೆ ದಯೆಯಿದ್ದರೆ, ನನ್ನ ಅಂತಹ ಪುತ್ರಕಾಮೇಷ್ಟಿಯಾಗದ ಕೆಲಸವನ್ನು ನೆರವೇರಿಸಿ ಕೊಡಿ, ಎಂದನು. ||೫೩||

|| ವ್ಯಾಸ ಉವಾಚ ||

ತಚ್ಛ್ರುತ್ವಾ ವಚನಂ ರಾಜ್ಞಃ ಕೃಪಯಾ ಪೂರ್ಣಮಾನಸಾಃ ||೫೪||

ಕಾರಯಾಮಾಸುರವ್ಯಗ್ರಾಸ್ತಸ್ಯೇಷ್ಟಿಮಿಂದ್ರದೇವತಾಂ ।
ಕಲಶಃ ಸ್ಥಾಪಿತಸ್ತತ್ರ ಜಲಪೂರ್ಣಸ್ತು ವಾಡವೈಃ ||೫೫||

ಮಂತ್ರಿತೋ ವೇದಮಂತ್ರೈಶ್ಚ ಪುತ್ರಾರ್ಥಂ ತಸ್ಯ ಭೂಪತೇಃ ।
ರಾಜಾ ತದ್ಯಜ್ಞಸದನಂ ಪ್ರವಿಷ್ಟಸ್ತೃಷಿತೋ ನಿಶಿ ||೫೬||

ವಿಪ್ರಾನ್ದೃಷ್ಟ್ವಾ ಶಯಾನಾನ್ಸ ಪಪೌ ಮಂತ್ರಜಲಂ ಸ್ವಯಂ ।
ಭಾರ್ಯಾರ್ಥಂ ಸಂಸ್ಕೃತಂ ವಿಪ್ರೈಃ ಮಂತ್ರಿತಂ ವಿಧಿನೋದ್ಧೃತಂ||೫೭||

ಪೀತಂ ರಾಜ್ಞಾ ತೃಷಾಽಽರ್ತೇನ ತದಜ್ಞಾನಾನ್ನೃಪೋತ್ತಮ ।
ವೃುದಕಂ ಕಲಶಂ ದೃಷ್ಟ್ವಾ ತದಾ ವಿಪ್ರಾ ವಿಶಂಕಿತಾಃ ||೫೮||

---

ವ್ಯಾಸಋಷಿಯು ಹೇಳಿದನು—ಯೌವನಾಶ್ವನ ಮಾತನ್ನು ಕೇಳಿ ದಯೆಯಿಂದ ಕೂಡಿದ ಮನಸ್ಸುಳ್ಳವರಾಗಿ ಆ ಬ್ರಾಹ್ಮಣರು ಆ ರಾಜನಿಂದ ಇಂದ್ರದೇವತಾಕವಾದ ಒಂದು ಯಜ್ಞವನ್ನು ಮಾಡಿಸಿದರು. ಅಲ್ಲದೆ ಆ ಬ್ರಾಹ್ಮಣರು ಆ ಯಜ್ಞಾಂಗವಾಗಿ ನೀರಿನಿಂದ ತುಂಬಿದ ಒಂದು ಕಲಶವನ್ನು ಸ್ಥಾಪಿಸಿ ಆ ರಾಜನಿಗೆ ಪುತ್ರೋತ್ಪತ್ತಿಯಾಗಬೇಕೆಂಬ ಉದ್ದೇಶದಿಂದ ವೇದಮಂತ್ರಗಳಿಂದ ಆ ಕಲಶದ ಉದಕವನ್ನು ಮಂತ್ರಿಸಿ ಇಟ್ಟಿದ್ದರು. ||೫೪-೫೫||

ಒಂದು ರಾತ್ರಿಯಲ್ಲಿ ಬಾಯಾರಿಕೆಯಿಂದ ಪೀಡಿತನಾಗಿದ್ದ ಆ ರಾಜನು ಆ ಯಜ್ಞಶಾಲೆಯನ್ನು ಪ್ರವೇಶಿಸಿ, ಬ್ರಾಹ್ಮಣರೆಲ್ಲರೂ ಮಲಗಿರುವುದನ್ನು ಕಂಡು, ಆ ಕಲಶದಲ್ಲಿದ್ದ, ರಾಜನ ಪತ್ನಿಯರಿಗಾಗಿ ಸಂಸ್ಕಾರಮಾಡಿ ಮತ್ತು ವಿಧಿಗನುಸಾರವಾಗಿ ಶೇಖರಿಸಿ, ಮಂತ್ರಿಸಿಟ್ಟಿದ್ದ ನೀರನ್ನು ಕುಡಿದುಬಿಟ್ಟನು. ||೫೬-೫೭||

ಜನಮೇಜಯರಾಜನೇ, ಕೇಳು—ಬಾಯಾರಿಕೆಯಿಂದ ಕೂಡಿದ್ದ ಯೌವನಾಶ್ವನು ತಿಳಿಯದೆ ಆ ಕಲಶದ ನೀರನ್ನು ಕುಡಿದನು. ನೀರಿಲ್ಲದ ಕಲಶವನ್ನು ನೋಡಿ ಬ್ರಾಹ್ಮಣರು ಸಂದೇಹದಿಂದ ಈ ನೀರನ್ನು ಕುಡಿದವರಾರೆಂದು ಕೇಳಿ, ರಾಜನೇ

ಪಪ್ರಚ್ಛುಸ್ತೇ ನೃಪಂ ಕೇನ ಪೀತಂ ಜಲಮಿತಿ ದ್ವಿಜಾಃ ।
ರಾಜ್ಞಾ ಪೀತಂ ವಿದಿತ್ವಾ ತೇ ಜ್ಞಾತ್ವಾ ದೈವಬಲಂ ಮಹತ್ ॥೪೯॥

ಇಷ್ಟಿಂ ಸಮಾಪಯಾಮಾಸುಃ ಗತಾಸ್ತೇ ಮುನಯೋ ಗೃಹಾನ್ ।
ಗರ್ಭಂ ದಧಾರ ನೃಪತಿಃ ತತೋ ಮಂತ್ರಬಲಾದಥ ॥೬೦॥

ತತಃ ಕಾಲೇ ಸ ಉತ್ಪನ್ನಃ ಕುಕ್ಷಿಂ ಭಿತ್ವಾಽಸ್ಯ ದಕ್ಷಿಣಂ ।
ಪುತ್ರಂ ನಿಷ್ಕಾಸಯಾಮಾಸು ರ್ಮಂತ್ರಿಣಸ್ತಸ್ಯ ಭೂಪತೇಃ ॥೬೧॥

ದೇವಾನಾಂ ಕೃಪಯಾ ತತ್ರ ನ ಮಮಾರ ಮಹೀಪತಿಃ ।
ಕಂ ಧಾಸ್ಯತಿ ಕುಮಾರೋಽಯಂ ಮಂತ್ರಿಣಶ್ಚು ಕ್ರುಶುರ್ಭೃಶಂ ॥೬೨॥

ತದೇಂದ್ರೋ ದೇಶಿನೀಂ ಪ್ರಾದಾತ್ ಮಂಧಾತೇತ್ಯವದದ್ವಚಃ ।
ಸೋಽಭವದ್ಬಲವಾನ್ರಾಜಾ ಮಾಂಧಾತಾ ಪೃಥಿವೀಪತಿಃ ॥೬೩॥
ತದುತ್ಪತ್ತಿಸ್ತು ಭೂಪಾಲ ಕಥಿತಾ ತವ ವಿಸ್ತರಾತ್ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ನವಮೋಽಧ್ಯಾಯಃ.

---

ಕುಡಿದುದನ್ನು ತಿಳಿದು, ಅದೃಷ್ಟದ ಬಲವೇ ಪ್ರಬಲವಾದುದೆಂಬುದನ್ನು ಮನಗಂಡರು. ಮತ್ತು ಆ ಯಜ್ಞವನ್ನು ಪೂರೈಸಿದರು. ಬಳಿಕ ಋಷಿಗಳೆಲ್ಲರೂ ತಂತಮ್ಮ ಮನೆಗಳಿಗೆ ಹೋದರು. ॥೫೮-೫೯॥

ಯೌವನಾಶ್ವನು ಆ ಮಂತ್ರಿಸಿಟ್ಟಿದ್ದ ಕಲಶದ ನೀರನ್ನು ಕುಡಿದುದರಿಂದ ಆ ಮಂತ್ರಬಲದಿಂದ ಗರ್ಭವನ್ನು ಧರಿಸಿದನು! ಮತ್ತು ಹತ್ತನೆಯ ತಿಂಗಳಲ್ಲಿ ಆ ರಾಜನ ಬಲಭಾಗದ ಹೊಟ್ಟೆಯನ್ನು ಭೇದಿಸಿಕೊಂಡು ಪುತ್ರನು ಜನಿಸಿದನು. ಮಂತ್ರಜ್ಞರು ಮಂತ್ರಬಲದಿಂದ ಆ ರಾಜನ ಹೊಟ್ಟೆಯಿಂದ ಪುತ್ರನು ಹೊರಗೆ ಬರುವಂತೆ ಮಾಡಿದರು! ॥೬೦-೬೧॥

ದೇವತೆಗಳ ಅನುಗ್ರಹದಿಂದ ಆ ರಾಜನು ಸಾಯಲಿಲ್ಲವು. ಮಗುವು ಯಾರ ಸ್ತನ್ಯಪಾನವನ್ನು ಮಾಡುವುದು? ಎಂದು ಆ ಮಂತ್ರಜ್ಞರು ಮಾತನಾಡುತ್ತಿದ್ದರು.

ಆಗ ದೇವೇಂದ್ರನು ತನ್ನ ತರ್ಜನಿಯ ಬೆರಳನ್ನು ಕೊಟ್ಟು ಮಾಂಧಾತಾ ಎಂದು ಹೇಳಿದನು. ಆ ಮಾಂಧಾತರಾಜನು ಹೀಗೆ ಹೆಸರನ್ನು ಪಡೆದು ಬಲವಂತನಾಗಿ ಬೆಳೆದನು. ಎಲೈ ಜನಮೇಜಯನೇ, ಹೀಗೆ ಆ ಮಾಂಧಾತ ರಾಜನ ಉತ್ಪತ್ತಿಯ ಕಥೆಯನ್ನು ವಿಸ್ತಾರವಾಗಿ ನಿನಗೆ ಹೇಳಿರುವೆನು. ||೬೨-೬೩||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

## ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಬಭೂವ ಚಕ್ರವರ್ತೀ ಸ ನೃಪತಿಃ ಸತ್ಯಸಂಗರಃ ।**
**ಮಾಂಧಾತಾ ಪೃಥಿವೀಂ ಸರ್ವಾಮಜಯನ್ನೃಪತೀಶ್ವರಃ ॥೧॥**

**ದಸ್ಯವೋಽಸ್ಯ ಭಯತ್ರಸ್ತಾ ಯಯುರ್ಗಿರಿಗುಹಾಸು ಚ ।**
**ಇಂದ್ರೇಣಾಸ್ಯ ಕೃತಂ ನಾಮ ತ್ರಸದಸ್ಯುರಿತಿ ಸ್ಫುಟಂ ॥೨॥**

**ತಸ್ಯ ಬಿಂದುಮತೀ ಭಾರ್ಯಾ ಶಶಬಿಂದೋಃ ಸುತಾಽಭವತ್ ।**
**ಪತಿವ್ರತಾ ಸುರೂಪಾ ಚ ಸರ್ವಲಕ್ಷಣಸಂಯುತಾ ॥೩॥**

**ತಸ್ಯಾಮುತ್ಪಾದಯಾಮಾಸ ಮಾಂಧಾತಾ ದ್ವೌ ಸುತೌ ನೃಪ ।**
**ಪುರುಕುತ್ಸಂ ಸುವಿಖ್ಯಾತಂ ಮುಚುಕುಂದಂ ತಥಾಪರಂ ॥೪॥**

---

ವ್ಯಾಸಋಷಿಯು ಹೇಳಿದನು—ಸತ್ಯಪ್ರತಿಜ್ಞೆಯುಳ್ಳ ಆ ಮಾಂಧಾತರಾಜನು ಸಮಸ್ತ ಭೂಮಂಡಲವನ್ನೂ ಜಯಿಸಿ ಎಲ್ಲ ರಾಜರಿಗೂ ಅಧಿಪತಿಯಾಗಿ ಚಕ್ರವರ್ತಿಯಾದನು. ॥೧॥

ಪರದ್ರವ್ಯವನ್ನಪಹರಿಸುವ ದಸ್ಯುಗಳೆಂಬ ಕಳ್ಳಜನರು ಈ ಚಕ್ರವರ್ತಿಯ ಭಯದಿಂದ ಪರ್ವತ ಗುಹೆಗಳಲ್ಲಿ ಅಡಗಿಕೊಂಡರು. ಇದರಿಂದ ದೇವೇಂದ್ರನು ಇವನಿಗೆ ತ್ರಸದಸ್ಯು ಎಂದು ಹೆಸರನ್ನು ಕೊಟ್ಟನು. ಆ ಮಾಂಧಾತನಿಗೆ ಶಶಬಿಂದು ರಾಜನ ಮಗಳಾದ ಬಿಂದುಮತೀ ಎಂಬ ಸಕಲ ಶುಭಲಕ್ಷಣಗಳಿಂದ ಕೂಡಿದ

ಪುರುಕುತ್ಸಾತ್ತತೋಽರಣ್ಯಃ ಪುತ್ರಃ ಪರಮಧಾರ್ಮಿಕಃ ।
ಪಿತೃಭಕ್ತಿರತಶ್ಚಾಭೂತ್ ದ್ಬೃಹದಶ್ವಸ್ತದಾತ್ಮಜಃ ॥೫॥

ಹರ್ಯಶ್ವಸ್ತಸ್ಯ ಪುತ್ರೋಽಭೂ ದ್ಧಾರ್ಮಿಕಃ ಪರಮಾರ್ಥವಿತ್ ।
ತಸ್ಮಾತ್ಮಜಸ್ತ್ರಿಧನ್ವಾಽಭೂದರುಣಸ್ತಸ್ಯ ಚಾತ್ಮಜಃ ॥೬॥

ಅರುಣಸ್ಯ ಸುತಃ ಶ್ರೀಮಾನ್ಸತ್ಯವ್ರತ ಇತಿ ಶ್ರುತಃ ।
ಸೋಽಭೂದಿಚ್ಛಾಚರಃ ಕಾಮೀ ಮಂದಾತ್ಮಾ ಹ್ಯತಿಲೋಲುಪಃ ॥೭॥

ಸ ಪಾಪಾತ್ಮಾ ವಿಪ್ರಭಾರ್ಯಾಂ ಹೃತವಾನ್ಕಾಮಮೋಹಿತಃ ।
ವಿವಾಹೇ ತಸ್ಯ ವಿಘ್ನಂ ಸ ಚಕಾರ ನೃಪತೇಃ ಸುತಃ ॥೮॥

ಮಿಲಿತಾ ಬ್ರಾಹ್ಮಣಾಸ್ತತ್ರ ರಾಜಾನಮರುಣಂ ನೃಪ ।
ಊಚುರ್ಭೃಶಂ ಸುದುಃಖಾರ್ತಾ ಹಾ ಹತಾಃ ಸ್ಮೇತಿ ಚಾಸಕೃತ್॥೯॥

---

ಪತಿವ್ರತೆಯಾದ ಹೆಂಡಿತಿಯಿದ್ದಳು. ಆ ಹೆಂಡಿತಿಯಲ್ಲಿ ಮಾಂಧಾತನು ಪುರುಕುತ್ಸ, ಮುಚುಕುಂದ, ಎಂಬ ಇಬ್ಬರು ಮಕ್ಕಳನ್ನು ಪಡೆದನು. ||೨-೩-೪||

ಪುರುಕುತ್ಸನಿಗೆ ಅತ್ಯಂತ ಧರ್ಮಿಷ್ಠನೂ ಪಿತೃಭಕ್ತಿಯುಳ್ಳವನೂ ಆದ ಬೃಹದಶ್ವನೆಂಬ ಹೆಸರುಳ್ಳ ಅನರಣ್ಯನು ಪುತ್ರನಾದನು. ||೫||

ಆ ಅನರಣ್ಯನಿಗೆ ಧಾರ್ಮಿಕನೂ ತತ್ವಜ್ಞಾನಸಂಪನ್ನನೂ ಆದ ಹರ್ಯಶ್ವನೂ, ಆ ಹರ್ಯಶ್ವನಿಗೆ ಅರುಣನೆಂಬವನೂ ಮಕ್ಕಳು ಆದರು. ||೬||

ಅರುಣನಿಗೆ ಸತ್ಯವ್ರತನೆಂಬ ಮಗನು ಹುಟ್ಟಿದನು. ಅವನು ಮನಸ್ಸು ಬಂದಂತೆ ನಡೆಯತಕ್ಕವನೂ, ಕಾಮುಕನೂ, ಬುದ್ಧಿಹೀನನೂ, ಇಂದ್ರಿಯಭೋಗಾಸಕ್ತನೂ, ಆಗಿದ್ದನು. ಆ ಪಾಪಿಯಾದ ಸತ್ಯವ್ರತನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ವಿವಾಹವಾಗುತ್ತಿರುವಾಗ ಆ ವಿವಾಹಕ್ಕೆ ವಿಘ್ನವನ್ನುಂಟುಮಾಡಿ, ಕಾಮಾಸಕ್ತನಾಗಿ, ಆಗ ವರನಾಗಿದ್ದ ಬ್ರಾಹ್ಮಣನ ಪತ್ನಿಯನ್ನು ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋದನು. ||೭-೮||

ಜನಮೇಜಯನೇ, ಕೇಳು—ಆಗ ಬ್ರಾಹ್ಮಣರೆಲ್ಲರೂ ಸೇರಿ ರಾಜನಾದ ಅರುಣನ ಸಮೀಪಕ್ಕೆ ಹೋಗಿ ಅತ್ಯಂತ ದುಃಖಪಡುತ್ತಾ, ತಮ್ಮ ಕಷ್ಟವನ್ನು ಅನೇಕ ಬಾರಿ ಹೇಳಿಕೊಂಡರು. ರಾಜನು ಆ ಪುರನಿವಾಸಿಗಳಾದ ಬ್ರಾಹ್ಮಣರನ್ನು ಕುರಿತು,

ಪಪ್ರಚ್ಛ ರಾಜಾ ತಾನ್ವಿಪ್ರಾನ್ ದುಃಖಿತಾನ್ಪುರವಾಸಿನಃ ।
ಕಿಂ ಕೃತಂ ಮಮ ಪುತ್ರೇಣ ಭವತಾಮಶುಭಂ ದ್ವಿಜಾಃ ॥೧೦॥

ತನ್ನಿಶಮ್ಯ ದ್ವಿಜಾ ವಾಕ್ಯಂ ರಾಜ್ಞೋ ವಿನಯಪೂರ್ವಕಂ ।
ತದೋಚುಸ್ತ್ವರುಣಂ ವಿಪ್ರಾಃ ಕೃತಾಶೀರ್ವಚನಾ ಭೃಶಂ ॥೧೧॥

॥ ಬ್ರಾಹ್ಮಣಾ ಊಚುಃ ॥

ರಾಜಂಸ್ತವ ಸುತೇನಾಽದ್ಯ ವಿವಾಹೇ ಪ್ರಹೃತಾ ಕಿಲ ।
ವಿವಾಹಿತಾ ವಿಪ್ರಕನ್ಯಾ ಬಲೇನ ಬಲಿನಾಂ ವರ ॥೧೨॥

॥ ವ್ಯಾಸ ಉವಾಚ ॥

ಶ್ರುತ್ವಾ ತೇಷಾಂ ವಚಸ್ತಥ್ಯಂ ರಾಜಾ ಪರಮಧಾರ್ಮಿಕಃ ।
ಪುತ್ರಮಾಹ ವೃಥಾ ನಾಮ ಕೃತಂ ತೇ ದುಷ್ಟಕರ್ಮಣಾ ॥೧೩॥

ಗಚ್ಛ ದೂರಂ ಸುಮಂದಾತ್ಮನ್ ದುರಾಚಾರ ಗೃಹಾನ್ಮಮ ।
ನ ಸ್ಥಾತವ್ಯಂ ತ್ವಯಾ ಪಾಪ ವಿಷಯೇ ಮಮ ಸರ್ವಥಾ ॥೧೪॥

---

ಎಲೈ ಬ್ರಾಹ್ಮಣರೇ, ನನ್ನ ಮಗನು ನಿಮಗೆ ಏನು ಕೆಡುಕನ್ನು ಮಾಡಿದನು? ಎಂದು ಕೇಳಿದನು. ॥೯-೧೦॥

ವಿನಯವಾಗಿ ಮಾತನಾಡಿದ ರಾಜನ ಮಾತನ್ನು ಕೇಳಿ, ಬ್ರಾಹ್ಮಣರು ಆಶೀರ್ವಾದವನ್ನು ಮಾಡಿ, ಆ ಅರುಣನಿಗೆ ತಮ್ಮ ದುಃಖದ ಕಾರಣವನ್ನು ಹೀಗೆ ಹೇಳಿದರು. ॥೧೧॥

ಎಲೈ ರಾಜನೇ, ನಿನ್ನ ಮಗನು ಈದಿನ ನಡೆಯುತ್ತಿದ್ದ ವಿವಾಹವನ್ನು ನಿಲ್ಲಿಸಿ, ವಿವಾಹಿತಳಾಗಿದ್ದ ಬ್ರಾಹ್ಮಣಕನ್ಯೆಯನ್ನು ಬಲಾತ್ಕಾರವಾಗಿ ಅಪಹರಿಸಿ ಅವಳನ್ನು ತಾನು ವಿವಾಹಮಾಡಿಕೊಂಡನು. ಎಂದರು. ॥೧೨॥

ಅತ್ಯಂತ ಧರ್ಮಿಷ್ಠನಾದ ಆ ರಾಜನು ನಿಜವಾದ ಆ ಬ್ರಾಹ್ಮಣರ ಮಾತನ್ನು ಕೇಳಿ, ಮಗನನ್ನು ಕುರಿತು 'ನಿನಗೆ ಸತ್ಯವ್ರತನೆಂಬ ಹೆಸರು ವ್ಯರ್ಥವಾದುದಾಯಿತು! ನೀನು ದುಷ್ಕಾರ್ಯವನ್ನು ಮಾಡಿರುವೆ, ಬುದ್ಧಿಹೀನನೂ ದುರಾಚಾರಿಯೂ ಆದ ನೀನು ನನ್ನ ಮನೆಯನ್ನು ಬಿಟ್ಟು ದೂರ ಹೊರಟು ಹೋಗು. ಪಾಪಿಯಾದ ನೀನು ನನ್ನ ದೇಶದಲ್ಲಿ ಖಂಡಿತವಾಗಿಯೂ ಇರಬೇಡ' ಎಂದು ಹೇಳಿದನು. ॥೧೩-೧೪॥

**ಕುಪಿತಂ ಪಿತರಂ ಪ್ರಾಹ ಕ್ವ ಗಚ್ಛಾಮೀತಿ ವೈ ಮುಹುಃ ।**
**ಅರುಣಸ್ತಮಥೋವಾಚ ಶ್ವಪಾಕೈಃ ಸಹ ವರ್ತಯ ॥೧೫॥**

**ಶ್ವಪಚಸ್ಯ ಕೃತಂ ಕರ್ಮ ದ್ವಿಜದಾರಾಪಹಾರಣಂ ।**
**ತಸ್ಮಾತ್ತೈಃ ಸಹ ಸಂಸರ್ಗಂ ಕೃತ್ವಾ ತಿಷ್ಠ ಯಥಾಸುಖಂ ॥೧೬॥**

**ನಾಹಂ ಪುತ್ರೇಣ ಪುತ್ರಾರ್ಥೀ ತ್ವಯಾ ಚ ಕುಲಪಾಂಸನ ।**
**ಯಥೇಷ್ಟಂ ವ್ರಜ ದುಷ್ಟಾತ್ಮನ್ ಕೀರ್ತಿನಾಶಃ ಕೃತಸ್ತ್ವಯಾ ॥೧೭॥**

**ಸ ನಿಶಮ್ಯ ಪಿತುರ್ವಾಕ್ಯಂ ಕುಪಿತಸ್ಯ ಮಹಾತ್ಮನಃ ।**
**ನಿಶ್ಚಕ್ರಾಮ ಪುರಾತ್ತಸ್ಮಾತ್ ತರಸಾ ಶ್ವಪಚಾನ್ಯಯೌ ॥೧೮॥**

**ಸತ್ಯವ್ರತಸ್ತದಾ ತತ್ರ ಶ್ವಪಾಕೈಃ ಸಹ ವರ್ತತೇ ।**
**ಧನುರ್ಬಾಣಧರಃ ಶ್ರೀಮಾನ್ಕವಚೀ ಕರುಣಾಲಯಃ ॥೧೯॥**

**ಯದಾ ನಿಷ್ಕಾಸಿತಃ ಪಿತ್ರಾ ಕುಪಿತೇನ ಮಹಾತ್ಮನಾ ।**
**ಗುರುಣಾಽಥ ವಸಿಷ್ಠೇನ ಪ್ರೇರಿತೋಽಸೌ ಮಹೀಪತಿಃ ॥೨೦॥**

---

ಮಗನು ಕೋಪಗೊಂಡ ತಂದೆಯನ್ನು ಕುರಿತು, ಎಲ್ಲಿಗೆ ಹೋಗಲಿ? ಎಂದು ಮತ್ತೆ ಮತ್ತೆ ಕೇಳಿದನು. ಅರುಣನು ಮಗನನ್ನು ಕುರಿತು 'ಚಾಂಡಾಲರ ಜತೆಯಲ್ಲಿರು. ಬ್ರಾಹ್ಮಣಪತ್ನಿಯನ್ನು ಅಪಹರಿಸಿ ಚಂಡಾಲನ ಕಾರ್ಯವನ್ನು ಮಾಡಿರುವೆ. ಆದುದರಿಂದ ಅವರೊಡನೆ ಸೇರಿಕೊಂಡು ನಿನ್ನ ಮನಬಂದಂತೆ ಇರು. ನಮ್ಮ ಕುಲಕ್ಕೆ ಕಳಂಕವನ್ನುಂಟುಮಾಡಿದ ನೀನು ಮಗನಲ್ಲವು. ನಿನ್ನಂತಹ ಮಗನಲ್ಲಿ ನನಗೆ ಅಪೇಕ್ಷೆಯು ಇಲ್ಲವು. ಕುಲದ ಯಶಸ್ಸನ್ನು ಹಾಳುಮಾಡಿದ ದುಷ್ಟನಾದ ನೀನು ನಿನ್ನ ಇಷ್ಟಬಂದ ಕಡೆ ಹೋಗು.' ಎಂದನು. ॥೧೫-೧೬-೧೭॥

ಕೋಪವನ್ನು ಹೊಂದಿದ ತಂದೆಯ ಮಾತನ್ನು ಕೇಳಿ, ಸತ್ಯವ್ರತನು ಬೇಗನೆ ಪಟ್ಟಣದಿಂದ ಹೊರಟು, ಕವಚವನ್ನೂ ಧನುರ್ಬಾಣವನ್ನೂ ಧರಿಸಿ, ಶ್ವಪಚರ ಸಮೀಪಕ್ಕೆ ಹೋಗಿ ಆ ಚಾಂಡಲರ ಜತೆಯಲ್ಲಿ ವಾಸವಾಗಿದ್ದನು. ಅವನು ಕನಿಕರವನ್ನು ಉಂಟುಮಾಡುತ್ತಿದ್ದನು. ॥೧೮-೧೯॥

ಕೋಪಗೊಂಡ ತಂದೆಯು ತನ್ನನ್ನು ದೇಶದಿಂದ ಹೊರಡಿಸಿದಾಗ, ಧರ್ಮ ಶಾಸ್ತ್ರವನ್ನು ಬಲ್ಲ ಗುರುವಾದ ವಸಿಷ್ಠನು ಈ ದಂಡನೆಯನ್ನು ನಿವಾರಣಮಾಡದೆ,

ತಸ್ಮಾತ್ಸತ್ಯವ್ರತಸ್ತಸ್ಮಿನ್ ಬಭೂವ ಕ್ರೋಧಸಂಯುತಃ ।
ವಸಿಷ್ಠೇ ಧರ್ಮಶಾಸ್ತ್ರಜ್ಞೇ ನಿವಾರಣಪರಾಙ್ಮುಖೇ ॥೨೧॥

ಕೇನ ಚಿತ್ಕಾರಣೇನಾಥ ಪಿತಾ ತಸ್ಯ ಮಹೀಪತಿಃ ।
ಪುತ್ರಾರ್ಥೇಽಸೌ ತಪಸ್ತಪ್ತುಂ ಪುರಂ ತ್ಯಕ್ತ್ವಾ ವನಂ ಗತಃ ॥೨೨॥

ನ ವವರ್ಷ ತದಾ ತಸ್ಮಿನ್ ವಿಷಯೇ ಪಾಕಶಾಸನಃ ।
ಸಮಾ ದ್ವಾದಶ ರಾಜೇಂದ್ರ ತೇನಾಧರ್ಮೇಣ ಸರ್ವಥಾ ॥೨೩॥

ವಿಶ್ವಾಮಿತ್ರಸ್ತದಾ ದಾರಾನ್ ತಸ್ಮಿಂಸ್ತು ವಿಷಯೇ ನೃಪ ।
ಸನ್ಯಸ್ಯ ಕೌಶಿಕೀತೀರೇ ಚಚಾರ ವಿಪುಲಂ ತಪಃ ॥೨೪॥

ಕಾತರಾ ತತ್ರ ಸಂಜಾತಾ ಭಾರ್ಯಾ ವೈ ಕೌಶಿಕಸ್ಯ ಹ ।
ಕುಟುಂಬಭರಣಾರ್ಥಾಯ ದುಃಖಿತಾ ವರವರ್ಣಿನೀ ॥೨೫॥

ಬಾಲಕಾನ್ಕ್ಷುಧಯಾಕ್ರಾಂತಾನ್ ರುದತಃ ಪಶ್ಯತೀ ಭೃಶಂ ।
ಯಾಚಮಾನಾಂಶ್ಚ ನೀವಾರಾನ್ ಕಷ್ಟಮಾಪ ಪತಿವ್ರತಾ ॥೨೬॥

---

ರಾಜನು ದಂಡಿಸುವಂತೆ ಪ್ರೇರಣೆಮಾಡಿದುದರಿಂದ, ಸತ್ಯವ್ರತನು ಆ ವಸಿಷ್ಠನ ಮೇಲೆ ಕೋಪದಿಂದ ಕೂಡಿದ್ದನು. ॥೨೦-೨೧॥

ಸತ್ಯವ್ರತನ ತಂದೆಯಾದ ಮಹಾರಾಜನಾದ ಅರುಣನು ಯಾವುದೋ ಕಾರಣದಿಂದ ಪುತ್ರಾರ್ಥವಾಗಿ ತಪಸ್ಸನ್ನು ಮಾಡಬೇಕೆಂದು ಪಟ್ಟಣವನ್ನು ಬಿಟ್ಟು ವನಕ್ಕೆ ಹೋದನು. ಆ ದೇಶದಲ್ಲಿ ಈ ರೀತಿಯಾದ ಅಧರ್ಮವಿದ್ದುದರಿಂದ ಹನ್ನೆರಡು ವರ್ಷಗಳ ವರೆಗೆ ಕಾಲಕ್ಕೆ ಸರಿಯಾಗಿ ದೇವೇಂದ್ರನಿಂದ ಮಳೆಯಾಗಲಿಲ್ಲ.॥೨೨-೨೩॥

ಅದೇ ಸಮಯದಲ್ಲಿ ವಿಶ್ವಾಮಿತ್ರನು ಆ ದೇಶದಲ್ಲಿ ತನ್ನ ಹೆಂಡತಿಯನ್ನು ಬಿಟ್ಟು, ತಾನು ಕೌಶಿಕೀನದಿಯ ತೀರದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಆ ಕೌಶಿಕನ ಹೆಂಡತಿಯು ಆ ಬರಗಾಲದಲ್ಲಿ ಮಕ್ಕಳನ್ನು ಕಾಪಾಡಲು ಶಕ್ತಿಯಿಲ್ಲದೆ ಭಯದಿಂದ ದುಃಖಿಸುತ್ತಿದ್ದಳು. ॥೨೪-೨೫॥

ಪತಿವ್ರತೆಯಾದ ವಿಶ್ವಾಮಿತ್ರನ ಹೆಂಡತಿಯು ಹಸಿವಿನಿಂದ ಕೂಡಿದ ಮಕ್ಕಳು ಅಳುತ್ತಾ ಆಹಾರವನ್ನೂ ಧಾನ್ಯವನ್ನೂ ಬೇಡುತ್ತಿರುವುದನ್ನು ಕಂಡು ಕಷ್ಟದಿಂದ ಹೀಗೆ ಆಲೋಚಿಸಿದಳು. ॥೨೬॥

ಚಿಂತಯಾಮಾಸ ದುಃಖಾರ್ತಾ ಶೋಕಾನ್ವೀಕ್ಷ್ಯ ಕ್ಷುಧಾತುರಾನ್ ।
ನೃಪೋ ನಾಸ್ತಿ ಪುರೇ ಹ್ಯದ್ಯ ಕಂ ಯಾಚೇ ವಾ ಕರೋಮಿ ಕಿಂ॥೨೭॥

ನ ಮೇ ತ್ರಾತಾಽಸ್ತಿ ಪುತ್ರಾಣಾಂ ಪತಿರ್ಮೇ ನಾಸ್ತಿ ಸನ್ನಿಧೌ ।
ರುದಂತಿ ಬಾಲಕಾಃ ಕಾಮಂ ಧಿಙ್ಮೇ ಜೀವನಮದ್ಯ ವೈ ॥೨೮॥

ಧನಹೀನಾಂ ಚ ಮಾಂ ತ್ಯಕ್ತ್ವಾ ತಪಸ್ತಪ್ತುಂ ಗತಃ ಪತಿಃ ।
ನ ಜಾನಾತಿ ಸಮರ್ಥೋಽಪಿ ದುಃಖಿತಾಂ ಧನವರ್ಜಿತಾಂ ॥೨೯॥

ಬಾಲಾನಾಂ ಭರಣಂ ಕೇನ ಕರೋಮಿ ಪತಿನಾ ವಿನಾ ।
ಮರಿಷ್ಯಂತಿ ಸುತಾಃ ಸರ್ವೇ ಕ್ಷುಧಯಾ ಪೀಡಿತಾ ಭೃಶಂ ॥೩೦॥

ಏಕಂ ಸುತಂ ತು ವಿಕ್ರೀಯ ದ್ರವ್ಯೇಣ ಕಿಯತಾ ಪುನಃ ।
ಪಾಲಯಾಮಿ ಸುತಾನನ್ಯಾನೇಷ ಮೇ ವಿಹಿತೋ ವಿಧಿಃ ॥೩೧॥

ಸರ್ವೇಷಾಂ ಮಾರಣಂ ನಾದ್ಧಾ ಯುಕ್ತಂ ಮನು ವಿಪರ್ಯಯೇ ।
ಕಾಲಸ್ಯ ಕಲನಾಯಾಹಂ ವಿಕ್ರೀಣಾಮಿ ತಥಾಽತ್ಮಜಂ ॥೩೨॥

---

ಈಗ ಈ ಪಟ್ಟಣದಲ್ಲಿ ರಾಜನಿಲ್ಲವು. ನಾನು ಆಹಾರಕ್ಕಾಗಿ ಯಾರನ್ನು ಯಾಚಿಸಲಿ? ಏನನ್ನು ಮಾಡಲಿ! ನನ್ನನ್ನೂ ಮಕ್ಕಳನ್ನೂ ಕಾಪಾಡತಕ್ಕವರಿಲ್ಲ. ನನ್ನ ಪತಿಯೂ ಸಮಾಪದಲ್ಲಿಲ್ಲವು. ಹುಡುಗರು ವಿಶೇಷವಾಗಿ ಅಳುತ್ತಿರುವರು. ನನ್ನ ಬದುಕನ್ನು ನಿಂದಿಸಬೇಕು. ಹಣವಿಲ್ಲದೆ ನನ್ನನ್ನು ಇಲ್ಲಿ ಬಿಟ್ಟು ನನ್ನ ಗಂಡನು ತಪಸ್ಸನ್ನು ಮಾಡುವುದಕ್ಕೆ ಹೋದನು. ಅವನು ನಮ್ಮೆಲ್ಲರನ್ನೂ ರಕ್ಷಿಸಲು ಸಮರ್ಥನಾಗಿದ್ದರೂ ಧನವಿಲ್ಲದೆ ದುಃಖಿಸುತ್ತಿರುವ ನನ್ನನ್ನು ತಿಳಿಯದಿರುವನು. ||೨೭-೨೮-೨೯||

ಗಂಡನ ಸಾಹಾಯ್ಯವಿಲ್ಲದೆ ಬಾಲಕರನ್ನು ನಾನು ಹೇಗೆ ಪೋಷಿಸುವೆನು? ಮಕ್ಕಳೆಲ್ಲರೂ ಹಸಿವಿನ ಬಾಧೆಯಿಂದ ಸಾಯುವರು. ಈ ಸಂದರ್ಭದಲ್ಲಿ ನಾನು ಒಬ್ಬ ಮಗನನ್ನು ಮಾರಿಯಾದರೂ ಬಂದಷ್ಟು ಹಣದಿಂದ ಮಿಕ್ಕ ಮಕ್ಕಳನ್ನು ಕಾಪಾಡುವೆನು. ಇದೇ ಈಗ ನಾನು ಮಾಡಬೇಕಾದ ಕೆಲಸವು. ||೩೦-೩೧||

ಈ ವಿಷಮಕಾಲದಲ್ಲಿ ಎಲ್ಲ ಮಕ್ಕಳನ್ನೂ ಸಾಯುವಂತೆ ಮಾಡುವುದು ಯುಕ್ತವಾದುದಲ್ಲ. ಈ ಕಷ್ಟಕಾಲದ ತೊಂದರೆಯಿಂದ ನನ್ನ ಮಗನನ್ನು ಹೀಗೆ

ಹೃದಯಂ ಕಠಿನಂ ಕೃತ್ವಾ ಸಂಚಿಂತ್ಯ ಮನಸಾ ಸತೀ ।
ಸಾ ದರ್ಭರಜ್ಜ್ವಾ ಬದ್ಧ್ವಾಽಥ ಗಲೇ ಪುತ್ರಂ ವಿನಿರ್ಗತಾ ॥೩೩॥

ಮುನಿಪತ್ನೀ ಗಲೇ ಬದ್ಧ್ವಾ ಮಧ್ಯಮಂ ಪುತ್ರಮೌರಸಂ ।
ಶೇಷಸ್ಯ ಭರಣಾರ್ಥಾಯ ಗೃಹೀತ್ವಾ ಚಲಿತಾ ಗೃಹಾತ್ ॥೩೪॥

ದೃಷ್ಟ್ವಾ ಸತ್ಯವ್ರತೇನಾರ್ತಾ ತಾಪಸೀ ಶೋಕಸಂಯುತಾ ।
ಪಪ್ರಚ್ಛ ನೃಪತಿಸ್ತಾಂ ತು ಕಿಂ ಚಿಕೀರ್ಷಸಿ ಶೋಭನೇ ॥೩೫॥

ರುದಂತಂ ಬಾಲಕಂ ಕಂಠೇ ಬದ್ಧ್ವಾ ನಯಸಿ ಕಾಽಧುನಾ ।
ಕಿಮರ್ಥಂ ಚಾರುಸರ್ವಾಂಗಿ ಸತ್ಯಂ ಬ್ರೂಹಿ ಮಮಾಗ್ರತಃ ॥೩೬॥

॥ ಋಷಿಪತ್ನ್ಯುವಾಚ ॥

ವಿಶ್ವಾಮಿತ್ರಸ್ಯ ಭಾರ್ಯಾಽಹಂ ಪುತ್ರೋಽಯಂ ಮೇ ನೃಪಾತ್ಮಜ ।
ವಿಕ್ರೇತುಮೌರಸಂ ಕಾಮಂ ಗಮಿಷ್ಯೇ ವಿಷಮೇ ಸುತಂ ॥೩೭॥

---

ಮಾರುವೆನು. ಎಂದು ಕಠಿನವಾಗಿ ಮಾಡಿದ ಮನಸ್ಸಿನಿಂದ ಆ ಪತಿವ್ರತೆಯು ಆಲೋಚಿಸಿ ದರ್ಭೆಯ ಹಗ್ಗದಿಂದ ಮಗನ ಕುತ್ತಿಗೆಗೆ ಕಟ್ಟಿ ಹಿಡಿದುಕೊಂಡು ಹೊರಟಳು. ॥೩೨-೩೩॥

ವಿಶ್ವಾಮಿತ್ರಮುನಿಯ ಪತ್ನಿಯು ತನ್ನ ಮಧ್ಯದ ಮಗನ ಕುತ್ತಿಗೆಗೆ ದರ್ಭೆಯ ಹಗ್ಗವನ್ನು ಕಟ್ಟಿ ಹಿಡಿದುಕೊಂಡು ಮಿಕ್ಕ ಮಕ್ಕಳ ಪೋಷಣೆಗಾಗಿ ಅವನನ್ನು ಮಾರಲು ಮನೆಯಿಂದ ಹೊರಟಳು. ದುಃಖದಿಂದ ಕೂಡಿದ ಆ ತಾಪಸಿಯನ್ನು ಆ ಸತ್ಯವ್ರತನೆಂಬ ರಾಜನು ನೋಡಿ, ಎಲೌ ಮಂಗಳೆಯೇ, ಅಳುತ್ತಿರುವ ಮಗನ ಕುತ್ತಿಗೆಗೆ ಹಗ್ಗವನ್ನು ಕಟ್ಟಿ ಏತಕ್ಕಾಗಿ ಕರೆದುಕೊಂಡು ಹೋಗುತ್ತಿರುವೆ? ಇವನನ್ನೇನುಮಾಡಬೇಕೆಂದು ನಿನ್ನ ಇಷ್ಟವಿರುವುದು? ನಿಜವನ್ನು ನನ್ನೆದುರಿಗೆ ಹೇಳು. ಎಂದು ಕೇಳಿದನು. ॥೪೪-೩೫-೩೬॥

ಋಷಿಪತ್ನಿಯು ಹೇಳಿದಳು—ಓ ರಾಜಪುತ್ರನೇ, ನಾನು ವಿಶ್ವಾಮಿತ್ರ ಮುನಿಯ ಪತ್ನಿಯು. ಇವನು ನನ್ನ ಮಗನು. ನಮಗೆ ತಿನ್ನಲು ಅನ್ನವಿಲ್ಲವು. ನನ್ನ ಗಂಡನು ನನ್ನನ್ನೂ ಮಕ್ಕಳನ್ನೂ ಬಿಟ್ಟು ತಪಸ್ಸಿಗಾಗಿ ಹೊರಟು ಹೋದನು.

ಅನ್ನಂ ನಾಸ್ತಿ ಪತಿರ್ಮುಕ್ತ್ವಾ ಗತಸ್ತ್ವಪುತ್ರಂ ನೃಪ ಕ್ವಚಿತ್ ।
ವಿಕ್ರೀಣಾಮಿ ಕ್ಷುಧಾರ್ತ್ಯೈನಂ ಶೇಷಸ್ಯ ಭರಣಾಯ ವೈ ॥೩೮॥

॥ ರಾಜೋವಾಚ ॥

ಪತಿವ್ರತೇ ರಕ್ಷ ಪುತ್ರಂ ದಾಸ್ಯಾಮಿ ಭರಣಂ ತವ ।
ತಾವದೇವ ಪತಿಸ್ತೇಽತ್ರ ವನಾಚ್ಚೈವಾಗಮಿಷ್ಯತಿ ॥೩೯॥

ವೃಕ್ಷೇ ತವಾಶ್ರಮಾಭ್ಯಾಶೇ ಭಕ್ಷ್ಯಂ ಕಿಂಚಿನ್ನಿರಂತರಂ ।
ಬಂಧಯಿತ್ವಾ ಗಮಿಷ್ಯಾಮಿ ಸತ್ಯಮೇತದ್ಬ್ರವೀಮ್ಯಹಂ ॥೪೦॥

ಇತ್ಯುಕ್ತಾ ಸಾ ತದಾ ತೇನ ರಾಜ್ಞಾ ಕೌಶಿಕಕಾಮಿನೀ ।
ವಿಬಂಧಂ ತನಯಂ ಕೃತ್ವಾ ಜಗಾಮಾಶ್ರಮಮಂಡಲಂ ॥೪೧॥

ಸೋಽಭವದ್ಗಾಲವೋ ನಾಮ ಗಲಬಂಧಾನ್ಮಹಾತಪಾಃ ।
ಸಾ ತು ಸ್ವಸ್ಯಾಶ್ರಮೇ ಗತ್ವಾ ಮುಮೋದ ಬಾಲಕೈರ್ವೃತಾ ॥೪೨॥

---

ಹಸಿವಿನಿಂದ ದುಃಖಿಸುತ್ತಿರುವ ನಾನು ಈ ಕಷ್ಟಕಾಲದಲ್ಲಿ ಮಿಕ್ಕ ಮಕ್ಕಳನ್ನು ಕಾಪಾಡುವುದಕ್ಕಾಗಿ ಇವನನ್ನು ಮಾರುವೆನು. ॥೩೭-೩೮॥

ರಾಜನು ಹೇಳಿದನು—ಎಲೌ ಪತಿವ್ರತೆಯೇ, ನಿನಗೆ ಆಹಾರವನ್ನು ನಾನು ಕೊಡುವೆನು. ನಿನ್ನ ಪತಿಯು ತಪೋವನದಿಂದ ಬರುವವರೆಗೂ ನಿನ್ನ ಮಕ್ಕಳನ್ನು ಎಲ್ಲರನ್ನೂ ಕಾಪಾಡು. ನಿನ್ನ ಆಶ್ರಮದ ಸಮೀಪದಲ್ಲಿರುವ ಮರದಲ್ಲಿ ಆಹಾರ ಪದಾರ್ಥವನ್ನು ಪ್ರತಿನಿತ್ಯವೂ ತಪ್ಪದೆ ತಂದು ಕಟ್ಟಿ, ಹೊರಟುಹೋಗುವೆನು. ನಾನು ನಿಜವಾದ ಮಾತನ್ನು ಹೇಳಿರುತ್ತೇನೆ. ॥೩೯-೪೦॥

ಹೀಗೆಂದು ರಾಜನು ಹೇಳುತ್ತಲು, ವಿಶ್ವಾಮಿತ್ರನ ಪತ್ನಿಯು ಮಗನ ಕುತ್ತಿಗೆಯ ಹಗ್ಗವನ್ನು ಬಿಚ್ಚಿ, ತನ್ನಾಶ್ರಮಕ್ಕೆ ಹಿಂತಿರುಗಿ ಹೋದಳು. ಕುತ್ತಿಗೆಗೆ ಹಗ್ಗವನ್ನು ಕಟ್ಟಿದ್ದುದರಿಂದ ಆ ಮಗನಿಗೆ ಗಾಲವನೆಂದು ಹೆಸರಾಯಿತು. ಅವನು ಮಹಾತಪಸ್ವಿಯಾದನು. ವಿಶ್ವಾಮಿತ್ರನ ಪತ್ನಿಯು ತನ್ನಾಶ್ರಮಕ್ಕೆ ಹೋಗಿ ಮಕ್ಕಳೊಡನೆ ಆತಂಕವಿಲ್ಲದೆ ಸಂತೋಷದಿಂದಿದ್ದಳು. ॥೪೧-೪೨॥

ಸತ್ಯವ್ರತಸ್ತು ಭಕ್ತ್ಯಾ ಚ ಕೃಪಯಾ ಚ ಪರಿಪ್ಲುತಃ ।
ವಿಶ್ವಾಮಿತ್ರಸ್ಯ ಚ ಮುನೇಃ ಕಲತ್ರಂ ತದ್ಬಭಾರ ಹ ॥೪೩॥

ವನೇ ಸ್ಥಿತಾನ್ಮೃಗಾನ್ಹತ್ವಾ ವರಾಹಾನ್ಮಹಿಷಾಂಸ್ತಥಾ ।
ವಿಶ್ವಾಮಿತ್ರವನಾಭ್ಯಾಶೇ ಮಾಂಸಂ ವೃಕ್ಷೇ ಬಬಂಧ ಹ ॥೪೪॥

ಋಷಿಪತ್ನೀ ಗೃಹೀತ್ವಾ ತನ್ಮಾಂಸಂ ಪುತ್ರಾನದಾತ್ತತಃ ।
ನಿರ್ವೃತಿಂ ಪರಮಾಂ ಪ್ರಾಪ ಪ್ರಾಪ್ಯ ಭಕ್ಷ್ಯಮನುತ್ತಮಂ ॥೪೫॥

ಅಯೋಧ್ಯಾಂ ಚೈವ ರಾಜ್ಯಂ ಚ ತಥೈವಾಂತಃಪುರಂ ಮುನಿಃ ।
ಗತೇ ತಪ್ತುಂ ನೃಪೇ ತಸ್ಮಿನ್ವಸಿಷ್ಠಃ ಪರ್ಯರಕ್ಷತ ॥೪೬॥

ಸತ್ಯವ್ರತೋಽಪಿ ಧರ್ಮಾತ್ಮಾ ಹ್ಯತಿಷ್ಠನ್ನಗರಾದ್ಬಹಿಃ ।
ಪಿತುರಾಜ್ಞಾಂ ಸಮಾಸ್ಥಾಯ ಪಶುಘ್ನವ್ರತವಾನ್ವನೇ ॥೪೭॥

---

ಸತ್ಯವ್ರತನು ಭಕ್ತಿಯಿಂದಲೂ ದಯೆಯಿಂದಲೂ ಕೂಡಿದವನಾಗಿ ವಿಶ್ವಾಮಿತ್ರ ಮುನಿಯ ಪೋಷ್ಯವರ್ಗದವರಾದ ಹೆಂಡತಿಮಕ್ಕಳನ್ನು ಹೀಗೆ ಪೋಷಿಸುತ್ತಿದ್ದನು. ||೪೩||

ಆ ರಾಜಪುತ್ರನು ಕಾಡಿನಲ್ಲಿದ್ದ ಜಿಂಕೆ, ಹಂದಿ, ಕಾಡೆಮ್ಮೆ ಇವುಗಳನ್ನು ಕೊಂದು ಆವುಗಳ ಮಾಂಸವನ್ನು ವಿಶ್ವಾಮಿತ್ರಮುನಿಯ ಆಶ್ರಮದ ಸಮೀಪದಲ್ಲಿರುವ ಮರಕ್ಕೆ ಕಟ್ಟುತ್ತಿದ್ದನು. ಋಷಿಪತ್ನಿಯು ಆ ಮಾಂಸವನ್ನು ತೆಗೆದುಕೊಂಡು ಮಕ್ಕಳಿಗೆ ಕೊಡುತ್ತಿದ್ದಳು. ಹೀಗೆ ಅವಳು ಅತ್ಯುತ್ತಮವಾದ ಆಹಾರವನ್ನು ಪಡೆದು ಬಹಳ ಸಂತೋಷವನ್ನು ಹೊಂದಿದಳು. ||೪೪-೪೫||

ಅರುಣ ರಾಜನು ತಪಸ್ಸಿಗೆ ಹೊರಟು ಹೋಗುತ್ತಲು, ವಸಿಷ್ಠಮುನಿಯು ಅಯೋಧ್ಯಾಪಟ್ಟಣವನ್ನೂ, ರಾಜ್ಯವನ್ನೂ, ಹಾಗೆಯೇ ಆ ರಾಜನ ಅಂತಃಪುರದ ಜನರನ್ನೂ ಕಾಪಾಡುತ್ತಿದ್ದನು. ||೪೬||

ಧರ್ಮಾತ್ಮನಾದ ಸತ್ಯವ್ರತನಾದರೋ ತಂದೆಯ ಅಪ್ಪಣೆಯನ್ನನುಸರಿಸಿ ಕಾಡಿನಲ್ಲಿ ಪ್ರತಿದಿನವೂ ಮೃಗಗಳನ್ನು ಕೊಲ್ಲುವ ವ್ರತವನ್ನು ಮಾಡುತ್ತಾ ಪಟ್ಟಣದ ಹೊರಗೆ ವಾಸಮಾಡುತ್ತಿದ್ದನು. ||೪೭||

ಸತ್ಯವ್ರತೋ ಹ್ಯಕಸ್ಮಾಚ್ಚ ಕಸ್ಯ ಚಿತ್ಕಾರಣಾನ್ನೃಪಃ ।
ವಸಿಷ್ಠೇ ಚಾಧಿಕಂ ಮನ್ಯುಂ ಧಾರಯಾಮಾಸ ನಿತ್ಯದಾ ॥೪೮॥

ತ್ಯಜ್ಯಮಾನಂ ವನೇ ಪಿತ್ರಾ ಧರ್ಮಿಷ್ಠಂ ಚ ಪ್ರಿಯಂ ಸುತಂ ।
ನ ವಾರಯಾಮಾಸ ಮುನಿರ್ವಸಿಷ್ಠಃ ಕಾರಣೇನ ಹ ॥೪೯॥

ಪಾಣಿಗ್ರಹಾಣಾಂ ಮಂತ್ರಾಣಾಂ ನಿಷ್ಠಾ ಸ್ಯಾತ್ಸಪ್ತಮೇ ಪದೇ ।
ಜಾನನ್ನಪಿ ಸ ಧರ್ಮಾತ್ಮಾ ವಿಪ್ರದಾರಪರಿಗ್ರಹೇ ॥೫೦॥

ಕಸ್ಮಿಂಶ್ಚಿದ್ದಿವಸೇಽರಣ್ಯೇ ಮೃಗಾಭಾವೇ ಮಹೀಪತಿಃ ।
ವಸಿಷ್ಠಸ್ಯ ಚ ಗಾಂ ದೋಗ್ಧ್ರೀಮಪಶ್ಯದ್ವನಮಧ್ಯಗಾಂ ॥೫೧॥

ತಾಂ ಜಘಾನ ಕ್ಷುಧಾರ್ತಸ್ತು ಕ್ರೋಧಾನ್ಮೋಹಾಚ್ಚ ದಸ್ಯುವತ್ ।
ವೃಕ್ಷೇ ಬಬಂಧ ತನ್ಮಾಂಸಂ ನೀತ್ವಾ ಸ್ವಯಮಭಕ್ಷಯತ್ ॥೫೨॥

---

ಧರ್ಮಿಷ್ಠನೂ ಪ್ರೀತಿಪಾತ್ರನೂ ಆದ ಮಗನನ್ನು ದೇಶದಿಂದ ಹೊರಡಿಸುತ್ತಿರುವ ಅರುಣರಾಜನನ್ನು ವಸಿಷ್ಠಮುನಿಯು ನಿವಾರಿಸಲಿಲ್ಲ. ಎಂಬ ಕಾರಣದಿಂದ ಸತ್ಯವ್ರತನು ಯಾವುದೋ ಕಾರಣದಿಂದ ಅಕಸ್ಮಾತ್ತಾಗಿ ವಸಿಷ್ಠನ ಮೇಲೆ ಪ್ರತಿದಿನವೂ ಕೋಪವನ್ನು ಬೆಳೆಯಿಸುತಿದ್ದನು. ॥೪೮-೪೯॥

ಆ ಕಾರಣವಾವುದೆಂದರೆ—ಮದುವೆಯಲ್ಲಿ ಸಪ್ತಪದೀ ಎಂಬ ಕರ್ಮವಾದ ಬಳಿಕ ಪಾಣಿಗ್ರಹಣ ಮಂತ್ರಗಳ ಕರ್ಮಗಳೆಲ್ಲ ಪೂರ್ತಿಯಾದ ಮೇಲೆ ಮಾತ್ರ ವಿವಾಹವು ಸಾಂಗವಾಗಿ ನೆರವೇರಿ ಸಿದ್ಧಿಸುವುದು. ಆ ಸಪ್ತಪದೀ ಕರ್ಮಕ್ಕಿಂತ ಮುಂಚೆಯೇ ಕನ್ಯೆಯನ್ನು ಅಪಹರಿಸಿದರೆ ಕನ್ಯೆಯನ್ನಪಹರಿಸಿದಂತಾಯಿತೇ ಹೊರತು ಪರಸ್ತ್ರೀಯನ್ನಪಹರಿಸಿದಂತೆ ಆಗಲಿಲ್ಲವು. ಬ್ರಾಹ್ಮಣಪತ್ನಿಯನ್ನು ಅಪಹಾರಮಾಡಿದ ವಿಷಯದಲ್ಲಿ ಈ ಧರ್ಮಸೂಕ್ಷ್ಮವನ್ನು ವಸಿಷ್ಠನು ತಿಳಿದಿದ್ದರೂ ನನ್ನ ತಂದೆಯನ್ನು ತಡೆಯಲಿಲ್ಲವೆಂಬುದೇ ವಸಿಷ್ಠನ ಮೇಲಿನ ಕೋಪಕ್ಕೆ ಕಾರಣವು. ॥೫೦॥

ಒಂದಾನೊಂದು ದಿನ ಕಾಡಿನಲ್ಲಿ ಇತರ ಮೃಗಗಳು ಯಾವುವೂ ಸಿಕ್ಕದಿದ್ದುದರಿಂದ, ಸತ್ಯವ್ರತರಾಜನು ವಸಿಷ್ಠಮುನಿಯ ಕರೆಯುವ ಹಸುವು ಕಾಡಿನಲ್ಲಿದ್ದುದನ್ನು ಕಂಡು ಹೊಟ್ಟೆ ಹಸಿವಿನಿಂದಲೂ ಕೋಪದಿಂದಲೂ ಉಂಟಾದ ಅಜ್ಞಾನದಿಂದ ಕೂಡಿ ಕಳ್ಳನಂತೆ ಅದನ್ನು ಕೊಂದು, ಅದರ ಮಾಂಸವನ್ನು ತಂದು ವಿಶ್ವಾಮಿತ್ರನ ಪತ್ನಿಗಾಗಿ ಮರದಲ್ಲಿ ಕಟ್ಟಿ ತಾನೂ ತಿಂದನು. ॥೫೧-೫೨॥

ಋಷಿಪತ್ನೀ ಸುತಾನ್ಸರ್ವಾನ್ ಭೋಜಯಾಮಾಸ ತತ್ತದಾ ।
ಶಂಕಮಾನಾ ಮೃಗಸ್ಯೇತಿ ನ ಗೋರಿತಿ ಚ ಸುವ್ರತ ॥೫೩॥

ವಸಿಷ್ಠಸ್ತು ಹತಾಂ ದೋಗ್ಧ್ರೀಂ ಜ್ಞಾತ್ವಾ ಕ್ರುದ್ಧಸ್ತಮಬ್ರವೀತ್ ।
ದುರಾತ್ಮನ್ಕಿಂ ಕೃತಂ ಪಾಪಂ ಧೇನುಘಾತಾತ್ಪಿಶಾಚವತ್ ॥೫೪॥

ಏವಂ ತೇ ಶಂಕವಃ ಕ್ರೂರಾಃ ಪತಂತು ತ್ವರಿತಾಸ್ತ್ರಯಃ ।
ಗೋವಧಾದ್ದಾರಹರಣಾತ್ ಪಿತುಃ ಕ್ರೋಧಾತ್ತಥಾ ಭೃಶಂ ॥೫೫॥

ತ್ರಿಶಂಕುರಿತಿ ನಾಮ್ನಾ ವೈ ಭುವಿ ಖ್ಯಾತೋ ಭವಿಷ್ಯಸಿ ।
ಪಿಶಾಚರೂಪಮಾತ್ಮಾನಂ ದರ್ಶಯನ್ಸರ್ವದೇಹಿನಾಂ ॥೫೬॥

॥ ವ್ಯಾಸ ಉವಾಚ ॥

ಏವಂ ಶಪ್ತೋ ವಸಿಷ್ಠೇನ ತದಾ ಸತ್ಯವ್ರತೋ ನೃಪಃ ।
ಚಚಾರ ಚ ತಪಸ್ತೀವ್ರಂ ತಸ್ಮಿನ್ನೇವಾಶ್ರಮೇ ಸ್ಥಿತಃ ॥೫೭॥

---

ವಿಶ್ವಾಮಿತ್ರಮುನಿಯ ಪತ್ನಿಯು ಅದನ್ನು ತನ್ನ ಮಕ್ಕಳಿಗೆಲ್ಲರಿಗೂ ತಿನ್ನಿಸಿದಳು. ಅವಳು ಅದನ್ನು ಮೃಗಮಾಂಸವೆಂದು ತಿಳಿದಿದ್ದಳು. ಗೋಮಾಂಸವೆಂದು ತಿಳಿಯಲಿಲ್ಲವು. ॥೫೩॥

ವಸಿಷ್ಠನಾದರೋ ತನ್ನ ಕರೆಯುವ ಹಸವನ್ನು ಕೊಂದನೆಂದು ಕೋಪದಿಂದ ಆ ಸತ್ಯವ್ರತನನ್ನು ಕುರಿತು ' ಎಲೈ ದುಷ್ಟನೇ, ಪಿಶಾಚಿಯಂತೆ ಗೋವನ್ನು ಕೊಂದು ಎಂತಹ ಪಾಪವನ್ನು ಮಾಡಿದೆ! ನೀನು ಮಾಡಿದ ಗೋವಧೆ, ಪರಸ್ತ್ರೀಯ ಅಪಹಾರ, ತಂದೆಯ ಕೋಪ, ಈ ಮೂರು ಪಾಪಗಳಿಂದ ನಿನ್ನ ತಲೆಯಲ್ಲಿ ಕುಷ್ಠರೂಪವಾದ, ನೋವಿನಿಂದ ದುಃಖಕರವಾದ, ಮೂರು ಗುರುತುಗಳಾಗಲಿ! ಇದರಿಂದ ಭೂಮಿಯಲ್ಲಿ ನಿನಗೆ ತ್ರಿಶಂಕುವೆಂದು ಹೆಸರಾಗಲಿ. ನೀನು ಸಮಸ್ತರಿಗೂ ಪಿಶಾಚಸ್ವರೂಪನಾಗಿ ಕಾಣಿಸುತ್ತಿರು.' ಎಂದು ಶಪಿಸಿದನು. ॥೫೪-೫೫-೫೬॥

ವ್ಯಾಸಮುನಿಯು ಹೇಳಿದನು— ಈ ರೀತಿಯಲ್ಲಿ ಸತ್ಯವ್ರತರಾಜಪುತ್ರನು ವಸಿಷ್ಠನ ಶಾಪವನ್ನು ಹೊಂದಿದರೂ ಅದೇ ಆಶ್ರಮದಲ್ಲಿಯೇ ಯಾವನೋ ಒಬ್ಬ ಮುನಿಪುತ್ರನಿಂದ ಶ್ರೇಷ್ಠವಾದ ದೇವಿಯ ಮಂತ್ರೋಪದೇಶವನ್ನು ಪಡೆದು ಅತ್ಯಂತ

**ಕಸ್ಮಾಚ್ಚಿನ್ಮುನಿಪುತ್ರಾತ್ತು ಪ್ರಾಪ್ಯ ಮಂತ್ರಮನುತ್ತಮಂ ।**
**ಧ್ಯಾಯನ್ಭಗವತೀಂ ದೇವೀಂ ಪ್ರಕೃತಿಂ ಪರಮಾಂ ಶಿವಾಂ ॥೫೮॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ**
**ದಶಮೋಽಧ್ಯಾಯಃ.**

---

ಶ್ರೇಷ್ಠಳೂ ಮಂಗಳಸ್ವರೂಪಳೂ, ಎಲ್ಲಕ್ಕೂ ಕಾರಣಳೂ ಆದ ಆ ದೇವಿಯನ್ನು ಧ್ಯಾನಮಾಡುತ್ತಾ, ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ॥೫೭-೫೮॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ಏಕಾದಶೋಽಧ್ಯಾಯಃ ॥

### ಹನ್ನೊಂದನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ವಸಿಷ್ಠೇನ ಚ ಶಪ್ತೋಽಸೌ ತ್ರಿಶಂಕುರ್ನೃಪತೇಃ ಸುತಃ ।**
**ಕಥಂ ಶಾಪಾದ್ವಿನಿರ್ಮುಕ್ತಸ್ತನ್ಮೇ ಬ್ರೂಹಿ ಮಹಾಮತೇ ॥೧॥**

॥ ವ್ಯಾಸ ಉವಾಚ ॥

**ಸತ್ಯವ್ರತಸ್ತಥಾ ಶಪ್ತಃ ಪಿಶಾಚತ್ವಮವಾಪ್ತವಾನ್ ।**
**ತಸ್ಮಿನ್ನೇವಾಶ್ರಮೇ ತಸ್ಥೌ ದೇವೀಭಕ್ತಿಪರಾಯಣಃ ॥೨॥**

**ಕದಾಚಿನ್ನೃಪತಿಸ್ತತ್ರ ಜಪ್ತ್ವಾ ಮಂತ್ರಂ ನವಾಕ್ಷರಂ ।**
**ಹೋಮಾರ್ಥಂ ಬ್ರಾಹ್ಮಣಾನ್ಗತ್ವಾ ಪ್ರಣಮ್ಯೋವಾಚ ಭಕ್ತಿತಃ ॥೩॥**

---

ಜನಮೇಜಯರಾಜನು ಹೇಳಿದನು—ಮಹಾಬುದ್ಧಿಶಾಲಿಯಾದ ವ್ಯಾಸನೇ, ರಾಜಪುತ್ರನಾದ ತ್ರಿಶಂಕುವು ವಸಿಷ್ಠನ ಶಾಪದಿಂದ ಹೇಗೆ ಬಿಡುಗಡೆಯನ್ನು ಹೊಂದಿದನೆಂಬುದನ್ನು ನನಗೆ ಹೇಳಬೇಕು. ॥೧॥

ವ್ಯಾಸರು ಹೇಳಿದರು— ಹಾಗೆ ವಸಿಷ್ಠನು ಶಾಪ ಕೊಟ್ಟ ಮೇಲೆ, ಆ ಸತ್ಯವ್ರತನು ಪಿಶಾಚತ್ವವನ್ನು ಹೊಂದಿದ್ದರೂ ಅದೇ ಆಶ್ರಮದಲ್ಲಿಯೇ ದೇವಿಯ ಭಕ್ತಿಯಿಂದ ಕೂಡಿದವನಾಗಿ ತಪಸ್ಸನ್ನು ಮಾಡುತ್ತಿದ್ದನು. ॥೨॥

ಆ ರಾಜನು ಆ ಆಶ್ರಮದಲ್ಲಿಯೇ ದೇವಿಯ ನವಾಕ್ಷರೀಮಂತ್ರವನ್ನು ಹೀಗೆ ಕ್ರಮವಾಗಿ ಪೂರ್ಣವಾಗುವಂತೆ ಜಪಿಸಿ, ಒಂದಾನೊಂದು ದಿನ ಆ ಜಪಾಂಗವಾದ

ಭೂಮಿದೇವಾಃ ಶ್ರುಣುಧ್ವಂ ವೈ ವಚನಂ ಪ್ರಣತಸ್ಯ ಮೇ ।
ಋತ್ವಿಜೋ ಮಮ ಸರ್ವೇಽತ್ರ ಭವಂತಃ ಪ್ರಭವಂತು ಹ ॥೪॥

ಜಪಸ್ಯ ಚ ದಶಾಂಶೇನ ಹೋಮಃ ಕಾರ್ಯೋಽ ವಿಧಾನತಃ ।
ಭವದ್ಭಿಃ ಕಾರ್ಯಸಿದ್ಧ್ಯರ್ಥಂ ವೇದವಿದ್ಭಿಃ ಕೃಪಾಪರೈಃ ॥೫॥

ಸತ್ಯವ್ರತೋಽಹಂ ನೃಪತೇಃ ಪುತ್ರೋಽ ಬ್ರಹ್ಮವಿದಾಂ ವರಾಃ ।
ಕಾರ್ಯಂ ಮಮ ವಿಧಾತವ್ಯಂ ಸರ್ವಥಾ ಸುಖಹೇತವೇ ॥೬॥

ತಚ್ಛ್ರುತ್ವಾ ಬ್ರಾಹ್ಮಣಾಸ್ತತ್ರ ತಮೂಚುಃ ನೃಪತೇಃ ಸುತಂ ।
ಶಪ್ತಸ್ತ್ವಂ ಗುರುಣಾ ಪ್ರಾಪ್ತಂ ಪಿಶಾಚತ್ವಂ ತ್ವಯಾಽಧುನಾ ॥೭॥

ನ ಯಾಗಾರ್ಹೋಽಸಿ ತಸ್ಮಾತ್ತ್ವಂ ವೇದೇಷ್ವನಧಿಕಾರತಃ ।
ಪಿಶಾಚತ್ವಮನುಪ್ರಾಪ್ತಂ ಸರ್ವಲೋಕೇಷು ಗರ್ಹಿತಂ ॥೮॥

---

ಹೋಮ ಮಾಡಬೇಕೆಂಬ ಉದ್ದೇಶದಿಂದ ಬ್ರಾಹ್ಮಣರ ಸಮೀಪಕ್ಕೆ ಹೋಗಿ ಭಕ್ತಿಯಿಂದ ಅವರಿಗೆ ನಮಸ್ಕಾರವನ್ನು ಮಾಡಿ ಹೀಗೆ ಹೇಳಿದನು. ॥೩॥

ಓ ಬ್ರಾಹ್ಮಣರೇ, ನೀವೆಲ್ಲರೂ ನನಗೆ ಋತ್ವಿಕ್ಕುಗಳಾಗಿ ಬರಬೇಕು. ನಾನು ಮಾಡಿದ ದೇವೀಮಂತ್ರದ ಜಪಸಂಖ್ಯೆಯಲ್ಲಿ ಹತ್ತನೆಯ ಒಂದು ಭಾಗದಷ್ಟು ಸಂಖ್ಯೆಯ ಹೋಮವನ್ನೂ ವಿಧಿಗನುಸಾರವಾಗಿ ಮಾಡಬೇಕಾಗಿರುವುದು. ವೇದವನ್ನು ಬಲ್ಲ ನೀವು ದಯಾವಂತರಾಗಿ ನನ್ನ ಕಾರ್ಯಸಿದ್ಧಿಯನ್ನು ಮಾಡಿಕೊಡಬೇಕು. ನಾನು ಸತ್ಯವ್ರತನೆಂಬ ರಾಜಪುತ್ರನು. ನನ್ನ ಸುಖಕ್ಕಾಗಿ ನನ್ನ ಈ ಕಾರ್ಯವನ್ನು ನೀವು ಹೇಗಾದರೂ ಮಾಡಿಕೊಡಬೇಕು. ॥೪-೫-೬॥

ಆ ಮಾತನ್ನು ಕೇಳಿ ಅಲ್ಲಿದ್ದ ಬ್ರಾಹ್ಮಣರು ಆ ರಾಜಪುತ್ರನನ್ನು ಕುರಿತು 'ನೀನು ಗುರುವಾದ ವಸಿಷ್ಠನ ಶಾಪವನ್ನು ಹೊಂದಿರುವೆ. ನಿನಗೆ ಪಿಶಾಚತ್ವವು ಬಂದಿರುವುದು. ಆದುದರಿಂದ ನೀನು ದೇವಿಯ ಯಜ್ಞಮಾಡಲು ಯೋಗ್ಯನಲ್ಲವು. ನಿನಗೆ ವೇದದಲ್ಲಿಯೂ ಅಧಿಕಾರವಿಲ್ಲವಾಗಿದೆ. ಲೋಕದಲ್ಲಿ ನಿಂದ್ಯವಾದ ಪಿಶಾಚತ್ವವನ್ನು ನೀನು ಪಡೆದಿರುವೆ' ಎಂದು ಹೇಳಿದರು. ॥೭-೮॥

|| ವ್ಯಾಸ ಉವಾಚ ||

ತನ್ನಿಶಮ್ಯ ವಚಸ್ತೇಷಾಂ ರಾಜಾ ದುಃಖಮವಾಪ ಹ ।
ಧಿಗ್ಜೀವಿತಮಿದಂ ಮೇಽದ್ಯ ಕಿಂ ಕರೋಮಿ ವನೇ ಸ್ಥಿತಃ ||೯||

ಪಿತ್ರಾ ಚಾಽಹಂ ಪರಿತ್ಯಕ್ತಃ ಶಪ್ತಶ್ಚ ಗುರುಣಾ ಭೃಶಂ ।
ರಾಜ್ಯಾದ್ಭ್ರಷ್ಟಃ ಪಿಶಾಚತ್ವಮನುಪ್ರಾಪ್ತಃ ಕರೋಮಿ ಕಿಂ ||೧೦||

ತದಾ ಪೃಥುತರಾಂ ಕೃತ್ವಾ ಚಿತಾಂ ಕಾಷ್ಠೈರ್ನೃಪಾತ್ಮಜಃ ।
ಸಸ್ಮಾರ ಚಂಡಿಕಾಂ ದೇವೀಂ ಪ್ರವೇಶಮನುಚಿಂತಯನ್ ||೧೧||

ಸ್ಮೃತ್ವಾ ದೇವೀಂ ಮಹಾಮಾಯಾಂ ಚಿತಾಂ ಪ್ರಜ್ವಲಿತಾಂ ಪುರಃ ।
ಕೃತ್ವಾ ಸ್ನಾತ್ವಾ ಪ್ರವೇಶಾರ್ಥಂ ಸ್ಥಿತಃ ಪ್ರಾಂಜಲಿರಗ್ರತಃ ||೧೨||

ಜ್ಞಾತ್ವಾ ಭಗವತೀ ತಂ ತು ಮರ್ತುಕಾಮಂ ಮಹೀಪತಿಂ ।
ಆಜಗಾಮ ತದಾಕಾಶಂ ಪ್ರತ್ಯಕ್ಷಂ ತಸ್ಯ ಚಾಗ್ರತಃ ||೧೩||

---

ಆ ಬ್ರಾಹ್ಮಣರ ಮಾತನ್ನು ಕೇಳಿ ಆ ರಾಜಪುತ್ರನು ದುಃಖಪಟ್ಟು ಯೋಚಿಸಿದನು. ಇಂತಹ ನನ್ನ ಬದುಕನ್ನು ನಿಂದಿಸಬೇಕು. ಕಾಡಿನಲ್ಲಿದ್ದು ನಾನು ಈಗ ಏನನ್ನು ಮಾಡಲಿ? ತಂದೆಯು ನನ್ನನ್ನು ಓಡಿಸಿಬಿಟ್ಟನು, ಗುರುವೂ ಶಪಿಸಿದನು, ರಾಜ್ಯವನ್ನು ಬಿಟ್ಟೆನು, ಪಿಶಾಚತ್ವವೂ ಬಂದಿತು! ಈಗ ಏನನ್ನು ಮಾಡಲಿ? ನಿಂದ್ಯವೂ ದುಃಖಪೂರ್ಣವೂ ಆದ ನನ್ನ ಈ ಬಾಳನ್ನು ಸುಡಬೇಕು! ||೯-೧೦||

ಎಂದು ನಾನಾಬಗೆಯಾಗಿ ಚಿಂತಿಸಿದ ರಾಜಪುತ್ರನು, ಕಡೆಗೆ ಕಟ್ಟಿಗೆಗಳಿಂದ ದೊಡ್ಡದಾದ ಒಂದು ಚಿತೆಯನ್ನು ಮಾಡಿ, ಅದರಲ್ಲಿ ಪ್ರವೇಶಿಸಬೇಕೆಂದು ಯೋಚಿಸಿ, ದೇವಿಯನ್ನು ಸ್ಮರಿಸಿದನು. ||೧೧||

ಹೀಗೆ ರಾಜಪುತ್ರನು ತನ್ನೆದುರಿಗೆ ಚಿತೆಯನ್ನು ಚನ್ನಾಗಿ ಉರಿಯುತ್ತಿರುವಂತೆ ಮಾಡಿ, ಆ ಚಿತೆಯಲ್ಲಿ ಪ್ರವೇಶಮಾಡಬೇಕೆಂದು ಉದ್ದೇಶಿಸಿ ಸ್ನಾನವನ್ನು ಮಾಡಿ ಬಂದು, ಕೈಜೋಡಿಸಿಕೊಂಡು ಮಹಾಮಾಯಾಸ್ವರೂಪಳೂ, ಸ್ವಪ್ರಕಾಶಸ್ವಭಾವಳೂ ಆದ ದೇವಿಯನ್ನು ಸ್ಮರಿಸುತ್ತಾ ಮುಂಭಾಗದಲ್ಲಿ ನಿಂತನು. ||೧೨||

ಜನಮೇಜಯನೇ, ಕೇಳು— ಮಹಾಮಹಿಮಳಾದ ದೇವಿಯು ಸಾಯಬೇಕೆಂದು ಸಿದ್ಧನಾಗಿದ್ದ ಆ ರಾಜನನ್ನು ತಿಳಿದು, ಆಗಲೇ ಅವನೆದುರಿಗೆ ಆಕಾಶದಲ್ಲಿ

**ದತ್ತ್ವಾಽಥ ದರ್ಶನಂ ದೇವೀ ತಮುವಾಚ ನೃಪಾತ್ಮಜಂ ।**
**ಸಿಂಹಾರೂಢಾ ಮಹಾರಾಜ ಮೇಘಗಂಭೀರಯಾ ಗಿರಾ ॥೧೪॥**

॥ ದೇವ್ಯುವಾಚ ॥

**ಕಿಂ ತೇ ವ್ಯವಸಿತಂ ಸಾಧೋ ಹುತಾಶೇ ಮಾ ತನುಂ ತ್ಯಜ ।**
**ಸ್ಥಿರೋ ಭವ ಮಹಾಭಾಗ ಪಿತಾ ತೇ ಜರಸಾಽನ್ವಿತಃ ॥೧೫॥**

**ರಾಜ್ಯಂ ದತ್ವಾ ವನೇ ತುಭ್ಯಂ ಗಂತಾಽಸ್ತಿ ತಪಸೇ ಕಿಲ ।**
**ವಿಷಾದಂ ತ್ಯಜ ಹೇವೀರ ಪರಶ್ವೋಽಹನಿ ಭೂಪತೇ ॥೧೬॥**

**ನೇತುಂ ತ್ವಾಮಾಗಮಿಷ್ಯಂತಿ ಸಚಿವಾಶ್ಚ ಪಿತುಸ್ತವ ।**
**ಮತ್ಪ್ರಸಾದಾತ್ಪಿತಾ ಚ ತ್ವಾಮಭಿಷಿಚ್ಯ ನೃಪಾಸನೇ ॥೧೭॥**

**ಜಿತ್ವಾ ಕಾಮಂ ಬ್ರಹ್ಮಲೋಕಂ ಗಮಿಷ್ಯತ್ಯೇಷ ನಿಶ್ಚಯಃ ।**

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ತಂ ತದಾ ದೇವೀ ತತ್ರೈವಾಂತರಧೀಯತ ॥೧೮॥**

---

ಸಿಂಹದ ಮೇಲೆ ಕುಳಿತು ಪ್ರತ್ಯಕ್ಷಳಾಗಿ ಬಂದು, ಅವನಿಗೆ ದರ್ಶನವನ್ನು ಕೊಟ್ಟು, ಮೇಘದಂತೆ ಗಂಭೀರವಾದ ಧ್ವನಿಯಿಂದ ಆ ರಾಜಪುತ್ರನನ್ನು ಕುರಿತು ಹೀಗೆ ಹೇಳಿದಳು. ॥೧೩-೧೪॥

ದೇವಿಯು ಹೇಳಿದಳು– ಎಲೈ ಸಜ್ಜನನಾದ ರಾಜಪುತ್ರನೇ, ನೀನು ಮಾಡುವ ಈ ಆತ್ಮಹತ್ಯೆಯ ಕಾರ್ಯವೆಂತಹುದು? ಅಗ್ನಿಯಲ್ಲಿ ಶರೀರವನ್ನು ಬಿಡಬೇಡ. ಸ್ಥಿರಮನಸ್ಸುಳ್ಳವನಾಗು. ನಿನ್ನ ತಂದೆಯು ಮುದುಕನಾದನು. ನಿನಗೆ ರಾಜ್ಯವನ್ನು ಕೊಟ್ಟು, ತಪಸ್ಸಿಗಾಗಿ ಕಾಡಿಗೆ ಹೋಗತಕ್ಕವನಾಗಿರುತ್ತಾನೆ. ಎಲೈ ಶೂರನಾದ ರಾಜನೇ, ದುಃಖವನ್ನು ಬಿಡು. ನಾಳಿದ್ದಿನ ದಿನ ನಿನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ನಿನ್ನ ತಂದೆಯ ಮಂತ್ರಿಗಳು ನಿನ್ನ ಸಮೀಪಕ್ಕೆ ಬರುವರು! ನನ್ನ ಅನುಗ್ರಹದಿಂದ ನಿನ್ನ ತಂದೆಯು ನಿನ್ನನ್ನು ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕವನ್ನು ಮಾಡಿ, ಕಾಮವನ್ನು ಜಯಿಸಿ, ಬ್ರಹ್ಮಲೋಕಕ್ಕೆ ಹೋಗುವನು! ಇದೇ ನಿಶ್ಚಯವು. ಆದುದರಿಂದ ಬೇಸರಪಟ್ಟು ದುಡುಕಬೇಡ. ॥೧೫-೧೬-೧೭॥

ಹೀಗೆಂದು ದೇವಿಯು ಆ ರಾಜಪುತ್ರನಿಗೆ ಹೇಳಿ, ಆಗಲೇ ಅಲ್ಲಿಯೇ ಅಂತರ್ಧಾನವಾದಳು. ರಾಜಪುತ್ರನು ಅಗ್ನಿಯಲ್ಲಿ ಬಿದ್ದು ಸಾಯುವುದನ್ನು ಬಿಟ್ಟನು. ಆ

ರಾಜಪುತ್ರೋ ವಿರಮಿತೋ ಮರಣಾತ್ಪಾವಕಾತ್ತತಃ ।
ಅಯೋಧ್ಯಾಯಾಂ ತದಾಗತ್ಯ ನಾರದೇನ ಮಹಾತ್ಮನಾ ॥೧೯॥

ವೃತ್ತಾಂತಃ ಕಥಿತಃ ಸರ್ವೋ ರಾಜ್ಞೇ ಸತ್ವರಮಾದಿತಃ ।
ಶ್ರುತ್ವಾ ರಾಜಾಽಥ ಪುತ್ರಸ್ಯ ತಂ ತಥಾ ಮರಣೋದ್ಯಮಂ ॥೨೦॥

ಖೇದಮಾಧಾಯ ಮನಸಿ ಶುಶೋಚ ಬಹುಧಾ ನೃಪಃ ।
ಸಚಿವಾನಾಹ ಧರ್ಮಾತ್ಮಾ ಪುತ್ರಶೋಕಪರಿಪ್ಲುತಃ ॥೨೧॥

ಜ್ಞಾತಂ ಭವದ್ಭಿರತ್ಯುಗ್ರಂ ಪುತ್ರಸ್ಯ ಮಮ ಚೇಷ್ಟಿತಂ ।
ತ್ಯಕ್ತೋ ಮಯಾ ವನೇ ಧೀಮಾನ್ಸ್ಪುತ್ರಃ ಸತ್ಯವ್ರತೋ ಮಮ॥೨೨॥

ಆಜ್ಞಯಾಽಸೌ ಗತಃ ಸದ್ಯೋ ರಾಜ್ಯಾರ್ಹಃ ಪರಮಾರ್ಥವಿತ್ ।
ಸ್ಥಿತಸ್ತತ್ರೈವ ವಿಜ್ಞಾನೇ ಧನಹೀನಃ ಕ್ಷಮಾಽನ್ವಿತಃ ॥೨೩॥

---

ಸಮಯಕ್ಕೆ ಸರಿಯಾಗಿ ಮಹಾತ್ಮನಾದ ನಾರದಮುನಿಯು ಅಯೋಧ್ಯಾಪಟ್ಟಣಕ್ಕೆ ಬಂದು, ಮೊದಲಿನಿಂದಲೂ ನಡೆದ ಸಕಲ ವೃತ್ತಾಂತವನ್ನೂ ತಂದೆಯಾದ ರಾಜನಿಗೆ ತಿಳಿಸಿದನು. ||೧೮-೧೯||

ಆ ಮೇಲೆ ರಾಜನು ತನ್ನ ಮಗನ ಮರಣೋದ್ಯೋಗವನ್ನು ಕೇಳಿ, ಮನಸ್ಸಿನಲ್ಲಿ ದುಃಖವನ್ನು ಹೊಂದಿ, ಬಹಳವಾಗಿ ಅತ್ತನು. ಮತ್ತು ಮಗನ ಆಗಿನ ಹೀನ ಸ್ಥಿತಿಯ ಸಂಬಂಧವಾದ ದುಃಖದಿಂದ ತುಂಬ ನೊಂದವನಾಗಿ ಧರ್ಮವನ್ನು ತಿಳಿದ ಆ ಅರುಣರಾಜನು ಮಂತ್ರಿಗಳನ್ನು ಕುರಿತು ಹೀಗೆ ಹೇಳಿದನು. ||೨೦-೨೧||

ಎಲೈ ಮಂತ್ರಿಗಳೇ, ನೀವು ನನ್ನ ಮತ್ತು ನನ್ನ ಮಗನ ಕ್ರೂರವಾದ ಕಾರ್ಯಗಳನ್ನು ತಿಳಿದಿರುವಿರಿ. ಬುದ್ಧಿವಂತನಾದ ಸತ್ಯವ್ರತನೆಂಬ ನನ್ನ ಮಗನನ್ನು, ಅದಕ್ಕೆ ತಕ್ಕಷ್ಟು ಅಪರಾಧವೆಂಬ ತಪ್ಪು ತಿಳಿವಳಿಕೆಯಿಂದ, ಕಾಡಿಗೆ ಕಳುಹಿಸಿದೆನು. ಆದರೂ ಪರತತ್ವವನ್ನು ತಿಳಿದ, ರಾಜ್ಯಭಾರಮಾಡಲು ಯೋಗ್ಯನಾದ, ಆ ನನ್ನ ಮಗನು ನನ್ನ ಅಪ್ಪಣೆಯಿಂದ ಆಗಲೇ ಕಾಡಿಗೆ ಹೋದನು. ಅವನು ಧನವಿಲ್ಲದೆ, ನನಗೆ ಪ್ರತೀಕಾರವನ್ನೂ ಮಾಡದೆ, ಧರ್ಮವನ್ನೂ ಕೈಬಿಡದೆ, ಕ್ಷಮಾಗುಣದಿಂದ ಕೂಡಿ ಆ ಕಾಡಿನಲ್ಲಿಯೇ ಶ್ರೀದೇವಿಯ ಉಪಾಸನೆಯನ್ನು ಮಾಡುತ್ತಿದ್ದನು. ಹಾಗಿದ್ದರೂ ||೨೨-೨೩||

ವಸಿಷ್ಠೇನ ತಥಾ ಶಪ್ತಃ ಪಿಶಾಚಸದೃಶಃ ಕೃತಃ ।
ಸೋಽದ್ಯ ದುಃಖೇನ ಸಂತಪ್ತಃ ಪ್ರವೇಷ್ಟುಂ ಚ ಹುತಾಶನಂ ॥೨೪॥

ಉದ್ಯತಃ ಶ್ರೀಮಹಾದೇವ್ಯಾ ನಿಷಿದ್ಧಃ ಸಂಸ್ಥಿತಃ ಪುನಃ ।
ತಸ್ಮಾದ್ಗಚ್ಛಂತು ತಂ ಶೀಘ್ರಂ ಜ್ಯೇಷ್ಠಪುತ್ರಂ ಮಹಾಬಲಂ ॥೨೫॥

ಆಶ್ವಾಸ್ಯ ವಚನೈರತ್ರ ತರಸೈವಾನಯಂತ್ವಿಹ ।
ಅಭಿಷಿಚ್ಯ ಸುತಂ ರಾಜ್ಯೇ ಔರಸಂ ಪಾಲನಕ್ಷಮಂ ॥೨೬॥

ವನಂ ಯಾಸ್ಯಾಮಿ ಶಾಂತೋಽಹಂ ತಪಸೇ ಕೃತನಿಶ್ಚಯಃ ।
ಇತ್ಯುಕ್ತ್ವಾ ಮಂತ್ರಿಣಃ ಸರ್ವಾನ್ಪ್ರೇಷಯಾಮಾಸ ಪಾರ್ಥಿವಃ॥೨೭॥

ತಸ್ಯೈವಾಽಽನಯನಾರ್ಥಂ ಹಿ ಪ್ರೀತಿಪ್ರವಣಮಾನಸಃ ।
ತೇ ಗತ್ವಾ ತಂ ಸಮಾಶ್ವಾಸ್ಯ ಮಂತ್ರಿಣಃ ಪಾರ್ಥಿವಾತ್ಮಜಂ ॥೨೮॥

---

ವಸಿಷ್ಠನ ಶಾಪದಿಂದ ಪಿಶಾಚಿಗೆ ಸಮಾನವಾದ ರೂಪವುಳ್ಳವನಾದನು. ಅವನು ಈದಿನ ದುಃಖದಿಂದ ಅಗ್ನಿ ಪ್ರವೇಶಮಾಡಲು ಸಿದ್ಧನಾಗಿದ್ದನು. ಆದರೆ ಭುವನೇಶ್ವರೀ ದೇವಿಯು ಅವನಲ್ಲಿರುವ ಧರ್ಮಪರತೆಯನ್ನು ತಿಳಿದು ಅವನನ್ನು ತಡೆಯುತ್ತಲು, ಅವನು ಆ ಉದ್ಯೋಗವನ್ನು ಬಿಟ್ಟಿರುವನು. ಆದುದರಿಂದ ನೀವು ಬೇಗನೆ ಹೋಗಿ ಮಹಾಬಲಶಾಲಿಯೂ ಹಿರಿಯ ಮಗನೂ ಆದ ಅವನನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿ, ಇಲ್ಲಿಗೆ ಕರೆದುಕೊಂಡು ಬನ್ನಿರಿ. ||೨೪-೨೫||

ಪಟ್ಟದರಸಿಯ ಪುತ್ರನಾದ, ರಾಜ್ಯಭಾರ ಮಾಡಲು ಶಕ್ತನಾದ, ಮಗನನ್ನು ಈ ರಾಜ್ಯಕ್ಕೆ ಅಧಿಪತಿಯಾಗಿ ಪಟ್ಟಾಭಿಷೇಕವನ್ನು ಮಾಡಿ, ನಾನು ಶಾಂತನಾಗಿ ತಪಸ್ಸು ಮಾಡುವುದಕ್ಕಾಗಿ ವಾನಪ್ರಸ್ಥಾಶ್ರಮಧರ್ಮವನ್ನು ಅನುಸರಿಸಿ ಕಾಡಿಗೆ ಹೋಗುವೆನು. ಹೀಗೆಂದು ಹೇಳಿ ರಾಜನು ಪ್ರೀತಿಯಿಂದ ತುಂಬಿದ ಮನಸ್ಸುಳ್ಳವನಾಗಿ ಆ ಮಗನನ್ನೇ ಕರೆದುಕೊಂಡು ಬರುವುದಕ್ಕಾಗಿ ಎಲ್ಲ ಮಂತ್ರಿಗಳನ್ನೂ ಕಳುಹಿಸಿಕೊಟ್ಟನು. ||೨೬-೨೭||

ಆ ಮಂತ್ರಿಗಳು ಅಲ್ಲಿಗೆ ಹೋಗಿ ಆ ರಾಜಪುತ್ರನನ್ನು ಮರ್ಯಾದೆಯಿಂದ ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಬಂದರು. ಅರುಣರಾಜನು ಸತ್ಯವ್ರತನನ್ನು ಕಂಡನು. ಅವನೂ ತಕ್ಕ ಉಪಚಾರವಿಲ್ಲದೆ ದುರ್ಬಲನಾಗಿ, ಕೊಳೆಯಾದ ಬಟ್ಟೆ

ಅಯೋಧ್ಯಾಯಾಂ ಮಹಾತ್ಮಾನಂ ಮಾನಪೂರ್ವಂ ಸಮಾನಯನ್ ।
ದೃಷ್ಟ್ವಾ ಸತ್ಯವ್ರತಂ ರಾಜಾ ದುರ್ಬಲಂ ಮಲಿನಾಂಬರಂ ॥೨೯॥

ಜಟಾಜೂಟಧರಂ ಕ್ರೂರಂ ಚಿಂತಾತುರಮಚಿಂತಯತ್ ।
ಕಿಂ ಕೃತಂ ನಿಷ್ಠುರಂ ಕರ್ಮ ಮಯಾ ಪುತ್ರೋ ವಿವಾಸಿತಃ ॥೩೦॥

ರಾಜ್ಯಾರ್ಹಶ್ಚಾತಿಮೇಧಾವೀ ಜಾನತಾ ಧರ್ಮನಿಶ್ಚಯಂ ।
ಇತಿ ಸಂಚಿಂತ್ಯ ಮನಸಾ ತಮಾಲಿಂಗ್ಯ ಮಹೀಪತಿಃ ॥೩೧॥

ಆಸನೇ ಸ್ವಸಮೀಪಸ್ಥೇ ಸಮಾಶ್ವಾಸ್ಯೋಪವೇಶಯತ್ ।
ಉಪವಿಷ್ಟಂ ಸುತಂ ರಾಜಾ ಪ್ರೇಮಪೂರ್ವಮುವಾಚ ಹ ॥೩೨॥

ಪ್ರೇಮಗದ್ಗದಯಾ ವಾಚಾ ನೀತಿಶಾಸ್ತ್ರವಿಶಾರದಃ ।

॥ ರಾಜೋವಾಚ ॥

ಪುತ್ರ ಧರ್ಮೇ ಮತಿಃ ಕಾರ್ಯಾ ಮಾನನೀಯಾ ಮುಖೋದ್ಭವಾಃ ॥೩೩॥

---

ಗಳನ್ನು ಧರಿಸಿ, ತಲೆಯ ಕೂದಲುಗಳನ್ನು ಜಟೆಯಾಗಿ ಕಟ್ಟಿ, ಮನಸ್ಸಿನ ಚಿಂತೆಯಿಂದ ಕ್ರೂರವಾಗಿ ಕಾಣುತ್ತಿರುವ ಅವನ ರೂಪವನ್ನು ಗಮನಿಸಿ, ಅವನ ಈ ಸ್ಥಿತಿಗೆ ತಾನೂ ಕಾರಣನೆಂದು ಮನಗಂಡು ತನ್ನ ಮನಸ್ಸಿನಲ್ಲಿ ದುಃಖಪಟ್ಟನು. ಮತ್ತು ಹೀಗೆ ಆಲೋಚಿಸಿದನು. ॥೨೮-೨೯॥

ಸೂಕ್ಷ್ಮವಾಗಿ ಧರ್ಮನಿಶ್ಚಯವನ್ನು ಮಾಡಬಲ್ಲವನಾಗಿದ್ದರೂ, ಚನ್ನಾಗಿ ವಿಮರ್ಶಿಸದೆ ನಾನು ಎಂತಹ ಕ್ರೂರವಾದ ಕೆಲಸವನ್ನು ಮಾಡಿದೆನು! ರಾಜ್ಯಭಾರ ಮಾಡಲು ಯೋಗ್ಯನೂ ಬಹಳ ಬುದ್ಧಿವಂತನೂ ಮತ್ತು ನಿಯಮನಿಷ್ಠೆಯುಳ್ಳವನೂ ಆದ ಮಗನನ್ನು ಕಾಡಿಗೆ ಕಳುಹಿಸಿದೆನು. ಹೀಗೆಂದು ಮನಸ್ಸಿನಲ್ಲಿ ಯೋಚನೆಯನ್ನು ಮಾಡಿ ರಾಜನು ಮಗನನ್ನು ತಬ್ಬಿಕೊಂಡು ಸಮಾಧಾನಪಡಿಸಿ ತನ್ನ ಸಮೀಪದಲ್ಲಿರುವ ಪೀಠದ ಮೇಲೆ ಕುಳ್ಳಿರಿಸಿದನು. ॥೩೦-೩೧॥

ನೀತಿಶಾಸ್ತ್ರವನ್ನು ಚೆನ್ನಾಗಿ ತಿಳಿದ ಆ ರಾಜನು ಮಗನು ಮನಸ್ಸಮಾಧಾನದಿಂದ ಕುಳಿತುಕೊಂಡಮೇಲೆ ಅವನನ್ನು ಕುರಿತು ಅತ್ಯಂತ ಪ್ರೀತಿಯಿಂದ ಗದ್ಗದವಾಗಿರುವ ಧ್ವನಿಯಿಂದ ಕೂಡಿದ ಮಾತಿನಿಂದ ಹೀಗೆ ಹೇಳಿದನು. ॥೩೨॥

ರಾಜನು ಹೇಳಿದನು-- ಎಲೈ ಮಗನೇ, ನಿನ್ನ ಬುದ್ಧಿಯನ್ನು ಧರ್ಮಮಾರ್ಗದಲ್ಲಿರಿಸು. ಬ್ರಾಹ್ಮಣರಿಗೆ ಮರ್ಯಾದೆಯನ್ನು ಮಾಡು. ನ್ಯಾಯದಿಂದ ಬಂದ ಹಣ

ನ್ಯಾಯಾಗತಂ ಧನಂ ಗ್ರಾಹ್ಯಂ ರಕ್ಷಣೀಯಾಃ ಸದಾ ಪ್ರಜಾಃ ।
ನಾಸತ್ಯಂ ಕ್ವಾಽಪಿ ವಕ್ತವ್ಯಂ ನಾಽಮಾರ್ಗೇ ಗಮನಂ ಕ್ವಚಿತ್ ॥೩೪॥

ಶಿಷ್ಟಪ್ರೋಕ್ತಂ ಪ್ರಕರ್ತವ್ಯಂ ಪೂಜನೀಯಾಸ್ತಪಸ್ವಿನಃ ।
ಹಂತವ್ಯಾ ದಸ್ಯವಃ ಕ್ರೂರಾ ಇಂದ್ರಿಯಾಣಾಂ ತಥಾ ಜಯಃ ॥೩೫॥

ಕರ್ತವ್ಯಃ ಕಾರ್ಯಸಿದ್ಧ್ಯರ್ಥಂ ರಾಜ್ಞಾ ಪುತ್ರ ಸದೈವ ಹಿ ।
ಮಂತ್ರಸ್ತು ಸರ್ವಥಾ ಗೋಪ್ಯಃ ಕರ್ತವ್ಯಃ ಸಚಿವೈಃ ಸಹ ॥೩೬॥

ನೋಪೇಕ್ಷ್ಯೋಽಲ್ಪೋಽಪಿ ಕೃತಿನಾ ರಿಪುಃ ಸರ್ವಾತ್ಮನಾ ಸುತ ।
ನ ವಿಶ್ವಸೇತ್ಪರಾಸಕ್ತಂ ಸಚಿವಂ ಚ ತಥಾ ನತಂ ॥೩೭॥

ಚಾರಾಃ ಸರ್ವತ್ರ ಯೋಕ್ತವ್ಯಾಃ ಶತ್ರುಮಿತ್ರೇಷು ಸರ್ವಥಾ ।
ಧರ್ಮೇ ಮತಿಃ ಸದಾ ಕಾರ್ಯಾ ದಾನಂ ದದ್ಯಾಚ್ಚ ನಿತ್ಯಶಃ ॥೩೮॥

---

ವನ್ನು ತೆಗೆದುಕೊಂಡು ಯಾವಾಗಲೂ ಪ್ರಜೆಗಳನ್ನು ಕಾಪಾಡು. ಯಾವ ಸಂದರ್ಭದಲ್ಲಿಯೂ ಸುಳ್ಳನ್ನು ಹೇಳಬೇಡ. ಸ್ವಲ್ಪವಾಗಿಯೂ ದುರ್ಮಾರ್ಗದಲ್ಲಿ ನಡೆಯಬೇಡ. ॥೩೩-೩೪॥

ಓ ರಾಜಪುತ್ರನೇ, ಒಳ್ಳೆಯ ಆಚರಣೆಯಿಂದ ಕೂಡಿರುವ ಪೂಜ್ಯರು ಹೇಳಿದುದನ್ನು ಮಾಡಬೇಕು. ತಪಸ್ವಿಗಳನ್ನು ಪೂಜಿಸು. ಕ್ರೂರರಾದ ಕಳ್ಳರನ್ನು ಕೊಲ್ಲಬೇಕು. ಇಂದ್ರಿಯಗಳನ್ನು ಜಯಿಸಬೇಕು. ಇದು ಯಾವಾಗಲೂ ಹಿಡಿದ ಕಾರ್ಯವನ್ನು ಸಿದ್ಧಿಗೊಳಿಸುವುದು. ಮಂತ್ರಿಗಳೊಡನೆ ಯಾವಾಗಲೂ ಮಂತ್ರಾಲೋಚನೆಯನ್ನು ಗುಟ್ಟಿನಲ್ಲಿ ಮಾಡಬೇಕು. ॥೩೫-೩೬॥

ಎಲೈ ಮಗನೇ, ಶತ್ರುವು ಎಷ್ಟೇ ದುರ್ಬಲವಾಗಿದ್ದರೂ ಅವನನ್ನು ಉಪೇಕ್ಷೆ ಮಾಡಬಾರದು. ಪರರಲ್ಲಿ ಆಸಕ್ತನಾಗಿದ್ದರೂ ನಟನೆಯಿಂದ ನಮ್ಮಲ್ಲಿ ಭಕ್ತನಂತೆ ಕಾಣುತ್ತಿರುವ ಮಂತ್ರಿಯನ್ನು ನಂಬಬಾರದು. ॥೩೭॥

ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ ಗೂಢಚಾರರನ್ನು ಇಟ್ಟಿರಬೇಕು. ಯಾವಾಗಲೂ ಧರ್ಮದಲ್ಲಿ ಬುದ್ಧಿಯನ್ನಿಟ್ಟು ಪ್ರತಿದಿನವೂ ದಾನವನ್ನು ಮಾಡುತ್ತಿರಬೇಕು, ಸಾರವಿಲ್ಲದ ನಿಷ್ಫಲವಾದ ವಾಗ್ವಾದವನ್ನು ಮಾಡಬಾರದು. ದುಷ್ಟರ ಸಂಗವನ್ನು

ಶುಷ್ಕವಾದೋ ನ ಕರ್ತವ್ಯೋ ದುಷ್ಟಸಂಗಂ ಚ ವರ್ಜಯೇತ್ ।
ಯಷ್ಟವ್ಯಾ ವಿವಿಧಾ ಯಜ್ಞಾಃ ಪೂಜನೀಯಾ ಮಹರ್ಷಯಃ ॥೩೯॥

ನ ವಿಶ್ವಸೇತ್ಸ್ತ್ರಿಯಂ ಕ್ವಾಪಿ ಸ್ತ್ರೈಣಂ ದ್ಯೂತರತಂ ನರಂ ।
ಅತ್ಯಾದರೋ ನಕರ್ತವ್ಯೋ ಮೃಗಯಾಯಾಂ ಕದಾಚನ ॥೪೦॥

ದ್ಯೂತೇ ಮದ್ಯೇ ತಥಾ ಗೇಯೇ ನೂನಂ ವಾರವಧೂಷು ಚ ।
ಸ್ವಯಂ ತದ್ವಿಮುಖೋ ಭೂಯಾತ್ ಪ್ರಜಾಸ್ತೇಭ್ಯಶ್ಚ ರಕ್ಷಯೇತ್ ॥೪೧॥

ಬ್ರಾಹ್ಮೇ ಮುಹೂರ್ತೇ ಕರ್ತವ್ಯಮುತ್ಥಾನಂ ಸರ್ವಥಾ ಸದಾ ।
ಸ್ನಾನಾದಿಕಂ ಸರ್ವವಿಧಿಂ ವಿಧಾಯ ವಿಧಿವದ್ಯಥಾ ॥೪೨॥

ಪರಾಶಕ್ತೇಃ ಪರಾಂ ಪೂಜಾಂ ಭಕ್ತ್ಯಾ ಕುರ್ಯಾತ್ಸುದೀಕ್ಷಿತಃ ।
ಪುತ್ರೈತಜ್ಜನ್ಮಸಾಫಲ್ಯಂ ಪರಾಶಕ್ತೇಃ ಪದಾರ್ಚನಂ ॥೪೩॥

---

ಮಾಡಬಾರದು. ಮಹರ್ಷಿಗಳನ್ನು ಪೂಜಿಸುತ್ತಾ ಬಗೆ ಬಗೆಯ ಯಜ್ಞಗಳನ್ನು ಮಾಡುತ್ತಿರಬೇಕು. ॥೩೮-೩೯॥

ಸ್ತ್ರೀಯನ್ನೂ, ಸ್ತ್ರೀಯರಲ್ಲಿಯೂ ಜೂಜಿನಲ್ಲಿಯೂ ಆಸಕ್ತನಾದ ಮನುಷ್ಯನನ್ನೂ, ಯಾವ ಸಂದರ್ಭದಲ್ಲಿಯೂ ನಂಬಬಾರದು. ಬೇಟೆಯಲ್ಲಿ ಅತಿ ಪ್ರೀತಿಯನ್ನು ಎಂದಿಗೂ ಇಟ್ಟುಕೊಳ್ಳಬಾರದು. ಜೂಜು, ಮದ್ಯ, ಗಾನ. ಸೂಳೆಯರು, ಇವುಗಳ ವಿಷಯದಲ್ಲಿ ಖಂಡಿತವಾಗಿಯೂ ನೀನು ಆಸಕ್ತನಾಗದೆ, ಪ್ರಜೆಗಳನ್ನೂ ಇವುಗಳಲ್ಲಿನ ಆಸಕ್ತಿಯಿಂದ ತಪ್ಪಿಸಿ, ರಕ್ಷಿಸುತ್ತಿರಬೇಕು. ॥೪೦-೪೧॥

ಪ್ರತಿದಿನವೂ ರಾತ್ರಿಯ ಕೊನೆಯ ಯಾಮದಲ್ಲಿ ಬ್ರಾಹ್ಮೀಮುಹೂರ್ತದಲ್ಲಿ ನಿದ್ರೆಯಿಂದೆದ್ದು ವಿಧಿಗನುಸಾರವಾಗಿ ಸ್ನಾನಾದಿ ಸಮಸ್ತ ನಿತ್ಯಕರ್ಮಗಳನ್ನೂ ಮಾಡಿ ಗುರೂಪದೇಶದಿಂದ ಗ್ರಹಿಸಿದ ದೇವಿಯಮಂತ್ರವನ್ನು ಜಪಿಸಿ, ಭಕ್ತಿಯಿಂದ ಆ ಜಗದಂಬೆಯ ಪೂಜೆಯನ್ನು ಮಾಡುತ್ತಿರಬೇಕು. ಎಲೈ ಮಗನೇ, ಪರಾಶಕ್ತಿಯಾದ ಜಗದಂಬೆಯ ಪಾದಪೂಜೆಯು ಮನುಜನ ಹುಟ್ಟನ್ನು ಸಾರ್ಥಕಪಡಿಸುವುದು ! ॥೪೨-೪೩॥

**ಸಕೃತ್ಕೃತ್ವಾ ಮಹಾಪೂಜಾಂ ದೇವೀಪಾದಜಲಂ ಪಿಬನ್ ।**
**ನ ಜಾತು ಜನನೀಗರ್ಭೇ ಗಚ್ಛೇದಿತಿ ವಿನಿಶ್ಚಯಃ ॥೪೪॥**

**ಸರ್ವಂ ದೃಶ್ಯಂ ಮಹಾದೇವೀ ದ್ರಷ್ಟಾ ಸಾಕ್ಷೀ ಚ ಸೈವ ಹಿ ।**
**ಇತಿ ತದ್ಭಾವಭರಿತ ಸ್ತಿಷ್ಠೇನ್ನಿರ್ಭಯಚೇತಸಾ ॥೪೫॥**

---

ಒಂದಾವೃತ್ತಿ ದೇವಿಯ ಮಹಾಪೂಜೆಯನ್ನು ಮಾಡಿ ಆ ದೇವಿಯ ಪಾದ ತೀರ್ಥವನ್ನು ಕುಡಿದರೆ, ಆ ಜೀವನು ಮತ್ತೆ ತಾಯಿಯ ಗರ್ಭವಾಸ ಮುಂತಾದ ದುಃಖದಲ್ಲಿ ಬೀಳುವುದಿಲ್ಲವೆಂಬುದು ನಿಶ್ಚಯವಾದುದು! ಎಂದರೆ ಅಂಥ ಜೀವನು ಪುನಃ ಹುಟ್ಟುಸಾವುಗಳನ್ನು ಪಡೆಯದೆ ಮೋಕ್ಷವನ್ನು ಪಡೆಯುವನು. ಈ ವಿಷಯ ದಲ್ಲಿ ಪುರಾಣಾಂತರದಲ್ಲಿ ಕಥೆಯೊಂದಿರುವುದು. ಒಬ್ಬಾನೊಬ್ಬ ಋಷಿಯು ದಾರಿಯಲ್ಲಿ ಹೋಗುತ್ತಾ ಒಂದು ಸರೋವರದಲ್ಲಿ ಸ್ನಾನಮಾಡಿ ದೇವಿಯ ಪೂಜೆಯನ್ನು ಮಾಡಿ ಆ ತೀರ್ಥವನ್ನು ಬಿಲ್ವಪತ್ರೆಯ ಗಿಡದಬುಡದಲ್ಲಿ ಚೆಲ್ಲಿದನು ಆ ತೀರ್ಥದ ನೀರನ್ನು ಬಾಯಾರಿಕೆಯಿಂದ ಕೂಡಿದ್ದ ಗುಬ್ಬಿಗಳು, ಗಿಳಿಗಳು, ಮುಂತಾದ ಪಕ್ಷಿಗಳು ಕುಡಿದುವು. ಆ ಪಕ್ಷಿ ಶರೀರವು ಹೋದಮೇಲೆ ಆ ಪಕ್ಷಿ ಜೀವರು ಒಂದು ಕಲ್ಪದ ವರೆಗೆ ಸ್ವರ್ಗಸುಖವನ್ನನುಭವಿಸಿದರು. ಮತ್ತು ಅವರಲ್ಲಿ ಕೆಲವರು ಸುದ್ಯುಮ್ನ, ಭೂರಿದ್ಯುಮ್ನ, ಇಂದ್ರದ್ಯುಮ್ನ, ಕುವಲಯಾಶ್ವ, ಯೌವನಾಶ್ವ, ಧ್ರುವಯಶ, ಅಶ್ವಪತಿ, ಶಶಬಿಂದು, ಹರಿಷ, ಮುಂತಾದ ಮೈತ್ರಾಯಣೀಯ ಶ್ರುತಿಯಲ್ಲಿ ಪ್ರಸಿದ್ಧರಾದ, ಶ್ರೇಷ್ಠಜ್ಞಾನ ಸಂಪನ್ನರಾದ, ರಾಜರಾದರು. ಮತ್ತೆ ಕೆಲವು ಪಕ್ಷಿಗಳು ಕಣ್ವ, ಜಾತೂಕರ್ಣ್ಯ, ಕಾತ್ಯಾಯನ, ಆಸುರಿ, ಪಂಚಶಿಖ, ವೈಶಂಪಾಯನ, ಆಪಸ್ತಂಬ, ಹಾರೀತ, ಮುಂತಾದ, ಜ್ಞಾನಶ್ರೇಷ್ಠರಾದ, ಋಷಿಗಳಾದರು. ಎಂದು ಕಥೆಯು. ॥೪೪॥

ದ್ರಷ್ಟನಾದ ಜೀವನೂ ಸಾಕ್ಷಿಯಾದ ಈಶ್ವರನೂ ದೃಶ್ಯವಾದ ಸಕಲ ಪ್ರಪಂಚವೂ ಮಹಾದೇವೀಸ್ವರೂಪವಾದುದೇ ಎಂದು ಆ ದೇವಿಯ ಭಾವನೆಯಿಂದ ತುಂಬಿದ ಮನಸ್ಸಿನಿಂದ ನಿರ್ಭಯವಾಗಿರಬೇಕು. ಮುಂಡಮಾಲಾಗ್ರಂಥದಲ್ಲಿ ‘ ಭೂತಾನಿ ದುರ್ಗಾ ಭುವನಾನಿ ದುರ್ಗಾ ನರಾಃ ಸ್ತ್ರಿಯಶ್ಚಾಪಿ ಸುರಾಸುರಾದಿಕಂ |
ಯದ್ಯದ್ಧಿ ದೃಶ್ಯಂ ಖಲು ತಚ್ಚ ದುರ್ಗಾ ದುರ್ಗಾಸ್ವರೂಪಾದಪರಂ ನ ಕಿಂಚಿತ್ ॥ ’ ಎಂಬದಾಗಿ, ದೇವಿಯೇ ಸರ್ವಸ್ವರೂಪಳೆಂದು ಹೇಳಿರುವುದು. ॥೪೫॥

ಕೃತ್ವಾ ನಿತ್ಯವಿಧಿಂ ಸಮ್ಯಗ್ಗಂತವ್ಯಂ ಸದಸಿ ದ್ವಿಜಾನ್ ।
ಸಮಾಹೂಯ ಚ ಪ್ರಷ್ಟವ್ಯೋ ಧರ್ಮಶಾಸ್ತ್ರವಿನಿರ್ಣಯಃ ॥೪೬॥

ಸಂಪೂಜ್ಯ ಬ್ರಾಹ್ಮಣಾನ್ಪೂಜ್ಯಾನ್ವೇದವೇದಾಂಗಪಾರಗಾನ್ ।
ಗೋಭೂಹಿರಣ್ಯಾದಿಕಂ ಚ ದೇಯಂ ಪಾತ್ರೇಷು ಸರ್ವದಾ ॥೪೭॥

ಅವಿದ್ವಾನ್ ಬ್ರಾಹ್ಮಣಃ ಕೋಽಪಿ ನೈವ ಪೂಜ್ಯಃ ಕದಾಚನ ।
ಆಹಾರಾದಧಿಕಂ ನೈವ ದೇಯಂ ಮೂರ್ಖಾಯ ಕರ್ಹಿಚಿತ್ ॥೪೮॥

ನ ವಾ ಲೋಭಾತ್ತ್ವಯಾ ಪುತ್ರ ಕರ್ತವ್ಯಂ ಧರ್ಮಲಂಘನಂ ।
ಅತಃ ಪರಂ ನ ಕರ್ತವ್ಯಂ ಕ್ವಚಿದ್ವಿಪ್ರಾವಮಾನನಂ ॥೪೯॥

ಬ್ರಾಹ್ಮಣಾ ಭೂಮಿದೇವಾಶ್ಚ ಮಾನನೀಯಾಃ ಪ್ರಯತ್ನತಃ ।
ಕಾರಣಂ ಕ್ಷತ್ರಿಯಾಣಾಂ ಚ ದ್ವಿಜಾ ಏವ ನ ಸಂಶಯಃ ॥೫೦॥

---

ಪ್ರತಿದಿನವೂ ಮಾಡಬೇಕಾದ ನಿತ್ಯಕರ್ಮಗಳನ್ನು ಮಾಡಿದಮೇಲೆ, ಸಭೆಗೆ ಹೋಗಿ ಬ್ರಾಹ್ಮಣರನ್ನು ಕರೆಯಿಸಿ ಅವರನ್ನು ಪ್ರಶ್ನೆಮಾಡಿ ಧರ್ಮಶಾಸ್ತ್ರ ನಿರ್ಣಯವನ್ನು ಮಾಡಿಕೊಂಡು, ಅಪರಾಧಿಗಳಿಗೆ ತಕ್ಕ ದಂಡನೆಯನ್ನು ಮಾಡಿ, ಬಳಿಕ ವೇದ ವೇದಾಂಗಗಳನ್ನು ತಿಳಿದ ಪೂಜ್ಯರಾದ ಬ್ರಾಹ್ಮಣರನ್ನು ಪೂಜಿಸಿ, ಯೋಗ್ಯರಾದವರಿಗೆ ಗೋ, ಭೂ, ಹಿರಣ್ಯಾದಿಗಳ ದಾನಗಳನ್ನು ಪಾತ್ರವರಿತು ಮಾಡುತ್ತಿರಬೇಕು. ಅಲ್ಲದೆ ॥೪೬-೪೭॥

ಎಲೈ ಮಗನೇ, ವಿದ್ಯಾವಿಹೀನನಾದ ಬ್ರಾಹ್ಮಣನನ್ನು ಯಾವಾಗಲೂ ನೀನು ಪೂಜಿಸಬೇಡ. ಮೂರ್ಖನಿಗೆ ಅವನ ಆಹಾರಕ್ಕಿಂತ ಹೆಚ್ಚಾಗಿ ಯಾವುದನ್ನೂ ಕೊಡಬೇಡ. ಅತ್ಯಾಸೆಯಿಂದ ಮಾಡಬೇಕಾದ ಧರ್ಮಕಾರ್ಯವನ್ನು ಮಾಡದೆ ಬಿಡಬೇಡ. ಇಲ್ಲಿಂದ ಮುಂದೆ ಯಾವ ಸಂದರ್ಭದಲ್ಲಿಯೂ ಬ್ರಾಹ್ಮಣನಿಗೆ ಅಪಮಾನವನ್ನು ಮಾಡಬೇಡ. ಕ್ಷತ್ರಿಯರ ಶ್ರೇಯಸ್ಸಿಗೂ ಅಭಿವೃದ್ಧಿಗೂ ಬ್ರಾಹ್ಮಣರೇ ಕಾರಣರಾದುದರಿಂದ ಭೂಮಿಯಲ್ಲಿ ದೇವತಾಸ್ವರೂಪರಾದ ಅವರನ್ನು ಪ್ರಯತ್ನಪೂರ್ವಕವಾಗಿ ಗೌರವಿಸು. ॥೪೮-೪೯-೫೦॥

ಅದ್ಭ್ಯೋಽಗ್ನಿರ್ಬ್ರಹ್ಮಣಃ ಕ್ಷತ್ರಮಶ್ಮನೋ ಲೋಹಮುತ್ಥಿತಂ ।
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥೫೧॥

ತಸ್ಮಾದ್ರಾಜ್ಞಾ ವಿಶೇಷೇಣ ಮಾನನೀಯಾ ಮುಖೋದ್ಭವಾಃ ।
ದಾನೇನ ವಿನಯೇನೈವ ಸರ್ವಥಾ ಭೂತಿಮಿಚ್ಛತಾ ॥೫೨॥

ದಂಡನೀತಿಃ ಸದಾ ಕಾರ್ಯಾ ಧರ್ಮಶಾಸ್ತ್ರಾನುಸಾರತಃ ।
ಕೋಶಸ್ಯ ಸಂಗ್ರಹಃ ಕಾರ್ಯೋ ನೂನಂ ನ್ಯಾಯಾಗತಸ್ಯ ಹ ॥೫೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಏಕಾದಶೋಽಧ್ಯಾಯಃ.

---

ನೀರಿನಿಂದ ಅಗ್ನಿಯೂ, ಬ್ರಾಹ್ಮಣನಿಂದ ಕ್ಷತ್ರಿಯನೂ, ಕಲ್ಲಿನಿಂದ ಲೋಹವೂ ಉಂಟಾಗಿರುವುದು. ಆದುದರಿಂದ ಕಾರ್ಯರೂಪವಾದ ಅಗ್ನಿ, ಕ್ಷತ್ರಿಯ, ಲೋಹಗಳು, ತಂತಮ್ಮ ಕಾರಣರೂಪವಾದ ನೀರು, ಬ್ರಾಹ್ಮಣ, ಕಲ್ಲು, ಇವುಗಳಲ್ಲಿ ಅಡಗುವುದಲ್ಲದೆ ತಮ್ಮ ಪರಾಕ್ರಮವನ್ನು ತೋರಿಸದೆ ಶಾಂತವಾಗಿ ವರ್ತಿಸುವುದು ಸ್ವಾಭಾವಿಕವಾಗಿರುತ್ತದೆ. ॥೫೧॥

ಆದುದರಿಂದ ರಾಜನಾದವನು ವಿಶೇಷವಾಗಿ ಎಲ್ಲಬಗೆಯ ಸಂಪತ್ತನ್ನಪೇಕ್ಷಿಸುವವನಾಗಿ, ದಾನಮಾಡುವುದರಿಂದಲೂ ವಿನಯದಿಂದಲೂ ಬ್ರಾಹ್ಮಣರನ್ನು ಮರ್ಯಾದೆ ಮಾಡಬೇಕು. ॥೫೨॥

ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ದಂಡನೀತಿಯನ್ನು ಯಾವಾಗಲೂ ಅನುಸರಿಸಿ ನಡೆಯುತ್ತಿರಬೇಕು. ನ್ಯಾಯಮಾರ್ಗವನ್ನನುಸರಿಸಿಯೇ ಧನಸಂಪಾದನೆಯನ್ನು ಮಾಡಿ ಭಂಡಾರವನ್ನು ವೃದ್ಧಿಪಡಿಸಬೇಕು. ॥೫೩॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### || ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಏವಂ ಪ್ರಬೋಧಿತಃ ಪಿತ್ರಾ ತ್ರಿಶಂಕುಃ ಪ್ರಣತೋ ನೃಪಃ ।**
**ತಥೇತಿ ಪಿತರಂ ಪ್ರಾಹ ಪ್ರೇಮಗದ್ಗದಯಾ ಗಿರಾ ||೧||**

**ವಿಪ್ರಾನಾಹೂಯ ಮಂತ್ರಜ್ಞಾನ್ ವೇದಶಾಸ್ತ್ರವಿಶಾರದಾನ್ ।**
**ಅಭಿಷೇಕಾಯ ಸಂಭಾರಾನ್ ಕಾರಯಾಮಾಸ ಸತ್ವರಂ ||೨||**

**ಸಲಿಲಂ ಸರ್ವತೀರ್ಥಾನಾಂ ಸಮಾನಾಯ್ಯ ವಿಶಾಂ ಪತಿಃ ।**
**ಪ್ರಕೃತೀಶ್ಚ ಸಮಾಹೂಯ ಸಾಮಂತಾನ್ನೃಪತಿಸ್ತಥಾ ||೩||**

---

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ, ಈ ರೀತಿಯಲ್ಲಿ ತಂದೆಯು ತ್ರಿಶಂಕುವಿಗೆ ವಿವೇಕವನ್ನು ಹೇಳುತ್ತಲು ಆ ಮಗನು ಹೆಚ್ಚಾದ ಪ್ರೀತಿಯಿಂದ ಅವನ ಮಾತನ್ನು ಗೌರವದಿಂದ ಕೇಳಿ ತಿಳಿದು ಗದ್ಗದ ಧ್ವನಿಯಿಂದ ಕೂಡಿ, ಹಾಗೆಯೇ ಆಗಲೆಂದು ಹೇಳಿ, ಒಪ್ಪಿಕೊಂಡನು. ||೧||

ಅರುಣರಾಜನು ವೇದಶಾಸ್ತ್ರಗಳನ್ನು ಬಲ್ಲ ಮಂತ್ರಜ್ಞರಾದ ಬ್ರಾಹ್ಮಣರನ್ನು ಕರೆಯಿಸಿ ಮಗನಿಗೆ ಪಟ್ಟಾಭಿಷೇಕಕ್ಕೋಸ್ಕರವಾಗಿ ಬೇಕಾದ ಪದಾರ್ಥಗಳನ್ನು ಸಿದ್ಧಗೊಳಿಸಿದನು. ಸಮಸ್ತ ತೀರ್ಥೋದಕಗಳನ್ನೂ ತರಿಸಿದನು. ಸಾಮಂತ ರಾಜರನ್ನೂ ಪಟ್ಟಣದ ಪ್ರಜೆಗಳನ್ನೂ ಕರೆಯಿಸಿದನು. ||೨-೩||

ಪ್ರಶಸ್ತೇಽಹ್ನಿ ವಿಧಿವತ್ತಸ್ಮೈ ದದಾವಾಸನಮುತ್ತಮಂ ।
ಅಭಿಷಿಚ್ಯ ಸುತಂ ರಾಜ್ಯೇ ತ್ರಿಶಂಕುಂ ವಿಧಿವತ್ಪಿತಾ ॥೪॥

ತೃತೀಯಮಾಶ್ರಮಂ ಪುಣ್ಯಂ ಜಗ್ರಾಹ ಭಾರ್ಯಯಾ ಯುತಃ ।
ವನೇ ತ್ರಿಪಥಗಾಕೂಲೇ ಚಚಾರ ದುಶ್ಚರಂ ತಪಃ ॥೫॥

ಕಾಲೇ ಪ್ರಾಪ್ತೇ ಯಯೌ ಸ್ವರ್ಗಂ ಪೂಜಿತಸ್ತ್ರಿದಶೈರಪಿ ।
ಇಂದ್ರಾಸನಸಮೀಪಸ್ಥೋ ರರಾಜ ರವಿವತ್ಸದಾ ॥೬॥

॥ ರಾಜೋವಾಚ ॥

ಪೂರ್ವಂ ಭಗವತಾ ಪ್ರೋಕ್ತಂ ಕಥಾಯೋಗೇನ ಸಾಂಪ್ರತಂ ।
ಸತ್ಯವ್ರತೋ ವಸಿಷ್ಠೇನ ಶಪ್ತೋ ದೋಗ್ಧ್ರೀವಧಾತ್ಕಿಲ ॥೭॥

ಕುಪಿತೇನ ಪಿಶಾಚತ್ವಂ ಪ್ರಾಪಿತೋ ಗುರುಣಾ ತತಃ ।
ಕಥಂ ಮುಕ್ತಃ ಪಿಶಾಚತ್ವಾದಿತ್ಯೇತತ್ಸಂಶಯಂ ಪ್ರಭೋ ॥೮॥

---

ಶುಭದಿನದಲ್ಲಿ ವಿಧಿಗನುಸಾರವಾಗಿ ಆ ಮಗನಿಗೆ ಸಿಂಹಾಸನವನ್ನು ಕೊಟ್ಟು ರಾಜ್ಯಭಾರದ ಪಟ್ಟಾಭಿಷೇಕವನ್ನು ಮಾಡಿ ತಂದೆಯು ತನ್ನ ಪತ್ನಿಯೊಂದಿಗೆ ಶುಭವಾದ ವಾನಪ್ರಸ್ಥಾಶ್ರಮವನ್ನು ಪರಿಗ್ರಹಿಸಿದನು. ॥೪॥

ಅರುಣರಾಜನು ಗಂಗಾನದಿಯ ದಡದಲ್ಲಿರುವ ಆಶ್ರಮದಲ್ಲಿ ವಾಸಮಾಡುತ್ತಾ, ಕಠಿನವಾದ ತಪಸ್ಸನ್ನು ಮಾಡಿ ಮರಣಕಾಲವು ಪ್ರಾಪ್ತವಾಗಲು ಈ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಹೋಗಿ ದೇವತೆಗಳಿಂದಲೂ ಕೂಡ ಪೂಜೆಯನ್ನು ಪಡೆಯುತ್ತಾ, ದೇವೇಂದ್ರನ ಪೀಠದ ಸಮೀಪದಲ್ಲಿಯೇ ಇರುವ ಆಸನವನ್ನು ಪಡೆದು, ಸೂರ್ಯನಂತೆ ಯಾವಾಗಲೂ ಪ್ರಕಾಶಿಸುತ್ತಿದ್ದನು. ॥೫-೬॥

ರಾಜನು ಹೇಳಿದನು—ಓ ಗುರುವಾದ ವ್ಯಾಸನೇ, ಹಿಂದೆ ಕಥೆಯನ್ನು ಹೇಳುವ ಸಂದರ್ಭದಲ್ಲಿ ಸತ್ಯವ್ರತನು ವಸಿಷ್ಠನ ಕರೆಯುವ ಹಸುವನ್ನು ಕೊಂದುದಕ್ಕಾಗಿ ಗುರುವಾದ ವಸಿಷ್ಠನ ಶಾಪದಿಂದ ಪಿಶಾಚತ್ವವನ್ನು ಹೊಂದಿದನೆಂದು ನೀನೇ ಹೇಳಿರುವೆ. ಆಮೇಲೆ ಅವನಿಗೆ ಪಿಶಾಚತ್ವದಿಂದ ಹೇಗೆ ಬಿಡುಗಡೆಯಾಯಿತೆಂಬ ವಿಷಯದಲ್ಲಿ ನನಗೆ ಸಂದೇಹವು ಉಳಿದಿರುವುದು. ॥೭-೮॥

ನ ಸಿಂಹಾಸನಯೋಗ್ಯೋ ಹಿ ಭವೇಚ್ಛಾಪಸಮನ್ವಿತಃ ।
ಮುನಿನಾ ಮೋಚಿತಃ ಶಾಪಾತ್ ಕೇನಾಽನ್ಯೇನ ಚ ಕರ್ಮಣಾ ॥೯॥

ಏತನ್ಮೇ ಬ್ರೂಹಿ ವಿಪ್ರರ್ಷೇ ಶಾಪಮೋಕ್ಷಣಕಾರಣಂ ।
ಆನೀತಸ್ತು ಕಥಂ ಪಿತ್ರಾ ಸ್ವಗೃಹೇ ತಾದೃಶಾಕೃತಿಃ ॥೧೦॥

॥ ವ್ಯಾಸ ಉವಾಚ ॥

ವಸಿಷ್ಠೇನ ಚ ಶಪ್ತೋಽಸೌ ಸದ್ಯಃ ಪೈಶಾಚತಾಂ ಗತಃ ।
ದುರ್ವೇಷಶ್ಚಾಽತಿದುರ್ಧರ್ಷಃ ಸರ್ವಲೋಕ ಭಯಂಕರಃ ॥೧೧॥

ಯದೃಚ್ಛಯೋಪಾಸಿತಾ ದೇವೀ ಭಕ್ತ್ಯಾ ಸತ್ಯವ್ರತೇನ ಹ ।
ತಯಾ ಪ್ರಸನ್ನಯಾ ರಾಜನ್ ದಿವ್ಯದೇಹಃ ಕೃತಃ ಕ್ಷಣಾತ್ ॥೧೨॥

ಪಿಶಾಚತ್ವಂ ಗತಂ ತಸ್ಯ ಪಾಪಂ ಚೈವ ಕ್ಷಯಂ ಗತಂ ।
ವಿಪಾಪ್ಮಾ ಚಾಽತಿತೇಜಸ್ವೀ ಸಂಭೂತಸ್ತತ್ಕೃಪಾಽಮೃತಾತ್ ॥೧೩॥

---

ಶಾಪದಿಂದ ಕೂಡಿದವನು ಸಿಂಹಾಸನಯೋಗ್ಯನಾಗುವುದಿಲ್ಲವಲ್ಲವೇ ? ಯಾವ ಮುನಿಯು ಯಾವ ಕರ್ಮಾನುಷ್ಠಾನದಿಂದ ಅವನ ಶಾಪರೂಪವಾದ ಫಲದಿಂದ ಅವನನ್ನು ಬಿಡುಗಡೆಮಾಡಿದನು ? ಹಾಗಿಲ್ಲದೆ ಆ ಪಿಶಾಚಾಕೃತಿಯಿಂದ ಕೂಡಿದ ರಾಜಪುತ್ರನನ್ನು ತಂದೆಯು ತನ್ನ ಮನೆಗೆ ಹೇಗೆ ಕರೆಯಿಸಿದನು ? ಬ್ರಹ್ಮರ್ಷಿಯಾದ ವ್ಯಾಸನೇ, ಶಾಪದ ಬಿಡುಗಡೆಗೆ ಕಾರಣವಾದ ಈ ಅಂಶವನ್ನು ನನಗೆ ವಿಸ್ತಾರವಾಗಿ ಹೇಳಬೇಕು. ॥೯-೧೦॥

ವ್ಯಾಸರು ಹೇಳಿದರು---ಎಲೈ ರಾಜನೇ, ಕೇಳು. ವಸಿಷ್ಠನು ಶಾಪವನ್ನು ಕೊಟ್ಟ ಕ್ಷಣದಲ್ಲಿಯೇ ಆ ರಾಜಪುತ್ರನು ಕೆಟ್ಟ ಆಕಾರದವನಾಗಿ, ಮಹಾಪರಾಕ್ರಮಿಯಾದರೂ, ಎಲ್ಲರಿಗೂ ಭಯವನ್ನು ಹುಟ್ಟಿಸುವ ಪಿಶಾಚಿಯಾಗಿದ್ದನು. ಹೀಗಿದ್ದರೂ ಆ ಸತ್ಯವ್ರತನು ಭಕ್ತಿಯಿಂದ ದೇವಿಯನ್ನು ಪೂಜಿಸಿದ ಕ್ಷಣದಲ್ಲಿಯೇ ಆ ದೇವಿಯು ಪ್ರಸನ್ನಳಾಗಿ ಅವನನ್ನು ದಿವ್ಯವಾದ ಶರೀರ ಉಳ್ಳವನನ್ನಾಗಿ ಮಾಡಿದಳು !॥೧೧-೧೨॥

ಮತ್ತು ಅವನ ಪಾಪವೂ ನಾಶವಾಯಿತು. ಪಿಶಾಚರೂಪವೂ ಹೋಯಿತು, ಆ ದೇವಿಯ ಅಮೃತಸ್ವರೂಪವಾದ ದಯೆಯಿಂದ ಅವನು ಮಹಾತೇಜಸ್ವಿಯಾದನು.

ವಸಿಷ್ಠೋಽಪಿ ಪ್ರಸನ್ನಾತ್ಮಾ ಜಾತಃ ಶಕ್ತಿಪ್ರಸಾದತಃ ।
ಪಿತಾಽಪಿ ಚ ಬಭೂವಾಽಸ್ಯ ಪ್ರೇಮಯುಕ್ತಸ್ತ್ವನುಗ್ರಹಾತ್ ॥೧೪॥

ರಾಜ್ಯಂ ಶಶಾಸ ಧರ್ಮಾತ್ಮಾ ಮೃತೇ ಪಿತರಿ ಪಾರ್ಥಿವಃ ।
ಈಜೇ ಚ ವಿವಿಧೈರ್ಯಜ್ಞೈಃ ದೇವದೇವೀಂ ಸನಾತನೀಂ ॥೧೫॥

ತಸ್ಯ ಪುತ್ರೋ ಬಭೂವಾಽಥ ಹರಿಶ್ಚಂದ್ರಃ ಸುಶೋಭನಃ ।
ಲಕ್ಷಣೈಃ ಶಾಸ್ತ್ರನಿರ್ದಿಷ್ಟೈಃ ಸಂಯುತಶ್ಚಾಽತಿಸುಂದರಃ ॥೧೬॥

ಯುವರಾಜಂ ಸುತಂ ಕೃತ್ವಾ ತ್ರಿಶಂಕುಃ ಪೃಥಿವೀಪತಿಃ ।
ಮಾನುಷೇಣ ಶರೀರೇಣ ಸ್ವರ್ಗಂ ಭೋಕ್ತುಂ ಮನೋ ದಧೇ ॥೧೭॥

ವಸಿಷ್ಠಸ್ಯಾಶ್ರಮಂ ಗತ್ವಾ ಪ್ರಣಮ್ಯ ವಿಧಿವನ್ನೃಪಃ ।
ಉವಾಚ ವಚನಂ ಪ್ರೀತಃ ಕೃತಾಂಜಲಿಪುಟಸ್ತದಾ ॥೧೮॥

---

ಆ ಶಕ್ತಿ ದೇವಿಯ ಅನುಗ್ರಹದಿಂದಲೇ ವಸಿಷ್ಠನೂ ಪ್ರಸನ್ನನಾದನು. ತಂದೆಯೂ ಮಗನಲ್ಲಿ ಪ್ರೀತಿಯುಳ್ಳವನಾದನು. ॥೧೩-೧೪॥

ತಂದೆಯು ಮರಣವನ್ನು ಹೊಂದಿದ ಮೇಲೆ ಸತ್ಯವ್ರತರಾಜನು ಧರ್ಮದಿಂದ ರಾಜ್ಯವನ್ನು ಆಳುತ್ತಾ, ಅಗ್ನಿಷ್ಟೋಮವೇ ಮೊದಲಾಗಿ ಅಶ್ವಮೇಧಪರ್ಯಂತವಾದ ಅನೇಕ ಯಜ್ಞಗಳಿಂದಲೂ ನಿತ್ಯಳೂ, ಸಚ್ಚಿದಾನಂದಸ್ವರೂಪಳೂ, ಆದ ಭುವನೇಶ್ವರೀದೇವಿಯನ್ನು ಆರಾಧಿಸಿದನು. ॥೧೫॥

ಆ ತ್ರಿಶಂಕುರಾಜನಿಗೆ ಶಾಸ್ತ್ರದಲ್ಲಿ ಹೇಳಿರುವಂತೆ ಮಂಗಳಕರವಾದ ಲಕ್ಷಣಗಳಿಂದ ಕೂಡಿದ ಹರಿಶ್ಚಂದ್ರನೆಂಬ ಮಗನಾದನು. ಆ ಮಗನನ್ನು ಯುವರಾಜನನ್ನಾಗಿ ಮಾಡಿ, ತಾನು ಮನುಷ್ಯಶರೀರದಿಂದಲೇ ಸ್ವರ್ಗಸುಖವನ್ನನುಭವಿಸಬೇಕೆಂದು ಮನಸ್ಸು ಮಾಡಿದನು. ॥೧೬-೧೭॥

ಆದುದರಿಂದ ರಾಜನು ಗುರುವಾದ ವಸಿಷ್ಠರ ಆಶ್ರಮಕ್ಕೆ ಹೋಗಿ, ಆ ಮಹರ್ಷಿಯನ್ನು ವಿಧಿಗನುಸಾರವಾಗಿ ನಮಸ್ಕರಿಸಿ, ಸಂತೋಷದಿಂದ ಕೈಮುಗಿದುಕೊಂಡು ಆ ವಸಿಷ್ಠನೊಡನೆ ಹೀಗೆ ಮಾತನಾಡಿದನು. ॥೧೮॥

|| ರಾಜೋವಾಚ ||

ಬ್ರಹ್ಮಪುತ್ರ ಮಹಾಭಾಗ ಸರ್ವಮಂತ್ರವಿಶಾರದ ।
ವಿಜ್ಞಪ್ತಿಂ ಮೇ ಸುಮನಸಾ ಶ್ರೋತುಮರ್ಹಸಿ ತಾಪಸ ॥೧೯॥

ಇಚ್ಛಾ ಮೇಽದ್ಯ ಸಮುತ್ಪನ್ನಾ ಸ್ವರ್ಗಲೋಕಸುಖಾಯ ಚ ।
ಅನೇನೈವ ಶರೀರೇಣ ಭೋಗಾನ್ಭೋಕ್ತುಮಮಾನುಷಾನ್ ॥೨೦॥

ಅಪ್ಸರೋಭಿಶ್ಚ ಸಂವಾಸಃ ಕ್ರೀಡಿತುಂ ನಂದನೇ ವನೇ ।
ದೇವಗಂಧರ್ವಗಾನಂ ಚ ಶ್ರೋತವ್ಯಂ ಮಧುರಂ ಕಿಲ ॥೨೧॥

ಯಾಜಯ ತ್ವಂ ಮಖೇನಾಶು ತಾದೃಶೇನ ಮಹಾಮುನೇ ।
ಯಥಾಽನೇನ ಶರೀರೇಣ ವಸೇ ಲೋಕಂ ತ್ರಿವಿಷ್ಟಪಂ ॥೨೨॥

ಸಮರ್ಥೋಽಸಿ ಮುನಿಶ್ರೇಷ್ಠ ಕುರು ಕಾರ್ಯಂ ಮಮಾಧುನಾ ।
ಪ್ರಾಪಯಾಶು ಮಖಂ ಕೃತ್ವಾ ದೇವಲೋಕಂ ದುರಾಸದಂ ॥೨೩॥

---

ಬ್ರಹ್ಮನ ಮಗನೂ ಮಹಾಜ್ಞಾನಿಯೂ ಸಕಲ ಮಂತ್ರಗಳನ್ನೂ ತಿಳಿದವನೂ ತಪಸ್ವಿಯೂ ಆದ ನೀನು ಒಳ್ಳೆಯ ಮನಸ್ಸಿನಿಂದ ನನ್ನ ವಿಜ್ಞಾಪನೆಯನ್ನು ಲಾಲಿಸಬೇಕು. ಈ ಶರೀರದಿಂದಲೇ ಮನುಷ್ಯರು ಸಾಮಾನ್ಯವಾಗಿ ಅನುಭವಿಸಲು ಅಸಾಧ್ಯವಾದ ಸ್ವರ್ಗಲೋಕದ ಸುಖವನ್ನು ಅನುಭವಿಸಬೇಕೆಂಬ ಆಸೆಯು ನನಗೆ ಉಂಟಾಗಿರುವುದು. ಹೇಗೆಂದರೆ—॥೧೯॥

ನಾನು ಅಪ್ಸರಸ್ತ್ರೀಯರೊಡನೆ ನಂದನವನದಲ್ಲಿ ಕ್ರೀಡಿಸಬೇಕು. ಮಧುರವಾದ ದೇವಗಂಧರ್ವರ ಗಾನವನ್ನು ಕೇಳಬೇಕು. ಓ ಮಹಾಮುನಿಯೇ, ಅಂತಹ ಯಜ್ಞವನ್ನು ಬೇಗನೆ ನನ್ನಿಂದ ಮಾಡಿಸು! ಅದರ ಫಲವಾಗಿ ನಾನು ಈ ಶರೀರದಿಂದಲೇ ಸ್ವರ್ಗಲೋಕದಲ್ಲಿ ವಾಸಮಾಡುವೆನು. ॥೨೧-೨೨॥

ಓ ಋಷಿಶ್ರೇಷ್ಠನೇ, ನನ್ನ ಈ ಕಾರ್ಯವನ್ನು ಮಾಡಿಕೊಡಲು ನೀನು ಶಕ್ತನಾಗಿರುವೆ. ಈಗಲೇ ಯಜ್ಞವನ್ನು ಮಾಡಿಸಿ ಸಾಧಾರಣ ಜನರಿಂದ ಪಡೆಯುವುದಕ್ಕೆ ಅಸಾಧ್ಯವಾದ ದೇವಲೋಕಕ್ಕೆ ಬೇಗನೆ ನನ್ನನ್ನು ಕಳುಹಿಸಿಕೊಡು. ॥೨೩॥

॥ ವಸಿಷ್ಠ ಉವಾಚ ॥

ರಾಜನ್ಮಾನುಷದೇಹೇನ ಸ್ವರ್ಗೇ ವಾಸಃ ಸುದುರ್ಲಭಃ ।
ಮೃತಸ್ಯ ಹಿ ಧ್ರುವಂ ಸ್ವರ್ಗಃ ಕಥಿತಃ ಪುಣ್ಯಕರ್ಮಣಾ ॥೨೪॥

ತಸ್ಮಾದ್ಬಿಭೇಮಿ ಸರ್ವಜ್ಞ ದುರ್ಲಭಾಚ್ಚ ಮನೋರಥಾತ್ ।
ಅಪ್ಸರೋಭಿಶ್ಚ ಸಂವಾಸೋ ಜೀವಮಾನಸ್ಯ ದುರ್ಲಭಃ ॥೨೫॥

ಕುರು ಯಜ್ಞಾನ್ಮಹಾಭಾಗ ಮೃತಃ ಸ್ವರ್ಗಮವಾಪ್ಸ್ಯಸಿ ।

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ರಾಜಾ ಪರಮದುರ್ಮನಾಃ ॥೨೬॥

ಉವಾಚ ವಚನಂ ಭೂಯೋ ವಸಿಷ್ಠಂ ಪೂರ್ವರೋಷಿತಂ ।
ನ ತ್ವಂ ಯಾಜಯಸೇ ಬ್ರಹ್ಮನ್ ಗರ್ವಾವೇಶಾಚ್ಚ ಮಾಂ ಯದಿ ॥೨೭॥

ಅನ್ಯಂ ಪುರೋಹಿತಂ ಕೃತ್ವಾ ಯಕ್ಷ್ಯೇಽಹಂ ಕಿಲ ಸಾಂಪ್ರತಂ ।
ತಚ್ಛ್ರುತ್ವಾ ವಚನಂ ತಸ್ಯ ವಸಿಷ್ಠಃ ಕೋಪಸಂಯುತಃ ॥೨೮॥

---

ವಸಿಷ್ಠನು ಹೇಳಿದನು—ರಾಜನೇ, ಈ ಮನುಷ್ಯದೇಹದಿಂದಲೇ ಕೂಡಿ ಸ್ವರ್ಗದಲ್ಲಿ ಸುಖಾನುಭವ ಮಾಡಲು ಸಾಧ್ಯವಿಲ್ಲ. ಪುಣ್ಯಕರ್ಮದ ಫಲಪರಿಪಾಕದಿಂದ ಮನುಷ್ಯ ಶರೀರವನ್ನು ಬಿಟ್ಟವನಿಗೆ ಸ್ವರ್ಗಸುಖಾನುಭವವು ಶಾಶ್ವತವಾಗಿ ದೊರೆಯುವುದು. ಎಲೈ ಸರ್ವಜ್ಞನಾದ ರಾಜನೇ, ಸಿಕ್ಕದೆ ಇರತಕ್ಕ ಇಷ್ಟಾರ್ಥದ ಸಂಪಾದನೆಯನ್ನುಂಟುಮಾಡಲು ಪ್ರಯತ್ನವನ್ನು ಕೈಗೊಳ್ಳುವುದಕ್ಕೆ ನಾನು ಹೆದರುವೆನು. ಮನುಷ್ಯ ಶರೀರದಿಂದ ಬದುಕಿರುವವನಿಗೆ ಅಪ್ಸರಸ್ತ್ರೀಯರ ಸಹವಾಸವು ದೊರೆಯತಕ್ಕುದಲ್ಲ. ಆದುದರಿಂದ ಎಲೈ ಪುಣ್ಯವಂತನಾದ ರಾಜನೇ, ಯಜ್ಞಗಳನ್ನು ಮಾಡು. ಮರಣಹೊಂದಿದ ಮೇಲೆ ಸ್ವರ್ಗವು ಬರುವುದು. ॥೨೪-೨೫॥

ವ್ಯಾಸಋಷಿಯು ಹೇಳಿದನು—ಓ ಬ್ರಹ್ಮರ್ಷಿಯೇ, ವಿಶೇಷವಾದ ಅಹಂಕಾರದಿಂದ ನೀನು ನನ್ನಿಂದ ತಕ್ಕ ಯಜ್ಞವನ್ನು ಮಾಡಿಸದಿದ್ದರೆ ಈಗಲೇ ಮತ್ತೊಬ್ಬ ಪುರೋಹಿತನನ್ನು ವರಣಮಾಡಿಕೊಂಡು ನಾನು ಅಂತಹ ಯಜ್ಞವನ್ನು ಮಾಡುವೆನು. ॥೨೬-೨೭॥

ಆ ರಾಜನ ಮಾತನ್ನು ಕೇಳಿ ವಸಿಷ್ಠನು ಕೋಪದಿಂದ ಕೂಡಿದವನಾಗಿ ಎಲೈ ದುರ್ಬುದ್ಧಿಯಿಂದ ಕೂಡಿದ ರಾಜನೇ, ಈ ಶರೀರದಿಂದಲೇ ನೀನು ಬೇಗನೆ

ಶಶಾಪ ಭೂಪತಿಂ ಚೇತಿ ಚಾಂಡಾಲೋ ಭವ ದುರ್ಮತೇ ।
ಅನೇನ ತ್ವಂ ಶರೀರೇಣ ಶ್ವಪಚೋ ಭವ ಸತ್ವರಂ ॥೨೯॥

ಸ್ವರ್ಗಕೃಂತನಪಾಪಿಷ್ಠ ಸುರಭೀವಧದೂಷಿತ ।
ಬ್ರಹ್ಮಪತ್ನೀಹರೋ ಚ್ಛಿನ್ನಧರ್ಮಮಾರ್ಗವಿದೂಷಕ ॥೩೦॥

ನ ತೇ ಸ್ವರ್ಗಗತಿಃ ಪಾಪ ಮೃತಸ್ಯಾಽಪಿ ಕಥಂಚನ ।

॥ ವ್ಯಾಸ ಉವಾಚ ॥

ಇತ್ಯುಕ್ತೋ ಗುರುಣಾ ರಾಜನ್ ತ್ರಿಶಂಕುಸ್ತತ್ಕ್ಷಣಾದಪಿ ॥೩೧॥

ತತ್ರ ತೇನ ಶರೀರೇಣ ಬಭೂವ ಶ್ವಪಚಾಕೃತಿಃ ।
ಕುಂಡಲೇಽಶ್ಮಮಯೇ ವಾಽಪಿ ಜಾತೇ ತಸ್ಯ ಚ ತತ್ಕ್ಷಣಾತ್ ॥೩೨॥

ದೇಹೇ ಚಂದನಗಂಧಶ್ಚ ವಿಡ್ಗಂಧೋಽಹ್ಯಭವತ್ತದಾ ।
ನೀಲವರ್ಣೇಽಥ ಸಂಜಾತೇ ದಿವ್ಯೇ ಪೀತಾಂಬರೇ ತನೌ ॥೩೩॥

ಗಜವರ್ಣೋಽಭವದ್ದೇಹಃ ಶಾಪಾತ್ತಸ್ಯ ಮಹಾತ್ಮನಃ ।
ಶಕ್ತ್ಯುಪಾಸಕರೋಷೇಣ ಫಲಮೇತದಭೂನ್ನೃಪ ॥೩೪॥

---

ಶ್ವಪಚನಾಗು. ಸುರಭಿ ಎಂಬ ದಿವ್ಯವಾದ ಹಸುವನ್ನು ಕೊಂದೆ. ಬ್ರಾಹ್ಮಣಪತ್ನಿಯನ್ನು ಅಪಹರಣಮಾಡಿದೆ. ಧರ್ಮಮಾರ್ಗವನ್ನು ತ್ಯಾಗಮಾಡಿದೆ. ಈ ಪಾಪಗಳಿಂದ ನಿನ್ನ ಸ್ವರ್ಗಫಲವು ನಾಶವಾಯಿತು. ನೀನು ಸತ್ತಮೇಲೂ ನಿನಗೆ ಸ್ವರ್ಗಫಲದ ಪ್ರಾಪ್ತಿಯಾಗುವುದಿಲ್ಲ! ಪಾಪಿಯಾದ ನೀನು ಚಾಂಡಾಲನಾಗು. ಎಂದು ಶಪಿಸಿದನು. ॥೨೮-೨೯-೩೦॥

ವ್ಯಾಸರು ಹೇಳಿದರು—ಎಲೈ ರಾಜನೇ, ಗುರುವು ಹೀಗೆ ಶಾಪವನ್ನು ಕೊಡುತ್ತಲು, ಆ ತ್ರಿಶಂಕುರಾಜನು ಆ ಕ್ಷಣದಲ್ಲಿಯೇ ಅದೇ ಶರೀರದಿಂದ ಚಾಂಡಾಲನ ಆಕಾರವುಳ್ಳವನಾದನು! ಅವನ ಚಿನ್ನದ ಕರ್ಣಾಭರಣಗಳು ಕಬ್ಬಿಣದವುಗಳಾದುವು. ಮೈಗೆ ಬಳಿದುಕೊಂಡಿದ್ದ ಶ್ರೀಗಂಧವು ಅಮೇಧ್ಯದ ವಾಸನೆಯುಳ್ಳುದಾಯಿತು. ಉಟ್ಟಿದ್ದ ದಿವ್ಯವಾದ ಪೀತಾಂಬರಗಳು ನೀಲಿಯ ಬಣ್ಣದ ಕೊಳಕುಬಟ್ಟೆಗಳಾದುವು. ಶರೀರವೆಲ್ಲವೂ ಆನೆಯ ಮೈಬಣ್ಣವುಳ್ಳುದಾಯಿತು! ಶಕ್ತಿದೇವಿಯ ಉಪಾಸನೆಯನ್ನು

ತಸ್ಮಾಚ್ಛ್ರೀಶಕ್ತಿಭಕ್ತೋ ಹಿ ನಾವಮಾನ್ಯಃ ಕದಾಚನ ।
ಗಾಯತ್ರೀಜಪನಿಷ್ಠೋ ಹಿ ವಸಿಷ್ಠೋ ಮುನಿಸತ್ತಮಃ ॥೩೪॥

ದೃಷ್ಟ್ವಾ ನಿಂದ್ಯಂ ನಿಜಂ ದೇಹಂ ರಾಜಾ ದುಃಖಮವಾಪ್ತವಾನ್ ।
ನ ಜಗಾಮ ಗೃಹೇ ದೀನೋ ವನಮೇವಾಽಭಿತೋ ಯಯೌ ॥೩೬॥

ಚಿಂತಯಾಮಾಸ ದುಃಖಾರ್ತ ಸ್ತ್ರಿಶಂಕುಃ ಶೋಕವಿಹ್ವಲಃ ।
ಕಿಂ ಕರೋಮಿ ಕ್ವ ಗಚ್ಛಾಮಿ ದೇಹೋ ಮೇಽತೀವ ನಿಂದಿತಃ ॥೩೭॥

ಕರ್ತವ್ಯಂ ನೈವ ಪಶ್ಯಾಮಿ ಯೇನ ಮೇ ದುಃಖಸಂಕ್ಷಯಃ ।
ಗೃಹೇ ಗಚ್ಛಾಮಿ ಚೇತ್ಪುತ್ರಃ ಪೀಡಿತೋಽದ್ಯ ಭವಿಷ್ಯತಿ ॥೩೮॥

ಭಾರ್ಯಾಽಪಿ ಶ್ವಪಚಂ ದೃಷ್ಟ್ವಾ ನಾಂಗೀಕಾರಂ ಕರಿಷ್ಯತಿ ।
ಸಚಿವಾ ನಾದರಿಷ್ಯಂತಿ ವೀಕ್ಷ್ಯ ಮಾಮೀದೃಶಂ ಪುನಃ ॥೩೯॥

ಜ್ಞಾತಯೋ ಬಂಧುವರ್ಗಶ್ಚ ಸಂಗತೋ ನ ಭಜಿಷ್ಯತಿ ।
ಸರ್ವೈಸ್ತ್ಯಕ್ತಸ್ಯ ಮೇ ನೂನಂ ಜೀವಿತಾನ್ಮರಣಂ ವರಂ ॥೪೦॥

---

ಮಾಡಿ ಸಿದ್ಧಿಯನ್ನು ಪಡೆದಿರತಕ್ಕ ಮಹಾತ್ಮನಾದ ವಸಿಷ್ಠನ ರೋಷದಿಂದಲೂ ಶಾಪದಿಂದಲೂ ಈ ರೀತಿಯಾದ ಫಲವುಂಟಾಯಿತು. ॥೩೧-೩೨-೩೩-೩೪॥

ರಾಜನಾದ ತ್ರಿಶಂಕುವು ತನ್ನ ಶರೀರವು ಹೀಗೆ ನಿಂದ್ಯವಾದುದನ್ನು ನೋಡಿ ಕೊಂಡು ದುಃಖವನ್ನು ಪಡೆದನು. ಅವನು ಮನೆಗೆ ಹೋಗಲಿಲ್ಲ. ಭಿಕ್ಷುಕನಂತೆ ಕಾಡಿಗೆ ಹೋದನು. ಆ ತ್ರಿಶಂಕುವು ದುಃಖದಿಂದ ಹುಚ್ಚನಂತಾಗಿ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಶರೀರವು ಅತ್ಯಂತ ನಿಂದ್ಯವಾದುದಾಯಿತು. ನನ್ನ ದುಃಖವು ಯಾವ ಕಾರ್ಯದಿಂದ ನಾಶವಾಗುವುದೆಂಬುದು ನನಗೆ ತಿಳಿಯದು. ॥೩೫-೩೬-೩೭॥

ಮನೆಗೆ ಹೋದರೆ ಮಗನಿಗೆ ತೊಂದರೆಯಾಗುವುದು. ಹೆಂಡಿತಿಯು ಶ್ವಪಚನಾದ ನನ್ನನ್ನು ನೋಡಿ ಹತ್ತಿರ ಸೇರಿಸುವುದಿಲ್ಲ. ಇಂತಹ ನನ್ನನ್ನು, ಮಂತ್ರಿಗಳೂ ಗೌರವಿಸುವುದಿಲ್ಲ. ನಂಟರಿಷ್ಟರೂ ನನ್ನ ಹತ್ತಿರ ಸೇರುವುದಿಲ್ಲ. ಹೀಗೆ ಎಲ್ಲರಿಂದಲೂ ಬಿಡಲ್ಪಟ್ಟ ನಾನು ಬದುಕಿರುವುದಕ್ಕಿಂತಲೂ ಸಾಯುವುದು ಮೇಲು. ॥೩೮-೩೯-೪೦॥

ವಿಷಂ ವಾ ಭಕ್ಷಯಿತ್ವಾಽದ್ಯ ಪತಿತ್ವಾ ವಾ ಜಲಾಶಯೇ ।
ಕೃತ್ವಾ ವಾ ಕಂಠಪಾಶಂ ಚ ದೇಹತ್ಯಾಗಂ ಕರೋಮ್ಯಹಂ ॥೪೧॥

ಅಗ್ನೌ ವಾ ಜ್ವಲಿತೇ ದೇಹಂ ಜುಹೋಮಿ ವಿಧಿವದ್ಬಲಾತ್ ।
ಕೃತ್ವಾ ವಾಽನಶನಂ ಪ್ರಾಣಾನ್ ತ್ಯಜಾಮಿ ದೂಷಿತಾನ್ಭೃಶಂ ॥೪೨॥

ಆತ್ಮಹತ್ಯಾ ಭವೇನ್ನೂನಂ ಪುನರ್ಜನ್ಮನಿ ಜನ್ಮನಿ ।
ಶ್ವಪಚತ್ವಂ ಚ ಶಾಪಶ್ಚ ಹತ್ಯಾದೋಷಾದ್ಭವೇದಪಿ ॥೪೩॥

ಪುನರ್ವಿಚಾರ್ಯ ಭೂಪಾಲಶ್ಚೇತಸಾ ಸಮಚಿಂತಯತ್ ।
ಆತ್ಮಹತ್ಯಾ ನ ಕರ್ತವ್ಯಾ ಸರ್ವಥೈವ ಮಯಾಽಧುನಾ ॥೪೪॥

ಭೋಕ್ತವ್ಯಂ ಸ್ವಕೃತಂ ಕರ್ಮ ದೇಹೇನಾಽನೇನ ಕಾನನೇ ।
ಭೋಗೇನಾಽಸ್ಯ ವಿಪಾಕಸ್ಯ ಭವಿತಾ ಸರ್ವಥಾಕ್ಷಯಃ ॥೪೫॥

ಪ್ರಾರಬ್ಧಕರ್ಮಣಾಂ ಭೋಗಾದನ್ಯಥಾ ನ ಕ್ಷಯೋ ಭವೇತ್ ।
ತಸ್ಮಾನ್ಮಯಾಽತ್ರ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥೪೬॥

---

ಈಗಲೇ ವಿಷವನ್ನು ಕುಡಿದಾಗಲಿ, ನೀರಿನಲ್ಲಿ ಬಿದ್ದಾಗಲಿ, ಕತ್ತಿಗೆ ನೇಣನ್ನು ಬಿಗಿದುಕೊಂಡಾಗಲಿ, ದೇಹ ತ್ಯಾಗವನ್ನು ಮಾಡುವೆನು! ಅಥವಾ ಉರಿಯುತ್ತಿರುವ ಬೆಂಕಿಯಲ್ಲಿ ಬಲಾತ್ಕಾರವಾಗಿ ಈ ನನ್ನ ಶರೀರದಿಂದ ಹೋಮವನ್ನು ಮಾಡುವೆನು. ಇಲ್ಲವೇ ವಿಧಿಪೂರ್ವಕವಾಗಿ ಅನಶನವ್ರತವನ್ನು ಮಾಡಿ ಪ್ರಾಣವನ್ನು ಬಿಡುವೆನು. ||೪೧-೪೨||

ಆದರೆ ಹೀಗೆ ಮಾಡಿದರೆ ಆತ್ಮಹತ್ಯಾದೋಷವು ಬರುವುದು! ಈ ದೋಷದಿಂದ ಪ್ರತಿ ಜನ್ಮದಲ್ಲಿಯೂ ಶಾಪವೂ ಚಾಂಡಾಲತ್ವವೂ ಇದ್ದೇ ಇರುವುದು! ಹೀಗೆಂದು ರಾಜನು ವಿಚಾರಮಾಡಿ ಮತ್ತೆ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು. ||೪೩||

ನಾನು ಈಗ ಆತ್ಮಹತ್ಯವನ್ನು ಮಾಡಿಕೊಳ್ಳಕೂಡದು. ನಾನು ಮಾಡಿದ ಕರ್ಮಗಳ ಫಲವನ್ನು ಕಾಡಿನಲ್ಲಿ ಈ ದೇಹದಿಂದಲೇ ಅನುಭವಿಸಬೇಕು. ಈ ದುಃಖಾನುಭವದಿಂದ ಈ ದುಷ್ಕರ್ಮವು ಸಂಪೂರ್ಣವಾಗಿ ನಾಶವಾಗುವುದು. ಪ್ರಾರಬ್ಧಕರ್ಮಗಳ ಫಲವು ಅನುಭವದಿಂದಲೇ ನಾಶವಾಗಬೇಕು. ಆದುದರಿಂದ

ಕುರ್ವನ್ಪುಣ್ಯಾಶ್ರಮಾಭ್ಯಾಶೇ ತೀರ್ಥಾನಾಂ ಸೇವನಂ ತಥಾ ।
ಸ್ಮರಣಂ ಚಾಂಬಿಕಾಯಾಸ್ತು ಸಾಧೂನಾಂ ಸೇವನಂ ತಥಾ ॥೪೭॥

ಏವಂ ಕರ್ಮಕ್ಷಯಂ ನೂನಂ ಕರಿಷ್ಯಾಮಿ ವನೇ ವಸನ್ ।
ಭಾಗ್ಯಯೋಗಾತ್ಕದಾಚಿತ್ತು ಭವೇತ್ಸಾಧುಸಮಾಗಮಃ ॥೪೮॥

ಇತಿ ಸಂಚಿಂತ್ಯ ಮನಸಾ ತ್ಯಕ್ತ್ವಾ ಸ್ವನಗರಂ ನೃಪಃ ।
ಗಂಗಾತೀರೇ ಗತಃ ಕಾಮಂ ಶೋಚಂಸ್ತತ್ರೈವ ಸಂಸ್ಥಿತಃ ॥೪೯॥

ಹರಿಶ್ಚಂದ್ರಸ್ತದಾ ಜ್ಞಾತ್ವಾ ಪಿತುಃ ಶಾಪಸ್ಯ ಕಾರಣಂ ।
ದುಃಖಿತಃ ಸಚಿವಾಂಸ್ತತ್ರ ಪ್ರೇಷಯಾಮಾಸ ಪಾರ್ಥಿವಃ ॥೫೦॥

ಸಚಿವಾಸ್ತತ್ರ ಗತ್ವಾಽಽಶು ತಮೂಚುಃ ಪ್ರಶ್ರಯಾನ್ವಿತಾಃ ।
ಪ್ರಣಮ್ಯ ಶ್ವಪಚಾಕಾರಂ ನಿಃಶ್ವಸಂತಂ ಮುಹುರ್ಮುಹುಃ ॥೫೧॥

---

ನಾನು ಮಾಡಿದ ಕರ್ಮಗಳ ಶುಭಾಶುಭಫಲಗಳನ್ನು ನಾನೇ ಅನುಭವಿಸಬೇಕು. ಹಾಗೆಯೇ ಮಾಡುವೆನು. ||೪೪-೪೫-೪೬||

ಅಲ್ಲದೆ ಪುಣ್ಯಕರವಾದ ಆಶ್ರಮಗಳ ಸಮೀಪದಲ್ಲಿ ತೀರ್ಥಗಳ ಸೇವೆಯನ್ನು ಮಾಡುತ್ತಾ ದೇವಿಯ ಸ್ಮರಣೆಯನ್ನೂ ಸಾಧುಸಜ್ಜನರ ಸೇವೆಯನ್ನೂ ಮಾಡಿಕೊಂಡು ವನದಲ್ಲಿ ವಾಸಮಾಡುತ್ತಾ ಕರ್ಮಕ್ಷಯವನ್ನು ಮಾಡಿಕೊಳ್ಳುವೆನು! ಹೀಗಿದ್ದಲ್ಲಿ ಒಂದಾನೊಂದು ಕಾಲದಲ್ಲಿ ಪುಣ್ಯವಶದಿಂದ ಸಜ್ಜನರ ಸಹವಾಸವು ಪ್ರಾಯಶಃ ಉಂಟಾಗುವುದು. ||೪೭-೪೮||

ಹೀಗೆಂದು ಮನಸ್ಸಿನಲ್ಲಿ ಯೋಚಿಸಿ ತ್ರಿಶಂಕುರಾಜನು ತನ್ನ ಪಟ್ಟಣವನ್ನು ಬಿಟ್ಟು ಗಂಗಾನದಿಯ ತೀರಕ್ಕೆ ಹೋಗಿ ವಿಶೇಷವಾಗಿ ದುಃಖಿಸುತ್ತಾ ಅಲ್ಲಿಯೇ ಇದ್ದನು. ||೪೯||

ಹರಿಶ್ಚಂದ್ರನು ತಂದೆಯ ಶಾಪಕ್ಕೆ ಕಾರಣವನ್ನು ತಿಳಿದು ದುಃಖದಿಂದ ಕೂಡಿ ಮಂತ್ರಿಗಳನ್ನು ತಂದೆಯ ಸಮೀಪಕ್ಕೆ ಕಳುಹಿಸಿಕೊಟ್ಟನು. ||೫೦||

ಮಂತ್ರಿಗಳು ಬೇಗನೆ ಅಲ್ಲಿಗೆ ಹೋಗಿ ಚಾಂಡಾಲನ ಆಕಾರದಿಂದ ಕೂಡಿ ದುಃಖದಿಂದ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತಿರುವ ರಾಜನನ್ನು ಕುರಿತು ವಿನಯದಿಂದ ಹೀಗೆ ಹೇಳಿದರು. ||೫೧||

ರಾಜನ್ಪುತ್ರೇಣ ತೇ ನೂನಂ ಪ್ರೇಷಿತಾನ್ಸಮುಪಾಗತಾನ್ ।
ಅವೇಹಿ ಸಚಿವಾಂಸ್ತ್ವನ್ನೋ ಹರಿಶ್ಚಂದ್ರಾಜ್ಞಯಾ ಸ್ಥಿತಾನ್ ॥೫೨॥

ಯುವರಾಜಸುತಃ ಪ್ರಾಹ ಯತ್ತ್ವಚ್ಛೃಣು ನರಾಧಿಪ ।
ಆನಯಧ್ವಂ ನೃಪಂ ಯೂಯಂ ಸಂಮಾನ್ಯ ಪಿತರಂ ಮಮ ॥೫೩॥

ತಸ್ಮಾದ್ರಾಜನ್ಸಮಾಗಚ್ಛ ರಾಜ್ಯಂ ಪ್ರತಿ ಗತವ್ಯಥಃ ।
ಸೇವಾಂ ಸರ್ವೇ ಕರಿಷ್ಯಂತಿ ಸಚಿವಾಶ್ಚ ಪ್ರಜಾಸ್ತಥಾ ॥೫೪॥

ಗುರುಂ ಪ್ರಸಾದಯಿಷ್ಯಾಮಃ ಸ ಯಥಾ ತು ದಯೇತ ವೈ ।
ಪ್ರಸನ್ನೋಽಸೌ ಮಹಾತೇಜಾ ದುಃಖಸ್ಯಾಂತಂ ಕರಿಷ್ಯತಿ ॥೫೫॥

ಇತಿ ಪುತ್ರೇಣ ತೇ ರಾಜನ್ಕಥಿತಂ ಬಹುಧಾ ಕಿಲ ।
ತಸ್ಮಾದ್ಗಮನಮೇವಾಶು ರೋಚತಾಂ ನಿಜಸದ್ಮನಿ ॥೫೬॥

॥ ವ್ಯಾಸ ಉವಾಚ ॥

ಇತಿ ತೇಷಾಂ ನೃಪಃ ಶ್ರುತ್ವಾ ಭಾಷಿತಂ ಶ್ವಪಚಾಕೃತಿಃ ।
ಸ್ವಗೃಹಂ ಗಮನಾಯಾಽಸೌ ನ ಮತಿಂ ಕೃತವಾನದಃ ॥೫೭॥

---

ಓ ರಾಜನೇ, ನಿನ್ನ ಮಗನೂ ಯುವರಾಜನೂ ಆದ ಹರಿಶ್ಚಂದ್ರನ ಆಜ್ಞೆಯಿಂದ ನಿನ್ನ ಮಂತ್ರಿಗಳಾದ ನಾವು ಬಂದಿರುವೆವು. 'ನೀವು ನನ್ನ ತಂದೆಯನ್ನು ಗೌರವದಿಂದ ಕರೆದುಕೊಂಡು ಬನ್ನಿ' ಎಂದು ಯುವರಾಜನು ಹೇಳಿದನು ||೫೨-೫೩||

ಆದುದರಿಂದ ಓ ರಾಜನೇ, ಮನಸ್ಸಿನ ದುಃಖವನ್ನು ಬಿಟ್ಟು ನೀನು ರಾಜಧಾನಿಗೆ ಬರಬೇಕು. ಮಂತ್ರಿಗಳೂ ಸಕಲಪ್ರಜೆಗಳೂ ನಿನ್ನ ಸೇವೆಯನ್ನು ಮಾಡುವರು. ಗುರುವಾದ ವಸಿಷ್ಠನು ದಯಾಶಾಲಿಯಾಗುವಂತೆ ಅವನನ್ನು ಸಂತೋಷಪಡಿಸೋಣ. ಮಹಾತೇಜಸ್ವಿಯಾದ ಅವನು ಸಂತೋಷಪಟ್ಟು ಈ ದುಃಖದ ನಿವಾರಣೆಯನ್ನೂ ಮಾಡುವನು. ||೫೪-೫೫||

ಓ ರಾಜನೇ, ನಿನ್ನ ಮಗನು ಈ ರೀತಿಯಲ್ಲಿ ಬಹಳವಾಗಿ ಹೇಳಿರುವನು. ಆದುದರಿಂದ ನೀನು ಬೇಗನೆ ನಿನ್ನ ಮನೆಗೆ ಬರುವಂತೆ ಮನಸ್ಸನ್ನು ಮಾಡು.||೫೬||

ವ್ಯಾಸಮುನಿಯು ಹೇಳಿದನು—ಹೀಗೆಂದು ಹೇಳಿದ ಮಂತ್ರಿಗಳ ಮಾತನ್ನು ಚಾಂಡಾಲನ ಆಕಾರದಿಂದಿರುವ ರಾಜನು ಕೇಳಿದರೂ ತನ್ನ ಮನೆಗೆ ಹೋಗುವ

ತಾನುವಾಚ ತದಾ ವಾಕ್ಯಂ ವ್ರಜಂತು ಸಚಿವಾಃ ಪುರಂ ।
ಗತ್ವಾ ಪುತ್ರಂ ಮಹಾಭಾಗಾ ಬ್ರುವಂತು ವಚನಾಚ್ಚ ಮೇ ॥೫೮॥

ನಾಗಮಿಷ್ಯಾಮ್ಯಹಂ ಪುತ್ರ ಕುರು ರಾಜ್ಯಮತಂದ್ರಿತಃ ।
ಮಾನಯನ್ಬ್ರಾಹ್ಮಣಾನ್ದೇವಾನ್ ಯಜನ್ಯಜ್ಞೈರನೇಕಶಃ ॥೫೯॥

ನಾಽಹಂ ಶ್ವಪಚವೇಷೇಣ ಗರ್ಹಿತೇನ ಮಹಾತ್ಮಭಿಃ ।
ಆಗಮಿಷ್ಯಾಮ್ಯಯೋಧ್ಯಾಯಾಂ ಸರ್ವೇ ಗಚ್ಛಂತು ಮಾ ಚಿರಂ॥೬೦॥

ಪುತ್ರಂ ಸಿಂಹಾಸನೇ ಸ್ಥಾಪ್ಯ ಹರಿಶ್ಚಂದ್ರಂ ಮಹಾಬಲಂ ।
ಕುರ್ವಂತು ರಾಜ್ಯಕರ್ಮಾಣಿ ಯೂಯಂ ತತ್ರ ಮಮಾಜ್ಞಯಾ॥೬೧॥

ಇತ್ಯಾದಿಷ್ಟಾಸ್ತತಸ್ತೇ ತು ರುರುದುಶ್ಚಾಽತುರಾ ಭೃಶಂ ।
ಸಚಿವಾ ನಿರ್ಯಯುಸ್ತೂರ್ಣಂ ನತ್ವಾ ತಂ ಚ್ಯವನಾಶ್ರಮಾತ್ ॥೬೨॥

---

ಮನಸ್ಸನ್ನು ಮಾಡಲಿಲ್ಲ. ಆಗ ಮಂತ್ರಿಗಳನ್ನು ಕುರಿತು ಎಲೈ ಪುಣ್ಯಶಾಲಿಗಳಾದ ಮಂತ್ರಿಗಳೇ, ನೀವು ಪಟ್ಟಣಕ್ಕೆ ಹೋಗಿರಿ! ನನ್ನ ಮಗನನ್ನು ಕುರಿತು ನಾನು ಹೇಳುವ ಈ ಮಾತನ್ನು ಹೇಳಿರಿ. ॥೫೭-೫೮॥

'ಎಲೈ ಮಗನೇ, ನಾನು ಪಟ್ಟಣಕ್ಕೆ ಬರುವುದಿಲ್ಲ. ನೀನು ಆಲಸ್ಯವಿಲ್ಲದೆ ರಾಜ್ಯಭಾರವನ್ನು ಮಾಡುತ್ತಿರು. ಬ್ರಾಹ್ಮಣರನ್ನೂ ದೇವರನ್ನೂ ಪೂಜಿಸುತ್ತಾ ಅನೇಕ ಯಜ್ಞಗಳನ್ನು ಮಾಡು. ಮಹಾತ್ಮರು ನಿಂದಿಸುತ್ತಿರುವ ಈ ಚಾಂಡಲನವೇಷದಿಂದ ನಾನು ಅಯೋಧ್ಯಾಪಟ್ಟಣಕ್ಕೆ ಬರುವುದಿಲ್ಲ. ಓ ಮಂತ್ರಿಗಳೇ, ಸಾವಕಾಶಮಾಡದೆ ನೀವೆಲ್ಲರೂ ಹೊರಡಿರಿ! ॥೫೯-೬೦॥

'ಮಹಾಬಲಶಾಲಿಯಾದ ನನ್ನ ಮಗನಾದ ಹರಿಶ್ಚಂದ್ರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿ ನನ್ನ ಅಪ್ಪಣೆಯಿಂದ ನೀವು ರಾಜ್ಯಕಾರ್ಯಗಳನ್ನು ನಡೆಯಿಸಿರಿ.' ॥೬೧॥

ಹೀಗೆಂದು ಆಜ್ಞೆಮಾಡಲು ಆ ಮಂತ್ರಿಗಳು ವಿಶೇಷವಾಗಿ ಅತ್ತರು. ಬಳಿಕ ಆ ತ್ರಿಶಂಕುರಾಜನನ್ನು ಮಂತ್ರಿಗಳೇ ಮುಂತಾದವರು ನಮಸ್ಕರಿಸಿ ಆ ಚ್ಯವನಾಶ್ರಮದಿಂದ ರಾಜಧಾನಿಗೆ ಬೇಗನೆ ಹೊರಟರು. ॥೬೨॥

ಅಯೋಧ್ಯಾಯಾಮುಪಾಗತ್ಯ ಪುಣ್ಯೇಽಹ್ನಿ ವಿಧಿಪೂರ್ವಕಂ ।
ಅಭಿಷೇಕಂ ತದಾ ಚಕ್ರುಃ ಹರಿಶ್ಚಂದ್ರಸ್ಯ ಮೂರ್ಧ್ನಿ ತೇ ॥೬೩॥

ಅಭಿಷಿಕ್ತಸ್ತು ತೇಜಸ್ವೀ ಸಚಿವೈಶ್ಚ ನೃಪಾಜ್ಞಯಾ ।
ರಾಜ್ಯಂ ಚಕಾರ ಧರ್ಮಿಷ್ಠಃ ಪಿತರಂ ಚಿಂತಯನ್ಭೃಶಂ ॥೬೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ದ್ವಾದಶೋಽಧ್ಯಾಯಃ.

---

ಆ ಮಂತ್ರಿಗಳು ಅಯೋಧ್ಯೆಗೆ ಬಂದು ದೊರೆಯ ಅಪ್ಪಣೆಯನ್ನು ತಿಳಿಸಿ ಅದರಂತೆ ಶುಭದಿನದಲ್ಲಿ ವಿಧಿಗನುಸಾರವಾಗಿ ಹರಿಶ್ಚಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿದರು. ||೬೩||

ತ್ರಿಶಂಕುರಾಜನ ಅಪ್ಪಣೆಯನ್ನನುಸರಿಸಿದ ಮಂತ್ರಿಗಳು ಪುರೋಹಿತರು ಇವರಿಂದ ಪಟ್ಟಾಭಿಷೇಕವನ್ನು ಮಾಡಿಸಿಕೊಂಡ ಧರ್ಮಾಸಕ್ತನಾದ ಹರಿಶ್ಚಂದ್ರರಾಜನು ಮಂತ್ರಿಗಳೊಡನೆ ರಾಜ್ಯಭಾರವನ್ನು ಮಾಡುತ್ತಿದ್ದನು. ಆದರೂ ವಿಶೇಷವಾಗಿ ತನ್ನ ತಂದೆಯನ್ನು ನೆನಸಿಕೊಳ್ಳುತ್ತಲೇ ಇದ್ದನು. ||೬೪||

ಕರ್ಮವಾದದ ಮೇಲೆ ಏಕಜನ್ಮವಾದಿಗಳೂ ಸೂಕ್ಷ್ಮವಾಗಿ ವಿಚಾರಮಾಡಲಾರದವರೂ ಹೇಳುವ ಆಕ್ಷೇಪಣೆಗೆ ಇಲ್ಲಿನ ಉದಾಹರಣೆಯಿಂದ ತೃಪ್ತಿಕರವಾದ ಸಮಾಧಾನದ ಉತ್ತರವು ದೊರೆಯುತ್ತದೆ. ಹೇಗೆಂದರೆ ನಾವು ಅನಾದಿಕಾಲದಿಂದ ಮಾಡಿಯೂ ಮಾಡುತ್ತಲೂ, ಇರುವ ಕರ್ಮಗಳು ತಮ್ಮ ಫಲವನ್ನು ಕೊಡುತ್ತವೆ. ನಾವು ಅದನ್ನು ಅನುಭವಿಸಲೇ ಬೇಕು. ಕರ್ಮಗಳು ಅಪಾರವಾಗಿರುವುದರಿಂದಲೂ ಹೆಚ್ಚುತ್ತಲೇ ಇರುವುದರಿಂದಲೂ, ಅವುಗಳಿಂದ ಮಾನವನಿಗೆ ಬಿಡುಗಡೆಯೇ ಇಲ್ಲವೆ ಹೋಗುತ್ತದೆ. ಇದರಿಂದ ನೈರಾಶ್ಯಮನೋಭಾವ (Pessimistic attitude of mind)ವು ಮನುಷ್ಯನ ಮನಸ್ಸಿನಲ್ಲಿ ಪ್ರಬಲವಾಗಿ, ಅದೃಷ್ಟಪಾರವಶ್ಯಭಾವ (Fatalism), ಪುರುಷಕಾರವೈಯರ್ಥ್ಯ (Helplessness), ಈ ಮುಂತಾದ ಭಾವಗಳಿಗೆ ಮಾನವನು ತುತ್ತಾಗಬೇಕಾಗಿಲ್ಲವು. ಮತ್ತೇನೆಂದರೆ ಪ್ರಾರಬ್ಧಕರ್ಮದ ಫಲವನ್ನು ಅನುಭವಿಸಿ, ಉಳಿದ ಸಂಚಿತ ಮತ್ತು ಆಗಾಮಿಕರ್ಮಗಳನ್ನು ಜ್ಞಾನದಿಂದ ಹುರಿದ ಬೀಜಗಳಂತಾಗುವ ಹಾಗೆ ಮಾಡಿ, ಸತ್ಕರ್ಮಗಳನ್ನು ಮಾಡುತ್ತಾ ಕಡೆಗೆ

ಮೋಕ್ಷವನ್ನು ಪಡೆಯಲು ಮಾನವನಿಗೆ ಸ್ವಾತಂತ್ರ್ಯವಿದೆ ಎಂಬುದು ಗೊತ್ತಾಗುತ್ತದೆ, ಇವೇ ಮುಂತಾದ ಅಂಶಗಳನ್ನು ಹಿಂದಿನ ಸಂಪುಟಗಳಲ್ಲಿಯೂ ಅಲ್ಲಲ್ಲಿ ಟಿಪ್ಪಣಿಗಳಲ್ಲಿಯೂ ವಿವರಿಸಲಾಗಿದೆ. ಸ್ಕಂ. ೪. ಪು. ೨೫-೨೬ ; ೨೦೫ ; ೩೦೦-೩೦೪ ; ೩೭೦-೩೭೨.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ರಾಜೋವಾಚ ॥

**ಹರಿಶ್ಚಂದ್ರಃ ಕೃತೋ ರಾಜಾ ಸಚಿವೈರ್ನೃಪಶಾಸನಾತ್ ।**
**ತ್ರಿಶಂಕುಸ್ತು ಕಥಂ ಮುಕ್ತಃ ತಸ್ಮಾಚ್ಚಾಂಡಾಲದೇಹತಃ ॥೧॥**

**ಮೃತೋ ವಾ ವನಮಧ್ಯೇ ತು ಗಂಗಾತೀರೇ ಪರಿಪ್ಲುತಃ ।**
**ಗುರುಣಾ ವಾ ಕೃಪಾಂ ಕೃತ್ವಾ ಶಾಪಾತ್ತಸ್ಮಾದ್ವಿಮೋಚಿತಃ ॥೨॥**

**ಏತದ್ವೃತ್ತಾಂತಮಖಿಲಂ ಕಥಯಸ್ವ ಮಮಾಗ್ರತಃ ।**
**ಚರಿತಂ ತಸ್ಯ ನೃಪತೇಃ ಶ್ರೋತುಕಾಮೋಽಸ್ಮಿ ಸರ್ವಥಾ ॥೩॥**

---

ಜನಮೇಜಯನು ಹೇಳಿದನು—ಓ ವ್ಯಾಸಮಹರ್ಷಿಯೇ, ತ್ರಿಶಂಕುರಾಜನ ಅಪ್ಪಣೆಯಿಂದ ಮಂತ್ರಿಗಳು ಹರಿಶ್ಚಂದ್ರನನ್ನು ರಾಜನನ್ನಾಗಿ ಮಾಡಿದರು. ಆದರೆ ಆ ತ್ರಿಶಂಕುರಾಜನು ತನ್ನ ಚಾಂಡಾಲ ದೇಹದಿಂದ ಹೇಗೆ ಬಿಡುಗಡೆಯನ್ನು ಹೊಂದಿದನು ? ॥೧॥

ಕಾಡಿನ ಮಧ್ಯದಲ್ಲಿ ಮರಣಹೊಂದಿದ ಮೇಲೆಯೋ ? ಗಂಗಾತೀರದಲ್ಲಿದ್ದು ಗಂಗಾಸ್ನಾನಮಾಡಿಯೋ ? ಅಥವಾ ಗುರುವಿನ ಅನುಗ್ರಹದಿಂದಲೋ ? ಇವುಗಳಲ್ಲಾವುದರಿಂದ ಆ ತ್ರಿಶಂಕುರಾಜನಿಗೆ ಶಾಪದ ಬಿಡುಗಡೆಯಾಯಿತು ? ಈ ವೃತ್ತಾಂತವನ್ನೆಲ್ಲವನ್ನೂ ನನಗೆ ಹೇಳಬೇಕು. ಆ ರಾಜನ ಚರಿತ್ರೆಯನ್ನು ಸಂಪೂರ್ಣವಾಗಿ ಕೇಳಬೇಕೆಂದು ನನ್ನಾಸೆಯಿರುವುದು. ॥೨-೩॥

|| ವ್ಯಾಸ ಉವಾಚ ||

ಅಭಿಷಿಕ್ತಂ ಸುತಂ ಕೃತ್ವಾ ರಾಜಾ ಸಂತುಷ್ಟಮಾನಸಃ ।
ಕಾಲಾತಿಕ್ರಮಣಂ ತತ್ರ ಚಕಾರ ಚಿಂತಯಂಚ್ಛಿವಾಂ ||೪||

ಏವಂ ಗಚ್ಛತಿ ಕಾಲೇ ತು ತಪಸ್ತಪ್ತ್ವಾ ಸಮಾಹಿತಃ ।
ದ್ರಷ್ಟುಂ ದಾರಾನ್ಸುತಾದೀಂಶ್ಚ ತದಾಽಗಾತ್ಕೌಶಿಕೋ ಮುನಿಃ ||೫||

ಆಗತ್ಯ ಸ್ವಜನಂ ದೃಷ್ಟ್ವಾ ಸುಸ್ಥಿತಂ ಮುದಮಾಪ್ತವಾನ್ ।
ಭಾರ್ಯಾಂ ಪಪ್ರಚ್ಛ ಮೇಧಾವೀ ಸ್ಥಿತಾಮಗ್ರೇ ಸಪರ್ಯಯಾ ||೬||

ದುರ್ಭಿಕ್ಷೇ ತು ಕಥಂ ಕಾಲಃ ತ್ವಯಾ ನೀತಃ ಸುಲೋಚನೇ ।
ಅನ್ನಂ ವಿನಾ ತ್ವಿಮೇ ಬಾಲಾಃ ಪಾಲಿತಾಃ ಕೇನ ತದ್ವದ ||೭||

ಅಹಂ ತಪಸಿ ಸಂಬದ್ಧೋ ನಾಽಽಗತಃ ಶೃಣು ಸುಂದರಿ ।
ಕಿಂ ಕೃತಂ ತು ತ್ವಯಾ ಕಾಂತೇ ವಿನಾ ದ್ರವ್ಯೇಣ ಶೋಭನೇ ||೮||

---

ವ್ಯಾಸಮುನಿಯು ಹೇಳಿದನು—ತ್ರಿಶಂಕುರಾಜನು ತನ್ನ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ ಸಂತೋಷದಿಂದ ಆ ಕಾಡಿನಲ್ಲಿಯೇ ದೇವಿಯ ಧ್ಯಾನವನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ||೪||

ಹೀಗೆ ಕಾಲವು ಕಳೆಯುತ್ತಿರಲು ಅತ್ತಲಾಗಿ ವಿಶ್ವಾಮಿತ್ರಮುನಿಯು ತಪಸ್ಸನ್ನು ಮಾಡಿ ಶಾಂತಚಿತ್ತನಾಗಿ ಹೆಂಡಿತಿಮಕ್ಕಳನ್ನು ನೋಡಬೇಕೆಂದು ಅಲ್ಲಿಗೆ ಬಂದನು.||೫||

ಬಂದಮೇಲೆ ಸುಖವಾಗಿದ್ದ ಅವರನ್ನು ನೋಡಿ ವಿಶ್ವಾಮಿತ್ರನು ಸಂತೋಷಪಟ್ಟನು. ಮತ್ತು ಬುದ್ಧಿವಂತನಾದ ಆ ವಿಶ್ವಾಮಿತ್ರನು ತನ್ನೆದುರಿಗೆ ಉಪಚಾರವನ್ನು ಮಾಡುತ್ತಿದ್ದ ಹೆಂಡಿತಿಯನ್ನು ಕುರಿತು ಹೀಗೆ ಪ್ರಶ್ನೆಮಾಡಿದನು. ||೬||

ಒಳ್ಳೆಯ ಕಣ್ಣುಗಳುಳ್ಳ ಸುಂದರಿಯಾದ ಮಂಗಳಕರಳಾದ ಪತ್ನಿಯೇ, ಈ ದುರ್ಭಿಕ್ಷಕಾಲದಲ್ಲಿ ಅನ್ನವಿಲ್ಲದೆ ಈ ಬಾಲಕರನ್ನು ಹೇಗೆ ಕಾಪಾಡಿದೆ? ನಾನು ತಪಸ್ಸಿನಲ್ಲಿ ಕುಳಿತವನು ಬರಲಿಲ್ಲ. ನೀನು ದ್ರವ್ಯವಿಲ್ಲದ ಯಾವ ರೀತಿಯಲ್ಲಿ ಜೀವನವನ್ನು ಮಾಡಿದೆ? ಅದನ್ನು ಹೇಳು. ||೭-೮||

ಮಯಾ ಚಿಂತಾ ಕೃತಾ ತತ್ರ ಶ್ರುತ್ವಾ ದುರ್ಭಿಕ್ಷಮುದ್ಭುತಂ ।
ನಾಗತೋಽಹಂ ವಿಚಾರ್ಯೈವಂ ಕಿಂ ಕರಿಷ್ಯಾಮಿ ನಿರ್ಧನಃ ॥೯॥

ಅಹಮಪ್ಯತಿ ವಾಮೋರು ಪೀಡಿತಃ ಕ್ಷುಧಯಾ ವನೇ ।
ಪ್ರವಿಷ್ಟಶ್ಚೌರಭಾವೇನ ಕುತ್ರಚಿಚ್ಛ್ವಪಚಾಲಯೇ ॥೧೦॥

ಶ್ವಪಚಂ ನಿದ್ರಿತಂ ದೃಷ್ಟ್ವಾ ಕ್ಷುಧಯಾ ಪೀಡಿತೋ ಭೃಶಂ ।
ಮಹಾನಸಂ ಪರಿಜ್ಞಾಯ ಭಕ್ಷ್ಯಾರ್ಥಂ ಸಮುಪಸ್ಥಿತಃ ॥೧೧॥

ಯದಾ ಭಾಂಡಂ ಸಮುದ್ಘಾಟ್ಯ ಪಕ್ವಂ ಶ್ವತನುಜಾಮಿಷಂ ।
ಗೃಹ್ಣಾಮಿ ಭಕ್ಷಣಾರ್ಥಾಯ ತದಾ ದೃಷ್ಟಸ್ತು ತೇನ ವೈ ॥೧೨॥

ಪೃಷ್ಟಃ ಕಸ್ತ್ವಂ ಕಥಂ ಪ್ರಾಪ್ತೋ ಗೃಹೇ ಮೇ ನಿಶಿ ಸಾದರಂ ।
ಬ್ರೂಹಿ ಕಾರ್ಯಂ ಕಿಮರ್ಥಂ ತ್ವಮುದ್ಘಾಟಯಸಿ ಭಾಂಡಕಂ ॥೧೩॥

ಇತ್ಯುಕ್ತಃ ಶ್ವಪಚೇನಾಽಹಂ ಕ್ಷುಧಯಾ ಪೀಡಿತೋ ಭೃಶಂ ।
ತಮವೋಚಂ ಸುಕೇಶಾಂತೇ ಕಾಮಂ ಗದ್ಗದಯಾ ಗಿರಾ ॥೧೪॥

---

ನಾನೂ ಆ ತಪಸ್ಸು ಮಾಡುತ್ತಿರುವ ಪ್ರದೇಶದಲ್ಲಿ ಬರಗಾಲವು ಬಂದಿರುವುದನ್ನು ಕೇಳಿ ದುಃಖಿಸಿದೆನು. ಆದರೂ ಧನವಿಲ್ಲದ ನಾನು ಏನನ್ನು ಮಾಡಬಲ್ಲೆನು? ಎಂದು ವಿಚಾರಮಾಡಿ ನಿನ್ನ ಸಮೀಪಕ್ಕೆ ಬರಲಿಲ್ಲ! ಎಲೈ ಸುಂದರವಾದ ತೊಡೆಗಳುಳ್ಳ ಪತ್ನಿಯೇ, ನಾನೂ ಕೂಡ ಕಾಡಿನಲ್ಲಿ ಹೆಚ್ಚಾದ ಹಸಿವಿನಿಂದ ಪೀಡಿತನಾಗಿ ಕಳ್ಳನಂತೆ ಎಲ್ಲಿಯೋ ಒಬ್ಬ ಚಾಂಡಾಲನ ಮನೆಯನ್ನು ಹೊಕ್ಕೆನು. ॥೯-೧೦॥

ಚಾಂಡಾಲನು ನಿದ್ರೆಮಾಡುತ್ತಿರುವುದನ್ನು ನೋಡಿ ಹೆಚ್ಚಾದ ಹೊಟ್ಟೆ ಹಸಿವಿನಿಂದ ಬಾಧೆಪಡುತ್ತಾ ಅಡಿಗೆಯ ಮನೆಯನ್ನು ಕಂಡು ಆಹಾರಕ್ಕಾಗಿ ಒಳಗೆ ಹೋದೆನು. ಮಡಕೆಯ ಮುಚ್ಚಳವನ್ನು ತೆರೆದು ಬೇಯಿಸಿದ್ದ ನಾಯಿಯ ಮಾಂಸವನ್ನು ತಿನ್ನುವುದಕ್ಕಾಗಿ ತೆಗೆದುಕೊಳ್ಳುವಾಗ ಅವನು ಎಚ್ಚತ್ತು ನನ್ನನ್ನು ನೋಡಿದನು. ॥೧೧-೧೨॥

ಮತ್ತು ಅವನು ನನ್ನನ್ನು ಕುರಿತು, ನೀನು ಯಾರು? ಈ ರಾತ್ರಿಯಲ್ಲಿ ನನ್ನ ಮನೆಗೆ ಹೇಗೆ ಬಂದೆ? ನಿನಗೆ ಆಗಬೇಕಾದ ಕೆಲಸವೇನು? ಈ ಮಡಕೆಯ ಮುಚ್ಚಳವನ್ನು ಏಕೆ ತೆಗೆಯುತ್ತಿರುವೆ? ಎಂದು ನನ್ನನ್ನು ಕೇಳಿದನು. ಹೀಗೆ

**ಬ್ರಾಹ್ಮಣೋಽಹಂ ಮಹಾಭಾಗ ತಾಪಸಃ ಕ್ಷುಧಯಾಽರ್ದಿತಃ ।**
**ಚೌರಭಾವಮನುಪ್ರಾಪ್ತೋ ಭಕ್ಷ್ಯಂ ಪಶ್ಯಾಮಿ ಭಾಂಡಕೇ ॥೧೫॥**

**ಚೌರಭಾವೇನ ಸಂಪ್ರಾಪ್ತೋಽಸ್ಮ್ಯತಿಥಿಸ್ತೇ ಮಹಾಮತೇ ।**
**ಕ್ಷುಧಿತೋಽಸ್ಮಿ ದದಸ್ವಾಜ್ಞಾಂ ಮಾಂಸಮದ್ಮಿ ಸುಸಂಸ್ಕೃತ ॥೧೬॥**

॥ ವಿಶ್ವಾಮಿತ್ರ ಉವಾಚ ॥

**ಶ್ವಪಚಸ್ತು ವಚಃ ಶ್ರುತ್ವಾ ಮಾಮುವಾಚ ಸುನಿಶ್ಚಿತಂ ।**
**ಭಕ್ಷ್ಯಂ ಮಾ ಕುರು ವರ್ಣಾಗ್ರ್ಯ ಜಾನೀಹಿ ಶ್ವಪಚಾಲಯಂ ॥೧೭॥**

**ದುರ್ಲಭಂ ಖಲು ಮಾನುಷ್ಯಂ ತತ್ರಾಪಿ ಚ ದ್ವಿಜನ್ಮತಾ ।**
**ದ್ವಿಜತ್ವೇ ಬ್ರಾಹ್ಮಣತ್ವಂ ಚ ದುರ್ಲಭಂ ವೇತ್ಸಿ ಕಿಂ ನ ಹಿ ॥೧೮॥**

**ದುಷ್ಟಾಹಾರೋ ನ ಕರ್ತವ್ಯಃ ಸರ್ವಥಾ ಲೋಕಮಿಚ್ಛತಾ ।**
**ಅಗ್ರಾಹ್ಯಾ ಮನುನಾ ಪ್ರೋಕ್ತಾಃ ಕರ್ಮಣಾ ಸಪ್ತ ಚಾಂತ್ಯಜಾಃ॥೧೯॥**

---

ಚಾಂಡಾಲನು ಪ್ರಶ್ನೆಮಾಡುತ್ತಲು ಹೆಚ್ಚಾದ ಹಸಿವಿನಿಂದ ಬಾಧೆಪಡುತ್ತಿದ್ದ ನಾನು ಗದ್ಗದ ಧ್ವನಿಯಿಂದ ಕೂಡಿ ಅವನಿಗೆ ಹೀಗೆ ಉತ್ತರವನ್ನು ಹೇಳಿದೆನು. ॥೧೩-೧೪॥

ಎಲೈ ಪುಣ್ಯವಂತನೇ, ನಾನು ಬ್ರಾಹ್ಮಣನು, ತಪಸ್ಸನ್ನು ಮಾಡತಕ್ಕವನು! ಹಸಿವಿನಿಂದ ಬಾಧೆಪಡುತ್ತಿರುವೆನು. ಕಳ್ಳನಾಗಿ ಇಲ್ಲಿಗೆ ಬಂದು ಮಡಕೆಯಲ್ಲಿ ಆಹಾರವನ್ನು ಕಂಡೆನು. ಕಳ್ಳನಂತೆ ಆದರೂ ನಿನ್ನ ಮನೆಗೆ ಅತಿಥಿಯಾಗಿ ಬಂದಿರುವೆನು. ಎಲೈ ಬುದ್ಧಿವಂತನೇ, ನನಗೆ ಹಸಿವಾಗುತ್ತಿರುವುದು. ಅಪ್ಪಣೆಯನ್ನು ಕೊಡು. ಚೆನ್ನಾಗಿ ಬೇಯಿಸಿ ಸಂಸ್ಕಾರಮಾಡಿದ ಈ ಮಾಂಸವನ್ನು ತಿನ್ನುವೆನು! ॥೧೫-೧೬॥

ವಿಶ್ವಾಮಿತ್ರನು ಹೇಳಿದನು—ಆ ಚಾಂಡಾಲನು ನನ್ನ ಮಾತನ್ನು ಕೇಳಿ ನಿಜವಾದ ಖಂಡಿತವಾದ ಮಾತನ್ನು ಹೀಗೆ ನನಗೆ ಹೇಳಿದನು. ಎಲೈ ಬ್ರಾಹ್ಮಣನೇ, ಇದನ್ನು ತಿನ್ನಬೇಡ. ಇದು ಚಾಂಡಾಲನ ಮನೆಯೆಂದು ತಿಳಿ. ಮನುಷ್ಯಜನ್ಮವು ಬರುವುದೇ ಕಷ್ಟವಾದುದು, ಅವರಲ್ಲಿಯೂ ದ್ವಿಜರಾಗುವುದು ಮತ್ತೂ ಕಷ್ಟವು! ದ್ವಿಜರಲ್ಲಿ ಬ್ರಾಹ್ಮಣನಾಗುವುದು ಇನ್ನೂ ಕಷ್ಟವೆಂದು ನೀನು ತಿಳಿದಿಲ್ಲವೇ?॥೧೭-೧೮॥

ಓ ಬ್ರಾಹ್ಮಣಶ್ರೇಷ್ಠನೇ, ಸ್ವರ್ಗಾದಿಲೋಕವನ್ನಪೇಕ್ಷಿಸುವವನು ಕೆಟ್ಟ ಆಹಾರವನ್ನು ತಿನ್ನಬಾರದು. ಕರ್ಮದಿಂದಲೂ ಚಾಂಡಾಲರಾದ ಏಳು ಬಗೆಯವರು ದ್ವಿಜ

ತ್ಯಾಜ್ಯೋಽಹಂ ಕರ್ಮಣಾ ವಿಪ್ರ ಶ್ವಪಚೋ ನಾತ್ರ ಸಂಶಯಃ ।
ನಿವಾರಯಾಮಿ ಭಕ್ಷ್ಯಾತ್ತ್ವಾಂ ನ ಲೋಭೇನಾಂಜಸಾ ದ್ವಿಜ ॥೨೦॥

ವರ್ಣಸಂಕರದೋಷೋಽಯಂ ಮಾ ಯಾತು ತ್ವಾಂ ದ್ವಿಜೋತ್ತಮ ।

॥ ವಿಶ್ವಾಮಿತ್ರ ಉವಾಚ ॥

ಸತ್ಯಂ ವದಸಿ ಧರ್ಮಜ್ಞ ಮತಿಸ್ತೇ ವಿಶದಾಽಂತ್ಯಜ ॥೨೧॥

ತಥಾಽಪ್ಯಾಪದಿ ಧರ್ಮಸ್ಯ ಸೂಕ್ಷ್ಮಮಾರ್ಗಂ ಬ್ರವೀಮ್ಯಹಂ ।
ದೇಹಸ್ಯ ರಕ್ಷಣಂ ಕಾರ್ಯಂ ಸರ್ವಥಾ ಯದಿ ಮಾನದ ॥೨೨॥

ಪಾಪಸ್ಯಾಂತೇ ಪುನಃ ಕಾರ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ ।
ದುರ್ಗತಿಸ್ತು ಭವೇತ್ಪಾಪಾದನಾಪದಿ ನ ಚಾಽಽಪದಿ ॥೨೩॥

---

ರೊಡನೆ ಸವ್ಯವಹಾರಕ್ಕೆ ಯೋಗ್ಯರಲ್ಲವೆಂದು ಮನುವು ಹೇಳಿರುವನು. ನಾನು ಕರ್ಮ ದಿಂದಲೂ ಚಾಂಡಾಲನಾದವನು. ಉತ್ತಮ ವರ್ಣದವರೊಡನೆ ಭೋಜನ ಮುಂತಾದ ಸವ್ಯವಹಾರದಲ್ಲಿ ಇರಲು ಯೋಗ್ಯವಲ್ಲ. ಎಲೈ ಬ್ರಾಹ್ಮಣನೇ, ನೀನೂ ಇದನ್ನು ತಿನ್ನಬೇಡ, ಲೋಭಬುದ್ಧಿಯಿಂದ ನಾನು ಈ ಮಾತನ್ನು ಹೇಳುತ್ತಿಲ್ಲವು. ವರ್ಣಸಂ ಕರ ದೋಷವೂ ನಿನಗೆ ಬರಬಾರದೆಂದು ನಾನು ಹೇಳುತ್ತಿರುವೆನು! ॥೧೯-೨೦॥

ವಿಶ್ವಾಮಿತ್ರನು ಹೇಳಿದನು—ಎಲೈ ಶ್ವಪಚನೇ, ಧರ್ಮವನ್ನು ತಿಳಿದ ನೀನು ನಿಜವನ್ನು ಹೇಳುತ್ತಿರುವೆ. ಚಾಂಡಾಲನಾದರೂ ನಿನ್ನ ಬುದ್ಧಿಯು ಧರ್ಮಸೂಕ್ಷ್ಮ ಗಳನ್ನೂ ತಿಳಿಯಬಲ್ಲಷ್ಟು ತಿಳಿಯಾದುದು ಮತ್ತು ವಿಸ್ತಾರವಾದುದು! ಹಾಗಾದರೂ ಆಪತ್ಕಾಲದಲ್ಲಿ ಧರ್ಮದ ಸೂಕ್ಷ್ಮಮಾರ್ಗವನ್ನು ಹೇಳುವೆನು, ಕೇಳು. ಸರ್ವಪ್ರಯ ತ್ನಗಳಿಂದಲೂ ಮಾನವನು ತನ್ನ ಶರೀರವನ್ನು ರಕ್ಷಿಸಬೇಕು. ಪಾಪಕಾರ್ಯಗ ಳಿಂದಲೇ ಶರೀರರಕ್ಷಣೆಯನ್ನು ಮಾಡಿಕೊಳ್ಳಬೇಕಾಗಿ ಬಂದರೆ, ಹಾಗೆಮಾಡಿ ಆಮೇಲೆ ಶುದ್ಧಿಗೋಸ್ಕರವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಆಪತ್ಕಾಲವಿಲ್ಲದಾಗ ಪಾಪಕಾರ್ಯವನ್ನು ಮಾಡಿದರೆ ನರಕವು ಬರುವುದು. ಆದರೆ ಆಪತ್ಕಾಲದಲ್ಲಿ ಪಾಪಾಚಾರಣೆ ಯನ್ನು ಮಾಡಿದವನಿಗೆ ಆ ಪಾಪದಫಲವಾಗಿ ನರಕದುಃಖವು ಬರುವುದಿಲ್ಲವು. ಇದರಿಂದ ಆಗಿನ ಕಾಲದಲ್ಲಿ ಪ್ರಚಾರಕಾರ್ಯದಿಂದ ತಿಳವಳಿಕೆಯು ಚಂಡಾಲರಿಗೂ ಉಂಟಾಗಿತ್ತು! ಎಂಬುದು ಗೊತ್ತಾಗುತ್ತದೆ. ॥೨೧-೨೨-೨೩॥

ಮರಣಾತ್ಕ್ಷುಧಿತಸ್ಯಾಥ ನರಕೋ ನಾತ್ರ ಸಂಶಯಃ ।
ತಸ್ಮಾತ್ಕ್ಷುಧಾಪಹರಣಂ ಕರ್ತವ್ಯಂ ಶುಭಮಿಚ್ಛತಾ ॥೨೪॥

ತೇನಾಽಹಂ ಚೌರ್ಯಧರ್ಮೇಣ ದೇಹಂ ರಕ್ಷೇಽಸ್ಯಥಾಂತ್ಯಜ ।
ಅವರ್ಷಣೇ ಚ ಚೌರ್ಯೇಣ ಯತ್ಪಾಪಂ ಕಥಿತಂ ಬುಧೈಃ ॥೨೫॥

ಯೋ ನ ವರ್ಷತಿ ಪರ್ಜನ್ಯಂ ತತ್ತು ತಸ್ಮೈ ಭವಿಷ್ಯತಿ ।

॥ ವಿಶ್ವಾಮಿತ್ರ ಉವಾಚ ॥

ಇತ್ಯುಕ್ತೇ ವಚನೇ ಕಾಂತೇ ಪರ್ಜನ್ಯಃ ಸಹಸಾಽಪತತ್ ॥೨೬॥

ಗಗನಾದ್ಧಸ್ತಿಹಸ್ತಾಭಿಃ ಧಾರಾಭಿರಭಿಕಾಂಕ್ಷಿತಃ ।
ಮುದಿತೋಽಹಂ ಘನಂ ವೀಕ್ಷ್ಯ ವರ್ಷಂತಂ ವಿದ್ಯುತಾ ಸಹ ॥೨೭॥

---

ಅಲ್ಲದೆ ದುರಾಹಾರವನ್ನಾದರೂ ಮಾಡಿ ಬದುಕುವ ಉಪಾಯವಿದ್ದಲ್ಲಿ ಅದನ್ನು ಬಿಟ್ಟು ಹಸಿವಿನಿಂದ ಮರಣಹೊಂದಿದವರಿಗೆ ನರಕವು ಪ್ರಾಪ್ತಿಯಾಗುವುದು! ಸಂದೇಹವಿಲ್ಲ. ಆದುದರಿಂದ ಮಂಗಳವನ್ನು ಅಪೇಕ್ಷಿಸುವವನು ಧರ್ಮಸಾಧನವಾದ ಈ ದೇಹವನ್ನು ಕಾಪಾಡಲು ಮೊದಲು ಹಸಿವನ್ನು ನಿವಾರಣೆಮಾಡಿಕೊಳ್ಳಬೇಕು. ಆ ಕಾರಣದಿಂದಲೇ ಎಲೈ ಸ್ವಜಾತಿಶ್ರೇಷ್ಠನಾದ ಚಾಂಡಾಲನೇ, ಕಳ್ಳತನದಿಂದಲಾದರೂ ನಾನು ಈ ನನ್ನ ಶರೀರವನ್ನು ಈಗ ಕಾಪಾಡುವೆನು. ಭೂಮಿಯಲ್ಲಿ ಮಳೆಯು ಇಲ್ಲದಿದ್ದಾಗ ದೇಹರಕ್ಷಣೆಗಾಗಿ ಯಾರಾದರೂ ಕಳ್ಳತನವನ್ನು ಮಾಡಿದರೆ ಆ ಪಾಪವು ಮಳೆಯನ್ನು ಕೊಡದೆ ಇರತಕ್ಕ ಮೇಘಾಧಿಪತಿಯಾದ ದೇವೇಂದ್ರನಿಗೆ ಬರುವುದು! ಎಂದು ವಿದ್ವಾಂಸರು ಹೇಳುವರು. ॥೨೪-೨೫॥

ವಿಶ್ವಾಮಿತ್ರನು ಹೇಳಿದನು--ಎಲೈ ಪ್ರಿಯಪತ್ನಿಯೇ, ಕೇಳು. ನಾನು ಈ ಮಾತುಗಳನ್ನಾಡುತ್ತಲು, ಅಕ್ಷಣದಲ್ಲಿಯೇ ಅಕಸ್ಮಾತ್ತಾಗಿ ಆಕಾಶದಿಂದ ಆನೆಯ ಸೊಂಡಲಿನ ಗಾತ್ರದ ನೀರಿನ ಧಾರೆಗಳಿಂದ ಕೂಡಿದ ಮಳೆಯು ಬಿದ್ದಿತು. ಮಿಂಚಿನೊಡನೆ ಮಳೆಯನ್ನು ಸುರಿಸುತ್ತಿರುವ ಮೇಘವನ್ನು ನೋಡಿ ನಾನು ಸಂತೋಷಹೊಂದಿದೆನು. ಆಗ ಅವನ ಮನೆಯನ್ನು ಬಿಟ್ಟು ನಾನು ಸಂತೋಷದಿಂದ ಹೊರಹೊರಟು ಬಂದೆನು. ಎಲೈ ಉತ್ತಮಸ್ತ್ರೀಯಾದ ಪ್ರಿಯಪತ್ನಿಯೇ, ಕಾಡಿನಲ್ಲಿ

ತದಾऽಹಂ ತದ್ಗೃಹಂ ತ್ಯಕ್ತ್ವಾ ನಿಸ್ಸೃತಃ ಪರಯಾ ಮುದಾ ।
ಕಥಯ ತ್ವಂ ವರಾರೋಹೇ ಕಾಲೋ ನೀತಸ್ತ್ವಯಾ ಕಥಂ ॥೨೮॥

ಕಾಂತಾರೇ ಪರಮಃ ಕ್ರೂರಃ ಕ್ಷಯಕೃತ್ಪ್ರಾಣಿನಾಮಿಹ ।

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಪತಿಮಾಹ ಪ್ರಿಯಂವದಾ ॥೨೯॥

ಯಥಾ ಶೃಣು ಮಯಾ ನೀತಃ ಕಾಲಃ ಪರಮದಾರುಣಃ ।
ಗತೇ ತ್ವಯಿ ಮುನಿಶ್ರೇಷ್ಠ ದುರ್ಭಿಕ್ಷಂ ಸಮುಪಾಗತಂ ॥೩೦॥

ಅನ್ನಾರ್ಥಂ ಪುತ್ರಕಾಃ ಸರ್ವೇ ಬಭೂವುಶ್ಚಾऽತಿದುಃಖಿತಾಃ ।
ಕ್ಷುಧಿತಾನ್ಬಾಲಕಾನ್ವೀಕ್ಷ್ಯ ನೀವಾರಾರ್ಥಂ ವನೇ ವನೇ ॥೩೧॥

ಭ್ರಾಂತಾऽಹಂ ಚಿಂತಯಾऽऽವಿಷ್ಟಾ ಕಿಂಚಿತ್ಪ್ರಾಪ್ತಂ ಫಲಂ ತದಾ ।
ಏವಂ ಚ ಕತಿಚಿನ್ಮಾಸಾ ನೀವಾರೇಣಾತಿವಾಹಿತಾಃ ॥೩೨॥

ತದಭಾವೇ ಮಯಾ ಕಾಂತ ಚಿಂತಿತಂ ಮನಸಾ ಪುನಃ ।
ನ ಭಿಕ್ಷಾ ಕಿಲ ದುರ್ಭಿಕ್ಷೇ ನೀವಾರಾ ನಾಪಿ ಕಾನನೇ ॥೩೩॥

---

ಬರಗಾಲವು ಪ್ರಾಣಿಗಳಿಗೆ ನಾಶವನ್ನುಂಟುಮಾಡುವಷ್ಟು ಅತ್ಯಂತ ಕ್ರೂರವಾದುದಾಗಿರುತ್ತದೆ. ಆ ಕೆಟ್ಟ ಬರಗಾಲದಲ್ಲಿ ನೀನು ಹೇಗೆ ಕಾಲವನ್ನು ಕಳೆದೆ? ಅದನ್ನು ಹೇಳು. ||೨೬-೨೭-೨೮||

ವ್ಯಾಸಮುನಿಯು ಹೇಳಿದನು-– ಹೀಗೆಂದು ಹೇಳಿದ ವಿಶ್ವಾಮಿತ್ರನ ಮಾತನ್ನು ಕೇಳಿ, ಆ ಮುನಿಪತ್ನಿಯು ಪತಿಯನ್ನು ಕುರಿತು, ಓ ಪತಿಯೇ, ಅತ್ಯಂತ ಕಷ್ಟಕರವಾದ ಆ ಕಾಲವನ್ನು ನಾನು ಹೇಗೆ ಕಳೆದೆನೆಂಬುದನ್ನು ಹೇಳುವೆನು ಕೇಳು. ಓ ಮುನಿಶ್ರೇಷ್ಠನೇ, ನೀನು ಹೊರಟು ಹೋಗುತ್ತಲು ಬರಗಾಲವು ಬಂದಿತು. ಮಕ್ಕಳೆಲ್ಲರೂ ಅನ್ನಕ್ಕಾಗಿ ಬಹಳ ಕಷ್ಟವಾಗಲು ದುಃಖಪಟ್ಟರು. ||೨೯-೩೦||

ಹಸಿದಿರುವ ಮಕ್ಕಳನ್ನು ನೋಡಿ ತೃಣಧಾನ್ಯ (ಸಾಮೆ) ಕ್ಕಾಗಿ ಕಾಡಿನಲ್ಲೆಲ್ಲ ಸುತ್ತಿ, ಸ್ವಲ್ಪ ಧಾನ್ಯವನ್ನು ಸಂಪಾದಿಸಿದೆನು. ಕೆಲವು ತಿಂಗಳುಗಳನ್ನು ಆ ಸಾಮೆಯ ಆಹಾರದಿಂದ ಕಳೆದೆವು. ಅದೂ ಸಿಕ್ಕದೆ ಹೋಗಲು, ಅಂತಹ ದುರ್ಭಿಕ್ಷ ಕಾಲದಲ್ಲಿ

ನ ವೃಕ್ಷೇಷು ಫಲಾನ್ಯಾಸುರ್ನ (ಸನ್ನ) ಮೂಲಾನಿ ಧರಾತಲೇ ।
ಕ್ಷುಧಯಾ ಪೀಡಿತಾ ಬಾಲಾ ರುದಂತಿ ಭೃಶಮಾತುರಾಃ ॥೩೪॥

ಕಿಂ ಕರೋಮಿ ಕ್ವ ಗಚ್ಛಾಮಿ ಕಿಂ ಬ್ರವೀಮಿ ಕ್ಷುಧಾರ್ದಿತಾನ್ ।
ಏವಂ ವಿಚಿಂತ್ಯ ಮನಸಾ ನಿಶ್ಚಯಸ್ತು ಮಯಾ ಕೃತಃ ॥೩೫॥

ಪುತ್ರಮೇಕಂ ದದಾಮ್ಯದ್ಯ ಕಸ್ಮೈ ಚಿದ್ಧನಿನೇ ಕಿಲ ।
ಗೃಹೀತ್ವಾ ತಸ್ಯ ಮೌಲ್ಯಂ ತು ತೇನ ದ್ರವ್ಯೇಣ ಬಾಲಕಾನ್ ॥೩೬॥

ಪಾಲಯೇಽಹಂ ಕ್ಷುಧಾಽಽರ್ತಾಂಸ್ತು ನಾನ್ಯೋಽಪಾಯೋಽಸ್ತಿ ಪಾಲನೇ।
ಇತಿ ಸಂಚಿತ್ಯ ಮನಸಾ ಪುತ್ರೋಽಯಂ ಪ್ರಹಿತೋ ಮಯಾ ॥೩೭॥

ವಿಕ್ರಯಾರ್ಥಂ ಮಹಾಭಾಗ ಕ್ರಂದಮಾನೋ ಭೃಶಾತುರಃ ।
ಕ್ರಂದಮಾನಂ ಗೃಹೀತ್ವೈನಂ ನಿರ್ಗತಾಽಹಂ ಗತತ್ರಪಾ ॥೩೮॥

ತದಾ ಸತ್ಯವ್ರತೋ ಮಾರ್ಗೇ ಮಾಮುದೀಕ್ಷ್ಯ ಭೃಶಾತುರಾಂ ।
ಪಪ್ರಚ್ಛ ಸ ಚ ರಾಜರ್ಷಿಃ ಕಸ್ಮಾದ್ರೋದಿತಿ ಬಾಲಕಃ ॥೩೯॥

---

ಭಿಕ್ಷೆಯು ಹುಟ್ಟುವುದಿಲ್ಲವೆಂದು ತಿಳಿದು ಕಾಡಿನಲ್ಲಿ ಸಾಮೆಯೂ (ತೃಣಧಾನ್ಯ) ಇಲ್ಲದಿರಲು, ಏನನ್ನು ಮಾಡಲಿ? ಎಂದು ಯೋಚಿಸಿದೆನು. ॥೩೧-೩೨-೩೩॥

ಮರಗಳಲ್ಲಿಯೂ ಹಣ್ಣುಗಳಿರಲಿಲ್ಲ. ಭೂಮಿಯಲ್ಲಿ ಗೆಡ್ಡೆಗೆಣಸುಗಳೂ ದೊರೆಯಲಿಲ್ಲ. ಬಾಲಕರು ಹಸಿವಿನಿಂದ ವಿಶೇಷವಾಗಿ ಅಳುತ್ತಿದ್ದರು. ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಮಕ್ಕಳನ್ನು ಹೇಗೆ ಸಮಾಧಾನಪಡಿಸಲಿ? ಎಂದು ಯೋಚಿಸಿ, ಮನಸ್ಸಿನಲ್ಲಿ ಹೀಗೆ ನಿಶ್ಚಯಿಸಿದೆನು. ॥೩೪-೩೫॥

ಒಬ್ಬ ಮಗನನ್ನು ಯಾವನಾದರೊಬ್ಬ ಹಣವಂತನಿಗೆ ಮಾರಿ ಆ ಹಣವನ್ನು ತೆಗೆದುಕೊಂಡು ಆ ಹಣದಿಂದಲೇ ಹಸಿದಿರುವ ಮಿಕ್ಕ ಮಕ್ಕಳನ್ನು ಕಾಪಾಡುವೆನು. ಬೇರೊಂದುಪಾಯವೂ ಕಾಣುವುದಿಲ್ಲ. ಹೀಗೆಂದು ಯೋಚಿಸಿ ಅಳುತ್ತಿರುವ ಒಬ್ಬ ಮಗನನ್ನು ಮಾರುವುದಕ್ಕಾಗಿ ಕಳುಹಿಸಿದೆನು. ॥೩೬-೩೭॥

ನಾನೇ ನಾಚಿಕೆಯಿಲ್ಲದವಳಾಗಿ ಅಳುತ್ತಿರುವ ಈ ಮಗನನ್ನು ಹಿಡಿದುಕೊಂಡು ಮಾರಲು ಹೊರಟೆನು. ಆಗ ಸತ್ಯವ್ರತರಾಜನು ದಾರಿಯಲ್ಲಿ ದುಃಖಿಸುತ್ತಿರುವ ಈ ಹುಡುಗನನ್ನು ಕಂಡು ನನ್ನನ್ನು ಕುರಿತು ಈ ಹುಡುಗನು ಅಳುವುದಕ್ಕೆ

ತದಾಽಹಂ ತಮುವಾಚೇದಂ ವಚನಂ ಮುನಿಸತ್ತಮ ।
ವಿಕ್ರಯಾರ್ಥಂ ನೀಯತೇಽಸೌ ಬಾಲಕೋಽದ್ಯ ಮಯಾ ನೃಪ ॥೪೦॥

ಶ್ರುತ್ವಾ ಮೇ ವಚನಂ ರಾಜಾ ದಯಾರ್ದ್ರಹೃದಯಸ್ತತಃ ।
ಮಾಮುವಾಚ ಗೃಹಂ ಯಾಹಿ ಗೃಹೀತ್ವೈನಂ ಕುಮಾರಕಂ ॥೪೧॥

ಭೋಜನಾರ್ಥೇ ಕುಮಾರಾಣಾಮಾಮಿಷಂ ವಿಹಿತಂ ತವ ।
ಪ್ರಾಪಯಿಷ್ಯಾಮ್ಯಹಂ ನಿತ್ಯಂ ಯಾವನ್ಮುನಿಸಮಾಗಮಃ ॥೪೨॥

ಅಹನ್ಯಹನಿ ಭೂಪಾಲೋ ವೃಕ್ಷೇಽಸ್ಮಿನ್ ಮೃಗಸೂಕರಾನ್ ।
ವಿನ್ಯಸ್ಯ ಯಾತಿ ಹತ್ವಾಽಸೌ ಪ್ರತ್ಯಹಂ ದಯಯಾಽನ್ವಿತಃ ॥೪೩॥

ತೇನೈವ ಬಾಲಕಾಃ ಕಾಂತ ಪಾಲಿತಾ ವೃಜಿನಾರ್ಣವಾತ್ ।
ವಸಿಷ್ಠೇನಾಽಥ ಶಪ್ತೋಽಸೌ ಭೂಪತಿರ್ಮಮ ಕಾರಣಾತ್ ॥೪೪॥

---

ಕಾರಣವೇನೆಂದು ಕೇಳಿದನು. ಓ ಮುನಿಶ್ರೇಷ್ಠನೇ, ಆಗ ನಾನು ಆ ರಾಜರ್ಷಿಯನ್ನು ಕುರಿತು, ಈ ಬಾಲಕನನ್ನು ಮಾರುವುದಕ್ಕಾಗಿ ಕರೆದುಕೊಂಡು ಹೋಗುತ್ತಿರುವೆನೆಂದು ಹೇಳಿದೆನು. ॥೩೮-೩೯-೪೦॥

ನನ್ನ ಮಾತನ್ನು ಕೇಳಿ ಆ ರಾಜನು ದಯೆಯಿಂದ ಕೂಡಿದ ಮನಸ್ಸುಳ್ಳವನಾಗಿ, 'ಓ ಋಷಿಪತ್ನಿಯೇ, ಈ ಮಗನನ್ನು ಕರೆದುಕೊಂಡು ಮನೆಗೆ ಹಿಂತಿರುಗಿ ಹೋಗು. ನಿನ್ನ ಮಕ್ಕಳ ಭೋಜನಕ್ಕಾಗಿ ಪ್ರತಿದಿನವೂ ವಿಶ್ವಾಮಿತ್ರಮುನಿಯು ಬರುವ ಪರಿಯಂತವಾಗಿ ನಿಮಗೆ ಶಾಸ್ತ್ರವಿಹಿತವಾದ ಮಾಂಸವನ್ನು ತಂದುಕೊಡುತ್ತಿರುವೆನು.' ಎಂದು ನನಗೆ ಹೇಳಿದನು. ॥೪೧-೪೨॥

ಆ ಸತ್ಯವ್ರತರಾಜನು ಪ್ರತಿದಿನವೂ ಜಿಂಕೆಗಳನ್ನೂ ಹಂದಿಗಳನ್ನೂ ಕೊಂದು ದಯೆಯಿಂದ ಕೂಡಿದವನಾಗಿ ಅವುಗಳ ಮಾಂಸವನ್ನು ಪ್ರತಿದಿನವೂ ಈ ಮರದಲ್ಲಿಟ್ಟು ಹೋಗುತ್ತಿದ್ದನು. ॥೪೩॥

ಓ ಪ್ರಿಯನೇ, ಆ ಮಾಂಸದಿಂದ ಈ ಬಾಲಕರನ್ನು ಪಾಪದಫಲವಾದ ಆ ಹಸಿವಿನ ದುಃಖವೆಂಬ ಸಮುದ್ರದಿಂದ ಕಾಪಾಡಿಕೊಂಡು ಬಂದೆನು. ನನಗೋಸ್ಕರವಾಗಿ ಈ ರಾಜನಿಗೆ ವಸಿಷ್ಠನಿಂದ ಶಾಪವೂ ಬಂದಿತು. ಏಕೆಂದರೆ ಒಂದು ದಿನ ಕಾಡಿನಲ್ಲಿ ರಾಜನಿಗೆ ಬೇರೆ ಯಾವ ಮಾಂಸವೂ ದೊರೆಯಲಿಲ್ಲ. ಆಗ ಅವನು ವಸಿಷ್ಠನ

**ಕಸ್ಮಿಂಶ್ಚಿದ್ದಿವಸೇ ಮಾಂಸಂ ನ ಪ್ರಾಪ್ತಂ ತೇನ ಕಾನನೇ ।**
**ಹತಾ ದೋಗ್ಧ್ರೀ ವಸಿಷ್ಠಸ್ಯ ತೇನಾಽಸೌ ಕುಪಿತೋ ಮುನಿಃ ॥೪೫॥**

**ತ್ರಿಶಂಕುರಿತಿ ಭೂಪಸ್ಯ ಕೃತಂ ನಾಮ ಮಹಾತ್ಮನಾ ।**
**ಕುಪಿತೇನ ವಧಾದ್ಧೇತೋಶ್ಚಾಂಡಾಲಶ್ಚ ಕೃತೋ ನೃಪಃ ॥೪೬॥**

**ತೇನಾಹಂ ದುಃಖಿತಾ ಜಾತಾ ತಸ್ಯ ದುಃಖೇನ ಕೌಶಿಕ ।**
**ಶ್ವಪಚತ್ವಮಸೌ ಪ್ರಾಪ್ತೋ ಮತ್ಕೃತೇ ನೃಪನಂದನಃ ॥೪೭॥**

**ಯೇನ ಕೇನಾಪ್ಯುಪಾಯೇನ ಭವತಾ ನೃಪತೇಃ ಕಿಲ ।**
**ತಸ್ಮಾದ್ರಕ್ಷಾ ಪ್ರಕರ್ತವ್ಯಾ ತಪಸಾ ಪ್ರಬಲೇನ ಹ ॥೪೮॥**

॥ ವ್ಯಾಸ ಉವಾಚ ॥

**ಇತಿ ಭಾರ್ಯಾವಚಃ ಶ್ರುತ್ವಾ ಕೌಶಿಕೋ ಮುನಿಸತ್ತಮಃ ।**
**ತಾಮಾಹ ಕಾಮಿನೀಂ ದೀನಾಂ ಸಾಂತ್ವಪೂರ್ವಮರಿಂದಮ ॥೪೯॥**

॥ ವಿಶ್ವಾಮಿತ್ರ ಉವಾಚ ॥

**ಮೋಚಯಿಷ್ಯಾಮಿ ತಂ ಪಾಪಾತ್ ನೃಪಂ ಕಮಲಲೋಚನೇ ।**
**ಉಪಕಾರಃ ಕೃತೋ ಯೇನ ಕಾಂತಾರಾದ್ರಕ್ಷಿತಾಽಸಿ ವೈ ॥೫೦॥**

---

ಕರೆಯುವ ಹಸುವನ್ನು ಕೊಂದನು! ಆದರಿಂದ ವಸಿಷ್ಠನು ಕೋಪಗೊಂಡನು. ||೪೪-೪೫||

ಮಹಾತ್ಮನಾದ ವಸಿಷ್ಠಮುನಿಯು ತನ್ನ ಹಸುವನ್ನು ಕೊಂದ ರಾಜಪುತ್ರನ ಮೇಲೆ ಕೋಪಗೊಂಡು ಅವನಿಗೆ ತ್ರಿಶಂಕುವೆಂದು ಹೆಸರಿಟ್ಟು, ಅವನನ್ನು ಚಂಡಾಲನನ್ನಾಗಿ ಮಾಡಿದನು. ಆ ರಾಜಪುತ್ರನು ನನಗೋಸ್ಕರವಾಗಿ ಮಾಡಿದ ಈ ಕೆಲಸದಿಂದ ಶ್ವಪಚನಾದನೆಂದು ನನಗೂ ದುಃಖವುಂಟಾಯಿತು. ||೪೬-೪೭||

ವ್ಯಾಸರು ಹೇಳಿದರು—ಶತ್ರುಸಂಹಾರಕನಾದ ಜನಮೇಜಯನೇ, ಕೇಳು. ಹೀಗೆಂದು ಹೇಳಿದ ಹೆಂಡತಿಯ ಮಾತನ್ನು ಕೇಳಿದ ವಿಶ್ವಾಮಿತ್ರಮುನಿಶ್ರೇಷ್ಠನು ದೀನಳಾದ ಆ ಪತ್ನಿಯನ್ನು ಕುರಿತು ಸಮಾಧಾನಮಾಡುತ್ತಾ ಹೇಳಿದನು. ||೪೯||

ವಿಶ್ವಾಮಿತ್ರನು ಹೇಳಿದನು— ಎಲೌ ಕಮಲದಂತೆ ಕಣ್ಣುಗಳುಳ್ಳ ಪತ್ನಿಯೇ, ಯಾವ ರಾಜನು ಉಪಕಾರವನ್ನು ಮಾಡಿ ಕಾಡಿನಲ್ಲಿ ನಿಮ್ಮೆಲ್ಲರನ್ನೂ ಕಾಪಾಡಿವನೋ,

ವಿದ್ಯಾತಪೋಬಲೇನಾಽಹಂ ಕರಿಷ್ಯೇ ದುಃಖಸಂಕ್ಷಯಂ ।
ಇತ್ಯಾಶ್ವಾಸ್ಯ ಪ್ರಿಯಾಂ ತತ್ರ ಕೌಶಿಕಃ ಪರಮಾರ್ಥವಿತ್ ॥೫೧॥

ಚಿಂತಯಾಮಾಸ ನೃಪತೇಃ ಕಥಂ ಸ್ಯಾದ್ದುಃಖನಾಶನಂ ।
ಸಂವಿಮೃಶ್ಯ ಮುನಿಸ್ತತ್ರ ಜಗಾಮ ಯತ್ರ ಪಾರ್ಥಿವಃ ॥೫೨॥

ತ್ರಿಶಂಕುಃ ಪಕ್ಕಣೇ ದೀನಃ ಸಂಸ್ಥಿತಃ ಶ್ವಪಚಾಕೃತಿಃ ।
ಆಗಚ್ಛಂತಂ ಮುನಿಂ ದೃಷ್ಟ್ವಾ ವಿಸ್ಮಿತೋಽಸೌ ನರಾಧಿಪಃ ॥೫೩॥

ದಂಡವನ್ನಿಪಪಾತೋರ್ವ್ಯಾಂ ಪಾದಯೋಸ್ತರಸಾ ಮುನೇಃ ।
ಗೃಹೀತ್ವಾ ತಂ ಕರೇ ಭೂಪಂ ಪತಿತಂ ಕೌಶಿಕಸ್ತದಾ ॥೫೪॥

ಉತ್ಥಾಪ್ಯೋವಾಚ ವಚನಂ ಸಾಂತ್ವಪೂರ್ವಂ ದ್ವಿಜೋತ್ತಮಃ ।
ಮತ್ಕೃತೇ ತ್ವಂ ಮಹೀಪಾಲ ಶಪ್ತೋಽಸಿ ಮುನಿನಾ ಯತಃ ॥೫೫॥
ವಾಂಛಿತಂ ತೇ ಕರಿಷ್ಯಾಮಿ ಬ್ರೂಹಿ ಕಿಂ ಕರವಾಣ್ಯಹಂ ।

---

ಅಂಥವನನ್ನು ಶಾಪದಿಂದ ಬಿಡಿಸುವೆನು. ನಾನು ತಪಸ್ಸಿನ ಮತ್ತು ವಿದ್ಯೆಯ ಮಹಿಮೆಯಿಂದ ಅವನ ದುಃಖವನ್ನು ನಾಶಮಾಡುವೆನು. ಹೀಗೆಂದು ಹೇಳಿ ಪರತತ್ವಜ್ಞಾನವನ್ನು ಪಡೆದ ವಿಶ್ವಾಮಿತ್ರನು ತನ್ನ ಪತ್ನಿಯನ್ನು ಸಮಾಧಾನಪಡಿಸಿ, ರಾಜನ ದುಃಖನಾಶವು ಹೇಗೆ ಆಗುವುದೆಂದು ಯೋಚಿಸಿದನು. ॥೫೦-೫೧॥

ವಿಶ್ವಾಮಿತ್ರಮುನಿಯು ಚನ್ನಾಗಿ ವಿಚಾರಮಾಡಿ ತ್ರಿಶಂಕುರಾಜನಿದ್ದಲ್ಲಿಗೆ ಹೋದನು. ಆ ರಾಜನು ಹಳ್ಳಿಯಲ್ಲಿ ಚಾಂಡಾಲನ ಆಕಾರದಿಂದ ಕೂಡಿ ಇದ್ದನು. ಬರುತ್ತಿದ್ದ ಆ ಮುನಿಯನ್ನು ನೋಡಿ ಆ ರಾಜನು ಆಶ್ಚರ್ಯಪಟ್ಟು ಆ ಮುನಿಯ ಪಾದಗಳಲ್ಲಿ ಭೂಮಿಯ ಮೇಲೆ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ಕೌಶಿಕಮುನಿಯು ನಮಸ್ಕಾರಮಾಡಿದ ಆ ರಾಜನನ್ನು ಕೈಯಲ್ಲಿ ಹಿಡಿದುಕೊಂಡು ಮೇಲಕ್ಕೆ ಎಬ್ಬಿಸಿ ಸಮಾಧಾನಕರವಾದ ಮಾತುಗಳನ್ನು ಹೀಗೆ ಹೇಳಿದನು. ॥೫೨-೫೩-೫೪॥

ಎಲೈ ರಾಜನೇ, ನನಗೋಸ್ಕರವಾಗಿ ನೀನು ವಸಿಷ್ಠಮುನಿಯಿಂದ ಶಾಪವನ್ನು ಹೊಂದಿರುವೆ. ಆ ಕಾರಣದಿಂದ ನಾನು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸಿ ಕೊಡುವೆನು. ನಾನು ಏನನ್ನು ಮಾಡಬೇಕು? ಎಂಬುದನ್ನು ಹೇಳು. ಎಂದನು. ॥೫೫॥

|| ರಾಜೋವಾಚ ||

**ಮಯಾ ಸಂಪ್ರಾರ್ಥಿತಃ ಪೂರ್ವಂ ವಸಿಷ್ಠೋ ಮಖಹೇತವೇ ॥೫೭॥**

**ಮಾಂ ಯಾಜಯ ಮುನಿಶ್ರೇಷ್ಠ ಕರೋಮಿ ಮಖಮುತ್ತಮಂ ।**
**ಯಥೇಷ್ಟಂ ಕುರು ವಿಪ್ರೇಂದ್ರ ಯಥಾಸ್ವರ್ಗಂ ವ್ರಜಾಮ್ಯಹಂ ॥೫೭॥**

**ಅನೇನೈವ ಶರೀರೇಣ ಶಕ್ರಲೋಕಂ ಸುಖಾಲಯಂ ।**
**ಕೋಪಂ ಕೃತ್ವಾ ವಸಿಷ್ಠೋಽಸೌ ಮಾಮಾಹೇತಿ ಸುದುರ್ಮತೇ॥೫೮॥**

**ಮಾನುಷೇಣ ಹಿ ದೇಹೇನ ಸ್ವರ್ಗವಾಸಃ ಕುತಸ್ತವ ।**
**ಪುನರ್ಮಯೋಕ್ತೋ ಭಗವಾ ನ್ಸ್ವರ್ಗಲುಬ್ಧೇನ ಚಾಽನಘ ॥೫೯॥**

**ಅನ್ಯಂ ಪುರೋಹಿತಂ ಕೃತ್ವಾ ಯಕ್ಷ್ಯೇಽಹಂ ಯಜ್ಞಮುತ್ತಮಂ ।**
**ತದಾ ತೇನೈವ ಶಪ್ತೋಽಹಂ ಚಾಂಡಾಲೋ ಭವ ಪಾಮರ ॥೬೦॥**

---

ರಾಜನು ಹೇಳಿದನು—' ಓ ಮುನಿಶ್ರೇಷ್ಠನೇ, ಹಿಂದೆ ಒಂದುದಿನ ನಾನು ಸ್ವರ್ಗವನ್ನು ಪಡೆಯಿಸುವ ಯಜ್ಞವನ್ನು ಮಾಡಬೇಕೆಂದು ವಸಿಷ್ಠಮುನಿಯನ್ನು ಹೀಗೆ ಪ್ರಾರ್ಥಿಸಿದೆನು. ' ಓ ಬ್ರಾಹ್ಮಣಶ್ರೇಷ್ಠನೇ, ನಾನು ಉತ್ತಮವಾದ ಯಜ್ಞವನ್ನು ಮಾಡುವೆನು. ಸುಖಕ್ಕೆ ತವರುಮನೆಯಾದ ಇಂದ್ರಲೋಕಕ್ಕೆ ಈ ಶರೀರದಿಂದಲೇ ಹೋಗುವಂತೆ ನಿನ್ನ ಇಷ್ಟಾನುಸಾರವಾಗಿ ನನ್ನಿಂದ ತಕ್ಕುದಾದ ಯಜ್ಞವನ್ನು ಮಾಡಿಸು ' ಎಂದು ಹೇಳಿದೆನು. ||೫೬-೫೭||

ಆ ವಸಿಷ್ಠನು ಕೋಪಮಾಡಿಕೊಂಡು ' ದುರ್ಬುದ್ಧಿಯುಳ್ಳ ರಾಜನೇ, ಮನುಷ್ಯಶರೀರದಿಂದ ಸ್ವರ್ಗವಾಸವು ನಿನಗೆ ಹೇಗೆ ಬರುವುದು? ' ಎಂದು ಹೇಳಿದನು. ||೫೮||

ಸ್ವರ್ಗದಲ್ಲಿ ಅತ್ಯಾಸೆಯುಳ್ಳ ನಾನು ಆ ಮಹಾತ್ಮನನ್ನು ಕುರಿತು ' ಪಾಪರಹಿತನಾದ ವಿಶ್ವಾಮಿತ್ರನೇ, ನಾನು ಬೇರೊಬ್ಬ ಪುರೋಹಿತನನ್ನು ಮಾಡಿಕೊಂಡು ಅಂತಹ ಉತ್ತಮವಾದ ಯಜ್ಞವನ್ನು ಮಾಡುವೆನು ' ಎಂದು ಮತ್ತೆ ನಾನು ಹೇಳಿದೆನು. ||೫೯||

ಆಗ ಎಲೈ ಅಜ್ಞಾನಿಯಾದವನೇ, ನೀನು ಚಾಂಡಾಲನಾಗು! ಎಂದು ಆ ವಸಿಷ್ಠಮುನಿಯು ನನಗೆ ಶಾಪವನ್ನು ಕೊಟ್ಟನು. ಓ ವಿಶ್ವಾಮಿತ್ರಮುನಿಶ್ರೇಷ್ಠನೇ,

ಇತ್ಯೇತತ್ಕಥಿತಂ ಸರ್ವಂ ಕಾರಣಂ ಶಾಪಸಂಭವಂ ।
ಮಮ ದುಃಖವಿನಾಶಾಯ ಸಮರ್ಥೋಽಸಿ ಮುನೀಶ್ವರ ॥೬೧॥

ಇತ್ಯುಕ್ತ್ವಾ ವಿರರಾಮಾಸೌ ರಾಜಾ ದುಃಖರುಜಾರ್ದಿತಃ ।
ಕೌಶಿಕೋಽಪಿ ನಿರಾಕರ್ತುಂ ಶಾಪಂ ತಸ್ಯ ವ್ಯಚಿಂತಯತ್॥೬೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ತ್ರಯೋದಶೋಽಧ್ಯಾಯಃ.

---

ಶಾಪಕ್ಕೆ ಕಾರಣವಾದ ಸಕಲ ವಿಷಯಗಳನ್ನೂ ಹೇಳಿರುವೆನು. ನನ್ನ ದುಃಖವನ್ನು ಹೋಗಲಾಡಿಸಲು ನೀನೇ ಸಮರ್ಥನಾಗಿರುವೆ. ||೬೦-೬೧||

ದುಃಖವೆಂಬ ರೋಗದಿಂದ ತೊಂದರೆಪಡುತ್ತಿರುವ ರಾಜನು ಹೀಗೆ ಹೇಳಿ ಸುಮ್ಮನಾದನು. ವಿಶ್ವಾಮಿತ್ರನೂ ಕೂಡ ಅವನ ದುಃಖಕಾರಣವಾದ ಶಾಪವನ್ನು ನಾಶಮಾಡಲೂ ಮತ್ತು ಅವನ ಕೋರಿಕೆಯನ್ನು ಈಡೇರಿಸಲೂ ತಕ್ಕ ಕ್ರಮವನ್ನು ಕುರಿತು ಆಲೋಚಿಸಿದನು. ||೬೨||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ವ್ಯಾಸ ಉವಾಚ ||

**ವಿಚಿಂತ್ಯ ಮನಸಾ ಕೃತ್ಯಂ ಗಾಧಿಸೂನುರ್ಮಹಾತಪಾಃ ।**
**ಪ್ರಕಲ್ಪ್ಯ ಯಜ್ಞಸಂಭಾರಾ ನ್ಮುನೀನಾಮಂತ್ರಯತ್ತದಾ ॥೧॥**

**ಮುನಯಸ್ತಂ ಮಖಂ ಜ್ಞಾತ್ವಾ ವಿಶ್ವಾಮಿತ್ರನಿಮಂತ್ರಿತಾಃ ।**
**ನಾಗತಾಃ ಸರ್ವ ಏವೈತೇ ವಸಿಷ್ಠೇನ ನಿವಾರಿತಾಃ ॥೨॥**

**ಗಾಧಿಸೂನುಸ್ತದಾಜ್ಞಾಯ ವಿಮನಾಶ್ಚಾತಿದುಃಖಿತಃ ।**
**ಆಜಗಾಮಾಶ್ರಮಂ ತತ್ರ ಯತ್ರಾಽಸೌ ನೃಪತಿಃ ಸ್ಥಿತಃ ॥೩॥**

---

ವ್ಯಾಸರು ಹೇಳಿದರು—ಒಳ್ಳೆಯ ತಪಸ್ಸನ್ನು ಮಾಡಿದ ಗಾಧಿರಾಜನಾದ ವಿಶ್ವಾಮಿತ್ರನು ಮನಸ್ಸಿನಲ್ಲಿ ಯೋಚನೆಮಾಡಿ, ಮಾಡಬೇಕಾದ ಕೆಲಸವನ್ನು ನಿಶ್ಚಯಿಸಿ, ಯಜ್ಞಕ್ಕೆ ಬೇಕಾದ ಪದಾರ್ಥಗಳನ್ನೆಲ್ಲವನ್ನೂ ಸಿದ್ಧಪಡಿಸಿ, ಋಷಿಗಳನ್ನು ಕರೆಯಿಸಿದನು. ||೧||

ವಿಶ್ವಾಮಿತ್ರನು ಕರೆಯಿಸಿದ ಋಷಿಗಳೆಲ್ಲರೂ ಅವನು ಮಾಡಿಸುವ ಯಜ್ಞದ ವಿಚಾರವನ್ನು ತಿಳಿದು ವಸಿಷ್ಠನು ಹೋಗಬೇಡಿರೆಂದು ಹೇಳಿದುದರಿಂದ ಅವರೆಲ್ಲರೂ ಯಜ್ಞಕ್ಕೆ ಬರಲಿಲ್ಲ. ||೨||

ಗಾಧಿರಾಜನ ಪುತ್ರನಾದ ವಿಶ್ವಾಮಿತ್ರನು ಅದನ್ನು ತಿಳಿದು ಮನಸ್ಸಿನಲ್ಲಿ ಅಸಮಾಧಾನದ ಚಿಂತೆಯ ಭಾವವುಳ್ಳವನಾಗಿ ಅತ್ಯಂತ ದುಃಖದಿಂದ ತ್ರಿಶಂಕುರಾಜ ನಿದ್ದ ಆಶ್ರಮಕ್ಕೆ ಬಂದನು. ||೩||

ತಮಾಹ ಕೌಶಿಕಃ ಕ್ರುದ್ಧೋ ವಸಿಷ್ಠೇನ ನಿವಾರಿತಾಃ ।
ನಾಗತಾ ಬ್ರಾಹ್ಮಣಾಃ ಸರ್ವೇ ಯಜ್ಞಾರ್ಥಂ ನೃಪಸತ್ತಮ ॥೪॥

ಪಶ್ಯ ಮೇ ತಪಸಃ ಸಿದ್ಧಿಂ ಯಥಾ ತ್ವಾಂ ಸುರಸದ್ಮನಿ ।
ಪ್ರಾಪಯಾಮಿ ಮಹಾರಾಜ ವಾಂಛಿತಂ ತೇ ಕರೋಮ್ಯಹಂ ॥೫॥

ಇತ್ಯುಕ್ತ್ವಾ ಜಲಮಾದಾಯ ಹಸ್ತೇನ ಮುನಿಸತ್ತಮಃ ।
ದದೌ ಪುಣ್ಯಂ ತದಾ ತಸ್ಮೈ ಗಾಯತ್ರೀ ಜಪಸಂಭವಂ ॥೬॥

ದತ್ವಾಽಥ ಸುಕೃತಂ ರಾಜ್ಞೇ ತಮುವಾಚ ಮಹೀಪತಿಂ ।
ಯಥೇಷ್ಟಂ ಗಚ್ಛ ರಾಜರ್ಷೇ ತ್ರಿವಿಷ್ಟಪಮತಂದ್ರಿತಃ ॥೭॥

ಪುಣ್ಯೇನ ಮಮ ರಾಜೇಂದ್ರ ಬಹುಕಾಲಾರ್ಜಿತೇನ ಚ ।
ಯಾಹಿ ಶಕ್ರಪುರೀಂ ಪ್ರೀತಃ ಸ್ವಸ್ತಿ ತೇಽಸ್ತು ಸುರಾಲಯೇ ॥೮॥

---

ಕೋಪಗೊಂಡ ವಿಶ್ವಾಮಿತ್ರನು ಆ ತ್ರಿಶಂಕುರಾಜನನ್ನು ಕುರಿತು. ' ಎಲೈ ರಾಜಶ್ರೇಷ್ಠನೇ, ವಸಿಷ್ಠನು ಹೋಗಬೇಡಿರೆಂದು ಹೇಳಿದುದರಿಂದ ಯಜ್ಞಕ್ಕಾಗಿ ಬ್ರಾಹ್ಮಣರು ಬರಲಿಲ್ಲ. ನನ್ನ ತಪಸ್ಸಿನ ಶಕ್ತಿಯನ್ನು ನೋಡು! ನಿನ್ನ ಇಷ್ಟವನ್ನು ನಾನು ಪೂರ್ಣಮಾಡುತ್ತೇನೆ. ನಿನ್ನನ್ನು ದೇವಲೋಕಕ್ಕೆ ಹೇಗೆ ಕಳುಹಿಸುತ್ತೇನೆಂ ಬುದನ್ನು ನೋಡು ! ॥೪-೫॥

ಹೀಗೆಂದು ಹೇಳಿ ಆ ಮುನಿಶ್ರೇಷ್ಠನು ಕೈಯಲ್ಲಿ ನೀರನ್ನು ತೆಗೆದುಕೊಂಡು ಆಗಲೇ ಆ ರಾಜನಿಗೆ ತಾನು ಮಾಡಿದ ಗಾಯತ್ರಿಯ ಜಪದಿಂದುಂಟಾಗಿದ್ದ ಪುಣ್ಯ ವನ್ನು ಧಾರೆ ಎರೆದು ದಾನವಾಗಿ ಕೊಟ್ಟನು. ॥೬॥

ವಿಶ್ವಾಮಿತ್ರನು ತ್ರಿಶಂಕುವಿಗೆ ಪುಣ್ಯವನ್ನು ಕೊಟ್ಟಮೇಲೆ ಆ ರಾಜನನ್ನು ಕುರಿತು ಹೇಳಿದನು. ' ಎಲೈ ರಾಜಶ್ರೇಷ್ಠನೇ, ಬಹಳಕಾಲ ತಪಸ್ಸುಮಾಡಿ ಸಂಪಾದಿಸಿದ್ದ ನನ್ನ ಪುಣ್ಯದಿಂದ ನೀನು ಇಷ್ಟಾನುಸಾರವಾಗಿ ದೇವೇಂದ್ರನ ಪಟ್ಟಣಕ್ಕೆ ಹೋಗು ! ಅಲ್ಲಿ ನಿನಗೆ ಮಂಗಳವಾಗಲಿ.' ॥೭-೮॥

|| ವ್ಯಾಸ ಉವಾಚ ||

ಇತ್ಯುಕ್ತವತಿ ವಿಪ್ರೇಂದ್ರೇ ತ್ರಿಶಂಕುಸ್ತರಸಾ ತತಃ |
ಉತ್ಪಪಾತ ಯಥಾ ಪಕ್ಷೀ ವೇಗವಾಂಸ್ತಪಸೋ ಬಲಾತ್ ||೯||

ಉತ್ಪತ್ಯ ಗಗನೇ ರಾಜಾ ಗತಃ ಶಕ್ರಪುರೀಂ ಯದಾ |
ದೃಷ್ಟೋ ದೇವಗಣೈಸ್ತತ್ರ ಕ್ರೂರಶ್ಚಾಂಡಾಲವೇಷಭಾಕ್ ||೧೦||

ಕಥಿತೋಽಸೌ ಸುರೇಂದ್ರಾಯ ಕೋಽಯಮಾಯಾತಿ ಸತ್ವರಃ |
ಗಗನೇ ದೇವವದ್ವಾ ಯೋ ದುರ್ದರ್ಶಃ ಶ್ವಪಚಾಕೃತಿಃ ||೧೧||

ಸಹಸೋತ್ಥಾಯ ಶಕ್ರಸ್ತಮುಪಶ್ಯತ್ಪುರುಷಾಧಮಂ |
ಜ್ಞಾತ್ವಾ ತ್ರಿಶಂಕುಮಪಿ ಸ ನಿರ್ಭರ್ತ್ಸ್ಯ ತರಸಾಽಬ್ರವೀತ್ ||೧೨||

ಶ್ವಪಚ ಕ್ವ ಸಮಾಯಾಸಿ ದೇವಲೋಕೇ ಜುಗುಪ್ಸಿತಃ |
ಯಾಹಿ ಶೀಘ್ರಂ ತತೋ ಭೂಮೌ ನಾತ್ರ ಸ್ಥಾತುಂ ತ್ವಯೋಚಿತಂ ||೧೩||

---

ವ್ಯಾಸಮುನಿಯು ಹೇಳಿದನು—ಹೀಗೆಂದು ಬ್ರಾಹ್ಮಣಶ್ರೇಷ್ಠನಾದ ವಿಶ್ವಾಮಿತ್ರನು ಹೇಳುತ್ತಿದ್ದ ಹಾಗೆಯೇ ತ್ರಿಶಂಕುರಾಜನು ತಪಸ್ಸಿನ ಬಲದಿಂದ ಪಕ್ಷಿಯಂತೆ ಮೇಲಕ್ಕೆ ಹಾರಿದನು! ರಾಜನು ಆಕಾಶದಲ್ಲಿ ಹಾರುತ್ತಾ ದೇವೇಂದ್ರನ ಪಟ್ಟಣಕ್ಕೆ ಹೋದಾಗ ಕ್ರೂರನೂ ಚಾಂಡಾಲನ ರೂಪದಿಂದಿದ್ದವನೂ ಆದ ಆ ರಾಜನನ್ನು ದೇವತೆಗಳು ನೋಡಿದರು. ||೯-೧೦||

ಆ ದೇವತೆಗಳು "ನೋಡುವುದಕ್ಕೆ ಅಸಹ್ಯವಾದ ಚಾಂಡಾಲನಂತಿರುವ ಯಾವನೋ ಒಬ್ಬನು ಆಕಾಶದಲ್ಲಿ ದೇವತೆಯಂತೆ ಅತ್ಯಂತ ವೇಗವಾಗಿ ಹಾರಿ ಬರುತ್ತಿರುವನು!" ಎಂದು ದೇವೇಂದ್ರನಿಗೆ ಹೇಳಿದರು. ದೇವೇಂದ್ರನು ಬೇಗನೆ ಎದ್ದು ಆ ನೀಚ ಪುರುಷನನ್ನು ನೋಡಿ ತ್ರಿಶಂಕುವೆಂದು ತಿಳಿದು ಅವನನ್ನು ಭಯಪಡಿಸುತ್ತಾ ಬೇಗನೆ ಹೀಗೆ ಹೇಳಿದನು. ||೧೧-೧೨||

ಎಲೈ ಚಾಂಡಾಲನೇ, ಕೊಳಕಾದ ಸ್ವರೂಪದಿಂದ ಅಸಹ್ಯನಾದ ನೀನು ಈ ದೇವಲೋಕದಲ್ಲಿ ಎಲ್ಲಿಗೆ ಬರುತ್ತೀಯೆ? ಬೇಗನೆ ಭೂಮಿಗೇ ಹೋಗು. ಇಲ್ಲಿ ನೀನು ಇರುವುದು ಯೋಗ್ಯವಾದುದಲ್ಲ! ||೧೩||

ಇತ್ಯುಕ್ತಃ ಸ್ಖಲಿತಃ ಸ್ವರ್ಗಾಚ್ಛಕ್ರೇಣಾಽಮಿತ್ರಕರ್ಶನ ।
ನಿಪಪಾತ ತದಾ ರಾಜಾ ಕ್ಷೀಣಪುಣ್ಯೋ ಯಥಾಽಮರಃ ॥೧೪॥

ಪುನಶ್ಚುಕ್ರೋಶ ಭೂಪಾಲೋ ವಿಶ್ವಾಮಿತ್ರೇತಿ ಚಾಸಕೃತ್ ।
ಪತಾಮಿ ರಕ್ಷ ದುಃಖಾರ್ತಂ ಸ್ವರ್ಗಾಚ್ಚಲಿತಮಾಶುಗಂ ॥೧೫॥

ತಸ್ಯ ತತ್ಕ್ರಂದಿತಂ ರಾಜನ್ ಪತತಃ ಕೌಶಿಕೋ ಮುನಿಃ ।
ಶ್ರುತ್ವಾ ತಿಷ್ಠೇತಿ ಹೋವಾಚ ಪತಂತಂ ವೀಕ್ಷ್ಯ ಭೂಪತಿಂ ॥೧೬॥

ವಚನಾತ್ತಸ್ಯ ತತ್ರೈವ ಸ್ಥಿತೋಽಸೌ ಗಗನೇ ನೃಪಃ ।
ಮುನೇಸ್ತಪಃ ಪ್ರಭಾವೇನ ಚಲಿತೋಽಪಿ ಸುರಾಲಯಾತ್ ॥೧೭॥

ವಿಶ್ವಾಮಿತ್ರೋಽಪ್ಯಪಃ ಸ್ಪೃಷ್ಟ್ವಾ ಚಕಾರೇಷ್ಟಿಂ ಸುವಿಸ್ತರಾಂ ।
ವಿಧಾತುಂ ನೂತನಾಂ ಸೃಷ್ಟಿಂ ಸ್ವರ್ಗಲೋಕಂ ದ್ವಿತೀಯಕಂ ॥೧೮॥

---

ಶತ್ರುನಾಶಕನಾದ ಜನಮೇಜಯನೇ ಕೇಳು—ದೇವೇಂದ್ರನು ಹೀಗೆ ಹೇಳುತ್ತಲು ತ್ರಿಶಂಕುರಾಜನು ಸ್ವರ್ಗದಿಂದ ಜಾರಿ, ಪುಣ್ಯವು ಮುಗಿದುಹೋದವನಾದ ದೇವತೆಯಂತೆ, ಕೆಳಗೆ ಬೀಳುತ್ತಿದ್ದನು. ॥೧೪॥

ತ್ರಿಶಂಕುರಾಜನು ಬಾರಿಬಾರಿಗೂ ಕೂಗಿಕೊಳ್ಳುತ್ತಾ, 'ಸ್ವರ್ಗದಿಂದ ನಾನು ಬೀಳುತ್ತಿರುತ್ತೇನೆ. ಓ ವಿಶ್ವಾಮಿತ್ರನೇ, ದುಃಖಿತನಾದ ನನ್ನನ್ನು ಕಾಪಾಡು!' ಎಂದು ಗಟ್ಟಿಯಾಗಿ ಅತ್ತನು. ॥೧೫॥

ಬೀಳುತ್ತಿರುವ ಆ ರಾಜನ ಅಳುವನ್ನು ವಿಶ್ವಾಮಿತ್ರ ಮುನಿಯು ಕೇಳಿ, ಬೀಳುತ್ತಿರುವ ಅವನನ್ನು ಕಂಡು, ಅಲ್ಲಿಯೇ ನಿಲ್ಲು. ಎಂದು ಹೇಳಿದನು! ॥೧೬॥

ತ್ರಿಶಂಕುರಾಜನು ಸ್ವರ್ಗದಿಂದ ಬೀಳುತ್ತಿದ್ದರೂ ಆ ವಿಶ್ವಾಮಿತ್ರಮುನಿಯ ತಪಸ್ಸಿನ ಮಹಿಮೆಯಿಂದ ಕೂಡಿದ ಅವನ ಮಾತಿನ ಬಲದಿಂದ ಆ ರಾಜನು ಆಕಾಶದಲ್ಲಿಯೇ ನಿಂತನು! ಆಮೇಲೆ ॥೧೭॥

ವಿಶ್ವಾಮಿತ್ರನು ಆಚಮನವನ್ನು ಮಾಡಿ ಹೊಸದಾದ ಎರಡನೆಯ ಸ್ವರ್ಗವನ್ನು ಸೃಷ್ಟಿಮಾಡುವುದಕ್ಕಾಗಿ ವಿಸ್ತಾರವಾದ ಒಂದು ಯಜ್ಞವನ್ನು ನೆರವೇರಿಸಲು ತಕ್ಕ ಏರ್ಪಾಡನ್ನು ಮಾಡಿದನು. ॥೧೮॥

**ತಸ್ಯೋದ್ಯಮಂ ತಥಾ ಜ್ಞಾತ್ವಾ ತ್ವರಿತಸ್ತು ಶಚೀಪತಿಃ ।**
**ತತ್ರಾಽಽಜಗಾಮ ಸಹಸಾ ಮುನಿಂ ಪ್ರತಿ ತು ಗಾಧಿಜಂ ॥೧೯॥**

**ಕಿಂ ಬ್ರಹ್ಮನ್ಕ್ರಿಯತೇ ಸಾಧೋ ಕಸ್ಮಾತ್ಕೋಪಸಮಾಕುಲಃ ।**
**ಅಲಂ ಸೃಷ್ಟ್ಯಾ ಮುನಿಶ್ರೇಷ್ಠ ಬ್ರೂಹಿ ಕಿಂ ಕರವಾಣಿ ತೇ ॥೨೦॥**

॥ ವಿಶ್ವಾಮಿತ್ರ ಉವಾಚ ॥

**ಸ್ವಂ ನಿವಾಸಂ ಮಹೀಪಾಲಂ ಚ್ಯುತಂ ತ್ವದ್ಭುವನಾದ್ವಿಭೋ ।**
**ನಯಸ್ವ ಪ್ರೀತಿಯೋಗೇನ ತ್ರಿಶಂಕುಂ ಚಾತಿದುಃಖಿತಂ ॥೨೧॥**

॥ ವ್ಯಾಸ ಉವಾಚ ॥

**ತಸ್ಯ ತಂ ನಿಶ್ಚಯಂ ಜ್ಞಾತ್ವಾ ತುರಾಷಾಡತಿಶಂಕಿತಃ ।**
**ತಪೋಬಲಂ ವಿದಿತ್ವೋಗ್ರಮೋಮಿತ್ಯೋ(ತ್ಯು)ವಾಚ ವಾಸವಃ॥೨೨॥**

---

ದೇವೇಂದ್ರನು ಹೊಸ ಸ್ವರ್ಗವನ್ನು ಸೃಷ್ಟಿಮಾಡುವ ಆ ವಿಶ್ವಾಮಿತ್ರನ ಪ್ರಯತ್ನವನ್ನು ತಿಳಿದು ಬೇಗನೆ ಆ ಗಾಧಿಪುತ್ರನಾದ ವಿಶ್ವಾಮಿತ್ರನ ಸಮೀಪಕ್ಕೆ ಬಂದನು. ॥೧೯॥

ದೇವೇಂದ್ರನು ಆ ಮುನಿಯನ್ನು ಕುರಿತು "ಬ್ರಹ್ಮಜ್ಞನೂ ಸಜ್ಜನನೂ ಆದ ವಿಶ್ವಾಮಿತ್ರನೇ, ನೀನು ಕೋಪದಿಂದ ಕೂಡಿರಲು ಕಾರಣವೇನು? ನೀನು ಹೊಸ ಸೃಷ್ಟಿಯನ್ನು ಮಾಡಬೇಡ. ನಿನಗೆ ಇಷ್ಟವಾದುದನ್ನು ಹೇಳು. ನಾನು ನಡೆಯಿಸಿಕೊಡುವೆನು!" ಎಂದನು. ॥೨೦॥

ವಿಶ್ವಾಮಿತ್ರನು ಹೇಳಿದನು—ಓ ದೇವೇಂದ್ರನೇ, ತ್ರಿಶಂಕುರಾಜನು ನಿನ್ನ ಲೋಕದಿಂದ ಬಿದ್ದುಹೋಗಿರುವನು. ಅತ್ಯಂತ ದುಃಖದಿಂದ ಕೂಡಿರುವ ಅವನನ್ನು ಪ್ರೀತಿಯಿಂದ ನಿನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗು. ॥೨೧॥

ವ್ಯಾಸಮುನಿಯು ಹೇಳಿದನು --ಆ ವಿಶ್ವಾಮಿತ್ರನ ಮನೋನಿಶ್ಚಯವನ್ನು ತಿಳಿದು ದೇವೇಂದ್ರನು ಸಂದೇಹಪಟ್ಟವನಾದರೂ ಆ ಮುನಿಯ ಕ್ರೂರವಾದ ತಪಸ್ಸಿನ ಬಲವನ್ನು ತಿಳಿದು, ಹಾಗೆಯೇ ಆಗಲಿ! ಎಂದು ಒಪ್ಪಿಕೊಂಡನು. ॥೨೨॥

ದಿವ್ಯದೇಹಂ ನೃಪಂ ಕೃತ್ವಾ ವಿಮಾನವರಸಂಸ್ಥಿತಂ ।
ಆಪೃಚ್ಛ್ಯ ಕೌಶಿಕಂ ಶಕ್ರೋಽಗಮನ್ನಿಜಪುರೀಂ ತದಾ ॥೨೩॥

ಗತೇ ಶಕ್ರೇ ತು ವೈ ಸ್ವರ್ಗಂ ತ್ರಿಶಂಕುಸಹಿತೇ ತತಃ ।
ವಿಶ್ವಾಮಿತ್ರಃ ಸುಖಂ ಪ್ರಾಪ್ಯ ಸ್ವಾಶ್ರಮೇ ಸುಸ್ಥಿರೋಽಭವತ್ ॥೨೪॥

ಹರಿಶ್ಚಂದ್ರೋಽಥ ತಚ್ಛ್ರುತ್ವಾ ವಿಶ್ವಾಮಿತ್ರೋಪಕಾರಕಂ ।
ಪಿತುಃ ಸ್ವರ್ಗಮನಂ ಕಾಮಂ ಮುದಿತೋ ರಾಜ್ಯಮನ್ವಶಾತ್ ॥೨೫॥

ಅಯೋಧ್ಯಾಧಿಪತಿಃ ಕ್ರೀಡಾಂ ಚಕಾರ ಸಹ ಭಾರ್ಯಯಾ ।
ರೂಪಯೌವನಚಾತುರ್ಯಯುಕ್ತಯಾ ಪ್ರೀತಿಸಂಯುತಃ ॥೨೬॥

---

ದೇವೇಂದ್ರನು ತ್ರಿಶಂಕುರಾಜನನ್ನು ದೇವಶರೀರ ಉಳ್ಳವನನ್ನಾಗಿ ಮಾಡಿ, ವಿಮಾನದಲ್ಲಿ ಕುಳ್ಳಿರಿಸಿಕೊಂಡು, ವಿಶ್ವಾಮಿತ್ರನ ಅಪ್ಪಣೆಯನ್ನೂ ಕೇಳಿ ಪಡೆದು ಕೊಂಡು, ತನ್ನ ಪಟ್ಟಣಕ್ಕೆ ಪ್ರಯಾಣಮಾಡಿದನು. ||೨೩||

ದೇವೇಂದ್ರನು ತ್ರಿಶಂಕುರಾಜನೊಡನೆ ಸ್ವರ್ಗಕ್ಕೆ ಹೋಗುತ್ತಲು, ವಿಶ್ವಾಮಿತ್ರನು ಸುಖವನ್ನು ಹೊಂದಿ ತನ್ನ ಆಶ್ರಮದಲ್ಲಿ ಪ್ರತ್ಯುಪಕಾರದಿಂದ ಉಂಟಾದ ಮನಸ್ಸಮಾಧಾನದಿಂದ ಸ್ಥಿರವಾಗಿದ್ದನು. ಸ್ಕಾಂದಪುರಾಣದಲ್ಲಿ ಬ್ರಹ್ಮನೂ ಬಂದು ಹೇಳಿದಮೇಲೆ ವಿಶ್ವಾಮಿತ್ರನು ಬೇರೆ ಸ್ವರ್ಗವನ್ನು ಸೃಷ್ಟಿಮಾಡುವುದನ್ನು ಬಿಟ್ಟನೆಂದೂ, ತ್ರಿಶಂಕುವು ಬ್ರಹ್ಮನ ಅನುಗ್ರಹದಿಂದ ತನ್ನ ಶರೀರದಿಂವಲೇ ಸ್ವರ್ಗಕ್ಕೆ ಹೋದನೆಂದೂ ಹೇಳಿದೆ. ||೨೪||

ಅತ್ತ ಹರಿಶ್ಚಂದ್ರನು ತನ್ನ ತಂದೆಯಾದ ತ್ರಿಶಂಕುವಿಗೆ ವಿಶ್ವಾಮಿತ್ರನು ಮಾಡಿದ ಉಪಕಾರವನ್ನೂ, ತಂದೆಯು ಸ್ವರ್ಗಕ್ಕೆ ಹೋದುದನ್ನೂ, ಕೇಳಿ ಬಹಳ ಸಂತೋಷಪಟ್ಟು ರಾಜ್ಯವನ್ನು ಕಾಪಾಡುತ್ತಿದ್ದನು. ||೨೫||

ಅಯೋಧ್ಯಾಧಿಪತಿಯಾದ ಹರಿಶ್ಚಂದ್ರನು ರೂಪಯೌವನ ಚಮತ್ಕಾರ ಇವುಗಳಿಂದ ಕೂಡಿದ ತನ್ನ ಹೆಂಡಿತಿಯೊಡನೆ ಪ್ರೀತಿಯಿಂದ ಕ್ರೀಡಿಸುತ್ತಿದ್ದನು. ||೨೬||

ಅತೀತಕಾಲೇ ಯುವತೀ ನ ಸಾ ಗರ್ಭವತೀ ಹ್ಯಭೂತ್ ।
ತದಾ ಚಿಂತಾಽಽತುರೋ ರಾಜಾ ಬಭೂವಾಽತೀವ ದುಃಖಿತಃ ॥೨೭॥

ವಸಿಷ್ಠಸ್ಯಾಶ್ರಮಂ ಗತ್ವಾ ಪ್ರಣಮ್ಯ ಶಿರಸಾ ಮುನಿಂ ।
ಅನಪತ್ಯತ್ವಜಾಂ ಚಿಂತಾಂ ಗುರವೇ ಸಮವೇದಯತ್ ॥೨೮॥

ದೈವಜ್ಞೋಽಸಿ ಭವಾನ್ಕಾಮಂ ಮಂತ್ರವಿದ್ಯಾವಿಶಾರದಃ ।
ಉಪಾಯಂ ಕುರು ಧರ್ಮಜ್ಞ ಸಂತತೇರ್ಮಮ ಮಾನದ ॥೨೯॥

ಅಪುತ್ರಸ್ಯ ಗತಿರ್ನಾಸ್ತಿ ಜಾನಾಸಿ ದ್ವಿಜಸತ್ತಮ ।
ಕಸ್ಮಾದುಪೇಕ್ಷಸೇ ಜಾನನ್ ದುಃಖಂ ಮಮ ಚ ಶಕ್ತಿಮಾನ್ ॥೩೦॥

ಕಲವಿಂಕಾಸ್ತ್ವಮೀ ಧನ್ಯಾ ಯೇ ಶಿಶುಂ ಲಾಲಯಂತಿ ಹಿ ।
ಮಂದಭಾಗ್ಯೋಽಹಮನಿಶಂ ಚಿಂತಯಾಮಿ ದಿವಾನಿಶಂ ॥೩೧॥

---

ಅನೇಕ ದಿವಸಗಳು ಕಳೆದರೂ ಆ ರಾಜನ ಪತ್ನಿಯು ಗರ್ಭಿಣಿಯಾಗಲಿಲ್ಲ. ಆಗ ಗರ್ಭಿಣಿಯಾಗಬಹುದಾದ ಯೌವನಕಾಲವೂ ಕಳೆದುಹೋಗುತ್ತಿರಲು, ರಾಜನು ಮನದಲ್ಲಿ ಚಿಂತಿಸುತ್ತಾ ವಿಶೇಷವಾಗಿ ದುಃಖಿಸುತ್ತಿದ್ದನು. ॥೨೭॥

ರಾಜನು ತನ್ನ ಗುರುವಾದ ವಸಿಷ್ಠನ ಆಶ್ರಮಕ್ಕೆ ಹೋಗಿ ಆ ಮುನಿಗೆ ನಮಸ್ಕರಿಸಿ ಮಕ್ಕಳಿಲ್ಲದೆ ಇರುವುದರಿಂದ ಉಂಟಾಗಿರುವ ತನ್ನ ಮನಸ್ಸಿನ ಚಿಂತೆಯನ್ನು ಆ ಗುರುವಿಗೆ ಹೇಳಿಕೊಂಡನು. ॥೨೮॥

ಧರ್ಮಸೂಕ್ಷ್ಮವನ್ನು ತಿಳಿದಿರುವ ಓ ಗುರುವೇ, ನೀನು ಅದೃಷ್ಟದ ಸ್ವರೂಪವನ್ನು ತಿಳಿದಿರುವೆ. ಮಂತ್ರವಿದ್ಯೆಯೂ ನಿನಗೆ ಚೆನ್ನಾಗಿ ಬಂದಿರುವುದು. ಮಕ್ಕಳಿಲ್ಲದ ನನಗೆ ಮಕ್ಕಳಾಗುವುದಕ್ಕೆ ತಕ್ಕ ಉಪಾಯವನ್ನು ಮಾಡು. ॥೨೯॥

ಓ ಬ್ರಾಹ್ಮಣಶ್ರೇಷ್ಠನೇ, ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲವೆಂಬುದನ್ನು ನೀನು ತಿಳಿದಿರುವೆ. ಅಲ್ಲದೆ ನನ್ನ ದುಃಖವನ್ನು ನಿವಾರಣೆ ಮಾಡಲು ಶಕ್ತಿಯುಳ್ಳವನಾಗಿದ್ದರೂ ನೀನು ಯಾವ ಕಾರಣದಿಂದ ಉದಾಸೀನನಾಗಿರುವೆ ? ಮರಿಗಳನ್ನು ಪ್ರೀತಿಸಿ ಮುದ್ದಿಸುತ್ತಿರುವ ಈ ಗುಬ್ಬಿಗಳು ಕೂಡ ಈ ವಿಷಯದಲ್ಲಿ ನನಗಿಂತಲೂ ಹೆಚ್ಚು ಪುಣ್ಯವನ್ನು ಮಾಡಿದವುಗಳು. ಅಂತಹ ಪುಣ್ಯವಿಲ್ಲದ ನಾನು ಹಗಲೂ ರಾತ್ರಿಯೂ ಯಾವಾಗಲೂ ಮನಸ್ಸಿನಲ್ಲಿ ದುಃಖಿಸುತ್ತಿರುವೆನು. ॥೩೦-೩೧॥

|| ವ್ಯಾಸ ಉವಾಚ ||

ಇತ್ಯಾಕರ್ಣ್ಯ ಮುನಿಸ್ತಸ್ಯ ನಿರ್ವೇದಮಿಶ್ರಿತಂ ವಚಃ ।
ಸಂಚಿಂತ್ಯ ಮನಸಾ ಸಮ್ಯಕ್ ತಮುವಾಚ ವಿಧೇಃ ಸುತಃ ||೩೨||

|| ವಸಿಷ್ಠ ಉವಾಚ ||

ಸತ್ಯಂ ಬ್ರೂಷೇ ಮಹಾರಾಜ ಸಂಸಾರೇಽಸ್ಮಿನ್ನ ವಿದ್ಯತೇ ।
ಅನಪತ್ಯತ್ವಜಂ ದುಃಖಂ ಯತ್ತಥಾ ದುಃಖಮದ್ಭುತಂ ||೩೩||

ತಸ್ಮಾತ್ತ್ವಮಪಿ ರಾಜೇಂದ್ರ ವರುಣಂ ಯಾದಸಾಂಪತಿಂ ।
ಸಮಾರಾಧಯ ಯತ್ನೇನ ಸ ತೇ ಕಾರ್ಯಂ ಕರಿಷ್ಯತಿ ||೩೪||

ವರುಣಾದಧಿಕೋ ನಾಸ್ತಿ ದೇವಃ ಸಂತಾನದಾಯಕಃ ।
ತಮಾರಾಧಯ ಧರ್ಮಿಷ್ಠ ಕಾರ್ಯಸಿದ್ಧಿರ್ಭವಿಷ್ಯತಿ ||೩೫||

ದೈವಂ ಪುರುಷಕಾರಶ್ಚ ಮಾನನೀಯಾವಿಮೌ ನೃಭಿಃ ।
ಉದ್ಯಮೇನ ವಿನಾ ಕಾರ್ಯಸಿದ್ಧಿಃ ಸಂಜಾಯತೇ ಕಥಂ ||೩೬||

---

ವ್ಯಾಸಮುನಿಯು ಹೇಳಿದನು—ಬ್ರಹ್ಮಪುತ್ರನಾದ ವಸಿಷ್ಠಮುನಿಯು ಹರಿಶ್ಚಂದ್ರನು ಹೇಳಿದ ಆ ದುಃಖದ ಮಾತನ್ನು ಕೇಳಿ, ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ, ಆ ರಾಜನನ್ನು ಕುರಿತು ಹೀಗೆ ಹೇಳಿದನು. ||೩೨||

ವಸಿಷ್ಠನು ಹೇಳಿದನು—ಎಲೈ ಮಹಾರಾಜನೇ, ನೀನು ನಿಜವಾದ ಮಾತನ್ನು ಹೇಳುತ್ತೀಯೆ. ಈ ಸಂಸಾರದಲ್ಲಿ ಮಕ್ಕಳಿಲ್ಲದ ದುಃಖಕ್ಕಿಂತಲು ಹೆಚ್ಚಾದ ದುಃಖವಿನ್ನಿರುವುದಿಲ್ಲ. ಆ ಕಾರಣದಿಂದ ಎಲೈ ರಾಜಶ್ರೇಷ್ಠನೇ, ನೀನೂ ಕೂಡ ಜಲಜಂತುಗಳಿಗೆ ಅಧಿಪತಿಯಾದ ವರುಣದೇವನನ್ನು ಪ್ರಯತ್ನಪೂರ್ವಕವಾಗಿ ಪೂಜಿಸು. ಅವನು ನಿನ್ನ ಕಾರ್ಯವನ್ನು ಮಾಡಿಕೊಡುವನು. ||೩೩-೩೪||

ಸಂತಾನವನ್ನು ಕೊಡತಕ್ಕ ದೇವತೆಗಳಲ್ಲಿ ವರುಣನಿಗಿಂತ ದೊಡ್ಡ ದೇವನಿಲ್ಲ. ಧರ್ಮಿಷ್ಠನಾದ ರಾಜನೇ, ಅವನನ್ನು ಪೂಜೆಮಾಡುವ ನಿನ್ನ ಕಾರ್ಯವು ಸಿದ್ಧಿಸುವುದು. ||೩೫||

ಮನುಷ್ಯರು ದೈವ (ಅದೃಷ್ಟ) ಕ್ಕೂ ಪುರುಷಪ್ರಯತ್ನಕ್ಕೂ ಗೌರವವನ್ನು ಕೊಡಬೇಕು. ಉದ್ಯೋಗ (ಪುರುಷಪ್ರಯತ್ನ)ವಿಲ್ಲದೆ ಕಾರ್ಯವು ಸಿದ್ಧಿಯಾಗುವು

ನ್ಯಾಯತಸ್ತು ನರೈಃ ಕಾರ್ಯ ಉದ್ಯಮಸ್ತತ್ತ್ವದರ್ಶಿಭಿಃ ।
ಕೃತೇ ತಸ್ಮಿನ್ಭವೇತ್ಸಿದ್ಧಿ ರ್ನಾಽನ್ಯಥಾ ನೃಪಸತ್ತಮ ॥೩೭॥

ಇತಿ ತಸ್ಯ ವಚಃ ಶ್ರುತ್ವಾ ಗುರೋರಮಿತತೇಜಸಃ ।
ಪ್ರಣಮ್ಯ ನಿರ್ಯಯೌ ರಾಜಾ ತಪಸೇ ಕೃತನಿಶ್ಚಯಃ ॥೩೮॥

ಗಂಗಾತೀರೇ ಶುಭೇ ಸ್ಥಾನೇ ಕೃತಪದ್ಮಾಸನೋ ನೃಪಃ ।
ಧ್ಯಾಯನ್ಪಾಶಧರಂ ಚಿತ್ತೇ ಚಚಾರ ದುಶ್ಚರಂ ತಪಃ ॥೩೯॥

ಏವಂ ತಪಸ್ಯತಸ್ತಸ್ಯ ಪ್ರಚೇತಾ ದೃಷ್ಟಿಗೋಚರಃ ।
ಕೃಪಯಾಽಭೂನ್ಮಹಾರಾಜ ಪ್ರಸನ್ನಮುಖಪಂಕಜಃ ॥೪೦॥

ಹರಿಶ್ಚಂದ್ರಮುವಾಚೇದಂ ವಚನಂ ಯಾದಸಾಂಪತಿಃ ।
ವರಂ ವರಯ ಧರ್ಮಜ್ಞ ತುಷ್ಟೋಽಸ್ಮಿ ತಪಸಾ ತವ ॥೪೧॥

---

ದಿಲ್ಲ. ತತ್ವವನ್ನು ತಿಳಿದವರು ನ್ಯಾಯಕ್ಕನುಸಾರವಾಗಿ ಪುರುಷಪ್ರಯತ್ನವನ್ನು ಮಾಡಬೇಕು. ರಾಜಶ್ರೇಷ್ಠನೇ, ಪುರುಷಪ್ರಯತ್ನಮಾಡಿದರೆ ಕಾರ್ಯಸಿದ್ಧಿಯಾಗುವುದು. ಇಲ್ಲದಿದ್ದರೆ ಇಲ್ಲ. ॥೩೬-೩೭॥

ಈ ರೀತಿಯಲ್ಲಿ ಮಹಾತೇಜಸ್ವಿಯಾದ ಗುರುವಾದ ವಸಿಷ್ಠಮುನಿಯ ಮಾತನ್ನು ಕೇಳಿ ರಾಜನು ಆ ಮುನಿಗೆ ನಮಸ್ಕರಿಸಿ ತಪಸ್ಸುಮಾಡಬೇಕೆಂದು ನಿಶ್ಚಯಿಸಿ ಹೊರಟನು. ಗಂಗಾನದಿಯ ದಡದಲ್ಲಿ ಪರಿಶುದ್ಧವಾದ ಸ್ಥಳದಲ್ಲಿ ಪದ್ಮಾಸನದಲ್ಲಿ ಕುಳಿತು ಮನಸ್ಸಿನಲ್ಲಿ ಪಾಶಹಸ್ತನಾದ ವರುಣದೇವನನ್ನು ಧ್ಯಾನಿಸುತ್ತ ಕಠಿನವಾದ ತಪಸ್ಸನ್ನು ಮಾಡಿದನು. ॥೩೮-೩೯॥

ಹೀಗೆ ತಪಸ್ಸುಮಾಡುತ್ತಿರುವ ರಾಜನಿಗೆ ಸಂತೋಷದಿಂದಕೂಡಿದ ಮುಖಕಮಲಉಳ್ಳವನಾದ ವರುಣದೇವನು ದಯೆಯಿಂದ ಪ್ರತ್ಯಕ್ಷನಾದನು. ॥೪೦॥

ಆ ವರುಣದೇವನು ಹರಿಶ್ಚಂದ್ರನನ್ನು ಕುರಿತು 'ಎಲೈ ಧರ್ಮವನ್ನು ತಿಳಿದಿರುವ ರಾಜನೇ ನಿನ್ನ ತಪಸ್ಸಿಗೆ ನಾನು ಸಂತೋಷಪಟ್ಟೆನು. ಬೇಕಾದವ ರವನ್ನು ಕೇಳು.' ಎಂದು ಹೇಳಿದನು. ॥೪೧॥

|| ರಾಜೋವಾಚ ||

ಅನಪತ್ಯೋಽಸ್ಮಿ ದೇವೇಶ ಪುತ್ರಂ ದೇಹಿ ಸುಖಪ್ರದಂ ।
ಋಣತ್ರಯಾಪಹಾರಾರ್ಥಮುದ್ಯಮೋಽಯಂ ಮಯಾ ಕೃತಃ ॥೪೨॥

ನೃಪಸ್ಯ ವಚನಂ ಶ್ರುತ್ವಾ ಪ್ರಗಲ್ಭಂ ದುಃಖಿತಸ್ಯ ಚ ।
ಸ್ಮಿತಪೂರ್ವಂ ತತಃ ಪಾಶೀ ತಮಾಹ ಪುರತಃ ಸ್ಥಿತಂ ॥೪೩॥

|| ವರುಣ ಉವಾಚ ||

ಪುತ್ರೋ ಯದಿ ಭವೇದ್ರಾಜನ್ ಗುಣೀ ಮನಸಿ ವಾಂಛಿತಃ ।
ಸಿದ್ಧೇ ಕಾರ್ಯೇ ತತಃ ಪಶ್ಚಾತ್ಕಿಂಕರಿಷ್ಯಸಿ ಮೇ ಪ್ರಿಯಂ ॥೪೪॥

ಯದಿ ತ್ವಂ ತೇನ ಪುತ್ರೇಣ ಮಾಂ ಯಜೇಥಾ ವಿಶಂಕಿತಃ ।
ಪಶುಬಂಧೇನ ತೇನೈವ ದದಾಮಿ ನೃಪ ತೇ ವರಂ ॥೪೫॥

|| ರಾಜೋವಾಚ ||

ದೇವ ಮೇ ಽಸ್ತು ವಂಧ್ಯತ್ವಂ ಯಜಿಷ್ಯೇಽಹಂ ಜಲಾಧಿಪಂ ।
ಪಶುಂ ಕೃತ್ವಾ ಸುತಂ ಪುತ್ರಂ ಸತ್ಯಮೇತದ್ಬ್ರವೀಮಿ ತೇ ॥೪೬॥

---

ರಾಜನು ಹೇಳಿದನು–ಎಲೈ ದೇವನೇ, ನನಗೆ ಮಕ್ಕಳಿಲ್ಲವು. ಸುಖವನ್ನುಂಟು ಮಾಡುವ ಮಗನನ್ನು ಕೊಡು. ದೇವಋಷಿ ಪಿತೃಋಣಗಳನ್ನು ತೀರಿಸುವುದಕ್ಕಾಗಿ ನಾನು ಈ ತಪಸ್ಸನ್ನು ಮಾಡಿದೆನು. ॥೪೨॥

ದುಃಖಉಳ್ಳವನೂ ವಿವೇಕಿಯೂ ಆದ ರಾಜನ ಮಾತನ್ನು ಕೇಳಿ ವರುಣನು ನಗುತ್ತ, ಮುಂದೆ ನಿಂತಿದ್ದ ಅವನನ್ನು ಕುರಿತು ಹೀಗೆ ಮಾತನಾಡಿದನು. ॥೪೩॥

ವರುಣನು ಹೇಳಿದನು–ಎಲೈ ರಾಜನೇ, ಗುಣವಂತನಾದ ನಿನ್ನ ಮನಸ್ಸಿನಲ್ಲಿ ಇಷ್ಟಪಟ್ಟ ಪುತ್ರನು ಹುಟ್ಟಿದರೆ. ನಿನ್ನ ಕಾರ್ಯವು ಸಿದ್ಧಿಸಿದ ಮೇಲೆ ನನಗೆ ಹಿತವಾದುದನ್ನು ನೀನೇನನ್ನು ಮಾಡುವೆ? ನೀನು ಆ ಮಗನನ್ನೇ ಯಜ್ಞದಲ್ಲಿ ಪಶುವನ್ನಾಗಿ ಮಾಡಿ ಸಂದೇಹಪಡದೆ ನನ್ನನ್ನು ಪೂಜಿಸುವುದಾದರೆ, ಎಲೈ ರಾಜನೇ, ನಾನು ನಿನಗೆ ವರವನ್ನು ಕೊಡುವೆನು. ॥೪೪-೪೫॥

ರಾಜನು ಹೇಳಿದನು—ವರುಣದೇವನೇ ನೀನು ಹೇಳಿದಂತೆ ಮಗನನ್ನೇ ಯಜ್ಞಪಶುವನ್ನಾಗಿ ಮಾಡಿ ಯಜ್ಞಮಾಡುವೆನು. ಇದು ನಿಜವು. ಹೇಗಾದರೂ

ವಂಧ್ಯತ್ವೇ ಪರಮಂ ದುಃಖಮಸಹ್ಯಂ ಭುವಿ ಮಾನದ ।
ಶೋಕಾಗ್ನಿಶಮನಂ ನೃಣಾಂ ತಸ್ಮಾದ್ದೇಹಿ ಸುತಂ ಶುಭಂ ॥೪೭॥

|| ವರುಣ ಉವಾಚ ||

ಭವಿಷ್ಯತಿ ಸುತಃ ಕಾಮಂ ರಾಜನ್ಗಚ್ಛ ಗೃಹಾಯ ವೈ ।
ಸತ್ಯಂ ತದ್ವಚನಂ ಕಾರ್ಯಂ ಯದ್ಬ್ರವೀಷಿ ಮಮಾಗ್ರತಃ ॥೪೮॥

|| ವ್ಯಾಸ ಉವಾಚ ||

ಇತ್ಯುಕ್ತೋ ವರುಣೇನಾಽಸೌ ಹರಿಶ್ಚಂದ್ರೋ ಗೃಹಂ ಯಯೌ ।
ಭಾರ್ಯಾಯೈ ಕಥಯಾಮಾಸ ವೃತ್ತಾಂತಂ ವರದಾನಜಂ ॥೪೯॥

ತಸ್ಯ ಭಾರ್ಯಾಶತಂ ಪೂರ್ಣಂ ಬಭೂವಾತಿಮನೋಹರಂ ।
ಪಟ್ಟರಾಜ್ಞೀ ಶುಭಾ ಶೈಬ್ಯಾ ಧರ್ಮಪತ್ನೀ ಪತಿವ್ರತಾ ॥೫೦॥

ಕಾಲೇ ಗತೇಽಥ ಸಾ ಗರ್ಭಂ ದಧಾರ ವರವರ್ಣಿನೀ ।
ಬಭೂವ ಮುದಿತೋ ರಾಜಾ ಶ್ರುತ್ವಾ ದೋಹದಚೇಷ್ಟಿತಂ ॥೫೧॥

---

ರಾಜನು ಪುತ್ರಹೀನನೆಂಬ ಮಾತು ಇರಬಾರದು. ಓ ಗೌರವವನನ್ನು ಕೊಡತಕ್ಕ ದೇವನೇ, ಭೂಮಿಯಲ್ಲಿ ಜನರು ರಾಜನು ಮಕ್ಕಳಿಲ್ಲದವನು ಎಂದರೆ ಅತ್ಯಂತ ದುಃಖವಾಗುವುದು. ಆದುದರಿಂದ ಮನುಷ್ಯರ ದುಃಖಾಗ್ನಿಯನ್ನು ಶಾಂತಮಾಡುವ ಮಂಗಳಕರನಾದ ಪುತ್ರನನ್ನು ಕೊಡು. ||೪೬-೪೭||

ವರುಣನು ಹೇಳಿದನು—ಎಲೈ ರಾಜನೇ, ನಿನಗೆ ಇಷ್ಟನಾದ ಮಗನು ಹುಟ್ಟುವನು. ಮನೆಗೆ ಹೋಗು. ಆದರೆ ನನ್ನ ಇದುರಿಗೆ ನೀನು ಹೇಳಿದ ಮಾತನ್ನು ಮಾತ್ರ ನಿಜವಾಗಿ ನಡೆಯಿಸಬೇಕು. ||೪೮||

ವ್ಯಾಸರು ಹೇಳಿದರು—ಹೀಗೆಂದು ವರುಣನು ಹೇಳುತ್ತಲು ಹರಿಶ್ಚಂದ್ರನು ಒಪ್ಪಿ ಮನೆಗೆ ಹೋದನು. ತನ್ನ ಹೆಂಡಿತಿಗೆ ವರುಣನು ವರವನ್ನು ಕೊಟ್ಟ ವೃತ್ತಾಂತವನ್ನು ಹೇಳಿದನು. ||೪೯||

ಆ ಹರಿಶ್ಚಂದ್ರರಾಜನಿಗೆ ಸುಂದರಿಯರಾದ ನೂರು ಜನ ಹೆಂಡಿರಿದ್ದರು. ಅವರಲ್ಲಿ ಶಿಬರಾಜನ ಮಗಳಾದ ಶೈಬ್ಯೆ ಎಂಬವಳು ಧರ್ಮಪತ್ನಿಯಾಗಿಯೂ ಪತಿವ್ರತೆಯಾಗಿಯೂ ಮಂಗಳಕರವಾದ ಲಕ್ಷಣಗಳಿಂದ ಕೂಡಿದ ಪಟ್ಟದ ರಾಣಿಯಾಗಿಯೂ ಇದ್ದಳು. ಆ ಉತ್ತಮ ಸ್ತ್ರೀಯಾದ ಶೈಬ್ಯೆಯು ಕೆಲವು ದಿನಗಳ ಮೇಲೆ ಗರ್ಭವನ್ನು

ಕಾರಯಾಮಾಸ ವಿಧಿವತ್ಸಂಸ್ಕಾರಾನ್ನೃಪತಿಸ್ತದಾ ।
ಮಾಸೇಽಥ ದಶಮೇ ಪೂರ್ಣೇ ಸುಷುವೇ ಸಾ ಶುಭೇ ದಿನೇ ॥೫೨॥

ತಾರಾಗ್ರಹಬಲೋಪೇತೇ ಪುತ್ರಂ ದೇವಸುತೋಪಮಂ ।
ಪುತ್ರೇ ಜಾತೇ ನೃಪಃ ಸ್ನಾತ್ವಾ ಬ್ರಾಹ್ಮಣೈಃ ಪರಿವೇಷ್ಟಿತಃ ॥೫೩॥

ಚಕಾರ ಜಾತಕರ್ಮಾಽಽದೌ ದದೌ ದಾನಾನಿ ಭೂರಿಶಃ ।
ರಾಜ್ಞಶ್ಚಾಽತಿಪ್ರಮೋದೋಽಭೂ ತ್ಪುತ್ರಜನ್ಮಸಮುದ್ಭವಃ ॥೫೪॥

ಬಭೂವ ಪರಮೋದಾರೋ ಧನಧಾನ್ಯಸಮನ್ವಿತಃ ।
ವಿಶೇಷದಾನಸಂಯುಕ್ತೋ ಗೀತವಾದಿತ್ರಸಂಕುಲಃ ॥೫೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಚತುರ್ದಶೋಽಧ್ಯಾಯಃ

---

ಧರಿಸಿದಳು. ಗರ್ಭದ ಚಿಹ್ನೆಗಳನ್ನು (ಗರ್ಭಿಣಿಯ ಬಯಕೆಗಳನ್ನು) ಕೇಳಿ ರಾಜನು ಸಂತೋಷಹೊಂದಿದನು ||೫೦.-೫೧||

ಆಗ ರಾಜನು ವಿಧಿಗನುಸಾರವಾಗಿ ಪುಂಸವನಾದಿ ಗರ್ಭಸಂಸ್ಕಾರ ಕರ್ಮಗಳನ್ನು ಮಾಡಿಸಿದನು. ಹತ್ತನೆಯ ತಿಂಗಳು ಪೂರ್ಣವಾಗುತ್ತಿರಲಾಗಿ ಉತ್ತಮವಾದ ನಕ್ಷತ್ರ ಮತ್ತು ಗ್ರಹಗಳ ಬಲದಿಂದ ಕೂಡಿದ ಶುಭದಿನದಲ್ಲಿ ಆ ರಾಣಿಯು ದೇವತೆಗೆ ಸಮಾನವಾದ ಮಗನನ್ನು ಪ್ರಸವಿಸಿದಳು. ||೫೨||

ಮಗನು ಹುಟ್ಟುತ್ತಲು ರಾಜನು ಸ್ನಾನಮಾಡಿ ಬ್ರಾಹ್ಮಣರಿಂದ ಕೂಡಿದವನಾಗಿ ಆದಿಯಲ್ಲಿ ಜಾತ ಕರ್ಮವೆಂಬ ಸಂಸ್ಕಾರವನ್ನು ಮಾಡಿ, ಅನೇಕದಾನಗಳನ್ನು ಮಾಡಿದನು. ಮಗನು ಹುಟ್ಟಿದುದರಿಂದ ಉಂಟಾದ ಉತ್ಸವವು ರಾಜನಿಗೆ ಸಂತೋಷವನ್ನುಂಟುಮಾಡಿತು. ||೫೩-೫೪||

ರಾಜನು ಧನಧಾನ್ಯಗಳಿಂದ ಕೂಡಿ ವಿಶೇಷ ಉದಾರಿಯಾಗಿದ್ದನು. ಗೀತವಾದ್ಯಾದಿ ಸಂಭ್ರಮಗಳಿಂದ ವಿಶೇಷವಾಗಿ ದಾನಗಳನ್ನೂ ಮಾಡಿದನು. ||೫೫||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

|| ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಪ್ರವೃತ್ತೇ ಸದನೇ ತಸ್ಯ ರಾಜ್ಞಃ ಪುತ್ರಮಹೋತ್ಸವೇ ।**
**ಆಜಗಾಮ ತದಾ ಪಾಶೀ ವಿಪ್ರವೇಷಧರಃ ಶುಭಃ ॥೧॥**

**ಸ್ವಸ್ತೀತ್ಯುಕ್ತ್ವಾ ನೃಪಂ ಪ್ರಾಹ ವರುಣೋಽಹಂ ನಿಶಾಮಯ ।**
**ಪುತ್ರೋ ಜಾತಸ್ತವಾಧೀಶ ಯಜಾऽನೇನ ನೃಪಾऽಽಶು ಮಾಂ ॥೨॥**

**ಸತ್ಯಂ ಕುರು ವಚೋ ರಾಜನ್ಯ ತ್ತ್ವೋಕ್ತಂ ಭವತಾ ಪುರಾ ।**
**ವಂಧ್ಯತ್ವಂ ತು ಗತಂ ತೇಽದ್ಯ ವರದಾನೇನ ಮೇ ಕಿಲ ॥೩॥**

---

ವ್ಯಾಸಮುನಿಯು ಹೇಳಿದನು—ಆ ಹರಿಶ್ಚಂದ್ರರಾಜನ ಅರಮನೆಯಲ್ಲಿ ಪುತ್ರೋತ್ಸವವು ನಡೆಯುತ್ತಿರುವಾಗ ಪಾಶಹಸ್ತನಾದ ವರುಣನು ಶುಭವಾದ ಬ್ರಾಹ್ಮಣ ವೇಷದಿಂದ ಬಂದನು. ||೧||

ರಾಜನನ್ನು ಕುರಿತು, ನಿನಗೆ ಮಂಗಳವಾಗಲಿ. ಎಂದು ಹೇಳಿ, ಎಲೈ ರಾಜನೇ, ಕೇಳು. ನಾನು ವರುಣನು. ನಿನಗೆ ಮಗನು ಹುಟ್ಟಿದನು. ಬೇಗನೆ ಇವನನ್ನು ಪಶುವನ್ನಾಗಿ ಮಾಡಿ ನನ್ನನ್ನು ಸಂತೋಷಪಡಿಸಲು ಯಜ್ಞವನ್ನು ಮಾಡು.

ಎಲೈ ರಾಜನೇ, ನೀನು ಹಿಂದೆ ಹೇಳಿದ ಮಾತನ್ನು ನಿಜವಾಗಿ ಮಾಡು. ನಾನು ವರವನ್ನು ಕೊಟ್ಟುದರಿಂದ ನಿನ್ನ ಬಂಜೆತನವು ನಿವಾರಣೆಯಾಯಿತಲ್ಲವೇ? (ನೀನು ನಿನ್ನ ಬಂಜೆತನವು ನಿವಾರಣೆಯಾಗಬೇಕೆಂದು ವರವನ್ನು ಕೇಳಿದೆ. ಮಗನು ಬದುಕಿರಬೇಕೆಂದು ಅಲ್ಲ! ಎಂಬುದೇ ಅಭಿಪ್ರಾಯವು). ||೩||

ಇತಿ ತಸ್ಯ ವಚಃ ಶ್ರುತ್ವಾ ರಾಜಾ ಚಿಂತಾಂ ಚಕಾರ ಹ ।
ಕಥಂ ಹನ್ಮಿ ಸುತಂ ಜಾತಂ ಜಲಜೇನ ಸಮಾನನಂ ॥೪॥

ಲೋಕಪಾಲಃ ಸಮಾಯಾತೋ ವಿಪ್ರವೇಷೇಣ ವೀರ್ಯವಾನ್ ।
ನ ದೇವಹೇಲನಂ ಕಾರ್ಯಂ ಸರ್ವಥಾ ಶುಭಮಿಚ್ಛತಾ ॥೫॥

ಪುತ್ರಸ್ನೇಹಃ ಸುದುಶ್ಛೇದ್ಯಃ ಸರ್ವಥಾ ಪ್ರಾಣಿಭಿಃ ಸದಾ ।
ಕಿಂ ಕರೋಮಿ ಕಥಂ ಮೇ ಸ್ಯಾತ್ಸುಖಂ ಸಂತತಿಸಂಭವಂ ॥೬॥

ಧೈರ್ಯಮಾಲಂಬ್ಯ ಭೂಪಾಲಸ್ತಂ ನತ್ವಾ ಪ್ರತಿಪೂಜ್ಯ ಚ ।
ಉವಾಚ ವಚನಂ ಶ್ಲಕ್ಷ್ಣಂ ಯುಕ್ತಂ ವಿನಯಪೂರ್ವಕಂ ॥೭॥

॥ ರಾಜೋವಾಚ ॥

ದೇವದೇವ ತವಾನುಜ್ಞಾಂ ಕರೋಮಿ ಕರುಣಾನಿಧೇ ।
ವೇದೋಕ್ತೇನ ವಿಧಾನೇನ ಮಖಂ ಚ ಬಹುದಕ್ಷಿಣಂ ॥೮॥

---

ಹೀಗೆಂದು ಹೇಳಿದ ವರುಣನ ಮಾತನ್ನು ಕೇಳಿ ರಾಜನು ಮನಸ್ಸಿನಲ್ಲಿ ಯೋಚಿಸಿದನು. ಕಮಲಕ್ಕೆ ಸಮಾನವಾದ ಮುಖವುಳ್ಳ ಮಗನನ್ನು ಹೇಗೆ ಕೊಲ್ಲಲಿ? ಶೂರನಾದ ಲೋಕಪಾಲಕನಾದ ವರುಣನು ಬ್ರಾಹ್ಮಣವೇಷದಿಂದ ಬಂದಿರುವನು! ಶುಭವನ್ನು ಅಪೇಕ್ಷಿಸುವವನು ದೇವತೆಗಳನ್ನು ಎಂದಿಗೂ ತಿರಸ್ಕಾರವನ್ನು ಮಾಡಬಾರದು. ||೪-೫||

ಸಮಸ್ತಪ್ರಾಣಿಗಳಿಗೂ ಮಕ್ಕಳ ಮೇಲಿನ ಪ್ರೀತಿಯು ಬಿಟ್ಟುಹೋಗತಕ್ಕುದಲ್ಲವು. ಈಗ ನಾನು ಏನನ್ನು ಮಾಡಲಿ? ಮಕ್ಕಳಿಂದುಂಟಾಗುವ ಸುಖವು ನನಗೆ ಹೇಗೆ ಉಂಟಾದೀತು? ಹೀಗೆಂದು ಯೋಚಿಸಿ, ರಾಜನು ಧೈರ್ಯವನ್ನವಲಂಬಿಸಿ, ಆ ವರುಣನಿಗೆ ನಮಸ್ಕಾರವನ್ನು ಮಾಡಿ, ಪೂಜಿಸಿ, ವಿನಯದಿಂದ ಕೂಡಿದ ಮೃದುವಾದ ಮಾತುಗಳನ್ನು ಹೀಗೆ ನುಡಿದನು. ||೬-೭||

ರಾಜನು ಹೇಳಿದನು — ಓ ಕರುಣಾನಿಧಿಯಾದ ದೇವಶ್ರೇಷ್ಠನಾದ ವರುಣನೇ, ನಿನ್ನ ಅಪ್ಪಣೆಯಂತೆ ವೇದೋಕ್ತವಿಧಾನದಿಂದ ವಿಶೇಷ ದಕ್ಷಿಣೆಯಿಂದ ಕೂಡಿದ ಯಜ್ಞವನ್ನು ಮಾಡುವೆನು. ಆದರೆ ಮಗನು ಹುಟ್ಟಿದರೆ ತಂದೆಯು ಹತ್ತು ದಿವಸದ

ಪುತ್ರೇ ಜಾತೇ ದಶಾಹೇನ ಕರ್ಮಯೋಗ್ಯೋ ಭವೇತ್ಪಿತಾ ।
ಮಾಸೇನ ಶುಧ್ಯೇಜ್ಜನನೀ ದಂಪತೀ ತತ್ರ ಕಾರಣಂ ॥೯॥

ಸರ್ವಜ್ಞೋಽಸಿ ಪ್ರಚೇತಸ್ತ್ವಂ ಧರ್ಮಂ ಜಾನಾಸಿ ಶಾಶ್ವತಂ ।
ಕೃಪಾಂ ಕುರು ತ್ವಂ ವಾರೀಶ ಕ್ಷಮಸ್ವ ಪರಮೇಶ್ವರ ॥೧೦॥

॥ ವ್ಯಾಸ ಉವಾಚ ॥

ಇತ್ಯುಕ್ತಸ್ತು ಪ್ರಚೇತಾಸ್ತಂ ಪ್ರತ್ಯುವಾಚ ಜನಾಧಿಪಂ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಕುರು ಕಾರ್ಯಾಣಿ ಪಾರ್ಥಿವ ॥೧೧॥

ಆಗಮಿಷ್ಯಾಮಿ ಮಾಸಾಂತೇ ಯಷ್ಟವ್ಯಂ ಸರ್ವಥಾ ತ್ವಯಾ ।
ಕೃತ್ವೋತ್ಥಾನಿಕಮಾಚಾರಂ ಪುತ್ರಸ್ಯ ನೃಪಸತ್ತಮ ॥೧೨॥

ಇತ್ಯುಕ್ತ್ವಾ ಶ್ಲಕ್ಷ್ಣಯಾ ವಾಚಾ ರಾಜಾನಂ ಯಾದಸಾಂಪತಿಃ ।
ಹರಿಶ್ಚಂದ್ರೋ ಮುದಂ ಪ್ರಾಪ ಗತೇ ಪಾಶಿನಿ ಪಾರ್ಥಿವಃ ॥೧೩॥

---

ಮೇಲೆಯೂ ತಾಯಿಯು ಒಂದು ತಿಂಗಳ ಮೇಲೆಯೂ ಶುದ್ಧರಾಗಿ, ಕರ್ಮವನ್ನು ಮಾಡಲು ಯೋಗ್ಯರಾಗುವರು. ಯಜ್ಞಕ್ಕೆ ದಂಪತಿಗಳಿಬ್ಬರೂ ಕಾರಣರು. ॥೮-೯॥

ಲೋಕಕ್ಕೆಲ್ಲಕ್ಕೂ ಒಡೆಯನಾದ, ವಿಶೇಷವಾಗಿ ಜಲಾಭಿಮಾನಿಯಾದ, ಓ ವರುಣದೇವನೇ, ನೀನು ಸರ್ವಜ್ಞನಾಗಿರುವೆ. ಶಾಶ್ವತವಾದ ಧರ್ಮವನ್ನು ತಿಳಿದಿರುವೆ. ನೀನು ನನ್ನ ಮೇಲೆ ದಯೆಯಿಟ್ಟು ನನ್ನ ಅಪರಾಧವನ್ನು ಕ್ಷಮಿಸು. ॥೧೦॥

ರಾಜನು ಹೀಗೆಂದು ಹೇಳುತ್ತಲು ವರುಣನು ರಾಜನನ್ನು ಕುರಿತು " ನಿನಗೆ ಮಂಗಳವಾಗಲಿ. ನಾನು ಈಗ ಹೋಗುತ್ತೇನೆ. ನಿನ್ನ ಕೆಲಸಗಳನ್ನು ಮಾಡು. ಒಂದುತಿಂಗಳ ಮೇಲೆ ಬರುತ್ತೇನೆ. ಆಗ ನೀನು ಯಜ್ಞವನ್ನು ಮಾಡಲೇಬೇಕು. ಮಗನಿಗೆ ಜಾತಕರ್ಮ ನಾಮಕರಣ ಮುಂತಾದ ಏಳಿಗೆಯನ್ನುಂಟುಮಾಡುವ ಅಭ್ಯುದಯಕರ್ಮಗಳಾದ ಸಂಸ್ಕಾರಗಳನ್ನು ಮಾಡಿ, ಯಜ್ಞವನ್ನು ಮಾಡು. ಎಂದು ಮೃದುವಾದ ಮಾತುಗಳನ್ನು ರಾಜನಿಗೆ ಹೇಳಿ, ವರುಣನು ಹೊರಟುಹೋದನು. ॥೧೧-೧೨॥

ವರುಣನು ಹೋಗುತ್ತಲು ರಾಜನಾದ ಹರಿಶ್ಚಂದ್ರನು ಸಂತೋಷವನ್ನು ಹೊಂದಿದನು. ದಪ್ಪ ಕೆಚ್ಚಲುಳ್ಳ, ಚಿನ್ನದ ಆಭರಣಗಳಿಂದ ಅಲಂಕಾರವನ್ನು

ಕೋಟಿಶಃ ಪ್ರದದೌ ಗಾಸ್ತಾ ಘಟೋಧ್ನೀರ್ಹೇಮಪೂರಿತಾಃ ।
ವಿಪ್ರೇಭ್ಯೋ ವೇದವಿದ್ಭ್ಯಶ್ಚ ತಥೈವ ತಿಲಪರ್ವತಾನ್ ॥೧೪॥

ರಾಜಾ ಪುತ್ರಮುಖಂ ದೃಷ್ಟ್ವಾ ಸುಖಮಾಪ ಮಹತ್ತರಂ ।
ನಾಮಾಽಸ್ಯ ರೋಹಿತಶ್ಚೇತಿ ಚಕಾರ ವಿಧಿಪೂರ್ವಕಂ ॥೧೫॥

ಪೂರ್ಣೇ ಮಾಸೇ ತತಃ ಪಾಶೀ ವಿಪ್ರವೇಷೇಣ ಭೂಪತೇಃ ।
ಆಜಗಾಮ ಗೃಹೇ ಸದ್ಯೋ ಯಜಸ್ವೇತಿ ಬ್ರುವನ್ಮುಹುಃ ॥೧೬॥

ವೀಕ್ಷ್ಯ ತಂ ನೃಪತಿರ್ದೇವಂ ನಿಮಗ್ನಃ ಶೋಕಸಾಗರೇ ।
ಪ್ರಣಿಪತ್ಯ ಕೃತಾತಿಥ್ಯಂ ತಮುವಾಚ ಕೃತಾಂಜಲಿಃ ॥೧೭॥

ದಿಷ್ಟ್ಯಾ ದೇವ ತ್ವಮಾಯಾತೋ ಗೃಹಂ ಮೇ ಪಾವಿತಂ ಪ್ರಭೋ ।
ಮಖಂ ಕರೋಮಿ ವಾರೀಶ ವಿಧಿವದ್ವಾಂಛಿತಂ ತವ ॥೧೮॥

ಅದಂತೋ ನ ಪಶುಃ ಶ್ಲಾಘ್ಯ ಇತ್ಯಾಹುರ್ವೇದವಾದಿನಃ ।
ತಸ್ಮಾದ್ದಂತೋದ್ಭವೇ ತೇಽಹಂ ಕರಿಷ್ಯಾಮಿ ಮಹಾಮಖಂ ॥೧೯॥

---

ಮಾಡಿದ, ಅನೇಕ ಗೋವುಗಳನ್ನು ವೇದವನ್ನು ಬಲ್ಲ ಬ್ರಾಹ್ಮಣರಿಗೆ ದಾನಮಾಡಿದನು. ಹಾಗೆಯೇ ಎಳ್ಳಿನ ರಾಶಿಗಳನ್ನೂ ದಾನಮಾಡಿದನು. ॥೧೩-೧೪॥

ದೊರೆಯು ಮಗನ ಮುಖವನ್ನು ನೋಡಿ ಹೆಚ್ಚಾದ ಸುಖವನ್ನು ಹೊಂದಿದನು. ಅವನಿಗೆ ರೋಹಿತನೆಂದು ವಿಧಿಗನುಸಾರವಾಗಿ ನಾಮಕರಣವನ್ನು ಮಾಡಿದನು. ಒಂದು ತಿಂಗಳು ಕಳೆಯುತ್ತಲು ವರುಣನು ಮತ್ತೆ ಬ್ರಾಹ್ಮಣವೇಷದಿಂದ ಬಂದು ಈಗಲೇ ಯಜ್ಞವನ್ನು ಮಾಡು ಎಂದು ಹೇಳಿದನು. ॥೧೫-೧೬॥

ರಾಜನು ಆ ವರುಣದೇವನನ್ನು ಕಂಡು ದುಃಖಸಮುದ್ರದಲ್ಲಿ ಮುಳುಗಿದನು. ಆದರೂ ಅವನಿಗೆ ನಮಸ್ಕಾರವನ್ನು ಮಾಡಿ ಅತಿಥಿಸತ್ಕಾರವನ್ನು ನೆರವೇರಿಸಿದ ಮೇಲೆ ಕೈಮುಗಿದುಕೊಂಡು ಆ ದೇವನನ್ನು ಕುರಿತು, ' ಓ ಜಲಾಭಿಮಾನಿಯಾದ ವರುಣದೇವನೇ, ನನ್ನ ಪುಣ್ಯದಿಂದ ನೀನು ಬಂದಿರುವೆ. ನನ್ನ ಮನೆಯು ಪವಿತ್ರವಾಯಿತು ! ನಿನಗೆ ಇಷ್ಟವಾದ ಯಜ್ಞವನ್ನು ವಿಧಿಗನುಸಾರವಾಗಿ ಮಾಡುವೆನು. ಆದರೆ ವೇದವನ್ನು ಬಲ್ಲವರು ಹಲ್ಲಿಲ್ಲದ ಪಶುವು ಉತ್ತಮವಾದುದಲ್ಲವೆಂದು ಹೇಳು

॥ ವ್ಯಾಸ ಉವಾಚ ॥

ಇತ್ಯುಕ್ತಸ್ತೇನ ವರುಣಸ್ತಥೇತ್ಯುಕ್ತ್ವಾ ಯಯಾವಥ ।
ಹರಿಶ್ಚಂದ್ರೋ ಮುದಂ ಪ್ರಾಪ್ಯ ವಿಜಹಾರ ಗೃಹಾಶ್ರಮೇ ॥೨೦॥

ಪುನರ್ದಂತೋದ್ಭವಂ ಜ್ಞಾತ್ವಾ ಪ್ರಚೇತಾ ದ್ವಿಜರೂಪವಾನ್ ।
ಆಜಗಾಮ ಗೃಹೇ ತಸ್ಯ ಕುರು ಕಾರ್ಯಮಿತಿ ಬ್ರುವನ್ ॥೨೧॥

ಭೂಪಾಲೋಽಪಿ ಜಲಾಧೀಶಂ ವೀಕ್ಷ್ಯ ಪ್ರಾಪ್ತಂ ದ್ವಿಜಾಕೃತಿಂ ।
ಪ್ರಣಮ್ಯಾಽಽಸನಸನ್ಮಾನ್ಯೈಃ ಪೂಜಯಾಮಾಸ ಸಾದರಂ ॥೨೨॥

ಸ್ತುತ್ವಾ ಪ್ರೋವಾಚ ವಚನಂ ವಿನಯಾನತಕಂಧರಃ ।
ಕರೋಮಿ ವಿಧಿವತ್ಕಾಮಂ ಮಖಂ ಪ್ರಬಲದಕ್ಷಿಣಂ ॥೨೩॥

ಬಾಲೋಽಪ್ಯಕೃತಚೌಲೋಽಯಂ ಗರ್ಭಕೇಶೋ ನ ಸಂಮತಃ ।
ಯಜ್ಞಾರ್ಥೇ ಪಶುಕರಣೇ ಮಯಾ ವೃದ್ಧಮುಖಾಚ್ಛ್ರುತಂ ॥೨೪॥

---

ವರು. ಆದುದರಿಂದ ನನ್ನ ಮಗನಿಗೆ ಹಲ್ಲು ಹುಟ್ಟಿದ ಮೇಲೆ ನಿನಗೋಸ್ಕರವಾಗಿ ಆ ದೊಡ್ಡ ಯಜ್ಞವನ್ನು ನಾನು ಮಾಡುವೆನು. ॥೧೭-೧೮-೧೯॥

ವ್ಯಾಸರು ಹೇಳಿದರು—ರಾಜನು ಹೀಗೆ ಹೇಳುತ್ತಲು, ಹಾಗೆಯೇ ಆಗಲೆಂದು ಹೇಳಿ ವರುಣನು ಹೊರಟುಹೋದನು. ಆಮೇಲೆ ಹರಿಶ್ಚಂದ್ರನು ಆದರದಿಂದ ಗೃಹಸ್ಥಾಶ್ರಮದ ಧರ್ಮಗಳ ನಿರ್ವಾಹಮಾಡುತ್ತಾ ಸಂತೋಷದಿಂದ ವಿಹರಿಸುತ್ತಿದ್ದನು. ॥೨೦॥

ಹಲ್ಲು ಹುಟ್ಟಿದುದನ್ನು ತಿಳಿದು ವರುಣನು ಬ್ರಾಹ್ಮಣವೇಷದಿಂದ ಯಜ್ಞವನ್ನು ಮಾಡು ಎಂದು ಹೇಳುತ್ತ ರಾಜನ ಮನೆಗೆ ಪುನಃ ಬಂದನು. ರಾಜನು ಬ್ರಾಹ್ಮಣನಾಗಿ ಬಂದ ವರುಣನನ್ನು ನೋಡಿ ನಮಸ್ಕಾರಮಾಡಿ ಪೀಠವನ್ನು ಕೊಡುವುದೇ ಮೊದಲಾದ ಮರ್ಯಾದೆಯನ್ನು ಮಾಡಿ ಪ್ರೀತಿಯಿಂದ ಪೂಜೆಮಾಡಿದನು. ॥೨೧-೨೨॥

ಆ ವರುಣನನ್ನು ಸ್ತೋತ್ರಮಾಡಿ ವಿನಯದಿಂದ ಕುತ್ತಿಗೆಯನ್ನು ಬಗ್ಗಿಸಿ ರಾಜನು ಆ ವರುಣನನ್ನು ಸ್ತೋತ್ರಮಾಡಿದನು. ಜಲಾಧಿಪತಿಯಾದ ಓ ವರುಣನೇ, ವಿಧಿಗನುಸಾರವಾಗಿ ವಿಶೇಷವಾದ ದಕ್ಷಿಣೆಯೊಡನೆ ಯಜ್ಞವನ್ನು ಮಾಡುವೆನು.

ತಾವತ್ತ್ವಮಸ್ಯ ವಾರೀಶ ವಿಧಿಂ ಜಾನಾಸಿ ಶಾಶ್ವತಂ ।
ಕರ್ತವ್ಯಃ ಸರ್ವಥಾ ಯಜ್ಞೋ ಮುಂಡನಾಂತೇ ಶಿಶೋಃ ಕಿಲ॥೨೫॥

ತಸ್ಯೇತಿ ವಚನಂ ಶ್ರುತ್ವಾ ಪ್ರಚೇತಾಃ ಪ್ರಾಹ ತಂ ಪುನಃ ।
ಪ್ರತಾರಯಸಿ ಮಾಂ ರಾಜನ್ಪುನಃ ಪುನರಿದಂ ಬ್ರುವನ್ ॥೨೬॥

ಅಪಿ ತೇ ಸರ್ವಸಾಮಗ್ರೀ ವರ್ತತೇ ನೃಪ ತೇಽಧುನಾ ।
ಪುತ್ರಸ್ನೇಹನಿಬದ್ಧಸ್ತ್ವಂ ವಂಚಯಸ್ಯೇವ ಸಾಂಪ್ರತಂ ॥೨೭॥

ಕ್ಷೌರಕರ್ಮವಿಧಿಂ ಕೃತ್ವಾ ನ ಕರ್ತಾಽಸಿ ಮಖಂ ಯದಿ ।
ತದಾಹಂ ದಾರುಣಂ ಶಾಪಂ ದಾಸ್ಯೇ ಕೋಪಸಮನ್ವಿತಃ ॥೨೮॥

ಅದ್ಯ ಗಚ್ಛಾಮಿ ರಾಜೇಂದ್ರ ವಚನಾತ್ತವ ಮಾನದ ।
ನ ಮೃಷಾ ವಚನಂ ಕಾರ್ಯಂ ತ್ವಯೇಕ್ಷ್ವಾಕುಕುಲೋದ್ಭವ ॥೨೯॥

---

ಆದರೆ ಬಾಲಕನಿಗೆ ಇನ್ನೂ ಚೌಲಕರ್ಮವನ್ನು ಮಾಡಿಲ್ಲ. ಯಜ್ಞಕ್ಕೆ ಪಶುವನ್ನು ಮಾಡುವ ಸಂದರ್ಭದಲ್ಲಿ ಗರ್ಭಕೇಶವುಳ್ಳ ಪಶುವು ಯೋಗ್ಯವಲ್ಲವೆಂದು ವೃದ್ಧರು ಹೇಳಿರುವರು. ವರುಣದೇವನೇ, ಶಾಶ್ವತವಾದ ಧರ್ಮಾಚರಣೆಯ ವಿಧಿಯನ್ನು ನೀನು ತಿಳಿದಿರುವೆ. ಅಲ್ಲಿಯವರೆಗೂ ನನ್ನನ್ನು ಕ್ಷಮಿಸು. ಮಗುವಿಗೆ ಚೌಲಕರ್ಮ ವಾದಮೇಲೆ ಖಂಡಿತವಾಗಿ ಯಜ್ಞವನ್ನು ಮಾಡುವೆನು. ||೨೩-೨೪-೨೫||

ಆ ರಾಜನ ಮಾತನ್ನು ಕೇಳಿ ವರುಣನು ಮತ್ತೆ ಅವನಿಗೆ ಹೀಗೆ ಹೇಳಿದನು. ಎಲೈ ರಾಜನೇ, ಮತ್ತೆ ಮತ್ತೆ ಈ ಮಾತುಗಳನ್ನಾಡುತ್ತಾ ನನ್ನನ್ನು ಮೋಸಗೊಳಿ ಸುತ್ತಿರುವೆ! ರಾಜನೇ, ಯಜ್ಞಕ್ಕೆ ಬೇಕಾದ ಸಕಲಸಾಮಗ್ರಿಗಳೂ ಈಗ ನಿನ್ನಲ್ಲಿರು ವುವು. ಆದರೂ ಮಗನಲ್ಲಿ ಪ್ರೀತಿಯನ್ನಿಟ್ಟಿರುವ ನೀನು ನನ್ನನ್ನು ಮೋಸಗೊಳಿಸುತ್ತಿ ರುವೆ. ಮಗನಿಗೆ ಚೌಲಕರ್ಮವನ್ನು ಮಾಡಿದ ಮೇಲೆ ಯಜ್ಞವನ್ನು ಮಾಡದೆ ಹೋದರೆ ನಾನು ಕೋಪದಿಂದ ಕ್ರೂರವಾದ ಶಾಪವನ್ನು ನಿನಗೆ ಕೊಡುವೆನು? ||೨೬-೨೭-೨೮||

ಗೌರವವನ್ನು ಕೊಡತಕ್ಕ ಎಲೈ ರಾಜನೇ, ನಿನ್ನ ಮಾತಿನಂತೆ ಈ ದಿವಸ ನಾನು ಹೋಗುವೆನು. ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ನೀನು ಆಡಿದ ಮಾತನ್ನು ಸುಳ್ಳುಮಾಡಿಕೊಳ್ಳಬಾರದು. ಹೀಗೆಂದು ಹೇಳಿ ವರುಣನು ರಾಜನ ಮನೆಯಿಂದ

ಇತ್ಯಾಖ್ಯಾಪ್ಯ ಯಯೌವಾಶು ಪ್ರಚೇತಾ ನೃಪತೇರ್ಗೃಹಾತ್ ।
ರಾಜಾ ಪರಮಸಂತುಷ್ಟೋ ನನಂದ ಭವನೇ ತದಾ ॥೩೦॥

ಚೂಡಾಕರಣಕಾಲೇ ತು ಪ್ರವೃತ್ತೇ ಪರಮೋತ್ಸವೇ ।
ಸಂಪ್ರಾಪ್ತಸ್ತರಸಾ ಪಾಶೀ ಭವನಂ ನೃಪತೇಃ ಪುನಃ ॥೩೧॥

ಯದಾಂಕೇ ಸುತಮಾದಾಯ ರಾಜ್ಞೀ ನೃಪತಿಸನ್ನಿಧೌ ।
ಉಪವಿಷ್ಟಾ ಕ್ರಿಯಾ ಕಾಲೇ ತದೈವ ವರುಣೋಽಭ್ಯಗಾತ್ ॥೩೨॥

ಕುರು ಕರ್ಮೇತಿ ವಿಸ್ಪಷ್ಟಂ ವಚನಂ ಕಥಯನ್ನೃಪಂ ।
ವಿಪ್ರರೂಪಧರಃ ಶ್ರೀಮಾನ್ ಪ್ರತ್ಯಕ್ಷ ಇವ ಪಾವಕಃ ॥೩೩॥

ನೃಪತಿಸ್ತಂ ಸಮಾಲೋಕ್ಯ ಬಭೂವಾತೀವ ವಿಹ್ವಲಃ ।
ನಮಶ್ಚಕಾರ ತಂ ಭೀತ್ಯಾ ಕೃತಾಂಜಲಿಪುಟಃ ಪುರಃ ॥೩೪॥

ವಿಧಿವತ್ಪೂಜಯಿತ್ವಾ ತಂ ರಾಜೋವಾಚ ವಿನೀತವಾನ್ ।
ಸ್ವಾಮಿನ್ಕಾರ್ಯಂ ಕರೋಮ್ಯದ್ಯ ಮಖಸ್ಯ ವಿಧಿಪೂರ್ವಕಂ ॥೩೫॥

---

ಬೇಗನೆ ಹೊರಟು ಹೋದನು. ರಾಜನು ಅತ್ಯಂತ ಸಂತೋಷವನ್ನು ಹೊಂದಿ ತನ್ನ ಮನೆಯಲ್ಲಿ ಆನಂದದಿಂದಿದ್ದನು. ॥೨೯-೩೦॥

ಚೌಲಕರ್ಮಕಾಲದಲ್ಲಿ ದೊಡ್ಡ ಉತ್ಸವವು ನಡೆಯುತ್ತಿದ್ದಾಗ ರಾಣಿಯು ತೊಡೆಯ ಮೇಲೆ ಮಗನನ್ನು ಕುಳ್ಳಿರಿಸಿಕೊಂಡು ರಾಜನ ಸಮೀಪದಲ್ಲಿ ಕುಳಿತಿರಲು, ವೇದೋಕ್ತವಾದ ಕ್ರಿಯೆಯು ನಡೆಯತಕ್ಕ ಕಾಲದಲ್ಲಿಯೇ, ಯಜ್ಞವನ್ನು ಮಾಡು. ಎಂದು ಸ್ಪಷ್ಟವಾಗಿ ಮಾತನಾಡುತ್ತಾ ಬ್ರಾಹ್ಮಣರೂಪವನ್ನು ಧರಿಸಿದ ವರುಣನು ಪ್ರತ್ಯಕ್ಷನಾದ ಅಗ್ನಿಯಂತೆ ಕೋಪದಿಂದ ಕೂಡಿ ಪುನಃ ರಾಜನ ಮನೆಗೆ ಬಂದನು. ॥೩೧-೩೨-೩೩॥

ರಾಜನು ಅವನನ್ನು ನೋಡಿ ವಿಶೇಷವಾಗಿ ಭಯಭ್ರಾಂತನಾದನು. ಮತ್ತು ಆ ದೇವನಿಗೆ ಭಯದಿಂದ ನಮಸ್ಕರಿಸಿ ವಿಧಿಗನುಸಾರವಾಗಿ ಪೂಜಿಸಿ ಕೈಮುಗಿದು ಕೊಂಡು ಮುಂದೆ ನಿಂತು ನಮ್ರತೆಯಿಂದ ಹೀಗೆ ಹೇಳಿದನು. ಸ್ವಾಮಿ, ಈ ದಿನವೇ ವಿಧಿಪೂರ್ವಕವಾಗಿ ಯಜ್ಞದ ಕಾರ್ಯವನ್ನು ಮಾಡುವೆನು. ॥೩೪-೩೫॥

ವಕ್ತವ್ಯಮಸ್ತಿ ತತ್ರಾಽಪಿ ಶೃಣುಷ್ವೇಕಮನಾ ವಿಭೋ ।
ಯುಕ್ತಂ ಚೇನ್ಮನ್ಯಸೇ ಸ್ವಾಮಿಂ ಸ್ತದ್ಬ್ರವೀಮಿ ತವಾಗ್ರತಃ ॥೩೬॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತ್ರಯೋ ವರ್ಣಾ ದ್ವಿಜಾತಯಃ ।
ಸಂಸ್ಕೃತಾಶ್ಚಾಽನ್ಯಥಾ ಶೂದ್ರಾ ಏವಂ ವೇದವಿದೋ ವಿದುಃ ॥೩೭॥

ತಸ್ಮಾದಯಂ ಸುತೋ ಮೇಽದ್ಯ ಶೂದ್ರವದ್ವರ್ತತೇ ಶಿಶುಃ ।
ಉಪನೀತಃ ಕ್ರಿಯಾರ್ಹಃ ಸ್ಯಾದಿತಿ ವೇದೇಷು ನಿರ್ಣಯಃ ॥೩೮॥

ರಾಜ್ಞಾಮೇಕಾದಶೇ ವರ್ಷೇ ಸದೋಪನಯನಂ ಸ್ಮೃತಂ ।
ಅಷ್ಟಮೇ ಬ್ರಾಹ್ಮಣಾನಾಂ ಚ ವೈಶ್ಯಾನಾಂ ದ್ವಾದಶೇ ಕಿಲ ॥೩೯॥

ದಯಸೇ ಯದಿ ದೇವೇಶ ದೀನಂ ಮಾಂ ಸೇವಕಂ ತವ ।
ತದೋಪನೀಯ ಕರ್ತಾಽಸ್ಮಿ ಪಶುನಾ ಯಜ್ಞಮುತ್ತಮಂ ॥೪೦॥

---

ಈ ವಿಷಯದಲ್ಲಿ ಹೇಳಬೇಕಾದ ಒಂದು ಅಂಶವಿರುವುದು. ದೇವನಾದ ನೀನು ಮನಸ್ಸಿಟ್ಟು ಕೇಳಬೇಕು. ನಾನು ಹೇಳುವುದು ಯುಕ್ತವಾದುದೆಂದು ತಿಳಿದರೆ, ಸ್ವಾಮಿಯ ಎದುರಿಗೆ ಅದನ್ನು ಹೇಳುವೆನು. ॥೩೬॥

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಎಂಬ ಈ ಮೂರು ವರ್ಣದವರೂ ಉಪನಯನಸಂಸ್ಕಾರದಿಂದ ದ್ವಿಜರೆನಿಸುವರು. ಸಂಸ್ಕಾರವಿಲ್ಲದಿದ್ದರೆ ಅವರು ಶೂದ್ರರಂತೆಯೇ. ಎಂದು ವೇದವನ್ನು ತಿಳಿದವರು ಹೇಳುವರು. ಆದುದರಿಂದ ನನ್ನ ಮಗನು ಈಗ ಶೂದ್ರನಂತಿರುವನು. ಉಪನಯನವನ್ನು ಮಾಡಿದರೆ ಕರ್ಮಯೋಗ್ಯನಾಗುವನು. ಎಂದು ವೇದವಿಧಿಯು ಇರುವುದು. ॥೩೭-೩೮॥

ರಾಜರಿಗೆ ಹನ್ನೊಂದನೆಯ ವರ್ಷದಲ್ಲಿಯೂ ಬ್ರಾಹ್ಮಣನಿಗೆ ಎಂಟನೆಯ ವಯಸ್ಸಿನಲ್ಲಿಯೂ ವೈಶ್ಯರಿಗೆ ಹನ್ನೆರಡನೆಯ ವಯಸ್ಸಿನಲ್ಲಿಯೂ ಉಪನಯನ ಮಾಡಬೇಕೆಂದು ವಿಧಿಯಿರುವುದು. ದೀನನೂ ಸೇವಕನೂ ಆದ ನನ್ನ ಮೇಲೆ ನೀನು ದಯೆಮಾಡಿದರೆ ಉಪನಯನಮಾಡಿದಾಗಲೇ ನನ್ನ ಮಗನನ್ನು ಪಶುವನ್ನಾಗಿ ಮಾಡಿ ಯಜ್ಞವನ್ನು ಮಾಡುವೆನು. ॥೩೯-೪೦॥

ಲೋಕಪಾಲೋಽಸಿ ಧರ್ಮಜ್ಞ ಸರ್ವಶಾಸ್ತ್ರವಿಶಾರದ ।
ಮನ್ಯಸೇ ಯದ್ವಚಃ ಸತ್ಯಂ ತದ್ಗಚ್ಛ ಭವನಂ ವಿಭೋ ॥೪೧॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ದಯಾವಾನ್ಯಾದಸಾಂಪತಿಃ ।
ಓಮಿತ್ಯುಕ್ತ್ವಾ ಯಯಾವಾಶು ಪ್ರಸನ್ನವದನೋ ನೃಪಃ ॥೪೨॥

ಗತೇಽಥ ವರುಣೇ ರಾಜಾ ಬಭೂವಾತಿಮುದಾನ್ವಿತಃ ।
ಸುಖಂ ಪ್ರಾಪ್ಯ ಸುತಸ್ಯೈವಂ ರಾಜಾ ಮುದಮವಾಪ ಹ ॥೪೩॥

ಚಕಾರ ರಾಜಕಾರ್ಯಾಣಿ ಹರಿಶ್ಚಂದ್ರಸ್ತದಾ ನೃಪ ।
ಕಾಲೇನ ವ್ರಜತಾ ಪುತ್ರೋ ಬಭೂವ ದಶವಾರ್ಷಿಕಃ ॥೪೪॥

ತಸ್ಯೋಪವೀತಸಾಮಗ್ರೀಂ ವಿಭೂತಿಸದೃಶೀಂ ನೃಪಃ ।
ಚಕಾರ ಬ್ರಾಹ್ಮಣೈಃ ಶಿಷ್ಟೈ ರನ್ವಿತಃ ಸಚಿವೈಸ್ತಥಾ ॥೪೫॥

---

ನೀನು ಲೋಕಪಾಲಕನೂ ಧರ್ಮವನ್ನು ತಿಳಿದವನೂ ಸಕಲಶಾಸ್ತ್ರಗಳನ್ನೂ ಬಲ್ಲವನೂ ಆಗಿರುವೆ. ನಾನು ಹೇಳಿದುದು ಶಾಸ್ತ್ರೀಯವಾದುವೆಂದು ನಿನಗೆ ತೋರಿದರೆ, ನನ್ನ ಮಾತನ್ನು ಸತ್ಯವೆಂದು ನಂಬಿ ನೀನು ಈಗ ಮನೆಗೆಹೋಗು. ॥೪೧॥

ವ್ಯಾಸನು ಹೇಳಿದನು– ಹೀಗೆಂದು ಹೇಳಿದ ರಾಜನ ಮಾತನ್ನು ಕೇಳಿ ದಯೆಯಿಂದ ಕೂಡಿದ ವರುಣನು ಹಾಗೆಯೇ ಆಗಲೆಂದು ಒಪ್ಪಿ ಸಂತೋಷದಿಂದ ಹಿಂತಿರುಗಿ ಹೋದನು. ॥೪೨॥

ವರುಣನು ಹೊರಟುಹೋಗುತ್ತಲು ರಾಜನು ಸಂತೋಷವನ್ನು ಹೊಂದಿ ಮಗನೊಡನೆ ವಿಹಾರರೂಪವಾದ ಸಂತೋಷವನ್ನನುಭವಿಸುತ್ತಾ ರಾಜಕಾರ್ಯಗಳನ್ನು ಮಾಡುತ್ತಿದ್ದನು. ಕಾಲವು ಕಳೆಯುತ್ತಿರಲು ಮಗನಿಗೆ ಹತ್ತು ವರ್ಷವು ತುಂಬಿತು. ॥೪೩-೪೪॥

ಹರಿಶ್ಚಂದ್ರರಾಜನು ತನ್ನ ರಾಜಪದವಿಯ ವೈಭವಕ್ಕೆ ತಕ್ಕಂತೆ ಬ್ರಾಹ್ಮಣರಿಂದಲೂ ಮಂತ್ರಿಗಳಿಂದಲೂ ಶಿಷ್ಟರಿಂದಲೂ ಕೂಡಿ ಅವರು ಹೇಳಿದಂತೆ ಮಗನಿಗೆ ಉಪನಯನಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿದನು. ॥೪೫॥

ಏಕಾದಶೇ ಸುತಸ್ಯಾಽಬ್ದೇ ವ್ರತಬಂಧವಿಧೌ ನೃಪಃ ।
ವಿದಧೇ ವಿಧಿವತ್ಕಾರ್ಯಂ ಚಿತ್ತೇ ಚಿಂತಾಽಽತುರಃ ಪುನಃ ॥೪೬॥

ವರ್ತಮಾನೇ ತಥಾ ಕಾರ್ಯೇ ಉಪನೀತೇ ಕುಮಾರಕೇ ।
ಆಜಗಾಮಾಽಥ ವರುಣೋ ವಿಪ್ರವೇಷಧರಸ್ತದಾ ॥೪೭॥

ತಂ ವೀಕ್ಷ್ಯ ನೃಪತಿಸ್ತೂರ್ಣಂ ಪ್ರಣಮ್ಯ ಪುರತಃ ಸ್ಥಿತಃ ।
ಕೃತಾಂಜಲಿಪುಟಃ ಪ್ರೀತಃ ಪ್ರತ್ಯುವಾಚ ಸುರೋತ್ತಮಂ ॥೪೮॥

ದೇವ ದತ್ತೋಪವೀತೋಽಯಂ ಪಶುಯೋಗ್ಯೋಽಸ್ತಿ ಮೇ ಸುತಃ ।
ಪ್ರಸಾದಾತ್ತವ ಮೇ ಶೋಕೋ ಗತೋ ವಂಧ್ಯಾಪವಾದಜಃ ॥೪೯॥

ಕರ್ತುಮಿಚ್ಛಾಮ್ಯಹಂ ಯಜ್ಞಂ ಪ್ರಭೂತವರದಕ್ಷಿಣಂ ।
ಸಮಯೇ ಶೃಣು ಧರ್ಮಜ್ಞ ಸತ್ಯಮದ್ಯ ಬ್ರವೀಮ್ಯಹಂ ॥೫೦॥

ಸಮಾವರ್ತನಕರ್ಮಾಂತೇ ಕರಿಷ್ಯಾಮಿ ತವೇಪ್ಸಿತಂ ।
ಮಮೋಪರಿ ದಯಾಂ ಕೃತ್ವಾ ತಾವತ್ತ್ವಂ ಕ್ಷಂತುಮರ್ಹಸಿ ॥೫೧॥

---

ರಾಜನು ಪುನಃ ಮನಸ್ಸಿನಲ್ಲಿ ದುಃಖವನ್ನೂ ಹೊಂದಿದವನಾಗಿ ಮಗನಿಗೆ ಹನ್ನೊಂದನೆಯ ವರ್ಷದ ವಯಸ್ಸಿನಲ್ಲಿ ಉಪನಯನವನ್ನು ಮಾಡಬೇಕೆಂದು ವೇದವಿಧಿಗನುಸಾರವಾಗಿ ಕಾರ್ಯಗಳನ್ನು ಏರ್ಪಡಿಸಿದನು. ॥೪೬॥

ಹಾಗೆ ಉಪನಯನಕಾರ್ಯದ ಸಿದ್ಧತೆಗಳು ನಡೆದ ಅನಂತರದಲ್ಲಿ ಮಗನಿಗೆ ಉಪನಯನವಾದ ಮೇಲೆ, ವರುಣನು ಪುನಃ ಬ್ರಾಹ್ಮಣವೇಷದಿಂದ ಅಲ್ಲಿಗೆ ಬಂದನು! ಆ ದೇವೋತ್ತಮನನ್ನು ನೋಡಿ ರಾಜನು ಕೈಕಟ್ಟಿ ನಿಂತು ಹೀಗೆ ಹೇಳಿದನು. ಓ ವರುಣದೇವನೇ, ಯಜ್ಞೋಪವೀತವನ್ನು ಧರಿಸಿದ ನನ್ನ ಮಗನು ಈಗ ಯಜ್ಞಪಶುವಾಗಲು ಯೋಗ್ಯನಾಗಿರುವನು. ನಿನ್ನ ಅನುಗ್ರಹದಿಂದ ರಾಜನಾದ ನಾನು ಬಂಜೆಯಾದವನು ಎಂಬ ಅಪವಾದದಿಂದುಂಟಾಗಿದ್ದ ದುಃಖವು ಈಗ ನನ್ನನ್ನು ಬಿಟ್ಟುಹೋಯಿತು! ॥೪೭-೪೮-೪೯॥

ಆದುದರಿಂದ ನಾನು ಹೆಚ್ಚಾದ ದಕ್ಷಿಣೆಗಳಿಂದ ಕೂಡಿದ ಯಜ್ಞವನ್ನು ಮಾಡಬೇಕೆಂದಿರುವೆನು. ಓ ಧರ್ಮವನ್ನು ಬಲ್ಲ ದೇವನೇ, ಈ ದಿನ ನಾನು ನಿಜ

|| ವರುಣ ಉವಾಚ ||

ಪ್ರತಾರಯಸಿ ಮಾಂ ರಾಜನ್ಪುತ್ರಪ್ರೇಮಾಕುಲೋ ಭೃಶಂ ।
ಮುಹುರ್ಮುಹುರ್ಮತಿಂ ಕೃತ್ವಾ ಯುಕ್ತಿಯುಕ್ತಾಂ ಮಹಾಮತೇ ॥೫೨॥

ಗಚ್ಛಾಮ್ಯದ್ಯ ಮಹಾರಾಜ ವಚಸಾ ತವ ನೋದಿತಃ ।
ಆಗಮಿಷ್ಯಾಮಿ ಸಮಯೇ ಸಮಾವರ್ತನಕರ್ಮಣಿ ॥೫೩॥

ಇತ್ಯುಕ್ತ್ವಾ ಪ್ರಯಯೌ ಪಾಶೀ ತಮಾಪೃಚ್ಛ್ಯ ವಿಶಾಂಪತೇ ।
ರಾಜಾ ಪ್ರಮುದಿತಃ ಕಾರ್ಯಂ ಚಕಾರ ಚ ಯಥೋತ್ತರಂ ॥೫೪॥

ಆಗತಂ ವರುಣಂ ದೃಷ್ಟ್ವಾ ಕುಮಾರೋಽತಿವಿಚಕ್ಷಣಃ ।
ಯಜ್ಞಸ್ಯ ಸಮಯಂ ಜ್ಞಾತ್ವಾ ತದಾ ಚಿಂತಾಽಽತುರೋಽಭವತ್ ॥ ೫೫॥

---

ವಾದ ಮಾತನ್ನು ಹೇಳುವೆನು, ಕೇಳು. ಸಮಾವರ್ತನಕರ್ಮವಾದ ಮೇಲೆ ಎಂದರೆ ಮಗನು ವಿದ್ಯಾಭ್ಯಾಸವನ್ನು ಮಾಡಿ ಗುರುಗಳ ಮನೆಯಿಂದ ಹಿಂದಿರುಗಿ ಬಂದ ಮೇಲೆ, ನಿನಗೆ ಇಷ್ಟವಾದ ಯಜ್ಞವನ್ನು ಮಾಡುವೆನು. ನನ್ನ ಮೇಲೆ ದಯೆಯಿಟ್ಟು ಅಲ್ಲಿಯ ವರೆಗೆ ನೀನು ಕ್ಷಮಿಸಬೇಕು. ||೫೦-೫೧||

ವರುಣನು ಹೇಳಿದನು—ಎಲೈ ರಾಜನೇ, ನಿನ್ನ ಮಗನ ಮೇಲಿನ ಅತ್ಯಂತ ಪ್ರೀತಿಯಿಂದ ಮತ್ತೆ ಮತ್ತೆ ಬುದ್ಧಿವಂತನಾದ ನೀನು ಯುಕ್ತಿಯಿಂದ ಕೂಡಿದ ಮಾತನ್ನು ಹೇಳಿ ನನ್ನನ್ನು ಮೋಸಪಡಿಸುತ್ತಿದೀಯೆ. ಎಲೈ ಮಹಾರಾಜನೇ, ನಿನ್ನ ಮಾತಿನ ಪ್ರೇರಣೆಯಿಂದ ನಾನು ಈ ದಿವಸ ಹೋಗುತ್ತೇನೆ. ಸಮಾವರ್ತನೆಯ ಕರ್ಮದ ಸಮಯದಲ್ಲಿ ಪುನಃ ಬರುವೆನು. ಹೀಗೆಂದು ಹೇಳಿ ವರುಣನು ರಾಜನನ್ನು ಕೇಳಿಕೊಂಡು ಹೊರಟುಹೋದನು. ||೫೨-೫೩||

ಆಮೇಲೆ ರಾಜನು ಸಂತೋಷದಿಂದ ರಾಜಕಾರ್ಯಗಳನ್ನು ಮಾಡುತ್ತಿದ್ದನು. ಬುದ್ಧಿವಂತನಾದ ರೋಹಿತನು ವರುಣನು ಬಂದಿದ್ದುದನ್ನು ನೋಡಿ, ಯಜ್ಞದಸಮಯವನ್ನೂ ತಿಳಿದು, ಮನಸ್ಸಿನಲ್ಲಿ ದುಃಖದಿಂದಲೂ ಭಯದಿಂದಲೂ ಕೂಡಿದವನಾದನು. ||೫೪-೫೫||

ಶೋಕಸ್ಯ ಕಾರಣಂ ರಾಜ್ಞಃ ಪರ್ಯಪೃಚ್ಛದಿತಸ್ತತಃ ।
ಜ್ಞಾತ್ವಾಽತ್ಮವಧಮಾಯುಷ್ಮನ್ಗಮನಾಯ ಮತಿಂ ದಧೌ ॥೫೬॥

ನಿಶ್ಚಯಂ ಪರಮಂ ಕೃತ್ವಾ ಸಂಮಂತ್ರ್ಯ ಸಚಿವಾತ್ಮಜೈಃ ।
ಪ್ರಯಯೌ ನಗರಾತ್ತಸ್ಮಾನ್ನಿರ್ಗತ್ಯ ವನಮುಷ್ಯಸೌ ॥೫೭॥

ಗತೇ ಪುತ್ರೇ ನೃಪಃ ಕಾಮಂ ದುಃಖಿತೋಽಭೂದ್ಭೃಶಂ ಸದಾ ।
ಪ್ರೇರಯಾಮಾಸ ದೂತಾನ್ ಸ್ವಾನ್ ತಸ್ಯಾನ್ವೇಷಣಕಾಮ್ಯಯಾ ॥೫೮॥

ಏವಂ ಗತೇಽಥ ಕಾಲೇಽಸೌ ವರುಣಸ್ತದ್ಗೃಹಂ ಗತಃ ।
ರಾಜಾನಂ ಶೋಕಸಂತಪ್ತಂ ಕುರು ಯಜ್ಞಮಿತಿ ಬ್ರುವನ್ ॥೫೯॥

ರಾಜಾ ಪ್ರಣಮ್ಯ ತಂ ಪ್ರಾಹ ದೇವದೇವ ಕರೋಮಿ ಕಿಂ ।
ನ ಜಾನೇ ಕ್ವಾಽಪಿ ಪುತ್ರೋ ಮೇ ಗತಸ್ತ್ವದ್ಯ ಭಯಾಕುಲಃ ॥೬೦॥

---

ಎಲೈ ಆಯುಷ್ಮಂತನಾದ ಜನಮೇಜಯನೇ, ಕೇಳು. ರೋಹಿತನು ರಾಜನ ದುಃಖಕ್ಕೆ ಕಾರಣವನ್ನು ಹೊರಗಡೆಯಲ್ಲಿ ಕೇಳಿ, ಯಜ್ಞದಲ್ಲಿ ತನ್ನ ವಧೆಯಾಗುವುದೆಂದು ತಿಳಿದು, ತಪ್ಪಿಸಿಕೊಂಡು ಹೋಗಬೇಕೆಂದು ಮನಸ್ಸು ಮಾಡಿದನು. ||೫೬||

ಆ ರೋಹಿತನು ಮಂತ್ರಿಪುತ್ರರೊಡನೆ ಆಲೋಚನೆಯನ್ನು ಮಾಡಿ ಮಾಡಬೇಕಾದ ಕೆಲಸವನ್ನು ನಿಶ್ಚಯಿಸಿ ಆ ಪಟ್ಟಣವನ್ನು ಬಿಟ್ಟು ಕಾಡಿಗೇ ಹೊರಟು ಹೋದನು. ||೫೭||

ಮಗನು ಹೊರಟು ಹೋಗುತ್ತಲು ರಾಜನು ವಿಶೇಷವಾಗಿ ಯಾವಾಗಲೂ ದುಃಖಿಸುತ್ತಾ ತನ್ನ ದೂತರನ್ನು ಮಗನನ್ನು ಹುಡುಕುವುದಕ್ಕಾಗಿ ಕಳುಹಿಸಿದನು||೫೮||

ಹೀಗೆ ಕಾಲವು ಕಳೆಯುತ್ತಿರಲು, ವರುಣನು ರಾಜನ ಮನೆಗೆ ಬಂದು, ದುಃಖದಿಂದ ಕೂಡಿದ್ದ ಅವನನ್ನು ಕುರಿತು, ಯಜ್ಞವನ್ನು ಮಾಡು. ಎಂದು ಹೇಳಿದನು. ||೫೯||

ರಾಜನು ನಮಸ್ಕರಿಸಿ ಅವನನ್ನು ಕುರಿತು ಹೇಳಿದನು. ಓ ದೇವಶ್ರೇಷ್ಠನೇ, ನನ್ನ ಮಗನು ಈ ದಿವಸ ಭಯದಿಂದ ಎಲ್ಲಿಗೋ ಹೊರಟುಹೋಗಿರುವನು! ಅವನಿರುವ ಸ್ಥಳವನ್ನು ನಾನು ಕಾಣೆನು. ||೬೦||

ಸರ್ವತ್ರಗಿರಿದುರ್ಗೇಷು ಮುನೀನಾಮಾಶ್ರಮೇಷು ಚ ।
ಅನ್ವೇಷಿತೋ ಮೇ ದೂತೈಸ್ತು ನ ಪ್ರಾಪ್ತೋ ಯಾದಸಾಂಪತೇ॥೬೧॥

ಆಜ್ಞಾಪಯ ಮಹಾರಾಜ ಕಿಂ ಕರೋಮಿ ಗತೇ ಸುತೇ ।
ನ ಮೇ ದೋಷೋಽತ್ರ ಸರ್ವಜ್ಞ ಭಾಗ್ಯದೋಷಸ್ತು ಸರ್ವಥಾ ॥೬೨॥

॥ ವ್ಯಾಸ ಉವಾಚ ॥

ಇತಿ ಭೂಪವಚಃ ಶ್ರುತ್ವಾ ಪ್ರಚೇತಾಃ ಕುಪಿತೋ ಭೃಶಂ ।
ಶಶಾಪ ಚ ನೃಪಂ ಕ್ರೋಧಾದ್ವಂಚಿತಸ್ತು ಪುನಃಪುನಃ ॥೬೩॥

ನೃಪತೇಽಹಂ ತ್ವಯಾ ಯಸ್ಮಾದ್ವಚಸಾ ಚ ಪ್ರವಂಚಿತಃ ।
ತಸ್ಮಾಜ್ಜಲೋದರೋ ವ್ಯಾಧಿಸ್ತ್ವಾಂ ತುದತ್ವತಿದಾರುಣಃ ॥೬೪॥

---

ಜಲಚರಾಧಿಪತಿಯಾದ ಓ ವರುಣದೇವನೇ, ಎಲ್ಲ ಗಿರಿದುರ್ಗಗಳಲ್ಲಿಯೂ ಋಷಿಗಳ ಆಶ್ರಮಗಳಲ್ಲಿಯೂ ನನ್ನ ಮಗನನ್ನು ನನ್ನ ದೂತರು ಹುಡುಕಿದರು. ಅವನು ಸಿಕ್ಕಲಿಲ್ಲ! ಮಗನು ಹೊರಟು ಹೋದ ಮೇಲೆ ನಾನೇನನ್ನು ಮಾಡಲಿ? ಅಪ್ಪಣೆಮಾಡು. ಸರ್ವಜ್ಞನಾದ ದೇವನೇ, ಈ ವಿಷಯದಲ್ಲಿ ನನ್ನ ದೋಷವೇನೂ ಇಲ್ಲ. ನನ್ನ ದುರದೃಷ್ಟದ ದೋಷವೇ ಆಗಿರುವುದು! ಯಜ್ಞದಿಂದಲೂ ಸತ್ಯ ಪಾಲನೆಯಿಂದಲೂ ನನಗೆ ಪುಣ್ಯಪ್ರಾಪ್ತಿಯ ಯೋಗವಿಲ್ಲವೆಂದು ದೊರೆಯ ಅಭಿಪ್ರಾಯವು. ॥೬೧-೬೨॥

ವ್ಯಾಸರು ಹೇಳಿದರು — ಹೀಗೆ ಹೇಳಿದ ರಾಜನ ಮಾತನ್ನು ಕೇಳಿ ವರುಣನು ಮತ್ತೆ ಮತ್ತೆ ರಾಜನು ವಾಯಿದೆಯನ್ನು ಕೇಳುತ್ತಾ ತನ್ನನ್ನು ಮೋಸಪಡಿಸಿದುದಕ್ಕಾಗಿ ಬಹಳವಾಗಿ ಕೋಪಗೊಂಡು ರಾಜನನ್ನು ಹೀಗೆ ಶಪಿಸಿದನು. ॥೬೩॥

ಎಲೈ ರಾಜನೇ, ನೀನು ನನ್ನನ್ನು ಒಳ್ಳೆಯ ಮಾತಿನಿಂದ ಮೋಸಗೊಳಿಸಿದೆ ಯಾದುದರಿಂದ ಭಯಂಕರವಾದ ಜಲೋದರ ವ್ಯಾಧಿಯು ನಿನ್ನನ್ನು ಆಕ್ರಮಿಸಿ ನೋಯಿಸಲಿ. ಎಂದು ಶಪಿಸಿದನು. ॥೬೪॥

॥ ವ್ಯಾಸ ಉವಾಚ ॥

ಇತಿ ಶಪ್ತೋ ಮಹೀಪಾಲಃ ಕುಪಿತೇನ ಪ್ರಚೇತಸಾ ।
ಪೀಡಿತೋಽಭೂತ್ತದಾ ರಾಜಾ ವ್ಯಾಧಿನಾ ದುಃಖದೇನ ತು ॥೬೫॥

ಏವಂ ಶಪ್ತ್ವಾ ನೃಪಂ ಪಾಶೀ ಜಗಾಮ ನಿಜಮಾಸ್ಪದಂ ।
ರಾಜಾ ಪ್ರಾಪ್ಯ ಮಹಾವ್ಯಾಧಿಂ ಬಭೂವಾತೀವ ದುಃಖಿತಃ ॥೬೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಪಂಚದಶೋಽಧ್ಯಾಯಃ.

---

ವ್ಯಾಸನು ಹೇಳಿದನು— ಈ ರೀತಿಯಲ್ಲಿ ಕೋಪವನ್ನು ಹೊಂದಿದ ವರುಣನು ರಾಜನಿಗೆ ಹೀಗೆ ಶಾಪವನ್ನು ಕೊಡುತ್ತಲು, ರಾಜನು ದುಃಖವನ್ನುಂಟುಮಾಡುವ ಆ ಜಲೋದರ ರೋಗದ ನೋವನ್ನು ಅನುಭವಿಸುತ್ತಿದ್ದನು. ॥೬೫॥

ಈ ರೀತಿಯಲ್ಲಿ ವರುಣನು ರಾಜನಿಗೆ ಶಾಪವನ್ನು ಕೊಟ್ಟು ತನ್ನ ವಾಸಸ್ಥಾನಕ್ಕೆ ಹೊರಟುಹೋದನು. ರಾಜನೂ ಆ ಮಹಾರೋಗವನ್ನು ಹೊಂದಿ ಅತ್ಯಂತ ದುಃಖವನ್ನು ಅನುಭವಿಸುತ್ತಾ ನರಳುತ್ತಿದ್ದನು. ॥೬೬॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ಷೋಡಶೋಽಧ್ಯಾಯಃ ॥

### ಹದಿನಾರನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಗತೇಽಥ ವರುಣೇ ರಾಜಾ ರೋಗೇಣಾತೀವ ಪೀಡಿತಃ ।**
**ದುಃಖಾದ್ದುಃಖಂ ಪರಂ ಪ್ರಾಪ್ಯ ವ್ಯಥಿತೋಽಭೂದ್ಭೃಶಂ ತದಾ ॥೧॥**

**ಕುಮಾರೋಽಸೌ ವನೇ ಶ್ರುತ್ವಾ ಪಿತರಂ ರೋಗಪೀಡಿತಂ ।**
**ಗಮನಾಯ ಮತಿಂ ರಾಜಂಶ್ಚಕಾರ ಸ್ನೇಹಯಂತ್ರಿತಃ ॥೨॥**

**ಸಂವತ್ಸರೇ ವ್ಯತೀತೇ ತು ಪಿತರಂ ದ್ರಷ್ಟುಮಾದರಾತ್ ।**
**ಗಂತುಕಾಮಂ ತು ತಂ ಜ್ಞಾತ್ವಾ ಶಕ್ರಸ್ತತ್ರಾಽಽಜಗಾಮ ಹ ॥೩॥**

---

ವರುಣನು ಹೊರಟು ಹೋಗುತ್ತಲು ಹರಿಶ್ಚಂದ್ರರಾಜನು ರೋಗದಿಂದ ಬಹಳ ಬಾಧೆಯನ್ನನುಭವಿಸುತ್ತಾ ಹಿಂದಿನ ದುಃಖಕ್ಕಿಂತಲೂ ಹೆಚ್ಚು ದುಃಖವನ್ನು ಹೊಂದಿದನು. ॥೧॥

ಅತ್ತಲಾಗಿ ರಾಜಪುತ್ರನಾದ ರೋಹಿತನು ಕಾಡಿನಲ್ಲಿದ್ದಾಗ ತನ್ನ ತಂದೆಯು ರೋಗದಿಂದ ಬಾಧೆಪಡುತ್ತಿರುವುದನ್ನು ಕೇಳಿ, ತಂದೆಯ ಮೇಲಿನ ಪ್ರೀತಿಯಿಂದ ಪಟ್ಟಣಕ್ಕೆ ಹೋಗುವ ಯೋಚನೆಯನ್ನು ಮಾಡಿದನು. ॥೨॥

ಒಂದು ವರುಷವು ಕಳೆಯುತ್ತಲು ತಂದೆಯನ್ನು ನೋಡಬೇಕೆಂದು ಪ್ರೀತಿಯಿಂದ ಪಟ್ಟಣಕ್ಕೆ ಹೋಗಬೇಕೆಂದಿರುವ ರಾಜಪುತ್ರನನ್ನು ತಿಳಿದು ದೇವೇಂದ್ರನು ಅಲ್ಲಿಗೆ ಬಂದನು. ॥೩॥

**ವಾಸವಸ್ತು ತದಾ ರೂಪಂ ಕೃತ್ವಾ ವಿಪ್ರಸ್ಯ ಸತ್ವರಃ ।**
**ವಾರಯಾಮಾಸ ಯುಕ್ತ್ಯಾ ವೈ ಕುಮಾರಂ ಗಂತುಮುದ್ಯತಂ ॥೪॥**

॥ ಇಂದ್ರ ಉವಾಚ ॥

ರಾಜಪುತ್ರ ನ ಜಾನಾಸಿ ರಾಜನೀತಿಂ ಸುದುರ್ಲಭಾಂ ।
**ಅತಃ ಕರೋಷಿ ಮೂಢಸ್ತ್ವಂ ಗಮನಾಯ ಮತಿಂ ವೃಥಾ ॥೫॥**

**ಪಿತಾ ತವ ಮಹಾಭಾಗ ಬ್ರಾಹ್ಮಣೈರ್ವೇದಪಾರಗೈಃ ।**
**ಕಾರಯಿಷ್ಯತಿ ಹೋಮಂ ತೇ ಜ್ವಲಿತೇಽಥ ವಿಭಾವಸೌ ॥೬॥**

**ಆತ್ಮಾ ಹಿ ವಲ್ಲಭಸ್ತಾತ ಸರ್ವೇಷಾಂ ಪ್ರಾಣಿನಾಂ ಖಲು ।**
**ತದರ್ಥೇ ವಲ್ಲಭಾಃ ಸಂತಿ ಪುತ್ರದಾರಧನಾದಯಃ ॥೭॥**

---

ದೇವೇಂದ್ರನು ಬ್ರಾಹ್ಮಣನ ವೇಷದಿಂದ ಬೇಗನೆ ರಾಜಪುತ್ರನ ಸಮೀಪಕ್ಕೆ ಬಂದು ಪಟ್ಟಣಕ್ಕೆ ಹೊರಡಬೇಕೆಂದು ಪ್ರಯತ್ನಪಡುತ್ತಿದ್ದ ಅವನನ್ನು ಕುರಿತು ಯುಕ್ತಿಯಿಂದ ಕೂಡಿದ ಮಾತನ್ನು ಹೇಳಿ ತಡೆದನು. ॥೪॥

ದೇವೇಂದ್ರನು ಹೇಳಿದನು—ಎಲೈ ರಾಜಪುತ್ರನೇ, ರಾಜನೀತಿಯನ್ನು ನೀನು ತಿಳಿದವನಲ್ಲವು. ಆ ರಾಜನೀತಿಯು ಎಲ್ಲರಿಗೂ ಸುಲಭವಾಗಿ ತಿಳಿಯುವುದಿಲ್ಲವು! ಆದುದರಿಂದಲೇ ಅದನ್ನು ತಿಳಿಯದ ನೀನು ವ್ಯರ್ಥವಾಗಿ ಪಟ್ಟಣಕ್ಕೆ ಹೋಗುವ ಯೋಚನೆಯನ್ನು ಮಾಡಿರುವೆ! ॥೫॥

ಎಲೈ ಪುಣ್ಯವಂತನಾದ ರೋಹಿತನೇ, ನಿನ್ನ ತಂದೆಯು ವೇದವನ್ನು ಬಲ್ಲ ಬ್ರಾಹ್ಮಣರಿಂದ ನಿನ್ನನ್ನು ಯಜ್ಞಪಶುವನ್ನಾಗಿ ಮಾಡಿಸಿ ಉರಿಯುತ್ತಿರುವ ಅಗ್ನಿಯಲ್ಲಿ ಹೋಮವನ್ನು ಮಾಡಿಸುವನು. ॥೬॥

ಎಲೈ ರಾಜಪುತ್ರನೇ, ಸಮಸ್ತ ಪ್ರಾಣಿಗಳಿಗೂ ಆತ್ಮಸಂಬಂಧವಾದ ಪ್ರೀತಿಯು ಮುಖ್ಯವಾದುದು. ಮಕ್ಕಳು, ಹೆಂಡಿತಿ, ಹಣ, ಮುಂತಾದುವುಗಳೆಲ್ಲವೂ ಆತ್ಮನಿಗೋಸ್ಕರವಾಗಿಯೇ ಪ್ರೀತಿವಿಷಯಗಳಾಗುವುವು. ಈ ವಿಷಯದಲ್ಲಿ ಬೃಹದಾರಣ್ಯಕೋಪನಿಷತ್ತಿನಲ್ಲಿ 'ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತುಕಾಮಾಯ ಪತಿಃ ಪ್ರಿಯೋ ಭವತಿ' ಇತ್ಯಾದಿಯಾಗಿ, ಆತ್ಮಪ್ರೀತಿಯ ಅತಿಶಯವನ್ನು ಹೇಳಿರುವುದು. ॥೭॥

ಆತ್ಮನೋ ದೇಹರಕ್ಷಾರ್ಥಂ ಹತ್ವಾ ತ್ವಾಂ ವಲ್ಲಭಂ ಸುತಂ ।
ಹವನಂ ಕಾರಯಿತ್ವಾಽಸೌ ರೋಗಮುಕ್ತೋ ಭವಿಷ್ಯತಿ ॥೮॥

ತಸ್ಮಾತ್ತ್ವಯಾ ನ ಗಂತವ್ಯಂ ರಾಜಪುತ್ರ ಪಿತುರ್ಗೃಹೇ ।
ಮೃತೇ ಪಿತರಿ ಗಂತವ್ಯಂ ರಾಜ್ಯಾರ್ಥೇ ಸರ್ವಥಾ ಪುನಃ ॥೯॥

ಏವಂ ನಿಷೇಧಿತಸ್ತತ್ರ ವಾಸವೇನ ನೃಪಾತ್ಮಜಃ ।
ವನಮಧ್ಯೇ ಸ್ಥಿತಃ ಕಾಮಂ ಪುನಃ ಸಂವತ್ಸರಂ ನೃಪ ॥೧೦॥

ಅತ್ಯಂತಂ ದುಃಖಿತಂ ಶ್ರುತ್ವಾ ಹರಿಶ್ಚಂದ್ರಂ ತದಾತ್ಮಜಃ ।
ಗಮನಾಯ ಮತಿಂ ಚಕ್ರೇ ಮರಣೇ ಕೃತನಿಶ್ಚಯಃ ॥೧೧॥

ತುರಾಷಾಡ್ದ್ವಿಜರೂಪೇಣ ತತ್ರಾಗತ್ಯ ಚ ರೋಹಿತಂ ।
ನಿವಾರಯಾಮಾಸ ಸುತಂ ಯುಕ್ತಿವಾಕ್ಯೈಃ ಪುನಃಪುನಃ ॥೧೨॥

---

ಹರಿಶ್ಚಂದ್ರನು ತನ್ನ ದೇಹರಕ್ಷಣೆಗಾಗಿ ಪ್ರೀತಿಪಾತ್ರನಾದ ಮಗನನ್ನು ಕೊಂದು ಯಜ್ಞವನ್ನು ಮಾಡಿ, ರೋಗವನ್ನು ಕಳೆದುಕೊಳ್ಳುವನು. ಆದುದರಿಂದ ಎಲೈ ರಾಜಪುತ್ರನೇ, ನೀನು ತಂದೆಯ ಮನೆಗೆ ಈಗ ಹೋಗಬೇಡ. ನಿನ್ನ ತಂದೆಯು ಮರಣಹೊಂದಿದ ಮೇಲೆ ರಾಜ್ಯಾರ್ಥವಾಗಿ ನೀನು ಅಲ್ಲಿಗೆ ಹೋಗಬೇಕು. ॥೯॥

ಓ ಜನಮೇಜಯರಾಜನೇ, ಕೇಳು ಈ ರೀತಿಯಲ್ಲಿ ದೇವೇಂದ್ರನು ರಾಜಪುತ್ರನನ್ನು ತಡೆಯುತ್ತಲು ಆ ರಾಜಪುತ್ರನು ಮತ್ತೊಂದು ವರುಷದವರೆಗೆ ಕಾಡಿನಲ್ಲಿಯೇ ಇದ್ದುಬಿಟ್ಟನು. ॥೧೦॥

ಹರಿಶ್ಚಂದ್ರನು ಮುಂಚಿಗಿಂತಲೂ ಹೆಚ್ಚು ದುಃಖಪಡುತ್ತಿರುವನೆಂದು ರಾಜಪುತ್ರನು ಕೇಳಿ, ತನ್ನ ಮರಣವಾದರೂ ಆಗಲಿ ಎಂದು ನಿಶ್ಚಯಿಸಿಕೊಂಡು, ರಾಜನ ಸಮೀಪಕ್ಕೆ ಹೋಗಲು ಮನಸ್ಸನ್ನು ಮಾಡಿದ್ದನು. ಆದರೆ, ॥೧೧॥

ದೇವೇಂದ್ರನು ಬ್ರಾಹ್ಮಣವೇಷದಿಂದ ಅಲ್ಲಿಗೆ ಪುನಃ ಬಂದು ಮತ್ತೆ ಮತ್ತೆ ಯುಕ್ತಿಯುಕ್ತವಾದ ಮಾತುಗಳಿಂದ ರಾಜಪುತ್ರನಾದ ರೋಹಿತನನ್ನು ಪಟ್ಟಣಕ್ಕೆ ಹೋಗದಂತೆ ತಡೆದನು. ॥೧೨॥

ಹರಿಶ್ಚಂದ್ರೋಽತಿದುಃಖಾರ್ತೋ ವಸಿಷ್ಠಂ ಸ್ವಪುರೋಹಿತಂ ।
ಪಪ್ರಚ್ಛ ರೋಗನಾಶಾಯ ತತ್ರೋಪಾಯಂ ಸುನಿಶ್ಚಿತಂ ॥೧೩॥

ತಮಾಹ ಬ್ರಹ್ಮಣಃ ಪುತ್ರೋ ಯಜ್ಞಂ ಕುರು ನೃಪೋತ್ತಮ ।
ಕ್ರಯಕ್ರೀತೇನ ಪುತ್ರೇಣ ಶಾಪಮೋಕ್ಷೋ ಭವಿಷ್ಯತಿ ॥೧೪॥

ಪುತ್ರಾ ದಶವಿಧಾಃ ಪ್ರೋಕ್ತಾ ಬ್ರಾಹ್ಮಣೈರ್ವೇದಪಾರಗೈಃ ।
ದ್ರವ್ಯೇಣಾನೀಯ ತಸ್ಮಾತ್ತ್ವಂ ಪುತ್ರಂ ಕುರು ನೃಪೋತ್ತಮ ॥೧೫॥

ವರುಣೋಽಪಿ ಪ್ರಸನ್ನಃ ಸನ್ಸುಖಕಾರೀ ಭವಿಷ್ಯತಿ ।
ಲೋಭಾತ್ಕೋಽಪಿ ದ್ವಿಜಃ ಪುತ್ರಂ ಪ್ರದಾಸ್ಯತಿ ಸ್ವರಾಷ್ಟ್ರಜಃ ॥೧೬॥

ಏವಂ ಪ್ರಮೋ(ಚೋ)ದಿತೋ ರಾಜಾ ವಸಿಷ್ಠೇನ ಮಹಾತ್ಮನಾ ।
ಪ್ರಧಾನಂ ಪ್ರೇರಯಾಮಾಸ ತದನ್ವೇಷಣಕಾಮ್ಯಯಾ ॥೧೭॥

---

ಹರಿಶ್ಚಂದ್ರನು ಅತ್ಯಂತ ದುಃಖವನ್ನನುಭವಿಸುತ್ತ, ಪುರೋಹಿತನಾದ ವಸಿಷ್ಠನನ್ನು ಕುರಿತು, ತನ್ನ ರೋಗನಾಶಕ್ಕೆ ಉಪಾಯವೇನೆಂದು ಪ್ರಶ್ನೆಮಾಡಿದನು.॥೧೩॥

ಬ್ರಹ್ಮನ ಮಗನಾದ ವಸಿಷ್ಠನು ಆ ರಾಜನನ್ನು ಕುರಿತು, "ಎಲೈ ರಾಜಶ್ರೇಷ್ಠನೇ, ಕ್ರಯಕ್ಕೆ ಒಬ್ಬ ಮಗನನ್ನು ಕೊಂಡು, ಆವನನ್ನು ಪಶುವಾಗಿ ಮಾಡಿ, ಯಜ್ಞವನ್ನು ಮಾಡು. ಅದರಿಂದ ನಿನ್ನ ಶಾಪದ ಬಿಡುಗಡೆಯಾಗುವುದು." ಎಂದು ಹೇಳಿದನು. ॥೧೪॥

ವೇದವನ್ನು ಬಲ್ಲ ಬ್ರಾಹ್ಮಣರು ಹತ್ತು ಬಗೆಯ ಪುತ್ರರನ್ನು ಹೇಳಿರುವರು. ಆದುದರಿಂದ ನೀನು ಹಣವನ್ನು ಕೊಟ್ಟು ಒಬ್ಬ ಪುತ್ರನನ್ನು ತರಿಸಿ ಅವನನ್ನು ಪಶುವನ್ನಾಗಿ ಮಾಡಿಕೊಂಡು ಯಜ್ಞವನ್ನು ನೆರವೇರಿಸು. ನಿನ್ನ ರಾಜ್ಯದಲ್ಲಿಯೇ ಯಾವನಾದರೊಬ್ಬ ಬ್ರಾಹ್ಮಣನು ಅತ್ಯಾಸೆಯಿಂದಲೋ, ಆವಶ್ಯಕತೆಯಿಂದಲೋ ತನ್ನ ಮಗನನ್ನು ಮಾರಬಹುದು. ಅವನನ್ನು ತಂದು ಪಶುವನ್ನಾಗಿ ಮಾಡಿದರೆ ವರುಣನೂ ಸಂತುಷ್ಟನಾಗಿ ನಿನಗೆ ಸುಖವನ್ನುಂಟುಮಾಡುವನು ! ॥೧೫-೧೬॥

ಮಹಾತ್ಮನಾದ ವಸಿಷ್ಠನು ಹೀಗೆ ಹೇಳಿ ರಾಜನನ್ನು ಸಂತೋಷಪಡಿಸಿ ಪ್ರೇರಿಸಲು, ಅಂತಹ ಪುತ್ರನನ್ನು ಹುಡುಕಿಕೊಂಡು ಬರಬೇಕೆಂದು ರಾಜನು ಮಂತ್ರಿಗೆ ಹೇಳಿಕಳುಹಿಸಿದನು. ॥೧೭॥

ಅಜೀಗರ್ತೋ ದ್ವಿಜಃ ಕಶ್ಚಿದ್ವಿಷಯೇ ತಸ್ಯ ಭೂಪತೇಃ ।
ತಸ್ಯಾಽಸಂಶ್ಚ ತ್ರಯಃ ಪುತ್ರಾ ನಿರ್ಧನಸ್ಯ ವಿಶೇಷತಃ ॥೧೮॥

ಪ್ರಧಾನೇನಾಪ್ಯಸೌ ಪೃಷ್ಟಃ ಪುತ್ರಾರ್ಥಂ ದುರ್ಬಲೋ ದ್ವಿಜಃ ।
ಗವಾಂ ಶತಂ ದದಾಮೀತಿ ದೇಹಿ ಪುತ್ರಂ ಮುಖಾಯ ವೈ ॥೧೯॥

ಶುನಃಪುಚ್ಛಃ ಶುನಶ್ಶೇಫಃ ಶುನೋಲಾಂಗೂಲ ಇತ್ಯಮೀ ।
ತೇಷಾಮೇಕತಮಂ ದೇಹಿ ದದಾಮಿ ತು ಗವಾಂ ಶತಂ ॥೨೦॥

ಅಜೀಗರ್ತಸ್ತು ತಚ್ಛ್ರುತ್ವಾ ಕ್ಷುಧಯಾ ಪೀಡಿತೋ ಭೃಶಂ ।
ಪುತ್ರಂ ಚೈಕತಮಂ ತೇಭ್ಯೋ ವಿಕ್ರೇತುಂ ವೈ ಮನೋ ದಧೇ ॥೨೧॥

ಕಾರ್ಯಾಧಿಕಾರಿಣಂ ಜ್ಯೇಷ್ಠಂ ಮತ್ವಾ ನಾಸಾವದಾದಮುಂ ।
ಕನಿಷ್ಠಂ ನಾಪ್ಯದಾನ್ಮಾತಾ ಮಮೈಷ ಇತಿ ವಾದಿನೀ ॥೨೨॥

ಮಧ್ಯಮಂ ಚ ಶುನಶ್ಶೇಫಂ ದದೌ ಗವಾಂ ಶತೇನ ಚ ।
ಆನಿನಾಯ ಪಶುಂ ಚಕ್ರೇ ನರಮೇಧೇ ನರಾಧಿಪಃ ॥೨೩॥

---

ಆ ರಾಜನ ದೇಶದಲ್ಲಿಯೇ ಅಜೀಗರ್ತನೆಂಬ ಒಬ್ಬ ಬಡಬ್ರಾಹ್ಮಣನಿದ್ದನು. ಅವನಿಗೆ ಮೂವರು ಮಕ್ಕಳಿದ್ದರು. ಮಂತ್ರಿಯು ಆ ಬಡಬ್ರಾಹ್ಮಣನನ್ನು ಕುರಿತು, ಓ ಬ್ರಾಹ್ಮಣನೇ, ನಿನಗೆ ಒಂದುನೂರು ಹಸುಗಳನ್ನು ಕೊಡುವೆನು. ನಿನ್ನ ಮಗನನ್ನು ಯಜ್ಞಕ್ಕೋಸ್ಕರವಾಗಿ ಕೊಡು. ಎಂದು ಕೇಳಿದನು. ॥೧೮-೧೯॥

ನಿನ್ನ ಮಕ್ಕಳಾದ ಶುನಃಪುಚ್ಛ, ಶುನಶ್ಶೇಫ, ಶುನೋಲಾಂಗೂಲ, ಎಂಬ ಮೂವರಲ್ಲಿ ಒಬ್ಬನನ್ನು ಕೊಡು. ಒಂದುನೂರು ಹಸುಗಳನ್ನು ಕೊಡುವೆನು. ಎಂದು ಹೇಳಲು, ಅಜೀಗರ್ತನು ಅದನ್ನು ಕೇಳಿ ಹಸಿವಿನಿಂದ ಕೂಡಿದವನಾಗಿದ್ದುದರಿಂದ, ಒಬ್ಬನನ್ನು ಮಾರಲು ಮನಸ್ಸನ್ನು ಮಾಡಿದನು! ॥೨೦-೨೧॥

ಹಿರಿಯ ಮಗನು ತಂದೆತಾಯಿಯರಿಗೆ ಮಾಡಬೇಕಾದ ಉತ್ತರಕರ್ಮಾಧಿಕಾರಿಯೆಂದು ತಂದೆಯು ಅವನನ್ನು ಕೊಡಲಿಲ್ಲ. ಕಿರಿಯ ಮಗನನ್ನು ತಾಯಿಯು ತನಗೆ ಪ್ರೀತಿಪಾತ್ರನೆಂದಳು. ಹೀಗಾಗಲು ಮಧ್ಯದ ಮಗನಾದ ಶುನಶ್ಶೇಫನನ್ನು ಒಂದುನೂರು ಹಸುಗಳನ್ನು ತೆಗೆದುಕೊಂಡು ಕೊಟ್ಟುಬಿಟ್ಟನು. ರಾಜನು ಅವನನ್ನು ಕರೆದುತಂದು ನರಮೇಧಯಜ್ಞದಲ್ಲಿ ಪಶುವನ್ನಾಗಿ ಮಾಡಿದನು. ॥೨೨-೨೩॥

ರುದಂತಂ ದುಃಖಿತಂ ದೀನಂ ವೇಪಮಾನಂ ಭೃಶಾತುರಂ ।
ಯೂಪೇ ಬದ್ಧಂ ನಿರೀಕ್ಷ್ಯೈನಮುಂ ಚುಕ್ರುಶುರ್ಮುನಯಸ್ತದಾ ॥೨೪॥

ಶಾಮಿತ್ರಾಯ ಪಶುಂ ಚಕ್ರೇ ನರಮೇಧೇ ನರಾಧಿಪಃ ।
ಶಮಿತಾ ನಾದದೇ ಶಸ್ತ್ರಂ ತಮಾಲಂಭಯಿತುಂ ಶಿಶುಂ ॥೨೫॥

ನಾಽಹಂ ದ್ವಿಜಸುತಂ ದೀನಂ ರುದಂತಂ ಕರುಣಂ ಭೃಶಂ ।
ಹನಿಷ್ಯಾಮಿ ಸ್ವಲೋಭಾರ್ಥಮಿತ್ಯುವಾಚಾಪ್ಯಸೌ ತದಾ ॥೨೬॥

ಇತ್ಯುಕ್ತ್ವಾ ವಿರರಾಮಾಽಸೌ ಕರ್ಮಣೋ ದುಷ್ಕರಾದಥ ।
ರಾಜಾ ಸಭಾಸದಃ ಪ್ರಾಹ ಕಿಂ ಕರ್ತವ್ಯಮಿತಿ ದ್ವಿಜಾಃ ॥೨೭॥

ಜಾತಃ ಕಿಲ ಕಿಲಾಶಬ್ದೋ ಜನಾನಾಂ ಕ್ರೋಶತಾಂ ತದಾ ।
ಕ್ರಂದಮಾನೇ ಶುನಶ್ಶೇಫೇ ಸಭಾಯಾಂ ಭೃಶಮದ್ಭುತಂ ॥೨೮॥

---

ದುಃಖದಿಂದ ಅಳುತ್ತಾ ದೀನನಾಗಿ ಭಯದಿಂದ ನಡುಗುತ್ತಾ ಇರುವ, ಯೂಪಸ್ತಂಭದಲ್ಲಿ ಕಟ್ಟಿದ್ದ ಆ ಶುನಶ್ಶೇಫನನ್ನು ಕಂಡು, ಮುನಿಗಳೆಲ್ಲರೂ ಬಹಳ ದುಃಖಪಟ್ಟರು. ॥೨೪॥

ರಾಜನು ನರಮೇಧಯಜ್ಞದಲ್ಲಿ ವಧಕರ್ಮಕ್ಕೋಸ್ಕರವಾಗಿ ಶಮಿತೃ ಎಂಬ ಋತ್ವಿಜನ ವಶಕ್ಕೆ ಆ ನರಪಶುವನ್ನು ಕೊಟ್ಟಾಗ ಆ ಶಮಿತನು (ವಧಕರ್ಮಮಾಡತಕ್ಕವನು) ಆ ಹುಡುಗನನ್ನು ಆಹುತಿಗೆ ಸಿದ್ಧಮಾಡಲು ಶಸ್ತ್ರವನ್ನು ತೆಗೆದುಕೊಳ್ಳಲಿಲ್ಲ! ಆ ಶಮಿತನೆಂಬ ಋತ್ವಿಜನು ಬ್ರಾಹ್ಮಣಪುತ್ರನೂ, ದೀನನೂ, ನೋಡಿದವರಿಗೆ ಕನಿಕರವುಂಟಾಗುವಂತೆ ಅಳುತ್ತಿರುವವನೂ, ಆದ ಇವನನ್ನು ನನ್ನ ದಕ್ಷಿಣೆಯ ಆಸೆಗಾಗಿ ಕೊಲ್ಲುವುದಿಲ್ಲ! ಎಂದು ಹೇಳಿದನು. ॥೨೫-೨೬॥

ಹೀಗೆಂದು ಹೇಳಿ ಶಮಿತನು ಆ ಕಷ್ಟವಾದ ಕೆಲಸವನ್ನು ಮಾಡಲಾರದೆ ಸುಮ್ಮನಿದ್ದನು. ರಾಜನು ಸಭಾಸದರನ್ನು ಕುರಿತು, ಓ ಬ್ರಾಹ್ಮಣರೇ, ಈಗ ಏನನ್ನು ಮಾಡಬೇಕು? ಎಂದು ಕೇಳಿದನು. ಆಗ ಶುನಶ್ಶೇಫನು ಅಳುತ್ತಿರುವಲ್ಲಿ, ಅಲ್ಲಿದ್ದ ಜನರಲ್ಲಿ ದೊಡ್ಡ ಗದ್ದಲವುಂಟಾಯಿತು. ಆ ಶುನಶ್ಶೇಫನನ್ನು ನೋಡಿ ಮರುಕಗೊಂಡಿದ್ದ ಆ ಸಭೆಯಲ್ಲಿಯೂ ವಿಶೇಷವಾಗಿ ಗದ್ದಲವಾಯಿತು. ॥೨೭-೨೮॥

ಅಜೀಗರ್ತಸ್ತದೋತ್ಥಾಯ ತಮುವಾಚ ನೃಪೋತ್ತಮಂ ।
ರಾಜನ್ಕಾರ್ಯಂ ಕರಿಷ್ಯಾಮಿ ತವಾಽಹಂ ಸುಸ್ಥಿರೋ ಭವ ॥೨೯॥

ವೇತನಂ ದ್ವಿಗುಣಂ ದೇಹಿ ಹನಿಷ್ಯಾಮಿ ಪಶುಂ ಕಿಲ ।
ಕರ್ತವ್ಯಂ ನು ಖಕಾರ್ಯಂ ವೈ ಮಯಾ ತೇಽದ್ಯ ಧನಾರ್ಥಿನಾ ॥೩೦॥

ದುಃಖಿತಸ್ಯ ಧನಾರ್ಥಸ್ಯ ಸದಾಽಸೂಯಾ ಪ್ರಸೂಯತೇ ।

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಹರಿಶ್ಚಂದ್ರೋಮುದಾಽನ್ವಿತಃ ॥೩೧॥

ತಮುವಾಚ ದದಾಮ್ಯದ್ಯ ಗವಾಂ ಶತಮನುತ್ತಮಂ ।
ತದಾಕರ್ಣ್ಯ ಪಿತಾ ತಸ್ಯ ಪುತ್ರಂ ಹಂತುಂ ಸಮುದ್ಯತಃ ॥೩೨॥

ಲೋಭೇನಾಕುಲಚಿತ್ತೋಽಸೌ ಶಾಮಿತ್ರೇ ಕೃತನಿಶ್ಚಯಃ ।
ಸಮುದ್ಯತಂ ಚ ತಂ ದೃಷ್ಟ್ವಾ ಜನಾಃ ಸರ್ವೇ ಸಭಾಸದಃ ॥೪೩॥

---

ಆಗ ಅಜೀಗರ್ತನೆಂಬವನು ಎದ್ದು ಆ ರಾಜಶ್ರೇಷ್ಠನನ್ನು ಕುರಿತು ' ಓ ರಾಜನೇ, ನಿನ್ನ ಕಾರ್ಯವನ್ನು ನಾನು ಮಾಡುತ್ತೇನೆ. ಸ್ಥಿರಮನಸ್ಸಿನಿಂದಿರು. ಎರಡ ರಷ್ಟು ದಕ್ಷಿಣೆಯನ್ನು ಕೊಡು. ಪಶುವನ್ನು ನಾನು ಕೊಲ್ಲುತ್ತೇನೆ! ಧನಾಪೇಕ್ಷೆಯುಳ್ಳ ನಾನು ನಿನ್ನ ಯಜ್ಞಕಾರ್ಯವನ್ನು ನಡೆಸುತ್ತೇನೆ.' ಎಂದು ಹೇಳಿದನು. ದುಃಖವ ನ್ನನುಭವಿಸುತ್ತಿರುವ ಹಣದಾಸೆಯ ಮನುಷ್ಯನಿಗೆ ಯಾವಾಗಲೂ ಮಗನ ವಿಷಯ ದಲ್ಲಿಯೂ ಕೂಡ ದ್ವೇಷಬುದ್ಧಿಯು ಹುಟ್ಟುತ್ತದೆ ! ॥೨೯-೩೦॥

ವ್ಯಾಸನು ಹೇಳಿದನು—ಆ ಅಜೀಗರ್ತನಮಾತನ್ನು ಕೇಳಿ ಹರಿಶ್ಚಂದ್ರನು ಸಂತೋಷದಿಂದ ಈಗಲೇ ಉತ್ತಮವಾದ ನೂರು ಹಸುಗಳನ್ನು ಕೊಡುತ್ತೇನೆಂದು ಹೇಳಿದನು. ಆ ಮಾತನ್ನು ಕೇಳಿ ಆ ಶುನಶ್ಶೇಫನ ತಂದೆಯು ಮಗನನ್ನು ಕೊಲ್ಲಲು ಸಿದ್ಧನಾದನು ! ॥೩೧-೩೨॥

ಅತ್ಯಾಸೆಯಿಂದ ಕೂಡಿದ ಮನಸುಳ್ಳ ಅಜೀಗರ್ತನು ಪಶುವಧಕರ್ಮವನ್ನೂ ಮಾಡುವೆನೆಂದು ನಿಶ್ಚಯಿಸಿದನು. ವಧಕಾರ್ಯಕ್ಕೆ ಸಿದ್ಧನಾದ ಅವನನ್ನು ನೋಡಿ ಸಭೆಯಲ್ಲಿದ್ದ ಜನರೆಲ್ಲರೂ " ಹಾಹಾ " ಎಂದು ಹೇಳುತ್ತಾ ವಿಶೇಷ ದುಃಖದಿಂದ

ಚುಕ್ರುಶುರ್ಭೃಶದುಃಖಾರ್ತಾ ಹಾಹೇತಿ ಜಗದುರ್ವಚಃ ।
ಪಿಶಾಚೋಽಯಂ ಮಹಾಪಾಪೀ ಕ್ರೂರಕರ್ಮಾ ದ್ವಿಜಾಕೃತಿಃ ॥೩೪॥

ಯತ್ಸ್ವಯಂ ಸ್ವಸುತಂ ಹಂತುಮುದ್ಯತಃ ಕುಲಪಾಂಸನಃ ।
ಧಿಕ್ಚಾಂಡಾಲ ಕಿಮೇತತ್ತೇ ಪಾಪಕರ್ಮ ಚಿಕೀರ್ಷಿತಂ ॥೩೫॥

ಹತ್ವಾ ಸುತಂ ಧನಂ ಪ್ರಾಪ್ಯ ಕಿಂ ಸುಖಂ ತೇ ಭವಿಷ್ಯತಿ ।
ಆತ್ಮಾ ವೈ ಜಾಯತೇ ಪುತ್ರ ಅಂಗಾದ್ವೈ ವೇದಭಾಷಿತಂ ॥೩೬॥

ತತ್ಕಥಂ ಪಾಪಬುದ್ಧೇ ತ್ವಮಾತ್ಮಾನಂ ಹಂತುಮಿಚ್ಛಸಿ ।
ಏವಂ ಕೋಲಾಹಲೇ ತತ್ರ ಜಾತೇ ಕೌಶಿಕನಂದನಃ ॥೩೭॥

ಸಮೀಪಂ ನೃಪತೇರ್ಗತ್ವಾ ತಮುವಾಚ ದಯಾಪರಃ ।

॥ ವಿಶ್ವಾಮಿತ್ರ ಉವಾಚ ॥

ರಾಜನ್ಮುಂಚ ಶುನಶ್ಶೇಫಂ ರುದಂತಂ ಭೃಶದುಃಖಿತಂ ॥೩೮॥

---

ಆತ್ತರು. ಮತ್ತು ಇವನು ಮಹಾಪಾಪಿಯು. ಕ್ರೂರವಾದ ಕೆಲಸವನ್ನು ಮಾಡುವ ಬ್ರಾಹ್ಮಣನ ಆಕಾರದ ಪಿಶಾಚಿಯು ! ವಂಶನಾಶಕನಾದ ಇವನು ತನ್ನ ಮಗನನ್ನೇ ಕೊಲ್ಲುವುದಕ್ಕೆ ಯತ್ನಿಸಿದನಲ್ಲ! ಎಂದರು. ಮತ್ತು ಆಜೀಗರ್ತನನ್ನು ಕುರಿತು, ||೩೩-೩೪||

ಎಲೈ ಚಾಂಡಾಲನೇ, ನಿನ್ನನ್ನು ನಿಂದಿಸಬೇಕು. ಯಾವ ಪ್ರಯೋಜನಕ್ಕಾಗಿ ಈ ಪಾಪಕಾರ್ಯವನ್ನು ಮಾಡುವುದಕ್ಕೆ ಅಪೇಕ್ಷಿಸಿದೆ ? ಮಗನನ್ನು ಕೊಂದು ಧನವನ್ನು ಪಡೆದ ನಿನಗೆ ಯಾವ ಸುಖವುಂಟಾಗುವುದು ? ತಂದೆಯು ತನ್ನ ಅಂಗದಿಂದಲೇ ತಾನೇ ಮಗನಾಗಿ ಹುಟ್ಟುವನು ಎಂದು ವೇದದಲ್ಲಿ ಹೇಳಿಲ್ಲವೆ ? ಹೀಗಿರುವಲ್ಲಿ ಪಾಪಿಯಾದ ನೀನು ಆತ್ಮನಾಶವನ್ನು ಹೇಗೆ ಮಾಡಿಕೊಳ್ಳುವೆ ? ||೩೫-೩೬||

ಈ ರೀತಿಯಲ್ಲಿ ನಿಂದಿಸುತ್ತಾ ಆ ಸ್ಥಳದಲ್ಲಿ ಗದ್ದಲವಾಗುತ್ತಿರಲು, ವಿಶ್ವಾಮಿತ್ರನು ರಾಜನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ದಯೆಯಿಂದ ಕೂಡಿ ಹೀಗೆ ಮಾತನಾಡಿದನು. ||೩೭||

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ವಿಶೇಷವಾದ ದುಃಖದಿಂದ ಅಳುತ್ತಿರುವ ಈ ಶುನಶ್ಶೇಫನನ್ನು ಬಿಟ್ಟುಬಿಡು. ನಿನ್ನ ಯಜ್ಞವೂ ಪೂರ್ಣವಾಗು

**ಕ್ರತುಸ್ತೇ ಭವಿತಾ ಪೂರ್ಣೋ ರೋಗನಾಶಶ್ಚ ಸರ್ವಥಾ ।**
**ದಯಾಸಮಂ ನಾಸ್ತಿ ಪುಣ್ಯಂ ಪಾಪಂ ಹಿಂಸಾಸಮಂ ನ ಹಿ ॥೩೯॥**

**ರಾಗಿಣಾಂ ರೋಚನಾರ್ಥಾಯ ನೋದನೇಯಂ ವಿಚಾರಯ ।**
**ಆತ್ಮದೇಹಸ್ಯ ರಕ್ಷಾರ್ಥಂ ಪರದೇಹನಿಕೃಂತನಂ ॥೪೦॥**
**ನ ಕರ್ತವ್ಯಂ ಮಹಾರಾಜ ಸರ್ವತಃ ಶುಭಮಿಚ್ಛತಾ ।**

---

ವುದು. ರೋಗವೂ ನಾಶವಾಗುವುದು. ದಯೆಗೆ ಸಮಾನವಾದ ಪುಣ್ಯವಿಲ್ಲವು. ಅಲ್ಲದೆ ಹಿಂಸೆಗೆ ಸಮಾನವಾದ ಪಾಪವಿಲ್ಲವು! ॥೩೮-೩೯॥

ವೇದದಲ್ಲಿ ಹೇಳಿರುವ ಪಶುಬಂಧರೂಪವಾದ ವಿಧಿವಾಕ್ಯಗಳಿಗೆ ಕಾಮಿಗಳಿಗೂ ಕರ್ಮಾನುಷ್ಠಾನದಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದೇ ಮುಖ್ಯವಾದ ಉದ್ದೇಶವು, ಮತ್ತು ತಾತ್ಪರ್ಯವು. ಅನಾವಶ್ಯಕವಾಗಿ ಪಶುಹಿಂಸೆಯನ್ನು ಮಾಡಬೇಕೆಂಬುದಲ್ಲ. ವೇದಶಾಸ್ತ್ರಗಳಿಗೆ ಮಾನವನ ಅಹಿಂಸಾವೃತ್ತಿಯಲ್ಲಿಯೇ ತಾತ್ಪರ್ಯವು. ಭಾಗವತದಲ್ಲಿಯೂ ಹೀಗೆ ಹೇಳಿದೆ. "ಲೋಕೇ ವ್ಯವಾಯಾಮಿಷಮದ್ಯಸೇವಾ ನಿತ್ಯಾಸ್ತು ಜಂತೋರ್ನ ಹಿ ತತ್ರ ಚೋದನಾ । ವ್ಯವಸ್ಥಿತಿಸ್ತಾಸು ವಿವಾಹಯಜ್ಞಸುರಾಗ್ರಹೈರಾಸು ನಿವೃತ್ತಿರಿಷ್ಟಾ ॥" ಲೋಕದಲ್ಲಿ ಸ್ತ್ರೀಸಂಗವೂ ಮಾಂಸ ಮದ್ಯಸೇವನೆಯೂ ಸ್ವಾಭಾವಿಕವಾಗಿಯೇ ಪ್ರಾಣಿಗಳಿಗೆ ಆಸಕ್ತಿಯನ್ನು ಹುಟ್ಟಿಸುತ್ತಿರುವಲ್ಲಿ ಅದನ್ನು ಶಾಸ್ತ್ರದಿಂದ ವಿಧಾನಮಾಡಬೇಕಾದುದಿಲ್ಲವು. ಆದರೆ ತಿಳಿವಳಿಕೆ ಇಲ್ಲದ ಕಾಮಿಗಳು ಕಾಮಿನೀ ಮದ್ಯಮಾಂಸಗಳ ಸೇವನೆಯನ್ನು ಬಿಡಲಾರದೆ ಹೋದರೆ, ಅಂಥವರಿಗಾಗಿ ವಿವಾಹ ಮಾಡಿಕೊಂಡು ಸ್ತ್ರೀಸಂಗಮಾಡಬಹುದೆಂದೂ, ಯಜ್ಞವನ್ನು ಮಾಡಿ ಮಾಂಸಮದ್ಯ ಸೇವನೆಯನ್ನು ಮಾಡಬಹುದೆಂದೂ, ವೇದದಲ್ಲಿ ವ್ಯವಸ್ಥೆಯನ್ನು ಮಾಡಿ ಹೇಳಿರುವುದು. ಅಷ್ಟೇ ಹೊರತು ಅವನ್ನು ಸೇವಿಸಬೇಕೆಂದು ವಿಧಾನಮಾಡುವುದರಲ್ಲಿ ವಿಧಿಶಾಸ್ತ್ರಗಳಿಗೂ ತಾತ್ಪರ್ಯವಿಲ್ಲವು. ಆದುದರಿಂದ ಒಟ್ಟಿನಲ್ಲಿ ಮಾನವನಿಗೆ ಈ ಭೋಗಗಳಲ್ಲಿ ಆಶೆಯ ನಿವೃತ್ತಿಯೊಡನೆ ಧರ್ಮಾಚರಣೆಯೇ ಇಷ್ಟವಾದುದು, ಮತ್ತು ಶ್ರೇಯಸ್ಕರವಾದುದೆಂದು ಬೋಧಿಸಿ ವಿಧಿಸುವುದೇ ವೇದಶಾಸ್ತ್ರಗಳ ಉದ್ದೇಶವಾಗಿದೆ ಎಂದು ತಿಳಿಯಬೇಕು. ಅಲ್ಲದೆ ಓ ಮಹಾರಾಜನೇ, ಶುಭವಾಗಬೇಕೆಂದು ಅಪೇಕ್ಷಿಸುವವನು ತನ್ನ ದೇಹರಕ್ಷಣೆಗಾಗಿ ಪರದೇಹವನ್ನು ಕತ್ತರಿಸಬಾರದು. ಈ ಅಂಶಗಳನ್ನು ಓ ರಾಜನೇ, ಸೂಕ್ಷ್ಮವಾಗಿ ವಿಮರ್ಶಿಸಿ ತಿಳಿ. ॥೪೦॥

ದಯಯಾ ಸರ್ವಭೂತೇಷು ಸಂತುಷ್ಟೋ ಯೇನ ಕೇನ ಚ ॥೪೧॥

ಸರ್ವೇಂದ್ರಿಯೋಪಶಾಂತ್ಯಾ ಚ ತುಷ್ಯತ್ಯಾಶು ಜಗತ್ಪತಿಃ ।
ಆತ್ಮವತ್ಸರ್ವಭೂತೇಷು ಚಿಂತನೀಯಂ ನೃಪೋತ್ತಮ ॥೪೨॥

ಜೀವಿತವ್ಯಂ ಪ್ರಿಯಂ ನೂನಂ ಸರ್ವೇಷಾಂ ಸರ್ವದಾ ಕಿಲ ।
ತ್ವಮಿಚ್ಛಸಿ ಸುಖಂ ಕರ್ತುಂ ದೇಹೇ ಹತ್ವಾ ತ್ವಮುಂ ದ್ವಿಜಂ ॥೪೩॥

ಕಥಂ ನೇಚ್ಛೇದಸೌ ದೇಹಂ ರಕ್ಷಿತುಂ ಸ್ವಸುಖಾಸ್ಪದಂ ।
ಪೂರ್ವಜನ್ಮಕೃತಂ ವೈರಂ ನಾನೇನ ಸಹ ತೇ ನೃಪ ॥೪೪॥

ಯೇನಾಮುಂ ಹಂತುಕಾಮಸ್ತ್ವಂ ದ್ವಿಜಪುತ್ರಂ ನಿರಾಗಸಂ ।
ಯೋಽಯಂ ಹಂತಿ ವಿನಾ ವೈರಂ ಸ್ವಕಾಮಃ ಸತತಂ ಪುನಃ ॥೪೫॥

---

ಓ ರಾಜೋತ್ತಮನೇ, ಅಷ್ಟೇ ಅಲ್ಲದೆ ಸಮಸ್ತ ಪ್ರಾಣಿಗಳಿಗೂ ದಯೆಯನ್ನು ತೋರಿಸುವುದರಿಂದಲೂ, ತನಗೆ ದೊರೆತಷ್ಟು ಪದಾರ್ಥಗಳಿಂದಲೇ ಸಂತೋಷಪಡು ವುದರಿಂದಲೂ, ಸಮಸ್ತ ಇಂದ್ರಿಯಗಳ ಉಪಶಾಂತಿಯಿಂದಲೂ, ಜಗದೀಶ್ವರನು ಬೇಗನೆ ತೃಪ್ತಿಪಡುವನು. ಎಲೈ ರಾಜಶ್ರೇಷ್ಠನೇ, ಸಮಸ್ತ ಪ್ರಾಣಿಗಳೂ ಬದುಕಿರಲು ಆಶಿಸುತ್ತವೆ ಎಂಬುದನ್ನು ಪ್ರತಿಯೊಬ್ಬ ಮಾನವನೂ ತಿಳಿಯಬೇಕು. ಏಕೆಂದರೆ ಈ ಲೋಕದಲ್ಲಿ ಸಮಸ್ತ ಪ್ರಾಣಿಗಳಿಗೂ ಯಾವಾಗಲೂ ತಮ್ಮ ಜೀವನದ ಮೇಲೆ ಪ್ರೀತಿಯು ಸ್ವಾಭಾವಿಕವಾಗಿಯೂ ಅನಿವಾರ್ಯವಾಗಿಯೂ ಇದ್ದೇ ಇರುವುದು ! ||೪೧-೪೨||

ಆದುದರಿಂದಲೇ ಈ ಬ್ರಾಹ್ಮಣನನ್ನು ಕೊಂದಾದರೂ ನಿನ್ನ ದೇಹದಲ್ಲಿ ಸುಖ ವನ್ನುಂಟುಮಾಡಿಕೊಳ್ಳಲು ನೀನೂ ಅಪೇಕ್ಷಿಸುತ್ತಿರುವೆ! ಹಾಗೆಯೇ ತನ್ನ ಸುಖಕ್ಕೆ ಕಾರಣವಾದ ದೇಹವನ್ನು ಕಾಪಾಡಿಕೊಳ್ಳಲು ಇವನೇಕೆ ಅಪೇಕ್ಷಿಸಬಾರದು? ಈ ಬ್ರಾಹ್ಮಣಪುತ್ರನೂ ಬದುಕಿರಬೇಕೆಂದು ಅಪೇಕ್ಷಿಸದೆ ಇದ್ದಾನೇ? ||೪೩||

ಎಲೈ ರಾಜನೇ, ಅದೂ ಅಲ್ಲದೆ ಇವನೊಡನೆ ನಿನಗೆ ಪೂರ್ವಜನ್ಮಸಂಬಂಧವಾದ ವೈರವಾವುದೂ ಇರುವ ಸಂಭವವಿಲ್ಲವು. ತಪ್ಪುಮಾಡದಿರುವ ಈ ಬ್ರಾಹ್ಮಣಪುತ್ರ ನನ್ನು ಯಾವ ಕಾರಣದಿಂದ ನೀನು ಕೊಲ್ಲಬೇಕೆಂದು ಅಪೇಕ್ಷಿಸುತ್ತಿರುವೆ? ವೈರವಿಲ್ಲದ ಯಾವನಾದರೂ ಯಾವನನ್ನಾದರೂ ಸ್ವಪ್ರಯೋಜನಕ್ಕಾಗಿ ಕೊಂದರೆ, ಅಂಥವನು

ಹಂತಾರಂ ಹಂತಿ ತಂಪ್ರಾಪ್ಯ ಜನನಂ ಜನನಾಂತರೇ।
ಜನಕೋಽಸ್ಯ ಸುದುಷ್ಟಾತ್ಮಾ ಯೇನಾಽಸೌ ತೇ ಸಮರ್ಪಿತಃ ॥೪೬॥

ಸ್ವಾತ್ಮಜೋ ಧನಲೋಭೇನ ಪಾಪಾಚಾರಃ ಸ ದುರ್ಮತಿಃ ।
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್॥೪೭॥

ಯಜೇತ ಚಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ।
ದೇಶಮಧ್ಯೇ ಚ ಯಃ ಕಶ್ಚಿತ್ಪಾಪಕರ್ಮ ಸಮಾಚರೇತ್ ॥೪೮॥

ಷಷ್ಠಾಂಶಸ್ತಸ್ಯ ಪಾಪಸ್ಯ ರಾಜಾ ಭುಂಕ್ತೇ ನ ಸಂಶಯಃ ।
ನಿಷೇಧನೀಯೋ ರಾಜ್ಞಾಽಸೌ ಪಾಪಂ ಕರ್ತುಂ ಸಮುದ್ಯತಃ ॥೪೯॥

---

ಮತ್ತೊಂದು ಜನ್ಮದಲ್ಲಿ ಹುಟ್ಟಿ ತಾನೂ ತನ್ನನ್ನು ಕೊಂದವನನ್ನು ಕೊಲ್ಲುವನು. ॥೪೪-೪೫॥

ಅಲ್ಲದೆ ಈ ಬಾಲಕನ ತಂದೆಯೂ ಬಹಳ ಕೆಟ್ಟವನು! ಹಣದಾಸೆಯಿಂದ ತನ್ನ ಮಗನನ್ನೂ ನಿನಗೆ ಕೊಟ್ಟುಬಿಟ್ಟನು. ಅವನು ದುರ್ಬುದ್ಧಿಯುಳ್ಳವನೂ ಪಾಪ ಕಾರ್ಯವನ್ನು ಮಾಡುವವನೂ ಆಗಿರುವನು. ॥೪೬॥

ಗೃಹಸ್ಥನಾದವನು ಅನೇಕ ಮಕ್ಕಳನ್ನ ಪೇಕ್ಷಿಸಬೇಕು! ಏತಕ್ಕೆಂದರೆ ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಪಿತೃಶ್ರಾದ್ಧವನ್ನು ಮಾಡುವನು. ಅಥವಾ ಅಶ್ವ ಮೇಧಯಜ್ಞವನ್ನು ಮಾಡುವನು. ಇಲ್ಲವೆ ನೀಲಿಯ ಬಣ್ಣದ ಹೋರಿಯನ್ನು ಬಿಡುವನು. (ವೃಷೋತ್ಸರ್ಗಕರ್ಮವನ್ನು ಮಾಡುವನು) ಇವೇ ಮುಂತಾದ ಕರ್ಮ ಗಳಿಂದ ಆ ವಂಶದ ಪಿತೃದೇವತೆಗಳಿಗೆ ಸದ್ಗತಿಯೂ ಸುಖವೂ ದೊರೆಯುವಂತಾ ಗುತ್ತದೆ. ॥೪೭॥

ಒಂದು ದೇಶದ ನಡುವೆ ಯಾವನಾದರೂ ಪಾಪಕಾರ್ಯವನ್ನು ಮಾಡಿದರೆ ಆ ಪಾಪದಲ್ಲಿ ಆರನೆಯ ಒಂದುಭಾಗವು ರಾಜನಿಗೆ ಬರುವುದು. ಆದುದರಿಂದ ಪಾಪ ಕಾರ್ಯವನ್ನು ಮಾಡತಕ್ಕವನನ್ನು ರಾಜನು ನಿಷೇಧಿಸಬೇಕು. ॥೪೮-೪೯॥

ನ ನಿಷಿದ್ಧಸ್ತ್ವಯಾ ಕಸ್ಮಾತ್ಪುತ್ರಂ ವಿಕ್ರೇತುಮುದ್ಯತಃ ।
ಸೂರ್ಯವಂಶೇ ಸಮುತ್ಪನ್ನ ಸ್ತ್ರಿಶಂಕುತನಯಃ ಶುಭಃ ॥೫೦॥

ಆರ್ಯಸ್ತ್ವನಾರ್ಯವತ್ಕರ್ಮ ಕರ್ತುಮಿಚ್ಛಸಿ ಪಾರ್ಥಿವ ।
ತವ ದೇಹೇ ಸುಖಂ ರಾಜನ್ ಭವಿಷ್ಯತ್ಯವಿಚಾರಣಾತ್ ।
ಪಿತಾ ತೇ ಶಾಪಯೋಗೇನ ಚಾಂಡಾಲತ್ವಮುಪಾಗತಃ ॥೫೨॥

ಮಯಾಽಸೌ ತೇನ ದೇಹೇನ ಸ್ವರ್ಲೋಕಂ ಪ್ರಾಪಿತಃ ಕಿಲ ।
ತೇನೈವ ಪ್ರೀತಿಯೋಗೇನ ಕುರು ಮೇ ವಚನಂ ನೃಪ ॥೫೩॥

ಮುಂಚೈನಂ ಬಾಲಕಂ ದೀನಂ ರುದಂತಂ ಭೃಶಮಾತುರಂ ।
ಯಾಚಿತೋಽಸಿ ಮಯಾ ನೂನಂ ಯಜ್ಞೇಽಸ್ಮಿನ್ರಾಜಸೂಯಕೇ ॥೫೪॥

ಪ್ರಾರ್ಥನಾಭಂಗಜಂ ದೋಷಂ ಕಥಂ ತ್ವಂ ನಾಽವಬುಧ್ಯಸೇ ।
ಪ್ರಾರ್ಥಿತಂ ಸರ್ವದಾ ದೇಯಂ ಮಖೇಽಸ್ಮಿನ್ನೃಪಸತ್ತಮ ॥೫೫॥
ಅನ್ಯಥಾ ಪಾಪಮೇವ ಸ್ಯಾತ್ತವ ರಾಜನ್ನ ಸಂಶಯಃ ।

---

ಮಗನನ್ನು ಮಾರುವದಕ್ಕೆ ಪ್ರಯತ್ನಪಟ್ಟವನನ್ನು ನೀನೇಕೆ ನಿಷೇಧಿಸಲಿಲ್ಲ? ನೀನು ಸೂರ್ಯವಂಶದಲ್ಲಿ ಹುಟ್ಟಿದವನು, ತ್ರಿಶಂಕುರಾಜನ ಪುತ್ರನು, ಶುಭಕಾರ್ಯವನ್ನು ಮಾಡತಕ್ಕವನು. ಎಲೈ ರಾಜನೇ, ಪೂಜ್ಯನಾದ ನೀನು ದುಷ್ಟರಂತೆ ಕಾರ್ಯವನ್ನು ಮಾಡುವುದಕ್ಕೆ ಅಪೇಕ್ಷಿಸಿದೆಯಲ್ಲಾ! ॥೫೦॥

ಎಲೈ ರಾಜನೇ, ಈ ಮುನಿಪುತ್ರನನ್ನು ಬಿಟ್ಟು ನನ್ನ ಮಾತನ್ನು ನಡೆಯಿಸಿದರೆ ನಿನ್ನ ದೇಹದಲ್ಲಿರುವ ವ್ಯಾಧಿಯು ಸಂದೇಹವಿಲ್ಲದೆ ನಾಶವಾಗಿ ಸುಖವುಂಟಾಗುವುದು! ನಿನ್ನ ತಂದೆಗೆ ಶಾಪದಿಂದ ಚಾಂಡಾಲತ್ವವು ಬಂದಿದ್ದಿತು. ನಾನು ಅದೇ ದೇಹದಿಂದ ಅವನನ್ನು ಸ್ವರ್ಗಲೋಕಕ್ಕೆ ಕಳುಹಿಸಿದೆನು. ಎಲೈ ರಾಜನೇ, ಆ ಪ್ರೀತಿಯ ಕೃತಜ್ಞತೆಯನ್ನಾದರೂ ಮನಸ್ಸಿನಲ್ಲಿ ಇಟ್ಟುಕೊಂಡು ನನ್ನ ಮಾತನ್ನು ನಡೆಯಿಸು. ॥೫೧-೫೨-೫೩॥

ಎಲೈ ರಾಜಶ್ರೇಷ್ಠನೇ, ಭಯದಿಂದ ವಿಶೇಷವಾಗಿ ಅಳುತ್ತಿರುವ, ದೀನನಾದ ಈ ಬಾಲಕನನ್ನು ಬಿಡು. ಈ ರಾಜಸೂಯ ಯಜ್ಞದಲ್ಲಿ ನಾನು ಇದನ್ನು ಯಾಚಿಸಿರುವೆನು. ಪ್ರಾರ್ಥನಾಭಂಗವು ದೋಷವೆಂಬುದು ನಿನಗೆ ತಿಳಿವುದಿಲ್ಲವೇ? ಈ

|| ವ್ಯಾಸ ಉವಾಚ ||

ಇತಿ ತಸ್ಯ ವಚಃ ಶ್ರುತ್ವಾ ಕೌಶಿಕಸ್ಯ ನೃಪೋತ್ತಮಃ ||೫೬||

ಪ್ರತ್ಯುವಾಚ ಮಹಾರಾಜಃ ಕೌಶಿಕಂ ಮುನಿಸತ್ತಮಂ ।
ಜಲೋದರೇಣ ಗಾಧೇಯ ದುಃಖಿತೋಽಹಂ ಭೃಶಂ ಮುನೇ ||೫೭||

ತಸ್ಮಾನ್ನ ಮೋಚಯಾಮ್ಯೇನಮನ್ಯತ್ಪ್ರಾರ್ಥಯ ಕೌಶಿಕ ।
ನ ತ್ವಯಾ ನಿಗ್ರಹಃ ಕಾರ್ಯಃ ಕಾರ್ಯೇಽಸ್ಮಿನ್ಮಮ ಸರ್ವಥಾ ||೫೮||

ತಚ್ಛ್ರುತ್ವಾ ವಚನಂ ರಾಜ್ಞೋ ವಿಶ್ವಾಮಿತ್ರೋಽತಿಕೋಪ(ಪಿ)ತಃ ।
ಬಭೂವ ದುಃಖಸಂತಪ್ತೋ ವೀಕ್ಷ್ಯ ದೀನಂ ದ್ವಿಜಾತ್ಮಜಂ ||೫೯||

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಷೋಡಶೋಽಧ್ಯಾಯಃ

---

ಯಜ್ಞದಲ್ಲಿ ಯಾವಾಗಲೂ ಕೇಳಿದುದನ್ನು ಕೊಟ್ಟುಬಿಡಬೇಕು. ಹಾಗೆ ಕೊಡದಿದ್ದರೆ ನಿನಗೆ ಪಾಪವೇ ಬರುವುದು. ಸಂದೇಹವಿಲ್ಲ! ||೫೪-೫೫||

ವ್ಯಾಸನು ಹೇಳಿದನು—ಆ ರಾಜಶ್ರೇಷ್ಠನು ವಿಶ್ವಾಮಿತ್ರನು ಹೇಳಿದ ಈ ಮಾತನ್ನು ಕೇಳಿ ಆ ಮುನಿಗೆ ಉತ್ತರವನ್ನು ಹೀಗೆ ಹೇಳಿದನು. ಓ ಗಾಧಿಪುತ್ರನೇ, ಜಲೋದರ ವ್ಯಾಧಿಯಿಂದ ನಾನು ಬಹಳ ದುಃಖವನ್ನನುಭವಿಸಿದೆನು. ಆದುದರಿಂದ ಇವನನ್ನು ಬಿಡುವುದಿಲ್ಲ. ನಿನಗೆ ಇಷ್ಟವಾದ ಮತ್ತೇನನ್ನಾದರೂ ಕೇಳು. ಕೊಡುವೆನು. ಈ ನಾನು ಮಾಡುವ ಯಜ್ಞಕಾರ್ಯದಲ್ಲಿ ಸರ್ವಥಾ ನೀನು ನನ್ನನ್ನು ನಿಗ್ರಹಿಸಬೇಡ! ||೫೬-೫೭-೫೮||

ರಾಜನು ಹೇಳಿದ ಆ ಮಾತನ್ನು ಕೇಳಿ ವಿಶ್ವಾಮಿತ್ರನು ಹೆಚ್ಚಾದ ಕೋಪದಿಂದ ಕೂಡಿದನು. ಮತ್ತು ದೀನನಾದ ಬ್ರಾಹ್ಮಣಪುತ್ರನನ್ನು ನೋಡಿ ದುಃಖದಿಂದ ಸಂತಾಪಪಡುತ್ತಿದ್ದನು. ||೫೯||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ರುದಂತಂ ಬಾಲಕಂ ವೀಕ್ಷ್ಯ ವಿಶ್ವಾಮಿತ್ರೋ ದಯಾತುರಃ ।**
**ಶುನಶ್ಶೇಫ ಮುವಾಚೇದಂ ಗತ್ವಾ ಪಾರ್ಶ್ವೇಽತಿದುಃಖಿತಂ ॥೧॥**

**ಮಂತ್ರಂ ಪ್ರಚೇತಸಃ ಪುತ್ರ ಮಯೋಕ್ತಂ ಮನಸಾ ಸ್ಮರನ್ ।**
**ಜಪತಸ್ತವ ಕಲ್ಯಾಣಂ ಭವಿಷ್ಯತಿ ಮಮಾಜ್ಞಯಾ ॥೨॥**

**ವಿಶ್ವಾಮಿತ್ರವಚಃ ಶ್ರುತ್ವಾ ಶುನಶ್ಶೇಫಃ ಶುಚಾಽಽಕುಲಃ ।**
**ಮಂತ್ರಂ ಜಜಾಪ ಮನಸಾ ಕೌಶಿಕೋಕ್ತಂ ಸ್ಫುಟಾಕ್ಷರಂ ॥೩॥**

---

ವ್ಯಾಸನು ಹೇಳಿದನು—ಅಳುತ್ತಿರುವ ಬಾಲಕನನ್ನು ನೋಡಿ ವಿಶ್ವಾಮಿತ್ರನು ಹೆಚ್ಚಾದ ದಯೆಯಿಂದ ಕೂಡಿದವನಾಗಿ ದುಃಖದಿಂದ ಮನಸ್ಸು ಕರಗಲು ಶುನಶ್ಶೇಫನ ಹತ್ತಿರಕ್ಕೆ ಹೋಗಿ ಅವನಿಗೆ ಒಂದು ಮಂತ್ರವನ್ನು ಉಪದೇಶಿಸಿ, ಹೀಗೆ ಹೇಳಿದನು. ||೧||

ಎಲೈ ಹುಡುಗನೇ, ನಾನು ಹೇಳಿದ, ವರುಣನನ್ನು ಸ್ತುತಿಸಿ ಸಂತೋಷಪಡಿಸುವ ಈ ಮಂತ್ರವನ್ನು ಮನಸ್ಸಿನಲ್ಲಿ ಅದರ ಅರ್ಥವನ್ನೂ ಸ್ಮರಿಸುತ್ತಾ ಜಪಮಾಡಿದರೆ, ನನ್ನ ಅಪ್ಪಣೆಯಿಂದ ನಿನಗೆ ಮಂಗಳವಾಗುವುದು! ||೨||

ಎಲೈ ಜನಮೇಜಯನೇ, ಕೇಳು. ತನಗೆ ಮರಣವು ಸಂಭವಿಸುವುದೆಂದು ದುಃಖದಿಂದ ಕೂಡಿದ್ದ ಶುನಶ್ಶೇಫನು ವಿಶ್ವಾಮಿತ್ರನ ಮಾತನ್ನು ಕೇಳಿ ಅವನು ಹೇಳಿದ ಮಂತ್ರವನ್ನು ಸ್ಪಷ್ಟವಾಗಿ ಉಚ್ಚರಿಸುತ್ತಾ ಮನಸ್ಸಿನಲ್ಲಿಯೇ ಅದರ ಅರ್ಥ

ಜಪತಸ್ತತ್ರ ತಸ್ಯಾಥ ಪ್ರಚೇತಾಸ್ತು ಕೃಪಾಕರಃ ।
ಪ್ರಾದುರ್ಬಭೂವ ಸಹಸಾ ಪ್ರಸನ್ನೋ ನೃಪಬಾಲಕೇ ॥೪॥

ದೃಷ್ಟ್ವಾ ತಮಾಗತಂ ಸರ್ವೇ ವಿಸ್ಮಯಂ ಪರಮಂ ಗತಾಃ ।
ತುಷ್ಟುವುರ್ವರುಣಂ ದೇವಂ ಮುದಿತಾ ದರ್ಶನೇನ ತೇ ॥೫॥

ರಾಜಾಽತಿವಿಸ್ಮಿತಃ ಪಾದೌ ಪ್ರಣನಾಮ ರುಜಾತುರಃ ।
ಬದ್ಧಾಂಜಲಿಪುಟೋ ದೇವಂ ತುಷ್ಟಾವ ಪುರತಃ ಸ್ಥಿತಂ ॥೬॥

॥ ಹರಿಶ್ಚಂದ್ರ ಉವಾಚ ॥

ದೇವದೇವ ಕೃಪಾಸಿಂಧೋ ಪಾಪಾತ್ಮಾಽಹಂ ಸುಮಂದಧೀಃ ।
ಕೃತಾಪರಾಧಃ ಕೃಪಣಃ ಪಾವಿತಃ ಪರಮೇಷ್ಠಿನಾ ॥೭॥

ಮಯಾ ತೇ ಪುತ್ರಕಾಮೇನ ದುಃಖಸಂಸ್ಥೇನ ಹೇಲನಂ ।
ಕೃತಂ ಕ್ಷಮಾಸ್ಯಂ ಪ್ರಭುಣಾ ಕೋಽಪರಾಧಃ ಸುದುರ್ಮತೇಃ ॥೮॥

---

ವನ್ನೂ ಧ್ಯಾನಮಾಡುತ್ತಾ ಜಪಮಾಡಿದನು. ಹಾಗೆ ಜಪಮಾಡುತ್ತಿದ್ದ ಆ ಬಾಲಕನ ಇದುರಿಗೆ ದಯಾಶಾಲಿಯಾದ ವರುಣನು ಬೇಗನೆ ಪ್ರತ್ಯಕ್ಷನಾಗಿ ಸಂತೋಷದಿಂದ ಬಂದು ನಿಂತನು ! ॥೪॥

ಹಾಗೆ ಪ್ರತ್ಯಕ್ಷವಾಗಿ ಬಂದ ವರುಣದೇವನನ್ನು ಕಂಡು ಅಲ್ಲಿದ್ದವರೆಲ್ಲರೂ ಅತ್ಯಂತ ಆಶ್ಚರ್ಯಪಟ್ಟರು, ಮತ್ತು ಆ ದೇವನ ದರ್ಶನದಿಂದ ಸಂತೋಷ ಉಳ್ಳವರಾಗಿ ಅವನನ್ನು ಸ್ತೋತ್ರಮಾಡಿದರು. ॥೫॥

ರೋಗದ ಬಾಧೆಯಿಂದ ಕೂಡಿದ್ದ ಹರಿಶ್ಚಂದ್ರ ರಾಜನು ಅತ್ಯಂತ ಆಶ್ಚರ್ಯವನ್ನು ಹೊಂದಿ ಆ ವರುಣದೇವನ ಪಾದಕ್ಕೆ ನಮಸ್ಕರಿಸಿ ಕೈಮುಗಿದುಕೊಂಡು ಮುಂದೆನಿಂತು ಹೀಗೆ ಸ್ತೋತ್ರಮಾಡಿದನು. ॥೬॥

ಹರಿಶ್ಚಂದ್ರನು ಹೇಳಿದನು—ದೇವತೆಗಳಲ್ಲಿ ಶ್ರೇಷ್ಠನಾದ ವರುಣದೇವನೇ, ದಯಾಸಮುದ್ರನೇ, ನಾನು ಪಾಪಿಯು, ಅಲ್ಪಬುದ್ಧಿಯುಳ್ಳವನು, ತಪ್ಪುಮಾಡಿದವನು, ಲೋಭಿಯೂ ಆಗಿದೇನೆ. ಪರಬ್ರಹ್ಮಸ್ವರೂಪನಾದ ನೀನು ನನ್ನನ್ನು ಪರಿ

ಅರ್ಥೀ ದೋಷಂ ನ ಜಾನಾತಿ ತಸ್ಮಾತ್ಪುತ್ರಾರ್ಥಿನಾ ಮಯಾ ।
ವಂಚಿತಸ್ತ್ವಂ ದೇವದೇವ ಭೀತೇನ ನರಕಾದ್ವಿಭೋ ॥೯॥

ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ ।
ಭೀತೋಽಹಂ ತೇನ ವಾಕ್ಯೇನ ತಸ್ಮಾತ್ತೇ ಹೇಲನಂ ಕೃತಂ ॥೧೦॥

ನಾಽಜ್ಞಸ್ಯ ದೂಷಣಂ ಚಿಂತ್ಯಂ ನೂನಂ ಜ್ಞಾನವತಾ ವಿಭೋ ।
ದುಃಖಿತೋಽಹಂ ರುಜಾಽಕ್ರಾಂತೋ ವಂಚಿತಃ ಸ್ವಸುತೇನ ಹ ॥೧೧॥

ನ ಜಾನೇಽಹಂ ಮಹಾರಾಜ ಪುತ್ರೋ ಮೇ ಕ್ವ ಗತಃ ಪ್ರಭೋ ।
ವಂಚಯಿತ್ವಾ ವನೇ ಭೀತೋ ಮರಣಾನ್ಮಾಂ ಕೃಪಾನಿಧೇ ॥೧೨॥
ಪ್ರಿಯಯಾ ದ್ರವಿಣಂ ದತ್ವಾ ಗೃಹೀತೋ ದ್ವಿಜಬಾಲಕಃ ।

---

ಶುದ್ಧನನ್ನಾಗಿ ಮಾಡಿದ ! ಮಗನ ಮೇಲಿನ ಪ್ರೀತಿಯಿಂದ ದುಃಖಿತನಾಗಿ ನಿನ್ನನ್ನು ಸ್ವಲ್ಪಮಟ್ಟಿಗೆ ವಂಚಿಸಿ ತಿರಸ್ಕರಿಸಿದೆನು. ಅದನ್ನು ಸ್ವಾಮಿಯಾದ ನೀನು ಕ್ಷಮಿಸ ಬೇಕು. ರೋಗದುಃಖನಿವೃತ್ತಿ, ಪುತ್ರರಕ್ಷಣೆಗಳಲ್ಲಿ ಆಶೆಯಿಂದ ದುರ್ಬುದ್ಧಿಯುಳ್ಳವ ನಲ್ಲಿ ತಪ್ಪೇನಿರುವುದು ? ॥೭-೮॥

ಯಾಚಕನು ದೋಷವನ್ನು ತಿಳಿಯುವುದಿಲ್ಲ. ಪುತ್ರಾರ್ಥಿಯಾದ ನಾನು ಪುತ್ರನು ಮರಣವನ್ನು ಹೊಂದಿದರೆ ತಪ್ಪದೆ ನರಕಕ್ಕೆ ಹೋಗುವೆನೆಂಬ ಭಯದಿಂದ ಸ್ವಲ್ಪಮಟ್ಟಿಗೆ ನಿನ್ನನ್ನೂ ವಂಚಿಸಿದೆನು. ಪುತ್ರನಿಲ್ಲದವನಿಗೆ ಸದ್ಗತಿಯಿಲ್ಲ. ಸ್ವರ್ಗ ವಂತೂ ಇಲ್ಲವೇಯಿಲ್ಲ. ಎಂಬ ಆ ಶಾಸ್ತ್ರದ ಮಾತಿನಿಂದ ನಾನು ಭಯಪಟ್ಟು ನಿನ್ನನ್ನು ಹಾಗೆ ತಿರಸ್ಕರಿಸಿದೆನು ! ॥೯-೧೦॥

ಓ ಸ್ವಾಮಿಯೇ, ಜ್ಞಾನಿಗಳು ದುಃಖದಿಂದ ತಿಳಿವಳಿಕೆಯಿಲ್ಲದವರು ಮಾಡಿದ ದೂಷಣೆಯನ್ನು ಮನಸ್ಸಿನಲ್ಲಿ ಮಹತ್ತಾಗಿ ಯೋಚಿಸುವುದಿಲ್ಲ. ರೋಗದಿಂದ ಕೂಡಿದ ನಾನು ದುಃಖಿಸುತ್ತಾ ನನ್ನ ಮಗನಿಂದಲೇ ವಂಚಿತನಾಗಿರುವೆನು. ಆ ನನ್ನ ರಾಜ ಪುತ್ರನು ಎಲ್ಲಿಗೆ ಹೋದನೋ ನಾನು ಕಾಣೆನು. ಓ ದಯಾನಿಧಿಯೇ, ಆ ನನ್ನ ಮಗನು ಮರಣಭಯದಿಂದಕೂಡಿ ನನ್ನನ್ನೂ ವಂಚಿಸಿ, ಕಾಡಿಗೆ ಹೊರಟುಹೋದನು. ಹಣವನ್ನು ಕೊಟ್ಟು ಈ ಬ್ರಾಹ್ಮಣ ಪುತ್ರನನ್ನು ತಂದಿರುವೆನು ! ॥೧೧-೧೨॥

ಯಜ್ಞೋಽಯಂ ಕ್ರೀತಪುತ್ರೇಣ ಪ್ರಾರಬ್ಧಸ್ತವ ತುಷ್ಟಯೇ ॥೧೩॥

ದರ್ಶನಂ ತವ ಸಂಪ್ರಾಪ್ಯ ಗತಂ ದುಃಖಂ ಮಮಾಽದ್ಭುತಂ ।
ಜಲೋದರಕೃತಂ ಸರ್ವಂ ಪ್ರಸನ್ನೇ ತ್ವಯಿ ಸಾಂಪ್ರತಂ ॥೧೪॥

ಇತಿ ತಸ್ಯ ವಚಃ ಶ್ರುತ್ವಾ ರಾಜ್ಞೋ ರೋಗಾತುರಸ್ಯ ಚ ।
ದಯಾವಾನ್ದೇವದೇವೇಶಃ ಪ್ರತ್ಯುವಾಚ ನೃಪೋತ್ತಮಂ ॥೧೫॥

॥ ವರುಣ ಉವಾಚ ॥

ಮುಂಚ ರಾಜಞ್ಛುನಶ್ಶೇಫಂ ಸ್ತುವಂತಂ ಮಾಂ ಭೃಶಾತುರಂ ।
ಯಜ್ಞೋಽಯಂ ಪರಿಪೂರ್ಣಸ್ತೇ ರೋಗಮುಕ್ತೋ ಭವಾಽಽತ್ಮನಾ ॥೧೬॥

ಇತ್ಯುಕ್ತ್ವಾ ವರುಣಸ್ತೂರ್ಣಂ ರಾಜಾನಂ ವಿರುಜಂ ತಥಾ ।
ಚಕಾರ ಪಶ್ಯತಾಂ ತತ್ರ ಸದಸ್ಯಾನಾಂ ಸುಸಂಸ್ಥಿತಂ ॥೧೭॥

---

ಕ್ರಯಕ್ಕೆ ಕೊಂಡು ತಂದಿರುವ ಈ ಮಗನಿಂದ ನಿನ್ನ ಸಂತೋಷಕ್ಕಾಗಿ ನಾನು ಮಾಡಿದ್ದ ವಾಗ್ದಾನದಂತೆ ಈ ಯಜ್ಞವನ್ನು ಪ್ರಾರಂಭಿಸಿದೆನು. ನಿನ್ನ ದರ್ಶನ ವಾಯಿತು. ಜಲೋದರವ್ಯಾಧಿಯಿಂದುಂಟಾದ ನನ್ನ ಸಮಸ್ತ ದುಃಖವೂ ಈಗ ಪ್ರಸನ್ನನಾದ ನಿನ್ನಿಂದ ಶಾಂತವಾದ ಹಾಗಾಯಿತು! ॥೧೩-೧೪॥

ವ್ಯಾಸನು ಹೇಳಿದನು —ರೋಗಬಾಧೆಯಿಂದ ಕೂಡಿದ ಆ ರಾಜನ ಮಾತನ್ನು ಕೇಳಿ ದಯಾಶಾಲಿಯಾದ ವರುಣದೇವನು ಆ ರಾಜಶ್ರೇಷ್ಠನನ್ನು ಕುರಿತು ಹೀಗೆ ಹೇಳಿದನು. ॥೧೫॥

ವರುಣನು ಹೇಳಿದನು—ಎಲೈ ರಾಜನೇ, ವಿಶೇಷವಾಗಿ ಭಯಪಟ್ಟು ನನ್ನನ್ನು ಸ್ತೋತ್ರಮಾಡುತ್ತಿರುವ ಈ ಶುನಶ್ಶೇಫನನ್ನು ಬಿಡು. ನೀನು ಮಾಡಿದ ಈ ಯಜ್ಞವು ಪೂರ್ಣವಾಯಿತು. ನೀನು ರೋಗದಿಂದ ಬಿಡುಗಡೆಯನ್ನು ಹೊಂದು! ॥೧೬॥

ಹೀಗೆಂದು ಹೇಳಿ ವರುಣನು ಆ ಸಭೆಯಲ್ಲಿದ್ದವರೆಲ್ಲರೂ ನೋಡುತ್ತಿದ್ದ ಹಾಗೆಯೇ ಬೇಗನೆ ರಾಜನನ್ನು ರೋಗವಿಲ್ಲದವನನ್ನಾಗಿ ಮಾಡಿದನು! ॥೧೭॥

ವಿಮುಕ್ತೋಽಸೌ ದ್ವಿಜಃ ಪಾಶಾ(ಶಾಪಾ)ದ್ವರುಣೇನ ಮಹಾತ್ಮನಾ ।
ಜಯಶಬ್ದಸ್ತತಸ್ತತ್ರ ಸಂಜಾತೋ ಮಖಮಂಡಪೇ ॥೧೮॥

ರಾಜಾ ಪ್ರಮುದಿತಃ ಸದ್ಯೋ ರೋಗಾನ್ಮುಕ್ತಃ ಸುದಾರುಣಾತ್ ।
ಯೂಪಾನ್ಮುಕ್ತಃ ಶುನಶ್ಶೇಫೋ ಬಭೂವಾತೀವ ಸಂ(ಸು)ಸ್ಥಿತಃ ॥೧೯॥

ರಾಜಾ ತ್ವಿಮಂ ಮಖಂ ಪೂರ್ಣಂ ಚಕಾರ ವಿನಯಾನ್ವಿತಃ ।
ಶುನಶ್ಶೇಫಸ್ತದಾ ಸಭ್ಯಾನಿತ್ಯುವಾಚ ಕೃತಾಂಜಲಿಃ ॥೨೦॥

ಭೋಭೋಃ ಸಭ್ಯಾಃ ಸುಧರ್ಮಜ್ಞಾ ಬ್ರುವಂತು ಧರ್ಮನಿರ್ಣಯಂ ।
ವೇದಶಾಸ್ತ್ರಾನುಸಾರೇಣ ಯಥಾರ್ಥವಾದಿನಃ ಕಿಲ ॥೨೧॥

ಪುತ್ರೋಽಹಂ ಕಸ್ಯ ಸರ್ವಜ್ಞಾಃ ಪಿತಾ ಮೇ ಕೋಽಗ್ರತಃ ಪರಂ ।
ಭವತಾಂ ವಚನಾತ್ತಸ್ಯ ಶರಣಂ ಪ್ರವ್ರಜಾಮ್ಯಹಂ ॥೨೨॥
ಇತ್ಯುಕ್ತೇ ವಚನೇ ತತ್ರ ಸಭ್ಯಾಃ ಪ್ರೋಚುಃ ಪರಸ್ಪರಂ ।

---

ಆ ಮಹಾತ್ಮನಾದ ವರುಣನು ಆ ಬ್ರಾಹ್ಮಣನನ್ನು ವರುಣಪಾಶವೆಂಬ ಮತ್ತು ತಾನು ಕೊಟ್ಟಿದ್ದ ಶಾಪವೆಂಬ ಹಗ್ಗದ ಕಟ್ಟಿನಿಂದ ಬಿಡಿಸಿದನು. ಆ ಮೇಲೆ ಆ ಯಜ್ಞ ಮಂಟಪದಲ್ಲಿ ಜಯಶಬ್ದವು ಉಂಟಾಯಿತು! ರೋಗದಿಂದ ರಾಜನೂ, ಯೂಪಸ್ತಂಭದಿಂದ ಶುನಶ್ಶೇಫನೂ, ಬಿಡುಗಡೆಯನ್ನು ಹೊಂದಿ ಸುಖವಾಗಿದ್ದರು. ರಾಜನು ಈ ಯಜ್ಞವನ್ನು ದಕ್ಷಿಣಾದಿಗಳನ್ನು ಕೊಟ್ಟು ವಿನಯದಿಂದ ಪೂರ್ಣಮಾಡಿದನು. ಆಗ ಶುನಶ್ಶೇಫನು ಕೈಮುಗಿದುಕೊಂಡು ಸಭೆಯಲ್ಲಿದ್ದವರನ್ನು ಕುರಿತು ಹೀಗೆ ಅರಿಕೆ ಮಾಡುತ್ತಾ ಹೇಳಿದನು. ||೧೮-೧೯-೨೦||

ಧರ್ಮವನ್ನು ಬಲ್ಲ ಓ ಸಭ್ಯರೇ, ನೀವು ವೇದಶಾಸ್ತ್ರಾನುಸಾರವಾಗಿ ನಿಜವಾದುದನ್ನು ಹೇಳತಕ್ಕವರಲ್ಲವೇ? ಸರ್ವಜ್ಞರಾದ ನೀವು ಇಲ್ಲಿಂದ ಮುಂದೆ ನನ್ನ ತಂದೆಯು ಯಾರು? ನಾನು ಯಾರ ಮಗನು? ಎಂಬುದನ್ನು ಆಲೋಚಿಸಿ ಹೇಳಬೇಕು! ನಿಮ್ಮ ಮಾತಿನಂತೆ ಅಂಥವನನ್ನು ನಾನು ಶರಣುಹೊಂದುವೆನು. ಹೀಗೆಂದು ಹೇಳುತ್ತಲು ಸಭ್ಯರು ಪರಸ್ಪರವಾಗಿ ಹೀಗೆ ಮಾತನಾಡಿದರು. ||೨೧-೨೨||

॥ ಸಭ್ಯಾ ಊಚುಃ ॥

ಅಜೀಗರ್ತಸ್ಯ ಪುತ್ರೋಽಯಂ ಕಸ್ಯಾಽನ್ಯಸ್ಯ ಭವೇದಸೌ ॥೨೩॥

ಅಂಗಾದಂಗಾತ್ಸಮುದ್ಭೂತಃ ಪಾಲಿತಸ್ತೇನ ಭಕ್ತಿತಃ ।
ಅನ್ಯಸ್ಯ ಕಸ್ಯ ಪುತ್ರೋಽಸೌ ಪ್ರಭವೇದಿತಿ ನಿಶ್ಚಯಃ ॥೨೪॥

ತಚ್ಛ್ರುತ್ವಾ ವಾಮದೇವಸ್ತು ತಾನುವಾಚ ಸಭಾಸದಃ ।
ವಿಕ್ರೀತಸ್ತೇನ ತಾತೇನ ದ್ರವ್ಯಲೋಭಾತ್ಸುತಃ ಕಿಲ ॥೨೫॥

ಪುತ್ರೋಽಯಂ ಧನದಾತುಶ್ಚ ರಾಜ್ಞಸ್ತತ್ರ ನ ಸಂಶಯಃ ।
ಅಥವಾ ವರುಣಸ್ಯೈಷ ಪಾಶಾನ್ಮುಕ್ತೋಽಸ್ತ್ಯನೇನ ವೈ ॥೨೬॥

ಅನ್ನದಾತಾ ಭಯತ್ರಾತಾ ತಥಾ ವಿದ್ಯಾಪ್ರದಶ್ಚ ಯಃ ।
ತಥಾ ವಿತ್ತಪ್ರದಶ್ಚೈವ ಪಂಚೈತೇ ಪಿತರಃ ಸ್ಮೃತಾಃ ॥೨೭॥

ತದಾ ಕೇಚಿತ್ಪಿತುಃ ಪ್ರಾಹುಃ ಕೇಚಿದ್ರಾಜ್ಞಸ್ತಥಾಽಪರೇ ।
ವರುಣಸ್ಯೇತಿ ಸಂವಾದೇ ನಿರ್ಣಯಂ ನ ಯಯುಶ್ಚ ತೇ ॥೨೮॥

---

ಸಭ್ಯರು ಹೇಳಿದರು—ಅಜೀಗರ್ತನ ಅವಯವಗಳಿಂದ ಹುಟ್ಟಿ, ಪ್ರೀತಿಯಿಂದ ಅವನು ಕಾಪಾಡಿದವನಾದುದರಿಂದ, ಇವನು ಅಜೀಗರ್ತನ ಮಗನೇ ಹೊರತು ಬೇರೊಬ್ಬನ ಮಗನಲ್ಲ. ಇದೇ ನಿಶ್ಚಯವು ಎಂದು ಕೆಲವರು ಹೇಳಿದರು ! ॥೨೩-೨೪॥

ಅದನ್ನು ಕೇಳಿ ವಾಮದೇವನು ಸಭ್ಯರನ್ನು ಕುರಿತು ಹೀಗೆ ಹೇಳಿದನು. ಆ ತಂದೆಯು ಹಣದಾಸೆಯಿಂದ ಇವನನ್ನು ಮಾರಿದನು. ಇವನು ಹಣವನ್ನು ಕೊಟ್ಟ ರಾಜನ ಮಗನಾಗಿರುವನು ! ॥೨೫॥

ಇನ್ನು ಕೆಲವರು ಹೀಗೆ ವಾದಿಸಿದರು. ಅಥವಾ ವರುಣನಿಗೆ ರೋಗದ ಬಿಡುಗಡೆಗಾಗಿ ಒಪ್ಪಿಸಿದುದರಿಂದ ಈ ಹುಡುಗನು ಅವನ ಮಗನು. ಏಕೆಂದರೆ ಹುಟ್ಟಿಸಿದವನು, ಅನ್ನವನ್ನು ಕೊಟ್ಟವನು, ಭಯದಿಂದ ಕಾಪಾಡಿದವನು, ವಿದ್ಯೆಯನ್ನು ಕೊಟ್ಟವನು, ಹಣವನ್ನು ಕೊಟ್ಟವನು, ಹೀಗೆ ಈ ಐವರೂ ತಂದೆಗಳಾಗುವರು. ॥೨೬-೨೭॥

ಆಗ ಈ ಪ್ರಕಾರವಾಗಿ ಕೆಲವರು ಅಜೀಗರ್ತನನ್ನೂ, ಕೆಲವರು ರಾಜನನ್ನೂ, ಇನ್ನು ಕೆಲವರು ವರುಣನನ್ನೂ, ತಂದೆಯೆಂದು ಯುಕ್ತಿನ್ಯಾಯಗಳಿಂದ ವಾದಿಸಿ

ಇತ್ಥಂ ಸಂದೇಹಮಾಪನ್ನೇ ವಸಿಷ್ಠೋ ವಾಕ್ಯಮಬ್ರವೀತ್ ।
ಸಭ್ಯಾನ್ವಿವದತಸ್ತತ್ರ ಸರ್ವಜ್ಞಃ ಸರ್ವಪೂಜಿತಃ ॥೨೯॥

ಶೃಣುಧ್ವಂ ಭೋ ಮಹಾಭಾಗಾ ನಿರ್ಣಯಂ ಶ್ರುತಿಸಂಮತಂ ।
ನಿಸ್ಸ್ನೇಹೇನ ಯದಾ ಪಿತ್ರಾ ವಿಕ್ರೀತೋಽಯಂ ಸುತಃ ಶಿಶುಃ ॥೩೦॥

ಸಂಬಂಧಸ್ತು ಗತಸ್ತಸ್ಯ ತದೈವ ಧನಸಂಗ್ರಹಾತ್ ।
ಹರಿಶ್ಚಂದ್ರಸ್ಯ ಸಂಜಾತಃ ಪುತ್ರೋಽಸೌ ಕ್ರೀತ ಏವ ಚ ॥೩೧॥

ಯೂಪೇ ಬದ್ಧೋ ಯದಾ ರಾಜಾ ತದಾ ತಸ್ಯ ನ ವೈ ಸುತಃ ।
ವರುಣಸ್ತು ಸ್ತುತೋಽನೇನ ತೇನ ತುಷ್ಟೇನ ಮೋಚಿತಃ ॥೩೨॥
ತಸ್ಮಾನ್ನಾಽಯಂ ಮಹಾಭಾಗಾ ಹ್ಯಸೌ ಪುತ್ರಃ ಪ್ರಚೇತಸಃ ।

---

ಹೇಳುತ್ತಿರುವಲ್ಲಿ, ಆ ವಾದದಲ್ಲಿ ಒಂದೇ ನಿರ್ಣಯಕ್ಕೆ ಎಲ್ಲರೂ ಬರಲಾಗಲಿಲ್ಲವು! ॥೨೮॥

ಹೀಗೆ ನಾನಾಬಗೆಯ ವಾದಗಳಿಂದ ಸಂದೇಹವು ಪ್ರಾಪ್ತವಾಗುತ್ತಲು, ಸರ್ವಜ್ಞನೂ ಸರ್ವಪೂಜ್ಯನೂ ಆದ ವಸಿಷ್ಠನು ವಾದಮಾಡುತ್ತಿರುವ ಆ ಸಭ್ಯರನ್ನು ಕುರಿತು ಹೇಳಿದನು. ಎಲೈ ಪುಣ್ಯವಂತರಾದ ಸಭ್ಯರೇ, ಕೇಳಿರಿ. ವೇದಸಂಮತವಾದ ನಿರ್ಣಯವನ್ನು ಹೇಳುವೆನು. ತಂದೆಯು ಸ್ನೇಹವಿಲ್ಲದೆ ಮಗನನ್ನು ಯಾವಾಗ ಮಾರಿದನೋ, ಮತ್ತು ಹಣವನ್ನು ತೆಗೆದುಕೊಂಡನೋ, ಅದರಿಂದ ಆಗಲೇ ಅವನ ಸಂಬಂಧವು ತಪ್ಪಿಹೋಯಿತು! ॥೨೯-೩೦॥

ಮತ್ತು ಇವನನ್ನು ಕ್ರಯಕ್ಕೆ ಕೊಂಡವನಾದುದರಿಂದ ಹರಿಶ್ಚಂದ್ರನಿಗೆ ಇವನು ಮಗನಾದನು! ಆಮೇಲೆ ರಾಜನೂ ಯೂಪಸ್ತಂಭದಲ್ಲಿ ಅವನನ್ನು ವರುಣನಿಗೆ ಅರ್ಪಿಸಲು ಉದ್ದೇಶಿಸಿ ಕಟ್ಟಿದ ಮೇಲೆ ಹುಡುಗನು ಅವನ ಮಗನೂ ಅಲ್ಲವು! ಆದರೆ ಈ ಹುಡುಗನು ವರುಣನನ್ನು ಸ್ತೋತ್ರಮಾಡಿದುದರಿಂದ ವರುಣನು ಅವನನ್ನು ಬಿಡಿಸಿದನು. ಆದುದರಿಂದ ಈ ಹುಡುಗನು ವರುಣನ ಮಗನೂ ಅಲ್ಲವು! ॥೩೧-೩೨॥

ಯೋಽಯಂ ಸ್ತೌತಿ ಮಹಾಮಂತ್ರೈಃ ಸೋಽಪಿ ತುಷ್ಟೋ ದದಾತಿ ಚ ॥೩೩॥

ಧನಂ ಪ್ರಾಣಾನ್ಪಶೂನ್ರಾಜ್ಯಂ ತಥಾ ಮೋಕ್ಷಂ ಕಿಲೇಪ್ಸಿತಂ ।
ಕೌಶಿಕಸ್ಯ ಸುತಶ್ಚಾಯಮಮರಿಷ್ಟೋ ಯೇನ ರಕ್ಷಿತಃ ॥೩೪॥

ಮಂತ್ರಂ ದತ್ವಾ ಮಹಾವೀರ್ಯಂ ವರುಣಸ್ಯಾತಿಸಂಕಟೇ ।

॥ ವ್ಯಾಸ ಉವಾಚ ॥

ಶ್ರುತ್ವಾ ವಾಕ್ಯಂ ವಸಿಷ್ಠಸ್ಯ ಬಾಢಮೂಚುಃ ಸಭಾಸದಃ ॥೩೫॥

ವಿಶ್ವಾಮಿತ್ರಸ್ತು ಜಗ್ರಾಹ ತಂ ಕರೇ ದಕ್ಷಿಣೇ ತದಾ ।
ಏಹಿ ಪುತ್ರ ಗೃಹಂ ಮೇ ತ್ವಮಿತ್ಯುಕ್ತ್ವಾ ಪ್ರೇಮಪೂರಿತಃ ॥೩೬॥

ಶುನಶ್ಶೇಫೋ ಜಗಾಮಾಶು ತೇನೈವ ಸಹ ಸತ್ವರಃ ।
ವರುಣಸ್ತು ಪ್ರಸನ್ನಾತ್ಮಾ ಜಗಾಮ ಚ ಸ್ವಮಾಲಯಂ ॥೩೭॥

ಋತ್ವಿಜಶ್ಚ ತಥಾ ಸಭ್ಯಾಃ ಸ್ವಗೃಹಾನ್ನಿರ್ಯಯುಸ್ತದಾ ।
ರಾಜಾಽಪಿ ರೋಗನಿರ್ಮುಕ್ತೋ ಬಭೂವಾತಿಮುದಾನ್ವಿತಃ ॥೩೮॥

---

ಯಾವನು ಮಹಾಮಂತ್ರಗಳಿಂದ ಯಾವ ದೇವನನ್ನು ಸ್ತುತಿಸಿದರೂ ಆ ದೇವನು ಸಂತುಷ್ಟನಾಗಿ ಧನ, ಪ್ರಾಣ, ಪಶುಗಳು, ರಾಜ್ಯ, ಮೋಕ್ಷ, ಮುಂತಾದ ಎಲ್ಲ ಇಷ್ಟಾರ್ಥಗಳನ್ನು ಅವನಿಗೆ ಕೊಡುವನು. ಇದು ಸ್ವಾಭಾವಿಕವಾದುದು. ಆದುದ ರಿಂದ ಈಗ ವಿಶ್ವಾಮಿತ್ರನು ಕಷ್ಟಕಾಲದಲ್ಲಿ ಮಹಾವೀರ್ಯವತ್ತಾದ ವರುಣನ ಮಂತ್ರ ವನ್ನು ಈ ಹುಡುಗನಿಗೆ ಉಪದೇಶಮಾಡಿ, ಇವನನ್ನು ಕಾಪಾಡಿದುದರಿಂದ ಇವನು ವಿಶ್ವಾಮಿತ್ರನ ಮಗನು! ॥೩೩-೩೪॥

ವ್ಯಾಸನು ಹೇಳಿದನು -- ಹೀಗೆ ಧರ್ಮನಿರ್ಣಯವನ್ನು ಮಾಡಿ ಹೇಳಿದ ವಸಿಷ್ಠನ ಮಾತನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಒಪ್ಪಿದರು. ವಿಶ್ವಾಮಿತ್ರನು ತನ್ನ ಬಲಗೈ ಯಿಂದ ಆ ಹುಡುಗನ ಬಲಗೈಯನ್ನು ಹಿಡಿದುಕೊಂಡು, ಪ್ರೀತಿಯಿಂದ ಎಲೈ ಮಗನೇ, ನೀನು ನನ್ನ ಮನೆಗೆ ಬಾ! ಎಂದು ಹೇಳಿದನು. ॥೩೫-೩೬॥

ಶುನಶ್ಶೇಫನು ವಿಶ್ವಾಮಿತ್ರನೊಡನೆ ಸಂತೋಷದಿಂದ ಬೇಗನೆ ಹೊರಟನು! ವರುಣನು ಸಂತೋಷದಿಂದ ತನ್ನ ಮನೆಗೆ ಹೋದನು. ಋತ್ವಿಕ್ಕುಗಳೂ ಸಭ್ಯರೂ

ಪ್ರಜಾಸ್ತು ಪಾಲಯಾಮಾಸ ಸುಪ್ರಸನ್ನೇನ ಚೇತಸಾ ।
ರೋಹಿತಾಖ್ಯಸ್ತು ತಚ್ಛ್ರುತ್ವಾ ವೃತ್ತಾಂತಂ ವರುಣಸ್ಯ ಹ ॥೩೯॥

ಆಜಗಾಮ ಗೃಹಂ ಪ್ರೀತೋ ದುರ್ಗಮಾದ್ವನಪರ್ವತಾತ್ ।
ದೂತಾ ರಾಜಾನ ಮಭ್ಯೇತ್ಯ ಪ್ರೋಚುಃ ಪುತ್ರಂ ಸಮಾಗತಂ ॥೪೦॥

ಮುದಿತೋಽಸೌ ಜಗಾಮಾಶು ಸಂಮುಖಃ ಕೋಸಲಾಧಿಪಃ ।
ದೃಷ್ಟ್ವಾ ಪಿತರಮಾಯಾಂತಂ ಪ್ರೇಮೋದ್ರಿಕ್ತಃ ಸುಸಂಭ್ರಮಃ ॥೪೧॥

ದಂಡವತ್ಪತಿತೋ ಭೂಮಾವಶ್ರುಪೂರ್ಣಮುಖಃ ಶುಚಾ ।
ರಾಜಾಽಪಿ ತಂ ಸಮುತ್ಥಾಪ್ಯ ಪರಿರಭ್ಯ ಮುದಾನ್ವಿತಃ ॥೪೨॥

ಸಮಾಘ್ರಾಯ ಸುತಂ ಮೂರ್ಧ್ನಿ ಪಪ್ರಚ್ಛ ಕುಶಲಂ ಪುನಃ ।
ಉತ್ಸಂಗೇ ತಂ ಸಮಾರೋಪ್ಯ ಮುದಿತೋ ಮೇದಿನೀಪತಿಃ ॥೪೩॥
ಉಷ್ಣೈರ್ನೇತ್ರಜಲೈಃ ಶೀರ್ಷಣ್ಯಭಿಷೇಕಮಥಾಽಕರೋತ್ ।

---

ತಂತಮ್ಮ ಮನೆಗಳಿಗೆ ಹೋದರು. ರಾಜನೂ ರೋಗದಿಂದ ಬಿಡುಗಡೆಯನ್ನು ಹೊಂದಿ ಸಂತೋಷದಿಂದಿದ್ದನು. ||೩೭-೩೮||

ರಾಜನು ಸಂತೋಷವಾದ ಮನಸ್ಸಿನಿಂದ ಪ್ರಜೆಗಳನ್ನು ಕಾಪಾಡುತ್ತಿದ್ದನು. ಆ ರಾಜಪುತ್ರನಾದ ರೋಹಿತನು ವರುಣನ ವೃತ್ತಾಂತವನ್ನು ಕೇಳಿ ಸಂತೋಷದಿಂದ ಕೂಡಿ, ಭಯಂಕರವಾದ ಕಾಡಿನ ಪರ್ವತಪ್ರದೇಶದಿಂದ ಮನೆಗೆ ಹಿಂತಿರುಗಿ ಬಂದನು. ದೂತರು ರಾಜನ ಸಮೀಪಕ್ಕೆ ಬಂದು ಮಗನು ಬಂದನೆಂದು ಅರಿಕೆಮಾಡಿ ಹೇಳಿದರು. ||೩೯-೪೦||

ಕೋಸಲಾಧಿಪತಿಯಾದ ಹರಿಶ್ಚಂದ್ರನು ಸಂತೋಷದಿಂದ ಬೇಗನೆ ಬರುತ್ತಿರುವ ಮಗನಿಗೆ ಎದುರಾಗಿ ಹೋದನು. ರೋಹಿತನು ಬರುತ್ತಿರುವ ತಂದೆಯನ್ನು ನೋಡಿ ದುಃಖದಿಂದ ಕಣ್ಣೀರನ್ನು ಸುರಿಸುತ್ತಾ ಪ್ರೀತಿಸಂಭ್ರಮಗಳಿಂದ ಕೂಡಿ ಭೂಮಿಯ ಮೇಲೆ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ||೪೧||

ರಾಜನು ಸಂತೋಷದಿಂದ ಕೂಡಿ ಅವನನ್ನು ಹಿಡಿದು ಮೇಲಕ್ಕೆ ಎತ್ತಿ, ತಬ್ಬಿಕೊಂಡು, ತಲೆಯನ್ನು ಮೂಸಿನೋಡಿ, ಕುಶಲಪ್ರಶ್ನೆಯನ್ನು ಮಾಡಿದನು.

ರಾಜ್ಯಂ ಶಶಾಸ ತೇನಾಸೌ ಪುತ್ರೇಣಾತಿಪ್ರಿಯೇಣ ಚ ॥೪೪॥

ವೃತ್ತಾಂತಂ ನರಮೇಧಸ್ಯ ಕಥಯಾಮಾಸ ವಿಸ್ತರಾತ್ ।
ರಾಜಸೂಯಂ ಕ್ರತುವರಂ ಚಕಾರ ನೃಪಸತ್ತಮಃ ॥೪೫॥

ವಸಿಷ್ಠಂ ಪೂಜಯಿತ್ವಾಥ ಹೋತಾರಮಕರೋದ್ವಿಭುಃ ।
ಸಮಾಪ್ತೇ ತ್ವಥ ಯಜ್ಞೇಶೇ ವಸಿಷ್ಠೋಽತೀವ ಪೂಜಿತಃ ॥೪೬॥

ಶಕ್ರಸ್ಯ ಸದನಂ ರಮ್ಯಂ ಜಗಾಮ ಮುನಿರಾದರಾತ್ ।
ವಿಶ್ವಾಮಿತ್ರೋಽಪಿ ತತ್ರೈವ ವಸಿಷ್ಠೇನ ಚ ಸಂಗತಃ ॥೪೭॥

ಮಿಲಿತ್ವಾ ತೌ ಸ್ಥಿತೌ ದೇವಸದನೇ ಮುನಿಸತ್ತಮೌ ।
ವಿಶ್ವಾಮಿತ್ರೋಽಪಿ ಪಪ್ರಚ್ಛ ವಸಿಷ್ಠಂ ಪ್ರತಿಪೂಜಿತಂ ॥೪೮॥
ವೀಕ್ಷ್ಯ ವಿಸ್ಮಯಚಿತ್ತಸ್ತಂ ಸಭಾಯಾಂ ತು ಶಚೀಪತೇಃ ।

---

ಆ ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಸಂತೋಷದಿಂದ ಕೂಡಿ ಬಿಸಿಯಾದ ಕಣ್ಣೀರನ್ನು ಅವನ ತಲೆಯ ಮೇಲೆ ಸುರಿಸಿದನು. ॥೪೨-೪೩॥

ಪ್ರೀತಿಪಾತ್ರನಾದ ಆ ಮಗನೊಡನೆ ಕೂಡಿ ಹರಿಶ್ಚಂದ್ರನು ರಾಜ್ಯಭಾರವನ್ನು ಮಾಡುತ್ತಾ, ನರಮೇಧಯಜ್ಞದ ವೃತ್ತಾಂತವನ್ನು ಅವನಿಗೆ ವಿಸ್ತಾರವಾಗಿ ಹೇಳಿದನು. ॥೪೪॥

ಆ ರಾಜಶ್ರೇಷ್ಠನು ವಸಿಷ್ಠನನ್ನು ಪೂಜಿಸಿ ಅವನನ್ನು ಹೋತೃವಾಗಿ ವರಣ ಮಾಡಿ ರಾಜಸೂಯವೆಂಬ ಶ್ರೇಷ್ಠವಾದ ಯಜ್ಞವನ್ನು ಮಾಡಿದನು. ॥೪೫॥

ಆ ಶ್ರೇಷ್ಠವಾದ ಯಜ್ಞವು ಪೂರ್ಣವಾಗುತ್ತಲು, ವಸಿಷ್ಠನು ವಿಶೇಷವಾಗಿ ಪೂಜೆಯನ್ನು ಪಡೆದು, ಮನೋಹರವಾದ ದೇವೇಂದ್ರನ ಮನೆಗೆ ಹೋದನು. ಅಲ್ಲಿಯೇ ವಿಶ್ವಾಮಿತ್ರನೂ ಕೂಡ ವಸಿಷ್ಠನ ಜತೆಯಲ್ಲಿ ಸೇರಿದನು. ॥೪೬-೪೭॥

ಆ ಇಬ್ಬರು ಮುನಿಶ್ರೇಷ್ಠರೂ ದೇವಸಭೆಯಲ್ಲಿ ಸೇರಿದ್ದರು. ವಿಶ್ವಾಮಿತ್ರನು ವಿಶೇಷವಾಗಿ ಪೂಜೆಯನ್ನು ಪಡೆದು ದೇವೇಂದ್ರನ ಸಭೆಯಲ್ಲಿ ಬಂದಿದ್ದ ವಸಿಷ್ಠನನ್ನು ನೋಡಿ, ಆಶ್ಚರ್ಯದಿಂದ ಕೂಡಿದವನಾಗಿ ಪ್ರಶ್ನೆಮಾಡಿದನು. ॥೪೮॥

॥ ವಿಶ್ವಾಮಿತ್ರ ಉವಾಚ ॥

ಕ್ವೇಯಂ ಪೂಜಾ ತ್ವಯಾ ಪ್ರಾಪ್ತಾ ಮಹತೀ ಮುನಿಸತ್ತಮ ॥೪೯॥

ಕೃತಾ ಕೇನ ಮಹಾಭಾಗ ಸತ್ಯಂ ಬ್ರೂಹಿ ಮಮಾಂತಿಕೇ ।

॥ ವಸಿಷ್ಠ ಉವಾಚ ॥

ಯಜಮಾನೋಽಸ್ತಿ ಮೇ ರಾಜಾ ಹರಿಶ್ಚಂದ್ರಃ ಪ್ರತಾಪವಾನ್ ॥೫೦॥

ರಾಜಸೂಯಃ ಕೃತಸ್ತೇನ ರಾಜ್ಞಾ ಪ್ರವರದಕ್ಷಿಣಃ ।
ನೇದೃಶೋಽಸ್ತಿ ನೃಪಶ್ಚಾನ್ಯಃ ಸತ್ಯವಾದೀ ಧೃತವ್ರತಃ ॥೫೧॥

ದಾತಾ ಚ ಧರ್ಮಶೀಲಶ್ಚ ಪ್ರಜಾರಂಜನತತ್ಪರಃ ।
ತಸ್ಯ ಯಜ್ಞೇ ಮಯಾ ಪೂಜಾ ಪ್ರಾಪ್ತಾ ಕೌ(ಕು)ಶಿಕನಂದನ ॥೫೨॥

ಕಿಂ ಪೃಚ್ಛಸಿ ಪುನಃ ಸತ್ಯಂ ಬ್ರವೀಮ್ಯಕೃತ್ರಿಮಂ ದ್ವಿಜ ।
ಹರಿಶ್ಚಂದ್ರಸಮೋ ರಾಜಾ ನ ಭೂತೋ ನ ಭವಿಷ್ಯತಿ ।
ಸತ್ಯವಾದೀ ತಥಾ ದಾತಾ ಶೂರಃ ಪರಮಧಾರ್ಮಿಕಃ ॥೫೩॥

---

ವಿಶ್ವಾಮಿತ್ರನು ಹೇಳಿದನು—ಓ ಮುನಿಶ್ರೇಷ್ಠನೇ, ಈ ದೊಡ್ಡದಾದ ಪೂಜೆ ಯಸತ್ಕಾರವು ನಿನಗೆ ಎಲ್ಲಿ ದೊರೆಯಿತು? ಯಾರು ಇದನ್ನು ಮಾಡಿದರು? ನನ್ನೆದುರಿಗೆ ನಿಜವನ್ನು ಹೇಳು. ॥೪೯॥

ವಸಿಷ್ಠನು ಹೇಳಿದನು—ಪರಾಕ್ರಮಿಯಾದ ಹರಿಶ್ಚಂದ್ರನೆಂಬ ರಾಜನು ನನ್ನ ಶಿಷ್ಯ ಗೃಹಸ್ಥನಾಗಿರುವನು. ಆ ರಾಜನು ವಿಶೇಷವಾದ ದಕ್ಷಿಣೆಯಿಂದ ಕೂಡಿದ ರಾಜಸೂಯಯಜ್ಞವನ್ನು ಮಾಡಿದನು. ಸತ್ಯವಾದಿಯೂ ನಿಯಮವಂತನೂ ಆದ ಇಂತಹ ರಾಜನು ಮತ್ತೊಬ್ಬನಿಲ್ಲ. ಅವನು ದಾನಮಾಡತಕ್ಕವನೂ, ಧರ್ಮಮಾರ್ಗದಲ್ಲಿ ನಡೆವವನೂ, ಪ್ರಜೆಗಳನ್ನು ಸಂತೋಷಪಡಿಸುವುದರಲ್ಲಿ ಆಸಕ್ತನೂ, ಆಗಿರುವನು. ॥೫೦-೫೧॥

ಓ ವಿಶ್ವಾಮಿತ್ರನೇ, ಆ ಹರಿಶ್ಚಂದ್ರನು ಮಾಡಿದ ಯಜ್ಞದಲ್ಲಿ ನನಗೆ ಪೂಜೆಯು ದೊರೆಯಿತು. ಓ ಬ್ರಾಹ್ಮಣನೇ, ಪುನಃ ಪುನಃ ಏಕಪ್ರಶ್ನೆ ಮಾಡುತ್ತಿರುವೆ? ಮೋಸವಿಲ್ಲದ ನಿಜವಾದ ಮಾತನ್ನು ಹೇಳುವೆನು ಕೇಳು. ಸತ್ಯವನ್ನು ಹೇಳತಕ್ಕವನೂ, ದಾನಮಾಡತಕ್ಕವನೂ, ಶೂರನೂ, ಅತ್ಯಂತವಾಗಿ ಧರ್ಮಮಾರ್ಗಾ

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ವಿಶ್ವಾಮಿತ್ರೋಽತಿಕೋಪನಃ ।**
**ಬಭೂವ ಕ್ರೋಧಸಂರಕ್ತಲೋಚನೋಽಪ್ಯಬ್ರವೀಚ್ಚ ತಂ ||೫೪||**

|| ವಿಶ್ವಾಮಿತ್ರ ಉವಾಚ ||

**ಏವಂ ಸ್ತೌಷಿ ನೃಪಂ ಮಿಥ್ಯಾವಾದಿನಂ ಕಪಟಪ್ರಿಯಂ ।**
**ವಂಚಿತೋ ವರುಣೋ ಯೇನ ಪ್ರತಿಶ್ರುತ್ಯ ವರಂ ಪುನಃ ||೫೫||**

**ಮಮ ಜನ್ಮಾರ್ಜಿತಂ ಪುಣ್ಯಂ ತಪಸಃ ಪಠಿತಸ್ಯ ಚ ।**
**ತ್ವದೀಯಂ ವಾಽತಿತಪಸೋ ಗ್ಲಹಂ ಕುರು ಮಹಾಮತೇ ||೫೬||**

**ಅಹಂ ಚೇತ್ತಂ ನೃಪಂ ಸದ್ಯೋ ನ ಕರೋಮ್ಯತಿಸಂಸ್ತುತಂ ।**
**ಅಸತ್ಯವಾದಿನಂ ಕಾಮಂ ಅದಾತಾರಂ ಮಹಾಖಲಂ ||೫೭||**

---

ಸಕ್ತನೂ, ಆದ ಆ ಹರಿಶ್ಚಂದ್ರನಿಗೆ ಸಮಾನವಾದ ರಾಜನು ಹಿಂದೆ ಇರಲಿಲ್ಲ! ಮುಂದೆಯೂ ಹುಟ್ಟುವುದಿಲ್ಲ! ||೫೨-೫೩||

ವ್ಯಾಸನು ಹೇಳಿದನು—ವಿಶೇಷವಾಗಿ ಕೋಪದ ಸ್ವಭಾವದ ವಿಶ್ವಾಮಿತ್ರನು ಆ ವಸಿಷ್ಠನ ಮಾತನ್ನು ಕೇಳಿ, ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಹೀಗೆ ಮಾತನಾಡಿದನು. ಏಕೆಂದರೆ ಆ ಹರಿಶ್ಚಂದ್ರನು ತನ್ನ ತಂದೆಯಾದ ತ್ರಿಶಂಕುರಾಜನನ್ನು ಉದ್ಧಾರಮಾಡಿದ ವಿಶ್ವಾಮಿತ್ರನ ಮಾತನ್ನೂ ಶುನಶ್ಶೇಫನ ಬಿಡುಗಡೆಯ ವಿಷಯದಲ್ಲಿ ಕೇಳಲಿಲ್ಲವೆಂಬುದೇ ವಿಶ್ವಾಮಿತ್ರನ ಕೋಪಕ್ಕೆ ಕಾರಣವು. ||೫೪||

ವಿಶ್ವಾಮಿತ್ರನು ಹೇಳಿದನು—ಓ ವಸಿಷ್ಠಮಹರ್ಷಿಯೇ, ಸುಳ್ಳನ್ನು ಹೇಳುವವನೂ, ಮೋಸದಲ್ಲಿ ಆಸಕ್ತನೂ, ಆದ ಆ ರಾಜನನ್ನು ಈ ರೀತಿಯಲ್ಲಿ ಸ್ತೋತ್ರ ಮಾಡುತ್ತೀಯೆ! ವರುಣನ ಇಷ್ಟವನ್ನು ನಡೆಸುವೆನೆಂದು ಪ್ರತಿಜ್ಞೆಮಾಡಿ ಆ ರಾಜನು ಅವನನ್ನು ಮೋಸಗೊಳಿಸಿದನು! ||೫೫||

ಮಹಾಬುದ್ಧಿಶಾಲಿಯಾದ ವಸಿಷ್ಠನೇ, ನನ್ನ ಈ ಜನ್ಮದಲ್ಲಿ ನಾನು ಸಂಪಾದಿಸಿರುವ ತಪಸ್ಸಿನ ಮತ್ತು ವೇದಾಭ್ಯಾಸದ ಪುಣ್ಯವನ್ನೂ ನಾನು ಪಣವಾಗಿ ಇಡುತ್ತೇನೆ! ನೀನೂ ನಿನ್ನ ವಿಶೇಷವಾದ ತಪಸ್ಸಿನ ಪುಣ್ಯವನ್ನೂ ಈಗ ಪಣವಾಗಿಡು! ||೫೬||

ಆಜನ್ಮಸಂಚಿತಂ ಸರ್ವಂ ಪುಣ್ಯಂ ಮಮ ವಿನಶ್ಯತು ।
ಅನ್ಯಥಾ ತ್ವತ್ಕೃತಂ ಸರ್ವಂ ಪುಣ್ಯಂ ತ್ವಿತಿ ಪಣಾವಹೇ ॥೫೮॥

ಗ್ಲಹಂ ಕೃತ್ವಾ ತತಸ್ತೌ ತು ವಿವದಂತೌ ಮುನೀ ತದಾ ।
ಸ್ವಾಶ್ರಮಂ ಸ್ವರ್ಗಲೋಕಾಚ್ಚ ಗತೌ ಪರಮಕೋಪನೌ ॥೫೯॥

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ ಸಪ್ತದಶೋಽಧ್ಯಾಯಃ.

---

ನೀನು ಅತ್ಯಂತವಾಗಿ ಹೊಗಳಿದ ಆ ರಾಜನನ್ನು ಈ ಕೂಡಲೆ ನಾನು ಅಸತ್ಯವನ್ನು ಹೇಳುವವನನ್ನಾಗಿಯೂ, ದಾನಮಾಡದಿರುವವನನ್ನಾಗಿಯೂ, ದುಷ್ಟನನ್ನಾಗಿಯೂ, ಮಾಡದೆ ಹೋದರೆ, ॥೫೭॥

ನಾನು ಜನ್ಮಪ್ರಭೃತಿ ಸಂಪಾದಿಸಿರುವ ಸಮಸ್ತಪುಣ್ಯವೂ ನಾಶವಾಗಲಿ! ಇಲ್ಲದಿದ್ದರೆ ನೀನು ಸಂಪಾದಿಸಿದ ಸಮಸ್ತ ಪುಣ್ಯವೂ ನಾಶವಾಗಲಿ! ಎಂದು ನಾವಿಬ್ಬರೂ ಪಣವನ್ನು ಇಡೋಣ. ॥೫೮॥

ಅವರಿಬ್ಬರೂ ಹೀಗೆ ಪಣವನ್ನು ಕಟ್ಟಿ, ವಾದಮಾಡುತ್ತಾ, ಅತ್ಯಂತ ಕೋಪವುಳ್ಳವರಾಗಿ, ಸ್ವರ್ಗಲೋಕದಿಂದ ತಮ್ಮ ತಮ್ಮ ಆಶ್ರಮಗಳಿಗೆ ಹೋದರು. ॥೫೯॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

॥ ಅಷ್ಟಾದಶೋಽಧ್ಯಾಯಃ ॥

### ಹದಿನೆಂಟನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಕದಾಚಿತ್ತು ಹರಿಶ್ಚಂದ್ರೋ ಮೃಗಯಾರ್ಥಂ ವನಂ ಯಯೌ ।**
**ಅಪಶ್ಯದ್ರುದತೀಂ ಬಾಲಾಂ ಸುಂದರೀಂ ಚಾರುಲೋಚನಾಂ ॥೧॥**

**ತಾಮಪೃಚ್ಛನ್ಮಹಾರಾಜಃ ಕಾಮಿನೀಂ ಕರುಣಾಪರಃ ।**
**ಪದ್ಮಪತ್ರವಿಶಾಲಾಕ್ಷಿ ಕಿಂ ರೋದಿಷಿ ವರಾನನೇ ॥೨॥**

**ಕೇನಾಸಿ ಪೀಡಿತಾಽತ್ಯರ್ಥಂ ಕಿಂ ತೇ ದುಃಖಂ ವದಾಽಽಶು ಮೇ ।**
**ಕಾ ಚ ತ್ವಂ ವಿಜನೇ ಘೋರೇ ಕಸ್ತೇ ಭರ್ತಾ ಪಿತಾಽಥವಾ ॥೩॥**

---

ಒಂದಾನೊಂದು ದಿನ ಹರಿಶ್ಚಂದ್ರನು ಬೇಟೆಗಾಗಿ ಕಾಡಿಗೆ ಹೋದನು. ಅಲ್ಲಿ ಚಿಕ್ಕ ವಯಸ್ಸಿನವಳೂ ಸುಂದರಿಯೂ ಮನೋಹರವಾದ ಕಣ್ಣುಳ್ಳವಳೂ ಆದ ಸ್ತ್ರೀಯು ಅಳುತ್ತಿರುವುದನ್ನು ಕಂಡನು. (ಇದು ವಿಶ್ವಾಮಿತ್ರನ ಮಾಯೆಯು). ॥೧॥

ಮಹಾರಾಜನಾದ ಹರಿಶ್ಚಂದ್ರನು ದಯೆಯಿಂದ ಕೂಡಿದವನಾಗಿ ಆ ಸ್ತ್ರೀಯನ್ನು ಕುರಿತು ಹೀಗೆ ಪ್ರಶ್ನೆಮಾಡಿದನು. ಸುಂದರವಾದ ಮುಖವೂ ಕಮಲದ ಎಸಳಿನಂತೆ ವಿಸ್ತಾರವಾದ ಕಣ್ಣುಗಳೂ ಉಳ್ಳ ಸ್ತ್ರೀಯೇ, ನೀನು ಯಾರು? ನಿನ್ನ ಗಂಡನಾಗಲಿ, ತಂದೆಯಾಗಲಿ, ಯಾರು? ಜನರಿಲ್ಲದ ಈ ಕಾಡಿನಲ್ಲಿ ನೀನು ಯಾವ ಕಾರಣದಿಂದ ಹೀಗೆ ಅಳುತ್ತಿರುವೆ? ಯಾರು ನಿನಗೆ ತೊಂದರೆಯನ್ನುಂಟುಮಾಡಿದರು? ನಿನ್ನ ದುಃಖವೆಂತಹುದು? ಬೇಗನೆ ನನಗೆ ಹೇಳು. ॥೨-೩॥

ನ ಬಾಧತೇ ಚ ರಾಜ್ಯೇ ಮೇ ರಾಕ್ಷಸೋಽಪಿ ಪರಾಂಗನಾಂ ।
ತಂ ಹನ್ಮಿ ತರಸಾ ಕಾಂತೇ ಯಸ್ತ್ವಾಂ ಸುಂದರಿ ಬಾಧತೇ ॥೪॥

ಬ್ರೂಹಿ ದುಃಖಂ ವರಾರೋಹೇ ಸ್ವಸ್ಥಾ ಭವ ಕೃಶೋದರಿ ।
ವಿಷಯೇ ಮಮ ಪಾಪಾತ್ಮಾ ನ ತಿಷ್ಠತಿ ಸುಮಧ್ಯಮೇ ॥೫॥

ಇತಿ ತಸ್ಯ ವಚಃ ಶ್ರುತ್ವಾ ನಾರೀ ತಮಬ್ರವೀನ್ನೃಪಂ ।
ಪ್ರಮೃಜ್ಯಾಶ್ರೂಣಿ ವದ(ನಯ)ನಾತ್ ಹರಿಶ್ಚಂದ್ರಂ ನೃಪೋತ್ತಮಂ ॥೬॥

॥ ನಾರ್ಯುವಾಚ ॥

ರಾಜನ್ಮಾಂ ಬಾಧತೇಽತ್ಯರ್ಥಂ ವಿಶ್ವಾಮಿತ್ರೋ ಮಹಾಮುನಿಃ ।
ತಪಃ ಕರೋತಿ ಯದ್ಘೋರಂ ಮದರ್ಥಂ ಕೌಶಿಕೋ ವನೇ ॥೭॥

ತೇನಾಽಹಂ ದುಃಖಿತಾ ರಾಜನ್ವಿಷಯೇ ತವ ಸುವ್ರತ ।
ವಿದ್ಧಿ ಮಾಂ ಕಮನಾಂ ಕಾಂತಾಂ ಪೀಡಿತಾಂ ಮುನಿನಾ ಭೃಶಂ ॥೮॥

---

ನನ್ನ ರಾಜ್ಯದಲ್ಲಿ ರಾಕ್ಷಸನಾದರೂ ಪರಸ್ತ್ರೀಯನ್ನು ತೊಂದರೆಪಡಿಸುವುದಿಲ್ಲ! ಎಲೌ ಸುಂದರಿಯೇ, ನಿನ್ನನ್ನು ತೊಂದರೆಪಡಿಸುತ್ತಿರುವವನನ್ನು ನನಗೆ ತಿಳಿಸು. ಅವನನ್ನು ನಾನು ಬೇಗನೆ ಕೊಲ್ಲುವೆನು. ॥೪॥

ಎಲೌ ಕೃಶವಾದ ಶರೀರವುಳ್ಳ ಸುಂದರಿಯೇ, ನಿನ್ನ ದುಃಖವೇನು? ಹೇಳು. ಆತಂಕವಿಲ್ಲದೆ ನೆಮ್ಮದಿಯಿಂದ ಇರು. ನನ್ನ ದೇಶದಲ್ಲಿ ಪಾಪಿಯಾದ ಮನುಷ್ಯನು ಯಾವನೂ ಇರುವುದಕ್ಕೆ ಅವಕಾಶವನ್ನು ನಾನು ಎಂದಿಗೂ ಕೊಡುವುದಿಲ್ಲ! ॥೫॥

ಹೀಗೆಂದು ಹೇಳಿದ ಆ ರಾಜನ ಮಾತನ್ನು ಕೇಳಿ, ಆ ಸ್ತ್ರೀಯು ತನ್ನ ಮುಖದಲ್ಲಿದ್ದ ಕಣ್ಣೀರನ್ನು ಒರಸಿಕೊಂಡು, ರಾಜಶ್ರೇಷ್ಠನಾದ ಹರಿಶ್ಚಂದ್ರನನ್ನು ಕುರಿತು ಹೀಗೆ ಹೇಳಿದಳು. ॥೬॥

ಆ ಸ್ತ್ರೀಯು ಹೇಳಿದಳು— ಓ ರಾಜನೇ, ದೊಡ್ಡ ಮುನಿಯಾದ ವಿಶ್ವಾಮಿತ್ರನು ನನ್ನನ್ನು ವಿಶೇಷವಾಗಿ ತೊಂದರೆಪಡಿಸುತ್ತಿರುವನು. ಆ ಕುಶನ ವಂಶದವನಾದ ವಿಶ್ವಾಮಿತ್ರನು ಕಾಡಿನಲ್ಲಿ ಸಿದ್ಧಿರೂಪಿಣಿಯಾದ ನನಗೋಸ್ಕರವಾಗಿ ಕ್ರೂರವಾದ ತಪಸ್ಸನ್ನು ಮಾಡುತ್ತಿರುತ್ತಾನೆ! ಒಳ್ಳೆಯ ವ್ರತನಿಯಮವುಳ್ಳ ರಾಜನೇ, ನಿನ್ನ ದೇಶದಲ್ಲಿ ಆ ವಿಶ್ವಾಮಿತ್ರನಿಂದ ನಾನು ದುಃಖವನ್ನನುಭವಿಸುತ್ತಿರುವೆನು! ವಿಶ್ವಾಮಿತ್ರ

|| ರಾಜೋವಾಚ ||

ಸ್ವಸ್ಥಾ ಭವ ವಿಶಾಲಾಕ್ಷಿ ನ ತೇ ದುಃಖಂ ಭವಿಷ್ಯತಿ ।
ತಮಹಂ ವಾರಯಿಷ್ಯಾಮಿ ಮುನಿಂ ತಾಪಪರಾಯಣಂ ॥೯॥

ಇತ್ಯಾಶ್ವಾಸ್ಯ ಸ್ತ್ರಿಯಂ ರಾಜಾ ತರಸಾ ಮುನಿಸನ್ನಿಧೌ ।
ನತ್ವಾ ಪ್ರಣಮ್ಯ ಶಿರಸಾ ತಮುವಾಚ ಮಹೀಪತಿಃ ॥೧೦॥

ಸ್ವಾಮಿನ್ಕಿಂ ಕ್ರಿಯತೇಽತ್ಯರ್ಥಂ ತಪಸಾ ದೇಹಪೀಡನಂ ।
ಕಿಮರ್ಥಂ ತೇ ಸಮಾರಂಭೋ ಬ್ರೂಹಿ ಸತ್ಯಂ ಮಹಾಮತೇ ॥೧೧॥

ವಾಂಛಿತಂ ತವ ಗಾಧೇಯ ಕರೋಮಿ ಸಫಲಂ ಕಿಲ ।
ಉತ್ತಿಷ್ಠೋತ್ತಿಷ್ಠ ತರಸಾ ತಪಸಾಽಲಮತಃ ಪರಂ ॥೧೨॥

---

ಮುನಿಯು ವಿಶೇಷವಾಗಿ ಪೀಡಿಸುತ್ತಿರುವ ನನ್ನನ್ನು ಸಿದ್ಧಿರೂಪಿಣಿಯನ್ನಾಗಿ ತಿಳಿ. ||೭-೮||

ರಾಜನು ಹೇಳಿದನು—ವಿಸ್ತಾರವಾದ ಕಣ್ಣುಗಳುಳ್ಳ ಎಲೌ ಸ್ತ್ರೀಯೇ, ನೀನು ಸುಖವಾಗಿರು. ಇನ್ನು ಮುಂದೆ ನಿನಗೆ ದುಃಖವುಂಟಾಗುವುದಿಲ್ಲ! ತಪಸ್ಸಿನಲ್ಲಾಸಕ್ತನಾದ (ಇತರರಿಗೆ ತಾಪವನ್ನುಂಟುಮಾಡುವ) ಆ ಮುನಿಯನ್ನು ನಾನು ನಿವಾರಣೆ ಮಾಡುತ್ತೇನೆ! ಹೀಗೆಂದು ರಾಜನು ಸ್ತ್ರೀಯನ್ನು ಸಮಾಧಾನಪಡಿಸಿ, ಬೇಗನೆ ಮುನಿಯ ಸಮೀಪಕ್ಕೆ ಹೋಗಿ, ತಲೆಯನ್ನು ಬಗ್ಗಿಸಿ ನಮಸ್ಕರಿಸಿ, ಹೀಗೆ ಹೇಳಿದನು. ||೯-೧೦||

ಸ್ವಾಮಿನ್ ವಿಶ್ವಾಮಿತ್ರಮುನಿಯೇ, ತಪಸ್ಸಿನಿಂದ ವಿಶೇಷವಾಗಿ ದೇಹಕ್ಕೆ ತೊಂದರೆಯನ್ನು ಏತಕ್ಕೆ ಮಾಡಿಕೊಳ್ಳುತ್ತಿರುವೆ? ಓ ಮಹಾಬುದ್ಧಿಶಾಲಿಯೇ, ನಿನ್ನ ಈ ಪ್ರಯತ್ನವು ಯಾವ ಪ್ರಯೋಜನಕ್ಕೋಸ್ಕರವೆಂಬುದನ್ನು ನಿಜವಾಗಿ ಹೇಳು. ಓ ಗಾಧಿರಾಜನ ಪುತ್ರನೇ, ನಾನು ನಿನ್ನ ಇಷ್ಟವನ್ನು ಸಫಲಗೊಳಿಸುತ್ತೇನೆ! ಬೇಗನೆ ಏಳು. ಏಳು. ಇನ್ನು ತಪಸ್ಸನ್ನು ಮಾಡಬೇಡ. ||೧೧-೧೨||

ವಿಷಯೇ ಮಮ ಸರ್ವಜ್ಞ ನ ಕರ್ತವ್ಯಂ ಸುದಾರಣಂ ।
ಲೋಕಪೀಡಾಕರಂ ಘೋರಂ ತಪಃ ಕೇನಾಪಿ ಕರ್ಹಿಚಿತ್ ॥೧೩॥

ಇತ್ಥಂ ನಿಷಿಧ್ಯ ತಂ ರಾಜಾ ವಿಶ್ವಾಮಿತ್ರಂ ಗೃಹಂ ಯಯೌ ।
ಮನಸಾ ಕ್ರೋಧಮಾಧಾಯ ಗತೋಽಸೌ ಕೌಶಿಕೋ ಮುನಿಃ ॥೧೪॥

ಸ ಗತ್ವಾ ಚಿಂತಯಾಮಾಸ ನೃಪಕೃತ್ಯಮಸಾಂಪ್ರತಂ ।
ವಸಿಷ್ಠಸ್ಯ ಚ ಸಂವಾದಂ ತಪಸಃ ಪ್ರತಿಷೇಧನಂ ॥೧೫॥

ಕೋಪಾವಿಷ್ಟೇನ ಮನಸಾ ಪ್ರತೀಕಾರಮಥಾಕರೋತ್ ।
ವಿಚಿಂತ್ಯ ಬಹುಧಾ ಚಿತ್ತೇ ದಾನವಂ ಘೋರವಿಗ್ರಹಂ ॥೧೬॥

---

ಓ ಸರ್ವಜ್ಞನಾದ ಮುನಿಯೇ, ನನ್ನ ದೇಶದಲ್ಲಿ ಭಯಂಕರವೂ ಲೋಕಕ್ಕೆ ತೊಂದರೆಯನ್ನುಂಟುಮಾಡುವುದೂ ಕ್ರೂರವೂ ಆದ ತಪಸ್ಸನ್ನು ಯಾವನಾದರೂ ಎಲ್ಲಿಯಾದರೂ ಮಾಡಕೂಡದು! ॥೧೩॥

ಹೀಗೆ ರಾಜನು ಆ ವಿಶ್ವಾಮಿತ್ರನನ್ನು ನಿಷೇಧಪಡಿಸಿ ಮನೆಗೆ ಹೋದನು. ಆ ಕೌಶಿಕಮುನಿಯೂ ಮನಸ್ಸಿನಲ್ಲಿ ಕೋಪವನ್ನಿಟ್ಟುಕೊಂಡು ಹಿಂತಿರುಗಿ ಹೋದನು. ಇದರಿಂದ ಸಿದ್ಧಿಗೋಸ್ಕರವಾಗಿ ತಪಸ್ಸು ಮಾಡುವವರಿಗೆ ವಿಘ್ನಗಳು ಬರುವುವೆಂದೂ ಹೇಳಿದಂತಾಯಿತು. ಆದುದರಿಂದ ನಿಷ್ಕಾಮಭಾವದಿಂದ ಕೂಡಿಯೇ ಭಕ್ತನು ಭಗವತಿಯ ಆರಾಧನೆಯನ್ನು ಮಾಡಬೇಕೆಂಬುದೇ ತಾತ್ಪರ್ಯವು. ॥೧೪॥

ಆ ವಿಶ್ವಾಮಿತ್ರಮುನಿಯು ಹೋಗಿ ರಾಜನ ಅಯೋಗ್ಯವಾದ ಈ ಕೆಲಸದ ವಿಷಯದಲ್ಲಿ ವಸಿಷ್ಠನ ಸಂವಾದವನ್ನೂ, ತಪಸ್ಸಿನ ನಿಷೇಧವನ್ನೂ, ಆಲೋಚಿಸ ತೊಡಗಿದನು. ಹೇಗೆಂದರೆ—ರಾಜನು ಪರಮ ಧಾರ್ಮಿಕನೆಂದು ವಸಿಷ್ಠನು ಹೇಳಿದನು. ಅವನು ಧಾರ್ಮಿಕನಾದ ಮೇಲೆ ನಾನು ಮಾಡುವ ತಪಸ್ಸನ್ನೇಕೆ ನಿಷೇಧಿಸಬೇಕು? ಈ ವಿಷಯದಲ್ಲಿ ವಸಿಷ್ಠನನ್ನು ಪ್ರಶ್ನೆಮಾಡಬೇಕೆಂಬುದೇ ವಿಶ್ವಾಮಿತ್ರನ ಮುಖ್ಯಾಭಿಪ್ರಾಯವು. ॥೧೫॥

ಆಮೇಲೆ ವಿಶ್ವಾಮಿತ್ರನು ಕೋಪದಿಂದ ಕೂಡಿದ ಮನಸ್ಸಿನಿಂದ ಆ ಹರಿಶ್ಚಂದ್ರನಿಗೆ ಪ್ರತೀಕಾರವನ್ನೂ ಮಾಡಿದನು. ಅದೇನೆಂದರೆ—ಅನೇಕಬಾರಿ ಮನಸ್ಸಿನಲ್ಲಿ ಆಲೋಚಿಸಿ ಹಂದಿಯ ಆಕಾರದ ಭಯಂಕರವಾದ ಶರೀರದ ಒಬ್ಬ ರಾಕ್ಷಸನನ್ನು

ಪ್ರೇರಯಾಮಾಸ ತದ್ದೇಶಂ ವಿಧಾಯ ಸೂಕರಾಕೃತಿಂ।
ಸೋಽತಿಕಾಯೋ ಮಹಾಕಾಲಃ ಕುರ್ವನ್ನಾದಂ ಸುದಾರುಣಂ ॥೧೭॥

ರಾಜ್ಞಶ್ಚೋಪವನೇ ಪ್ರಾಪ್ತಸ್ತ್ರಾಸಯನ್ರಕ್ಷಕಾಂಸ್ತದಾ।
ಮಾಲತೀನಾಂ ಚ ಖಂಡಾನಿ ಕದಂಬಾನಾಂ ತಥೈವ ಚ ॥೧೮॥

ಯೂಥಿಕಾನಾಂ ಚ ವೃಂದಾನಿ ಕಂಪಯಂಶ್ಚ ಮುಹುರ್ಮುಹುಃ।
ದಂತೇನ ವಿಲಿಖನ್ಭೂಮಿಂ ಸಮುನ್ಮೂಲಯತೇ ದ್ರುಮಾನ್ ॥೧೯॥

ಚಂಪಕಾನ್ಕೇತಕೀಖಂಡಾನ್ಮಲ್ಲಿಕಾನಾಂ ಚ ಪಾದಪಾನ್।
ಕರವೀರಾನುಶೀರಾಂಶ್ಚ ನಿಚಖಾನ ಶುಭಾನ್ಮೃದೂನ್ ॥೨೦॥

ಮುಚುಕುಂದಾನಶೋಕಾಂಶ್ಚ ಬಕುಲಾಂಸ್ತಿಲಕಾಂಸ್ತಥಾ।
ಉನ್ಮೂಲ್ಯ ಕದನಂ ತತ್ರ ಚಕಾರ ಸೂಕರೋ ವನೇ ॥೨೧॥

ವಾಟಿಕಾರಕ್ಷಕಾಃ ಸರ್ವೇ ದುದ್ರುವುಃ ಶಸ್ತ್ರಪಾಣಯಃ।
ಹಾಹೇತಿ ಚುಕ್ರುಶುಸ್ತತ್ರ ಮಾಲಾಕಾರಾ ಭೃಶಾತುರಾಃ ॥೨೨॥

---

ಸೃಷ್ಟಿಮಾಡಿ, ದೊರೆಯ ರಾಜಧಾನಿಯ ಪ್ರದೇಶಕ್ಕೆ ಕಳುಹಿಸಿದನು. ಕಪ್ಪಾದ ದೊಡ್ಡ ಶರೀರದ ಆ ರಾಕ್ಷಸನು ಭಯಂಕರವಾದ ಶಬ್ದವನ್ನು ಮಾಡುತ್ತಾ ಆ ನಗರೋಪ ವನದ ಕಾವಲಾಗಿದ್ದ ಆಳುಗಳನ್ನು ಹೆದರಿಸುತ್ತಾ, ರಾಜನ ಉದ್ಯಾನವನಕ್ಕೆ ಬಂದನು. ||೧೬-೧೭||

ಇರುವಂತಿಗೆ ಕದಂಬ ಸೇವಂತಿಗೆ ಈ ಹೂಗಿಡಗಳನ್ನು ಬಾರಿಬಾರಿಗೂ ಅಲ್ಲಾಡಿಸುತ್ತಾ, ಹಲ್ಲುಗಳಿಂದ ಭೂಮಿಯನ್ನು ಕೆತ್ತುತ್ತಾ, ಗಿಡಗಳನ್ನು ನಾಶಮಾಡುತ್ತಿದ್ದನು. ||೧೮-೧೯||

ಆ ಹಂದಿಯ ಆಕಾರದ ರಾಕ್ಷಸನು ಉಪವನದಲ್ಲಿ ಸಂಪಗೆ, ತಾಳೆ, ಮಲ್ಲಿಗೆ, ಕಣಿಗಲು, ಲಾಮಂಚ ಮುಚುಕುಂದ, ಅಶೋಕ ಬಕುಳ, ತಿಲಕ, ಈ ಹೂವಿನ ಗಿಡಗಳನ್ನು ಬೇರು ಸಹಿತವಾಗಿ ಕಿತ್ತು ಹಾವಳಿ ಮಾಡುತ್ತಾ ಯುದ್ಧಕಾರಣವನ್ನೇ ಮಾಡಿದನು. ||೨೦-೨೧||

ಕೈಯಲ್ಲಿ ಆಯುಧವನ್ನು ಹಿಡಿದ ತೋಟವನ್ನು ಕಾಯುತ್ತಿದ್ದ ಆಳುಗಳೆಲ್ಲರೂ ಓಡಿದರು. ತೋಟಗಾರರು ಬಹಳ ಭಯದಿಂದ ಹಾಹಾಕಾರ ಮಾಡುತ್ತಾ ಕೂಗಿಕೊಂಡರು. ||೨೨||

ಬಾಣೈಃ ಸಂತಾಡ್ಯಮಾನೋಽಪಿ ಯದಾ ತ್ರಸ್ತೋ ನ ವೈ ಮೃಗಃ ।
ರಕ್ಷಕಾನ್ಪೀಡಯಾಮಾಸ ಕೋಲಃ ಕಾಲಸಮದ್ಯುತಿಃ ॥೨೩॥

ತೇ ತದಾಽತಿಭಯಾಕ್ರಾನ್ತಾ ರಾಜಾನಂ ಶರಣಂ ಯಯುಃ ।
ತಮೂಚುಸ್ತ್ರಾಹಿ ತ್ರಾಹೀತಿ ವೇಪಮಾನಾ ಭಯಾಕುಲಾಃ ॥೨೪॥

ತಾನಾಗತಾನ್ಸಮಾಲೋಕ್ಯ ಭಯಾರ್ತಾನ್ಪೃಥಿವೀಪತಿಸ್ತದಾ ।
ಪಪ್ರಚ್ಛ ಕಿಂ ಭಯಂ ಕಸ್ಮಾನ್ಮಾಂಬ್ರುವಂತು ಸಮಾಗತಾಃ ॥೨೫॥

ನಾಹಂ ಬಿಭೇಮಿ ದೇವೇಭ್ಯೋ ರಾಕ್ಷಸೇಭ್ಯಶ್ಚ ರಕ್ಷಕಾಃ ।
ಕಸ್ಮಾದ್ಭಯಂ ಸಮುತ್ಪನ್ನಂ ತದ್ಬ್ರುವಂತು ಮಮಾಗ್ರತಃ ॥೨೬॥

ಹನ್ಮಿ ಚೈಕೇನ ಬಾಣೇನ ತಂ ಶತ್ರುಂ ದುರ್ಭಗಂ ಕಿಲ ।
ಯೋ ಮೇಽರಾತಿಃ ಸಮುತ್ಪನ್ನೋ ಲೋಕೇ ಪಾಪಮತಿಃ ಕಿಲ ॥೨೭॥

ದೇವೋ ವಾ ದಾನವೋ ವಾಽಪಿ ತನ್ನಿಹನ್ಮಿ ಶರೈಃ ಶಿತೈಃ ।
ಕ್ವ ತಿಷ್ಠತಿ ಕಿಯದ್ರೂಪಃ ಕಿಯದ್ಬಲಸಮನ್ವಿತಃ ॥೨೮॥

---

ಬಾಣಗಳಿಂದ ಹೊಡೆದರೂ ಕೂಡ ಆ ಹಂದಿಯು ಹೆದರಲಿಲ್ಲ! ಯಮನಿಗೆ ಸಮಾನವಾದ ಕಾಂತಿಯುಳ್ಳ ಆ ಹಂದಿಯು ಆಳುಗಳನ್ನು ತುಂಬ ಬಾಧೆಪಡಿಸಿತು.||೨೩||

ಅವರೆಲ್ಲರೂ ಅತ್ಯಂತ ಭಯದಿಂದ ಕೂಡಿದವರಾಗಿ ಹೋಗಿ ರಾಜನನ್ನು ಶರಣುಹೊಂದಿ ಕಾಪಾಡು, ಕಾಪಾಡು! ಎಂದು ಭಯದಿಂದ ನಡುಗುತ್ತಾ ಹೇಳಿದರು! ಭಯದಿಂದ ಬಂದ ಅವರನ್ನು ರಾಜನು ನೋಡಿ, ನಿಮಗೆ ಬಂದಿರುವ ಭಯವೇನು? ಇಲ್ಲಿಗೆ ಬಂದು ನನಗೆ ಹೇಳಿ. ಎಂದು ಪ್ರಶ್ನೆ ಮಾಡಿದನು. ||೨೪-೨೫||

ಎಲೈ ಆಳುಗಳೇ, ನಾನು ದೇವತೆಗಳಿಗೂ ರಾಕ್ಷಸರಿಗೂ ಹೆದರತಕ್ಕವನಲ್ಲ! ಯಾರಿಂದ ನಿಮಗೆ ಭಯವುಂಟಾಗಿರುವುದು? ನನ್ನೆದುರಿಗೆ ಹೇಳಿರಿ. ನನಗೆ ಈ ಲೋಕದಲ್ಲಿ ದುರ್ಬುದ್ಧಿಯುಳ್ಳ ಶತ್ರುವು ಯಾರು ಹುಟ್ಟಿರುವನು? ಆ ಅದೃಷ್ಟಹೀನನಾ (ಪಾಪಿಯಾ)ದ ಶತ್ರುವನ್ನು ಒಂದೇ ಬಾಣದಿಂದ ಕೊಂದುಹಾಕುವೆನು! ||೨೬-೨೭||

ಎಲೈ ರಕ್ಷಕರಿರಾ, ಅವನು ದೇವನಾಗಲಿ, ದಾನವನಾಗಲಿ; ಅವನನ್ನು ಹರಿತವಾದ ಬಾಣದಿಂದ ಕೊಲ್ಲುತ್ತೇನೆ. ಅವನು ಎಲ್ಲಿರುತ್ತಾನೆ? ಯಾವ ರೂಪದಿಂದಿರುತ್ತಾನೆ? ಅವನಿಗೆಷ್ಟು ಬಲವಿದೆ? ಎಂದು ಪ್ರಶ್ನೆ ಮಾಡಿದನು. ||೨೮||

॥ ಮಾಲಾಕಾರಾ ಊಚುಃ ॥

ನ ದೇವೋ ನ ಚ ದೈತ್ಯೋಽಸ್ತಿ ನ ಯಕ್ಷೋ ನ ಚ ಕಿನ್ನರಃ ।
ಕಶ್ಚಿತ್ಕೋಲೋ ಮಹಾಕಾಯೋ ರಾಜಂಸ್ತಿಷ್ಠತಿ ಕಾನನೇ ॥೨೯॥

ಪುಷ್ಪವೃಕ್ಷಾನತಿಮೃದೂನ್ ದಂತೇನೋ ನ್ಮೂಲಯತ್ಯಸೌ ।
ವಿದೀರ್ಣಂ ತದ್ವನಂ ಸರ್ವಂ ಸೂಕರೇಣಾತಿರಂಹಸಾ ॥೩೦॥

ವಿಶಿಖೈಸ್ತಾಡಿತೋಽಸ್ಮಾಭಿಃ ದೃಷದ್ಭಿರ್ಲಕುಟೈಸ್ತಥಾ ।
ನ ಬಿಭೇತಿ ಮಹಾರಾಜ ಹಂತುಮಸ್ಮಾನುಪಾದ್ರವತ್ ॥೩೧॥

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ರಾಜಾ ಕೋಪಸಮಾಕುಲಃ ।
ಅಶ್ವಮಾರುಹ್ಯ ತರಸಾ ಜಗಾಮೋಪವನಂ ಪ್ರತಿ ॥೩೨॥

ಸೈನ್ಯೇನ ಮಹತಾ ಯುಕ್ತೋ ಗಜಾಶ್ವರಥಸಂಯುತಃ ।
ಪದಾತಿವೃಂದಸಹಿತಃ ಪ್ರಯಯೌ ವನಮುತ್ತಮಂ ॥೩೩॥

---

ತೋಟಗಾರರು ಹೇಳಿದರು—ಓ ಪ್ರಭುವೇ, ಆ ಶತ್ರುವು ದೇವ, ದೈತ್ಯ, ಯಕ್ಷ, ಕಿನ್ನರರು, ಯಾರೂ ಅಲ್ಲವು! ಓ ರಾಜನೇ, ದೊಡ್ಡ ಶರೀರದ ಒಂದು ಹಂದಿಯು ಆ ಉದ್ಯಾನವನದ ತೋಟದಲ್ಲಿರುತ್ತದೆ! ವಿಶೇಷ ಮೃದುವಾದ ಹೂಗಿಡಗಳನ್ನು ಹಲ್ಲಿನಿಂದ ನಾಶಮಾಡುತ್ತಿದೆ. ಆ ತೋಟವೆಲ್ಲವೂ ಆ ಹಂದಿಯಿಂದ ಬಹಳ ಬೇಗನೆ ನಾಶವಾಗಿ ಹೋಗುತ್ತಿದೆ. ॥೨೯-೩೦॥

ನಾವೂ ಬಾಣಗಳಿಂದಲೂ, ಕಲ್ಲುಗಳಿಂದಲೂ, ದೊಣ್ಣೆಗಳಿಂದಲೂ, ಆ ಹಂದಿಯನ್ನು ಹೊಡೆದೆವು. ಓ ಮಹಾರಾಜನೇ, ಅದು ಹೆದರುವುದಿಲ್ಲ! ಅದು ನಮ್ಮನ್ನೇ ಕೊಲ್ಲುವುದಕ್ಕೆ ಎದುರಿಸಿ ಬರುತ್ತಿದೆ! ॥೩೧॥

ವ್ಯಾಸನು ಹೇಳಿದನು—ಆ ತೋಟಗಾರರ ಮಾತನ್ನು ಕೇಳಿ ಹರಿಶ್ಚಂದ್ರ ರಾಜನು ಕೋಪದಿಂದ ಕೂಡಿದವನಾಗಿ ಕುದುರೆಯ ಮೇಲೇರಿ ಬೇಗನೆ ತೊಟಕ್ಕೆ ಹೋದನು. ॥೩೨॥

ಆನೆ, ಕುದುರೆ, ರಥ, ಕಾಲಾಳು, ಇವುಗಳ ಸಮೂಹಗಳಿಂದ ಕೂಡಿದ ದೊಡ್ಡ ಸೈನ್ಯದೊಡನೆ ರಾಜನು ಉತ್ತಮವಾದ ಆ ತೋಟಕ್ಕೆ ಹೋದನು. ॥೩೩॥

ತತ್ರಾಪಶ್ಯನ್ಮಹಾಕೋಲಂ ಘುರ್ಘುರಂತಂ ಭಯಾನಕಂ ।
ವನಂ ಭಗ್ನಂ ಚ ಸಂವೀಕ್ಷ್ಯ ರಾಜಾ ಕ್ರೋಧಯುತೋಽಭವತ್ ॥೩೪॥

ಚಾಪೇ ಬಾಣಂ ಸಮಾರೋಪ್ಯ ವಿಕೃಷ್ಯ ಚ ಶರಾಸನಂ ।
ತಂ ಹಂತುಂ ಸೂಕರಂ ಪಾಪಂ ತರಸಾ ಸಮುಪಾಕ್ರಮತ್ ॥೩೫॥

ಸಮಾಲೋಕ್ಯ ಚ ರಾಜಾನಂ ಚಾಪಹಸ್ತಂ ರುಷಾಽಕುಲಂ ।
ಸಂಮುಖೋಽಭ್ಯದ್ರವತ್ತೂರ್ಣಂ ಕುರ್ವನ್ ಶಬ್ದಂ ಸುದಾರುಣಂ॥೩೬॥

ತಮಾಯಾಂತಂ ಸಮಾಲೋಕ್ಯ ವರಾಹಂ ವಿಕೃತಾನನಂ ।
ಮುಮೋಚ ವಿಶಿಖಂ ತಸ್ಮಿನ್ ಹಂತುಕಾಮೋ ಮಹೀಪತಿಃ ॥೩೭॥

ವಂಚಯಿತ್ವಾಽಥ ತದ್ಬಾಣಂ ಸೂಕರಸ್ತರಸಾ ಬಲಾತ್ ।
ನಿರ್ಜಗಾಮ ಮಹಾವೇಗಾತ್ತಮುಲ್ಲಂಘ್ಯ ನೃಪಂ ತದಾ ॥೩೮॥

ಗಚ್ಛಂತಂ ತಂ ಸಮಾಲೋಕ್ಯ ರಾಜಾ ಕೋಪಸಮನ್ವಿತಃ ।
ಮುಮೋಚ ವಿಶಿಖಾಂಸ್ತೀಕ್ಷ್ಣಾನ್ ಚಾಪಮಾಕೃಷ್ಯ ಯತ್ನತಃ ॥೩೯॥

---

ರಾಜನು ತೋಟದಲ್ಲಿ ಘುರ್ ಘುರ್ ಎಂದು ಧ್ವನಿಮಾಡುತ್ತಿರುವ ಭಯಂಕರವಾದ ಆ ದೊಡ್ಡ ಹಂದಿಯನ್ನೂ, ನಾಶವಾಗಿದ್ದ ತೋಟದ ಗಿಡಗಳನ್ನೂ, ನೋಡಿ, ಕೋಪವನ್ನು ಹೊಂದಿದನು. ಮತ್ತು ತನ್ನ ಬಿಲ್ಲಿಗೆ ಬಾಣವನ್ನು ಜೋಡಿಸಿ ಎಳೆದು ಆ ಕೆಟ್ಟ ಹಂದಿಯನ್ನು ಕೊಲ್ಲಲು ಬೇಗನೆ ಪ್ರಾರಂಭಮಾಡಿದನು. ||೩೪-೩೫||

ಕೋಪದಿಂದ ಬಿಲ್ಲನ್ನು ಹಿಡಿದಿರುವ ರಾಜನನ್ನು ನೋಡಿ ಆ ಹಂದಿಯು ಭಯಂಕರವಾದ ಶಬ್ದವನ್ನು ಮಾಡುತ್ತಾ ಬೇಗನೆ ಎದುರಾಗಿ ಓಡಿ ಬಂದಿತು. ವಿಕಾರವಾದ ಮುಖದಿಂದ ಕೂಡಿದ ಆ ಹಂದಿಯು ಬರುವುದನ್ನು ನೋಡಿ ರಾಜನು, ಅದನ್ನು ಕೊಲ್ಲಬೇಕೆಂದು ಬಾಣವನ್ನು ಬಿಟ್ಟನು. ||೩೬-೩೭||

ಆ ಹಂದಿಯು ರಾಜನು ಬಿಟ್ಟ ಬಾಣದ ಏಟನ್ನು ತಪ್ಪಿಸಿಕೊಂಡು ಬೇಗನೆ ಬಲವಾಗಿ ಓಡುತ್ತಾ ರಾಜನನ್ನು ದಾಟಿ ಓಡಿಹೋಯಿತು ! ಹಾಗೆ ಓಡಿಹೋಗುತ್ತಿರುವ ಹಂದಿಯನ್ನು ಕಂಡು ರಾಜನು ಮತ್ತೂ ಕೋಪಗೊಂಡು ಹರಿತವಾದ ಅನೇಕ ಬಾಣಗಳನ್ನು ಪ್ರಯೋಗಿಸಿದನು. ಆ ಹಂದಿಯು ಒಂದು ಕ್ಷಣದಲ್ಲಿ ರಾಜನ

ಕ್ಷಣಂ ದೃಷ್ಟಿಪಥಂ ರಾಜ್ಞಃ ಕ್ಷಣಂ ಚಾದರ್ಶನಂ ಗತಃ ।
ಕುರ್ವನ್ ಬಹುವಿಧಾರಾವಂ ಸೂಕರಃ ಸಮುಪಾದ್ರವತ್  ॥೪೦॥

ಹರಿಶ್ಚಂದ್ರೋऽತಿಕುಪಿತೋ ಮೃಗಸ್ಯಾऽನುಜಗಾಮ ಹ ।
ಅಶ್ವೇನ ವಾಯುವೇಗೇನ ವಿಕೃಷ್ಯ ಚ ಶರಾಸನಂ  ॥೪೧॥

ಇತಸ್ತತಸ್ತತಃ ಸೈನ್ಯಮಗಮಚ್ಚ ವನಾಂತರಂ ।
ಏಕಾಕೀ ನೃಪತಿಃ ಕೋಲಂ ವ್ರಜಂತಂ ಸಮುಪಾದ್ರವತ್  ॥೪೨॥

ಮಧ್ಯಾಹ್ನಸಮಯೇ ರಾಜಾ ಸಂಪ್ರಾಪ್ತೋ ವಿಜನೇ ವನೇ ।
ತೃಷಿತಃ ಕ್ಷುಧಿತೋऽತ್ಯರ್ಥಂ ಬಭೂವ ಶ್ರಾಂತವಾಹನಃ  ॥೪೩॥

ಸೂಕರೋऽದರ್ಶನಂ ಪ್ರಾಪ್ತೋ ರಾಜಾ ಚಿಂತಾತುರೋऽಭವತ್ ।
ಮಾರ್ಗಭ್ರಷ್ಟೋऽತಿವಿಪಿನೇ ದಾರುಣೇ ದೀನವತ್ ಸ್ಥಿತಃ  ॥೪೪॥

---

ಕಣ್ಣಿಗೆ ಕಾಣಿಸಿಕೊಳ್ಳುತ್ತಲೂ, ಮತ್ತೊಂದು ಕ್ಷಣದಲ್ಲಿ ಮರೆಯಾಗುತ್ತಲೂ, ಅನೇಕ ಬಗೆಯ ಶಬ್ದಗಳನ್ನು ಮಾಡುತ್ತಾ ಬಹಳವಾಗಿ ತೊಂದರೆಯನ್ನುಂಟುಮಾಡುತ್ತಾ ಓಡಿತು. ॥೩೮-೩೯-೪೦॥

ಹರಿಶ್ಚಂದ್ರನೂ ಕುದುರೆಯ ಮೇಲೆ ಕುಳಿತುಕೊಂಡು ಬಹಳ ಕೋಪದಿಂದ ಆ ಹಂದಿಯನ್ನು ಹಿಂಬಾಲಿಸಿ ಬಿಲ್ಲಿನಲ್ಲಿ ಬಾಣವನ್ನು ಜೋಡಿಸಿ ಗಾಳಿಯಂತೆ ವೇಗವಾಗಿ ಅದರ ಬೆನ್ನಟ್ಟಿ ಹಿಂದೆಯೇ ಹೋದನು. ಅವನ ಸೈನ್ಯವು ಕಾಡಿನಲ್ಲಿ ದಿಕ್ಕು ದಿಕ್ಕಿಗೆ ಚದರಿಹೋಯಿತು. ರಾಜನೊಬ್ಬನೇ ಓಡುತ್ತಿರುವ ಹಂದಿಯನ್ನು ಅನುಸರಿಸಿದನು. ॥೪೧-೪೨॥

ರಾಜನು ಮಧ್ಯಾಹ್ನ ಕಾಲಕ್ಕೆ ಸರಿಯಾಗಿ ನಿರ್ಜನವಾದ ಕಾಡಿಗೆ ಬಂದು ಹಸಿವು ಬಾಯಾರಿಕೆಗಳಿಂದ ಕೂಡಿದನು. ಅವನ ಕುದುರೆಯೂ ಆಯಾಸಹೊಂದಿದ್ದಿತು. ಹಂದಿಯೂ ಕಣ್ಣಿಗೆ ಕಾಣಲಿಲ್ಲ. ಆ ದೊಡ್ಡ ಕಾಡಿನಲ್ಲಿ ರಾಜನು ದಾರಿತಪ್ಪಿ ಚಿಂತಿಸುತ್ತಾ ದರಿದ್ರನಂತೆ ಸಹಾಯವಿಲ್ಲದೆ ಕಂಗೆಟ್ಟು ಇದ್ದನು. ॥೪೩-೪೪॥

ಕಿಂ ಕರೋಮಿ ಕ್ವ ಗಚ್ಛಾಮಿ ನ ಸಹಾಯೋಽಸ್ತಿ ಮೇ ವನೇ ।
ಅಜ್ಞಾತಸ್ತ್ವಪಥಃ ಕುತ್ರ ವ್ರಜಾಮೀತಿ ವ್ಯಚಿಂತಯತ್ ॥೪೫॥

ಏವಂ ಚಿಂತಯತಸ್ತತ್ರ ವಿಪಿನೇ ಜನವರ್ಜಿತೇ ।
ರಾಜಾ ಚಿಂತಾತುರೋಽಪಶ್ಯನ್ನದೀಂ ಸುವಿಮಲೋದಕಾಂ ॥೪೬॥

ವೀಕ್ಷ್ಯ ತಾಂ ಮುದಿತೋ ರಾಜಾ ಪಾಯಯಿತ್ವಾ ತುರಂಗಮಂ ।
ಅಶ್ವಾದುತ್ತೀರ್ಯ ವಿಮಲಂ ಪಪೌ ಪಾನೀಯಮುತ್ತಮಂ ॥೪೭॥

ಜಲಂ ಪೀತ್ವಾ ನೃಪಸ್ತತ್ರ ಸುಖಮಾಪ ಮಹೀಪತಿಃ ।
ಇಯೇಷ ನಗರಂ ಗಂತು ದಿಗ್ಭ್ರಮೇಣಾತಿಮೋಹಿತಃ ॥೪೮॥

ವಿಶ್ವಾಮಿತ್ರಸ್ತು ಸಂಪ್ರಾಪ್ತೋ ವೃದ್ಧಬ್ರಾಹ್ಮಣರೂಪಧೃತ್ ।
ನನಾಮ ವೀಕ್ಷ್ಯ ರಾಜಾ ತಂ ಪ್ರೀತಿಪೂರ್ವಂ ದ್ವಿಜೋತ್ತಮಂ ॥೪೯॥

---

ಆಗ ರಾಜನು, ಈಗ ನಾನೇನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಈ ಕಾಡಿನಲ್ಲಿ ನನಗೆ ಸಹಾಯಕರು ಯಾರೂ ಇಲ್ಲ. ದಾರಿಯೂ ತಿಳಿಯದು! ಎಲ್ಲಿಗೆ ಹೋಗಲಿ? ಎಂದು ಚಿಂತಿಸುತ್ತಿದ್ದನು. ||೪೫||

ಜನರಿಲ್ಲದ ಆ ಕಾಡಿನಲ್ಲಿ ರಾಜನು ಹೀಗೆ ಆಲೋಚಿಸುತ್ತಾ ಹೋಗುತ್ತಿರಲು, ಪರಿಶುದ್ಧವಾದ ನೀರಿನಿಂದ ಕೂಡಿದ ಒಂದು ನದಿಯನ್ನು ಕಂಡು ಸಂತೋಷ ಗೊಂಡು ಕುದುರೆಯಿಂದಿಳಿದು, ಕುದುರೆಗೆ ನೀರನ್ನು ಕುಡಿಸಿ, ತಾನೂ ಆ ಉತ್ತಮ ವಾದ ನೀರನ್ನು ಕುಡಿದನು. ||೪೬-೪೭||

ರಾಜನು ನೀರನ್ನು ಕುಡಿದು ಸುಖವನ್ನು ಹೊಂದಿದನು. ಬಳಿಕ ದಿಕ್ಕುಗಳು ಸ್ವಲ್ಪವೂ ತಿಳಿಯದೆ ಹೋದರೂ ಪಟ್ಟಣಕ್ಕೆ ಹೋಗಬೇಕೆಂಬ ತೀವ್ರವಾದ ಅಪೇಕ್ಷೆ ಯಿಂದ ಕೂಡಿದ್ದನು. ||೪೮||

ಆ ಸಮಯಕ್ಕೆ ಸರಿಯಾಗಿ ವಿಶ್ವಾಮಿತ್ರನು ವೃದ್ಧಬ್ರಾಹ್ಮಣವೇಷದಿಂದ ಅಲ್ಲಿಗೆ ಬಂದನು. ರಾಜನು ಅವನನ್ನು ನೋಡಿ ಪ್ರೀತಿಯಿಂದ ಆ ಬ್ರಾಹ್ಮಣನಿಗೆ ನಮಸ್ಕರಿಸಿದನು. ||೪೯||

ತಮುವಾಚ ಗಾಧಿರಾಜಃ ಪ್ರಣಮಂತಂ ನೃಪೋತ್ತಮಂ ।
ಸ್ವಸ್ತಿ ತೇಽಸ್ತು ಮಹಾರಾಜ ಕಿಮರ್ಥಮಿಹ ಚಾಗತಃ ॥೫೦॥

ಏಕಾಕೀ ವಿಜನೇ ರಾಜನ್ ಕಿಂ ಚಿಕೀರ್ಷಿತಮತ್ರ ತೇ ।
ಬ್ರೂಹಿ ಸರ್ವಂ ಸ್ಥಿರೋ ಭೂತ್ವಾ ಕಾರಣಂ ನೃಪಸತ್ತಮ ॥೫೧॥

॥ ರಾಜೋವಾಚ ॥

ಸೂಕರೋಽತಿ ಮಹಾಕಾಯೋ ಬಲವಾನ್ಪುಷ್ಪಕಾನನಂ ।
ಸಮುಪೇತ್ಯ ಮಮರ್ದಾಶು ಕೋಮಲಾನ್ಪುಷ್ಪಪಾದಪಾನ್ ॥೫೨॥

ತಂ ನಿವಾರಯಿತುಂ ದುಷ್ಟಂ ಕರೇ ಕೃತ್ವಾ ಚ ಕಾರ್ಮುಕಂ ।
ಸಸೈನ್ಯೋಽಹಂ ಸ್ವನಗರಾನ್ನಿರ್ಗತೋ ಮುನಿಸತ್ತಮ ॥೫೩॥

ಗತೋಽಸೌ ದೃಕ್ಪಥಾತ್ಪಾಪೋ ಮಾಯಾವೀ ಕ್ವಾಪಿ ವೇಗವಾನ್ ।
ಪೃಷ್ಠತೋಽಹಮಪಿ ಪ್ರಾಪ್ತಃ ಸೈನ್ಯಂ ಕ್ವಾಪಿ ಗತಂ ಮಮ ॥೫೪॥

ಕ್ಷುಧಿತಸ್ತೃಷಿತಶ್ಚಾಽಹಂ ಸೈನ್ಯಭ್ರಷ್ಟಸ್ತ್ವಿಹಾಗತಃ ।
ನ ಜಾನೇ ಪುರಮಾರ್ಗಂ ಚ ತಥಾ ಸೈನ್ಯಗತಿಂ ಮುನೇ ॥೫೫॥

---

ನಮಸ್ಕರಿಸುತ್ತಿದ್ದ ಆ ರಾಜನನ್ನು ಕುರಿತು ಗಾಧಿರಾಜನ ಪುತ್ರನಾದ ವಿಶ್ವಾಮಿತ್ರನು ' ಎಲೈ ಮಹಾರಾಜನೇ, ನಿನಗೆ ಮಂಗಳವಾಗಲಿ! ಇಲ್ಲಿಗೆ ಯಾವ ಕಾರಣದಿಂದ ಒಬ್ಬನೇ ಬಂದಿರುವೆ? ಇಲ್ಲಿ ನೀನು ಮಾಡಬೇಕೆಂದಿರುವ ಕೆಲಸವೇನು? ಶಾಂತಚಿತ್ತನಾಗಿ ಎಲ್ಲವನ್ನೂ ಕಾರಣಸಹಿತವಾಗಿ ಹೇಳು.' ಎಂದನು. ॥೫೦-೫೧॥

ರಾಜನು ಹೇಳಿದನು—ಓ ಮುನಿಶ್ರೇಷ್ಠನೇ, ಒಂದು ಬಲವಾದ ದೊಡ್ಡ ಹಂದಿಯು ಬಂದು ನಮ್ಮ ಹೂವಿನ ತೋಟದಲ್ಲಿದ್ದ ಸುಂದರವಾದ ಹೂ ಗಿಡಗಳನ್ನೆಲ್ಲವನ್ನೂ ನಾಶಮಾಡಿತು. ಆ ಕೆಟ್ಟ ಹಂದಿಯನ್ನು ಕೊಲ್ಲುವುದಕ್ಕಾಗಿ ನಾನು ಬಿಲ್ಲುಬಾಣಗಳನ್ನು ಧರಿಸಿ ಸೈನ್ಯಸಮೇತನಾಗಿ ಪಟ್ಟಣದಿಂದ ಹೊರಟೆನು. ॥೫೨-೫೩॥

ಮಾಯೆಯಿಂದ ಕೂಡಿದ ಆ ಹಂದಿಯು ಬೇಗನೆ ಓಡುತ್ತಾ ಬಂದು ಕಡೆಗೆ ಕಣ್ಣಿಗೆ ಕಾಣಿಸದೆ ಎಲ್ಲಿಗೋ ಓಡಿಹೋಯಿತು! ನಾನು ಅದರ ಹಿಂದೆಯೇ ಬೆನ್ನಟ್ಟಿ ಬಂದೆನು. ನನ್ನ ಸೈನ್ಯವೆಲ್ಲಿಗೋ ಚದರಿಹೋಯಿತು! ನಾನು ಹಸಿವು ಬಾಯಾರಿಕೆ

ಪಂಥಾನಂ ದರ್ಶಯ ವಿಭೋ ವ್ರಜಾಮಿ ನಗರಂ ಪ್ರತಿ ।
ಮಮಾತ್ರ ಭಾಗ್ಯಯೋಗೇನ ಪ್ರಾಪ್ತಸ್ತ್ವಂ ವಿಜನೇ ವನೇ ॥೫೬॥

ಅಯೋಧ್ಯಾಧಿಪತಿಶ್ಚಾಽಹಂ ಹರಿಶ್ಚಂದ್ರೋಽತಿವಿಶ್ರುತಃ ।
ರಾಜಸೂಯಸ್ಯ ಕರ್ತಾ ಚ ವಾಂಛಿತಾರ್ಥಪ್ರದಃ ಸದಾ ॥೫೭॥

ಧನೇಚ್ಛಾ ಯದಿ ತೇ ಬ್ರಹ್ಮನ್ ಯಜ್ಞಾರ್ಥಂ ದ್ವಿಜಸತ್ತಮ ।
ಆಗಂತವ್ಯಮಯೋಧ್ಯಾಯಾಂ ದಾಸ್ಯಾಮಿ ವಿಪುಲಂ ಧನಂ ॥೫೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಅಷ್ಟಾದಶೋಽಧ್ಯಾಯಃ.

---

ಗಳಿಂದ ಕೂಡಿ ಇಲ್ಲಿಗೆ ಬಂದೆನು. ನನ್ನ ಸೈನ್ಯವು ಹೋದ ದಿಕ್ಕನ್ನೂ ಪಟ್ಟಣದ ದಾರಿಯನ್ನೂ ಕಾಣದೆ ಇರುವೆನು ! ॥೫೪-೫೫॥

ಓ ಸ್ವಾಮಿಯೇ, ನನಗೆ ದಾರಿಯನ್ನು ತೋರಿಸಿ ಕೊಡು. ನಾನು ಪಟ್ಟಣಕ್ಕೆ ಹೋಗುವೆನು. ಈ ನಿರ್ಜನವಾದ ಕಾಡಿನಲ್ಲಿ ನನ್ನ ಪುಣ್ಯದಿಂದ ನೀನು ಕಾಣಿಸಿ ಕೊಂಡಿರುವೆ. ನಾನು ಅಯೋಧ್ಯೆಯ ರಾಜನಾದ ಪ್ರಸಿದ್ಧನಾದ ಹರಿಶ್ಚಂದ್ರನು. ರಾಜಸೂಯಯಜ್ಞವನ್ನು ಮಾಡಿದವನು. ಯಾವಾಗಲೂ ಬೇಡಿದವರ ಇಷ್ಟಾರ್ಥ ಗಳನ್ನು ಕೊಡತಕ್ಕವನು ! ॥೫೬-೫೭॥

ಓ ಬ್ರಹ್ಮಜ್ಞಾನಿಯಾದ ಬ್ರಾಹ್ಮಣಶ್ರೇಷ್ಠನೇ, ಯಜ್ಞಮಾಡುವುದಕ್ಕಾಗಿ ನಿನಗೆ ಧನವು ಬೇಕಾಗಿದ್ದರೆ ಅಯೋಧ್ಯಾಪಟ್ಟಣಕ್ಕೆ ಬಂದರೆ ಬೇಕಾದಷ್ಟು ಹಣವನ್ನು ಕೊಡುವೆನು. ॥೫೮॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಏಕೋನವಿಂಶೋಽಧ್ಯಾಯಃ ॥

### ಹತ್ತೊಂಬತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತಿ ತಸ್ಯ ವಚಃ ಶ್ರುತ್ವಾ ಭೂಪತೇಃ ಕೌಶಿಕೋ ಮುನಿಃ ।**
**ಪ್ರಹಸ್ಯ ಪ್ರತ್ಯುವಾಚೇದಂ ಹರಿಶ್ಚಂದ್ರಂ ತದಾ ನೃಪ ॥೧॥**

**ರಾಜಂಸ್ತೀರ್ಥಮಿದಂ ಪುಣ್ಯಂ ಪಾವನಂ ಪಾಪನಾಶನಂ ।**
**ಸ್ನಾನಂ ಕುರು ಮಹಾಭಾಗ ಪಿತೄಣಾಂ ತರ್ಪಣಂ ತಥಾ ॥೨॥**

**ಕಾಲಃ ಶುಭತರೋಽಸ್ತೀಹ ತೀರ್ಥೇ ಸ್ನಾತ್ವಾ ವಿಶಾಂಪತೇ ।**
**ದಾನಂ ದದಸ್ವ ಶಕ್ತ್ಯಾಽತ್ರ ಪುಣ್ಯತೀರ್ಥೇಽತಿಪಾವನೇ ॥೩॥**

---

ವ್ಯಾಸನು ಹೇಳಿದನು—ಎಲೈ ಜನಮೇಜಯನೇ, ಕೇಳು. ಹೀಗೆಂದು ಹೇಳಿದ ರಾಜನ ಮಾತನ್ನು ಕೇಳಿ ವಿಶ್ವಾಮಿತ್ರಮುನಿಯು ನಕ್ಕು ಹರಿಶ್ಚಂದ್ರನನ್ನು ಕುರಿತು ಆಗ ಈ ಪ್ರತ್ಯುತ್ತರವನ್ನು ಹೇಳಿದನು. ॥೧॥

ಎಲೈ ಪುಣ್ಯವಂತನಾದ ರಾಜನೇ, ಈ ತೀರ್ಥವು ಪುಣ್ಯಕರವಾಗಿ ಪಾಪವನ್ನು ನಾಶಮಾಡತಕ್ಕುದಾಗಿರುವುದು. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಪಿತೃಗಳಿಗೆ ತರ್ಪಣವನ್ನು ಕೊಡು. ಈ ಕಾಲವು ಮಂಗಳಕರವಾದುದಾಗಿರುವುದು. ಈ ಪುಣ್ಯ ತೀರ್ಥದಲ್ಲಿ ಸ್ನಾನವನ್ನು ಮಾಡಿ ನಿನ್ನ ಶಕ್ತ್ಯನುಸಾರವಾಗಿ ದಾನವನ್ನು ಮಾಡು. ॥೨-೩॥

ಪ್ರಾಪ್ಯ ತೀರ್ಥಂ ಮಹಾಪುಣ್ಯಮಸ್ನಾತ್ವಾ ಯಸ್ತು ಗಚ್ಛತಿ ।
ಸ ಭವೇದಾತ್ಮಹಾ ಭೂಯ ಇತಿ ಸ್ವಾಯಂಭುವೋಽಬ್ರವೀತ್ ॥೪॥

ತಸ್ಮಾತ್ತೀರ್ಥವರೇ ರಾಜನ್ ಕುರು ಪುಣ್ಯಂ ಸ್ವಶಕ್ತಿತಃ ।
ದರ್ಶಯಿಷ್ಯಾಮಿ ಮಾರ್ಗಂ ತೇ ಗಂತಾಽಸಿ ನಗರಂ ತತಃ ॥೫॥

ಅಗಮಿಷ್ಯಾಮ್ಯಹಂ ಮಾರ್ಗದರ್ಶನಾರ್ಥಂ ತವಾನಘ ।
ತ್ವಯಾ ಸಹಾದ್ಯ ಕಾಕುತ್ಸ್ಥ ತವ ದಾನೇನ ತೋಷಿತಃ ॥೬॥

ತಚ್ಛ್ರುತ್ವಾ ವಚನಂ ರಾಜಾ ಮುನೇಃ ಕಪಟಮಂಡಿತಂ ।
ವಾಸಾಂಸ್ಯುತ್ತಾರ್ಯ ವಿಧಿವತ್ಸ್ನಾತುಮಭ್ಯಾಯಯೌ ನದೀಂ ॥೭॥

ಬಂಧಯಿತ್ವಾ ಹಯಂ ವೃಕ್ಷೇ ಮುನಿವಾಕ್ಯೇನ ಮೋಹಿತಃ ।
ಅವಶ್ಯಂಭಾವಿಯೋಗೇನ ತದ್ವಶಸ್ತು ತದಾಽಭವತ್ ॥೮॥

---

ಅತ್ಯಂತ ಪುಣ್ಯಕರವಾದ ತೀರ್ಥವನ್ನು ಪಡೆದು ಸ್ನಾನಮಾಡದೆ ಯಾರು ಹೋಗುವರೋ ಅವರು ಆತ್ಮಘಾತುಕರಾಗುವರೆಂದು ಸ್ವಾಯಂಭುವಮನುವು ಹೇಳಿರುವನು. ಆದುದರಿಂದ ಉತ್ತಮವಾದ ಈ ತೀರ್ಥದಲ್ಲಿ ನಿನ್ನ ಶಕ್ತ್ಯನುಸಾರವಾಗಿ ಸ್ನಾನದಾನಗಳಿಂದ ಪುಣ್ಯವನ್ನು ಸಂಪಾದಿಸು. ಆ ಮೇಲೆ ನಿನಗೆ ಪಟ್ಟಣಕ್ಕೆ ಹೋಗುವ ದಾರಿಯನ್ನು ತೋರಿಸುವೆನು. ॥೪-೫॥

ಎಲೈ ಪುಣ್ಯವಂತನಾದ ರಾಜನೇ, ನಿನ್ನ ದಾನದಿಂದ ನಾನು ಸಂತೋಷವನ್ನು ಹೊಂದಿ ದಾರಿಯನ್ನು ತೋರಿಸುವುದಕ್ಕಾಗಿ ಈದಿನ ನಿನ್ನ ಜತೆಯಲ್ಲಿಯೇ ನಾನೂ ಬರುವೆನು. ॥೬॥

ಹರಿಶ್ಚಂದ್ರರಾಜನು ವಿಶ್ವಾಮಿತ್ರಮುನಿಯ ಕಪಟದಿಂದ ಕೂಡಿದ ಹಸನಾದ ಅಲಂಕಾರದ ಮಾತನ್ನು ಕೇಳಿ, ಬಟ್ಟೆಗಳನ್ನು ತೆಗೆದು ವಿಧಿಗನುಸಾರವಾಗಿ ಸ್ನಾನ ಮಾಡುವುದಕ್ಕಾಗಿ ನದಿಗೆ ಬಂದನು. ॥೭॥

ರಾಜನು ಮುನಿಯ ಮಾತಿಗೆ ಮರುಳಾಗಿ ಕುದುರೆಯನ್ನು ಮರಕ್ಕೆ ಕಟ್ಟಿ ಆವಶ್ಯಕವಾಗಿ ಫಲಿಸಬೇಕಾದ ಪ್ರಾರಬ್ಧಕರ್ಮಸಂಬಂಧದ ಪ್ರಾಬಲ್ಯದಿಂದ ಅದರ ಫಲಾನುಭವಕ್ಕಾಗಿ ಆಗ ರಾಜನು ವಿಶ್ವಾಮಿತ್ರನ ವಶವಾದನು. ॥೮॥

ರಾಜಾ ಸ್ನಾನವಿಧಿಂ ಕೃತ್ವಾ ಸಂತರ್ಪ್ಯ ಪಿತೃದೇವತಾಃ ।
ವಿಶ್ವಾಮಿತ್ರಮುವಾಚೇದಂ ಸ್ವಾಮಿನ್ದಾನಂ ದದಾಮಿ ತೇ ॥೯॥

ಯದಿಚ್ಛಸಿ ಮಹಾಭಾಗ ತತ್ತೇ ದಾಸ್ಯಾಮಿ ಸಾಂಪ್ರತಂ ।
ಗಾವೋ ಭೂಮಿಂ ಹಿರಣ್ಯಂ ಚ ಗಜಾಶ್ವರಥವಾಹನಂ ॥೧೦॥

ನಾಽದೇಯಂ ಮೇ ಕಿಮಪ್ಯಸ್ತಿ ಕೃತಮೇತದ್ವ್ರತಂ ಪುರಾ ।
ರಾಜಸೂಯೇ ಮಖಶ್ರೇಷ್ಠೇ ಮುನೀನಾಂ ಸನ್ನಿಧಾವಪಿ ॥೧೧॥

ತಸ್ಮಾತ್ತ್ವಮಿಹ ಸಂಪ್ರಾಪ್ತಸ್ತೀರ್ಥೇಽಸ್ಮಿನ್ಪ್ರವರೇ ಮುನೇ ।
ಯತ್ತೇಽಸ್ತಿ ವಾಂಛಿತಂ ಬ್ರೂಹಿ ದದಾಮಿ ತವ ವಾಂಛಿತಂ ॥೧೨॥

॥ ವಿಶ್ವಾಮಿತ್ರ ಉವಾಚ ॥

ಮಯಾ ಪೂರ್ವಂ ಶ್ರುತಾ ರಾಜನ್ ಕೀರ್ತಿಸ್ತೇ ವಿಪುಲಾ ಭುವಿ ।
ವಸಿಷ್ಠೇನ ಚ ಸಂಪ್ರೋಕ್ತಾ ದಾತಾ ನಾಸ್ತಿ ಮಹೀತಲೇ ॥೧೩॥

---

ಆ ಹರಿಶ್ಚಂದ್ರರಾಜನು ಆ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳಿಗೂ ಪಿತೃಗಳಿಗೂ ತರ್ಪಣವನ್ನೂ ಮಾಡಿ, ವಿಶ್ವಾಮಿತ್ರನನ್ನು ಕುರಿತು ಓ ಮಹಾತ್ಮನಾದ ಋಷಿವರನೇ, ಗೋವು, ಭೂಮಿ, ಚಿನ್ನ, ಆನೆ, ಕುದುರೆ, ರಥ, ಮುಂತಾದ ವಾಹನಗಳು ಇವುಗಳಲ್ಲಿ ನಿನಗೆ ಬೇಕಾದುದನ್ನು ಕೇಳು. ಈಗ ನಾನು ಅವುಗಳನ್ನು ದಾನಮಾಡುವೆನು. ॥೯-೧೦॥

ಹಿಂದೆ ನಾನು ರಾಜಸೂಯ ಯಜ್ಞವನ್ನು ಮಾಡಿದಾಗ ಮುನಿಗಳ ಇದುರಿಗೆ ಕೇಳುವವರು ಯಾಚಿಸುವ ಎಲ್ಲ ದಾನಗಳನ್ನೂ ಮಾಡುವೆನೆಂದು ಪ್ರತಿಜ್ಞೆ ಮಾಡಿರುವೆನು. ಈ ಪ್ರಸಿದ್ಧವಾದ ಕ್ಷೇತ್ರದಲ್ಲಿ ನೀನು ನನಗೆ ದೊರೆತಿರುವೆ! ನಿನಗೆ ಇಷ್ಟವಾದುದನ್ನು ಹೇಳು. ಅದನ್ನು ನಾನು ದಾನವಾಗಿ ಕೊಡುವೆನು. ॥೧೧-೧೨॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಭೂಮಿಯಲ್ಲಿ ನಿನ್ನ ಕೀರ್ತಿಯು ವಿಸ್ತಾರವಾಗಿರುವುದೆಂದು ಮೊದಲೇ ಕೇಳಿದ್ದೆನು. ಭೂಮಿಯಲ್ಲಿ ಸೂರ್ಯವಂಶದ ತ್ರಿಶಂಕುರಾಜನ ಪುತ್ರನಾದ ಹರಿಶ್ಚಂದ್ರನಿಗೆ ಸಮಾನವಾಗಿ ದಾನಮಾಡುವ ರಾಜರು ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ! ಎಂದು ವಸಿಷ್ಠನೂ ಹೇಳಿರುವನು. ॥೧೩-೧೪॥

ಹರಿಶ್ಚಂದ್ರೋ ನೃಪಶ್ರೇಷ್ಠಃ ಸೂರ್ಯವಂಶೇ ಮಹೀಪತಿಃ ।
ತಾದೃಶೋ ನೃಪತಿರ್ಜಾತಾ ನ ಭೂತೋ ನ ಭವಿಷ್ಯತಿ ॥೧೪॥

ಪೃಥಿವ್ಯಾಂ ಪರಮೋದಾರಸ್ತ್ರಿಶಂಕುತನಯೋ ಯಥಾ ।
ಅತಸ್ತ್ವಾಂ ಪ್ರಾರ್ಥಯಾಮ್ಯದ್ಯ ವಿವಾಹೋ ಮೇಽಸ್ತಿ ಪಾರ್ಥಿವ ॥೧೫॥

ಪುತ್ರಸ್ಯ ಚ ಮಹಾಭಾಗ ತದರ್ಥಂ ದೇಹಿ ಮೇ ಧನಂ ।

॥ ರಾಜೋವಾಚ ॥

ವಿವಾಹಂ ಕುರು ವಿಪ್ರೇಂದ್ರ ದದಾಮಿ ಪ್ರಾರ್ಥಿತಂ ತವ ॥೧೬॥

ಯದಿಚ್ಛಸಿ ಧನಂ ಕಾಮಂ ದಾತಾ ತಸ್ಯಾಽಸ್ಮಿ ನಿಶ್ಚಿತಂ ।

॥ ವ್ಯಾಸ ಉವಾಚ ॥

ಇತ್ಯುಕ್ತಃ ಕೌಶಿಕಸ್ತೇನ ವಂಚನಾತತ್ಪರೋ ಮುನಿಃ ॥೧೭॥

ಉದ್ಭಾವ್ಯ ಮಾಯಾಂ ಗಾಂಧರ್ವೀಂ ಪಾರ್ಥಿವಾಯಾಪ್ಯದರ್ಶಯತ್ ।
ಕುಮಾರಃ ಸುಕುಮಾರಶ್ಚ ಕನ್ಯಾ ಚ ದಶವಾರ್ಷಿಕೀ ॥೧೮॥

ಏತಯೋಃ ಕಾರ್ಯಮಪ್ಯದ್ಯ ಕರ್ತವ್ಯಂ ನೃಪಸತ್ತಮ ।
ರಾಜಸೂಯಾಧಿಕಂ ಪುಣ್ಯಂ ಗೃಹಸ್ಥಸ್ಯ ವಿವಾಹತಃ ॥೧೯॥
ಭವಿಷ್ಯತಿ ತವಾಽದ್ಯೈವ ವಿಪ್ರಪುತ್ರವಿವಾಹತಃ ।

---

ಆದುದರಿಂದ ಎಲೈ ರಾಜನೇ, ನನ್ನ ಮಗನ ವಿವಾಹವನ್ನು ನಾನು ಮಾಡಬೇಕಾಗಿರುವುದು. ಆ ಕಾರಣದಿಂದ ನಿನ್ನನ್ನು ಯಾಚಿಸುತ್ತಿರುವೆನು. ಪುಣ್ಯವಂತನಾದ ನೀನು ಆ ವಿವಾಹಕ್ಕಾಗಿ ಆಗಬೇಕಾದ ಧನವನ್ನು ಕೊಡಬೇಕು. ॥೧೫॥

ರಾಜನು ಹೇಳಿದನು—ಓ ಬ್ರಾಹ್ಮಣಶ್ರೇಷ್ಠನೇ, ನೀನು ಕೇಳಿದಷ್ಟು ಹಣವನ್ನು ಕೊಡುವೆನು! ವಿವಾಹವನ್ನು ಮಾಡು. ನೀನು ಎಷ್ಟು ಹೆಚ್ಚಾಗಿ ಕೇಳಿದರೂ ನಿಜವಾಗಿ ಅಷ್ಟನ್ನೂ ಕೊಡುವೆನು. ॥೧೬॥

ವ್ಯಾಸರು ಹೇಳಿದರು—ರಾಜನು ಹೇಳುತ್ತಲು, ವಿಶ್ವಾಮಿತ್ರನು ಮೋಸಮಾಡುವುದರಲ್ಲಿ ಆಸಕ್ತನಾಗಿ ಗಾಂಧರ್ವಮಾಯೆಯಿಂದ ಸುಂದರವಾದ ಒಬ್ಬ ಕುಮಾರನನ್ನೂ ಹತ್ತುವರುಷ ವಯಸ್ಸಿನ ಒಬ್ಬಳು ಕನ್ಯೆಯನ್ನೂ ರಾಜನಿಗೆ ತೋರಿಸಿ, ' ಎಲೈ ರಾಜನೇ, ಈಗಲೇ ಇವರಿಬ್ಬರಿಗೂ ವಿವಾಹವನ್ನು ಮಾಡಬೇಕು. ವಿವಾಹಮಾಡಿಸಿ

ತಚ್ಛ್ರುತ್ವಾ ವಚನಂ ರಾಜಾ ಮಾಯಯಾ ತಸ್ಯ ಮೋಹಿತಃ ॥೨೦॥

ತಥೇತಿ ಚ ಪ್ರತಿಜ್ಞಾಯ ನೋವಾಚಾಲ್ಪಂ ವಚಸ್ತಥಾ ।
ತೇನ ದರ್ಶಿತಮಾರ್ಗೋऽಸೌ ನಗರಂ ಪ್ರತಿ ಜಗ್ಮಿವಾನ್ ॥೨೧॥

ವಿಶ್ವಾಮಿತ್ರೋऽಪಿ ರಾಜಾನಂ ವಂಚಯಿತ್ವಾऽಶ್ರಮಂ ಯಯೌ ।
ಕೃತೋದ್ವಾಹವಿಧಿಸ್ತಾವ ದ್ವಿಶ್ವಾಮಿತ್ರೋऽಬ್ರವೀನ್ನೃಪಂ ॥೨೨॥

ವೇದೀಮಧ್ಯೇ ನೃಪಾऽದ್ಯ ತ್ವಂ ದೇಹಿ ದಾನಂ ಯಥೇಪ್ಸಿತಂ ।

॥ ರಾಜೋವಾಚ ॥

ಕಿಂ ತೇऽಭೀಷ್ಟಂ ದ್ವಿಜ ಬ್ರೂಹಿ ದದಾಮಿ ವಾಂಛಿತಂ ಕಿಲ ॥೨೩॥

ಅದೇಯಮಪಿ ಸಂಸಾರೇ ಯಶಃಕಾಮೋऽಸ್ಮಿ ಸಾಂಪ್ರತಂ ।
ವ್ಯರ್ಥಂ ಹಿ ಜೀವಿತಂ ತಸ್ಯ ವಿಭವಂ ಪ್ರಾಪ್ಯ ಯೇನ ವೈ ॥೨೪॥

---

ಗೃಹಸ್ಥಾಶ್ರಮಧರ್ಮವನ್ನು ನೀನು ಕಾಪಾಡುವುದರಿಂದ ನಿನಗೆ ರಾಜಸೂಯಯಜ್ಞಕ್ಕಿಂತಲೂ ಹೆಚ್ಚು ಪುಣ್ಯವು ಬರುವುದು. ಬ್ರಾಹ್ಮಣಪುತ್ರನ ವಿವಾಹದಿಂದ ನಿನಗೆ ಈಗಲೆ ಪುಣ್ಯವು ಬರುವುದು.' ಎಂದು ಹೇಳಿದನು. ॥೧೭-೧೮-೧೯॥

ರಾಜನು ವಿಶ್ವಾಮಿತ್ರನ ಮಾತನ್ನು ಕೇಳಿ, ಅವನ ಮಾಯೆಯಿಂದ ಮೋಹಿತನಾಗಿ, ಹಾಗೆಯೇ ಆಗಲೆಂದು ಪ್ರತಿಜ್ಞೆಮಾಡಿ, ಒಂದು ಮಾತನ್ನೂ ಆಡದೆ ಅವನು ತೋರಿಸಿದ ದಾರಿಯಿಂದಲೇ ಪಟ್ಟಣಕ್ಕೆ ಹಿಂತಿರುಗುವವನಾಗಿದ್ದನು. ॥೨೦-೨೧॥

ವಿಶ್ವಾಮಿತ್ರನೂ ಕೂಡ ರಾಜನನ್ನು ಮೋಸಗೊಳಿಸಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಬಳಿಕ ವಿಶ್ವಾಮಿತ್ರನು ಆ ದಂಪತಿಗಳಿಗೆ ವಿವಾಹವನ್ನು ಮಾಡಿ, ಅಗ್ನಿಹೋತ್ರಶಾಲೆಯಲ್ಲಿದ್ದ ರಾಜನನ್ನು ಕುರಿತು, 'ಎಲೈ ರಾಜನೇ, ನೀನು ಕೊಡುತ್ತೇನೆಂದು ಹೇಳಿದ್ದ ಮತ್ತು ಈ ವಧೂವರರ ಜೀವನಾರ್ಥವಾದ ದಾನವನ್ನು ಪವಿತ್ರವಾದ ಅಗ್ನಿಸಾಕ್ಷಿಕವಾಗಿ ಈಗಲೇ ಕೊಡು.' ಎಂದು ಕೇಳಿದನು. ॥೨೨॥

ರಾಜನು ಹೇಳಿದನು--ಓ ಬ್ರಾಹ್ಮಣನೇ, ನಿನ್ನ ಅಪೇಕ್ಷೆಯನ್ನು ಹೇಳು. ನೀನು ಇಷ್ಟಪಟ್ಟುದನ್ನು ನಾನು ಕೊಡುವೆನು. ನಾನು ಕೀರ್ತಿಯನ್ನು ಪಡೆಯಬೇಕೆಂಬ ಅಪೇಕ್ಷೆಯಿಂದಿರುವೆನು. ಆದುದರಿಂದ ಈ ಹುಟ್ಟಿನಲ್ಲಿ ಅಸಾಧ್ಯವಾದ ವಸ್ತುವಾದರೂ ಅದನ್ನು ಸಾಧಿಸಿ ನಿನಗಾಗಿ ದಾನಮಾಡುವೆನು! ಏಕೆಂದರೆ ಈ ಲೋಕದಲ್ಲಿ

ನೋಪಾರ್ಜಿತಂ ಯಶಃ ಶುದ್ಧಂ ಪರಲೋಕಸುಖಪ್ರದಂ ।

॥ ವಿಶ್ವಾಮಿತ್ರ ಉವಾಚ ॥

ರಾಜ್ಯಂ ದೇಹಿ ಮಹಾರಾಜ ವರಾಯ ಸಪರಿಚ್ಛದಂ ॥೨೫॥

ಗಜಾಶ್ವರಥರತ್ನಾಢ್ಯಂ ವೇದೀಮಧ್ಯೇಽತಿಪಾವನೇ ।

॥ ವ್ಯಾಸ ಉವಾಚ ॥

ಮೋಹಿತೋ ಮಾಯಯಾ ತಸ್ಯ ಶ್ರುತ್ವಾ ವಾಕ್ಯಂ ಮುನೇರ್ನೃಪಃ ॥೨೬॥

ದತ್ತಮಿತ್ಯುಕ್ತವಾನ್ರಾಜ್ಯಮವಿಚಾರ್ಯ ಯದೃಚ್ಛಯಾ ।
ಗೃಹೀತಮಿತಿ ತಂ ಪ್ರಾಹ ವಿಶ್ವಾಮಿತ್ರೋಽತಿನಿಷ್ಠುರಃ ॥೨೭॥

ದಕ್ಷಿಣಾಂ ದೇಹಿ ರಾಜೇಂದ್ರ ದಾನಯೋಗ್ಯಾಂ ಮಹಾಮತೇ ।
ದಕ್ಷಿಣಾರಹಿತಂ ದಾನಂ ನಿಷ್ಫಲಂ ಮನುರಬ್ರವೀತ್ ॥೨೮॥
ತಸ್ಮಾದ್ದಾನಫಲಾಯ ತ್ವಂ ಯಥೋಕ್ತಾಂ ದೇಹಿ ದಕ್ಷಿಣಾಂ ।

---

ಸಂಪತ್ತನ್ನು ಪಡೆದು ಪರಲೋಕದಲ್ಲಿಯೂ ಸುಖವನ್ನು ಕೊಡತಕ್ಕ ಯಶಸ್ಸನ್ನು ಸಂಪಾದಿಸದ ಮನುಷ್ಯನ ಹುಟ್ಟು ಮತ್ತು ಸಂಪತ್ತು ವ್ಯರ್ಥವು. ॥೨೩-೨೪॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಪರಿಶುದ್ಧವಾದ ಈ ಯಜ್ಞಶಾಲೆಯ ಮಧ್ಯದಲ್ಲಿ ಅನೇಕ ಕುದುರೆ, ರಥ, ರತ್ನಗಳು ಇವುಗಳಿಂದ ಕೂಡಿದ ಸಕಲ ಸಂಪತ್ತುಗಳಿಂದಲೂ, ಸೇವೆಯನ್ನು ಮಾಡುವ ಜನರಿಂದಲೂ, ಸಹಿತವಾದ ರಾಜ್ಯವನ್ನು ಈ ವರನಿಗೆ ಕೊಡು. ॥೨೫॥

ವ್ಯಾಸರು ಹೇಳಿದರು—ಆ ವಿಶ್ವಾಮಿತ್ರನ ಮಾಯೆಯಿಂದ ಮೋಹಿತನಾದ ಹರಿಶ್ಚಂದ್ರರಾಜನು ಆ ಮುನಿಯ ಮಾತನ್ನು ಕೇಳಿ ಯುಕ್ತಾಯುಕ್ತವಿಮರ್ಶೆಯನ್ನು ಮಾಡದೆ, ಆಕಸ್ಮಾತ್ತಾಗಿ ತಟ್ಟನೆ ' ರಾಜ್ಯವನ್ನು ಕೊಟ್ಟೆನು ! ' ಎಂದು ಹೇಳಿದನು. ಕ್ರೂರಸ್ವಭಾವದ ವಿಶ್ವಾಮಿತ್ರನೂ ' ಪ್ರತಿಗ್ರಹಿಸಿದೆನು.' ಎಂದನು ! ॥೨೬-೨೭॥

ಎಲೈ ಬುದ್ಧಿವಂತನಾದ ರಾಜಶ್ರೇಷ್ಠನೇ, ದಾನಮಾಡಿದ ವಸ್ತುವಿಗೆ ತಕ್ಕ ದಕ್ಷಿಣೆಯನ್ನು ಕೊಡು. ದಕ್ಷಿಣೆಯಿಲ್ಲದ ದಾನವು ಫಲಕೊಡತಕ್ಕುದಲ್ಲವೆಂದು ಮನುವು ಹೇಳಿರುವನು. ಆದುದರಿಂದ ದಾನಫಲಪ್ರಾಪ್ತಿಗಾಗಿ ತಕ್ಕ ದಕ್ಷಿಣೆಯನ್ನೂ ಕೊಡು ! ॥೨೮॥

ಇತ್ಯುಕ್ತಸ್ತು ತದಾ ರಾಜಾ ತಮುವಾಚಾತಿವಿಸ್ಮಿತಃ ॥೨೯॥
ಬ್ರೂಹಿ ಕಿಂ ಯದ್ಧನಂ ತುಭ್ಯಂ ದೇಯಂ ಸ್ವಾಮಿನ್ಮಯಾಽಧುನಾ ।
ದಕ್ಷಿಣಾನಿಷ್ಕ್ರಯಂ ಸಾಧೋ ವದ ಯಾವತ್ಪ್ರಮಾಣಕಂ ॥೩೦॥

ದಾನಪೂರ್ತ್ಯೈ ಪ್ರದಾಸ್ಯಾಮಿ ಸ್ವಸ್ಥೋ ಭವ ತಪೋಧನ ।
ವಿಶ್ವಾಮಿತ್ರಸ್ತು ತಚ್ಛ್ರುತ್ವಾ ತಮಾಹ ಮೇದಿನೀಪತಿಂ ॥೩೧॥

ಹೇಮಭಾರದ್ವಯಂ ಸಾರ್ಧಂ ದಕ್ಷಿಣಾಂ ದೇಹಿ ಸಾಂಪ್ರತಂ ।
ದಾಸ್ಯಾಮೀತಿ ಪ್ರತಿಶ್ರುತ್ಯ ತಸ್ಮೈ ರಾಜಾಽತಿವಿಸ್ಮಿತಃ ॥೩೨॥

ತದೈವ ಸೈನಿಕಾಸ್ತಸ್ಯ ವೀಕ್ಷಮಾಣಾಃ ಸಮಾಗತಾಃ ।
ದೃಷ್ಟ್ವಾ ಮಹೀಪತಿಂ ವ್ಯಗ್ರಂ ತುಷ್ಟುವುಸ್ತೇ ಮುದಾಽನ್ವಿತಾಃ ॥೩೩॥

॥ ವ್ಯಾಸ ಉವಾಚ ॥

ಶ್ರುತ್ವಾ ತೇಷಾಂ ವಚೋ ರಾಜಾ ನೋಕ್ತ್ವಾ ಕಿಂಚಿಚ್ಛುಭಾಶುಭಂ ।
ಚಿಂತಯನ್ ಸ್ವಕೃತಂ ಕರ್ಮ ಯಯಾವಂತಃಪುರೇ ತತಃ ॥೩೪॥

---

ವಿಶ್ವಾಮಿತ್ರನು ಹೀಗೆಂದು ಹೇಳುತ್ತಲು ರಾಜನು ಆಶ್ಚರ್ಯಪಡುತ್ತಾ ಓ ಮುನಿಯೇ, ನಿನಗೆ ದಕ್ಷಿಣೆಗಾಗಿ ಎಷ್ಟು ಹಣವನ್ನು ಕೊಡಬೇಕು? ಅದರ ಪ್ರಮಾಣದ ಲೆಕ್ಕವನ್ನು ಹೇಳು. ದಾನವು ಸಫಲವಾಗುವುದಕ್ಕಾಗಿ ಆ ದಕ್ಷಿಣೆಯನ್ನೂ ಕೊಡುವೆನು! ಶಾಂತಚಿತ್ತನಾಗು. ಎಂದು ಹೇಳಿದನು. ॥೨೯॥

ಹೀಗೆಂದು ಹೇಳಿದ ರಾಜನಮಾತನ್ನು ಕೇಳಿ, ವಿಶ್ವಾಮಿತ್ರನು ಆ ರಾಜನನ್ನು ಕುರಿತು, ಈಗ ಎರಡೂವರೆ ಭಾರದ ತೂಕದ ಅಳತೆಯ ಸುವರ್ಣನಾಣ್ಯವನ್ನು ದಕ್ಷಿಣೆಯಾಗಿ ಕೊಡಬೇಕು ಎಂದನು. ರಾಜನು ಕೊಡುತ್ತೇನೆಂದು ಪ್ರತಿಜ್ಞೆಮಾಡಿ, ಮತ್ತೆ ರಾಜನು ವಿಶೇಷವಾಗಿ ಆಶ್ಚರ್ಯವನ್ನು ಹೊಂದಿದನು. (ರಾಜ್ಯದ ಉತ್ಪತ್ತಿಯ ಹತ್ತನೆಯ ಒಂದು ಭಾಗಕ್ಕೆ ಭಾರವೆಂದು ಹೆಸರು.) ॥೩೧-೩೨॥

ಆಗಲೇ ಹುಡುಕುತ್ತಿದ್ದ ಆ ರಾಜನ ಸೈನಿಕರೂ ಅಲ್ಲಿಗೆ ಬಂದರು. ರಾಜನು ಚಿಂತೆಯಿಂದಿರುವುದನ್ನು ನೋಡಿ, ಅವರು ಅವನ ಚಿಂತೆಯನ್ನು ಹೋಗಲಾಡಿಸಿ ಪ್ರೋತ್ಸಾಹಿಸಲು ಸಂತೋಷದಿಂದ ರಾಜನನ್ನು ಸ್ತೋತ್ರಮಾಡಿದರು. ॥೩೩॥

ವ್ಯಾಸರು ಹೇಳಿದರು — ಆ ಸೈನಿಕರ ಮಾತನ್ನು ಕೇಳಿ ರಾಜನು ಒಳ್ಳೆಯ ಅಥವಾ ಕೆಟ್ಟದಾದ ಯಾವ ಮಾತನ್ನೂ ಆಡದೆ ತಾನು ಮಾಡಿದ ಕೆಲಸದ ಪರಿಣಾ

ಕಿಂ ಮಯಾ ಸ್ವೀಕೃತಂ ದಾನಂ ಸರ್ವಸ್ವಂ ಯತ್ಸಮರ್ಪಿತಂ ।
ವಂಚಿತೋಽಹಂ ದ್ವಿಜೇನಾತ್ರ ವನೇ ಪಾಟಚ್ಚರೈರಿವ ॥೩೫॥

ರಾಜ್ಯಂ ಸೋಪಸ್ಕರಂ ತಸ್ಮೈ ಮಯಾ ಸರ್ವಂ ಪ್ರತಿಶ್ರುತಂ ।
ಭಾರದ್ವಯಂ ಸುವರ್ಣಸ್ಯ ಸಾರ್ಧಂ ಚ ದಕ್ಷಿಣಾ ಪುನಃ ॥೩೬॥

ಕಿಂ ಕರೋಮಿ ಮತಿರ್ಭ್ರಷ್ಟಾ ನ ಜ್ಞಾತಂ ಕಪಟಂ ಮುನೇಃ ।
ಪ್ರತಾರಿತೋಽಹಂ ಸಹಸಾ ಬ್ರಾಹ್ಮಣೇನ ತಪಸ್ವಿನಾ ॥೩೭॥

ನ ಜಾನೇ ದೈವ ಕಾರ್ಯಂ ವೈ ಹಾ ದೈವ ಕಿಂ ಭವಿಷ್ಯತಿ ।
ಇತಿ ಚಿಂತಾಪರೋ ರಾಜಾ ಗೃಹಂ ಪ್ರಾಪ್ತೋಽತಿವಿಹ್ವಲಃ ॥೩೮॥

ಪತಿಂ ಚಿಂತಾಪರಂ ದೃಷ್ಟ್ವಾ ರಾಜ್ಞೀ ಪಪ್ರಚ್ಛ ಕಾರಣಂ ।
ಕಿಂ ಪ್ರಭೋ ವಿಮನಾ ಭಾಸಿ ಕಿಂ ಚಿಂತಾ ಬ್ರೂಹಿ ಸಾಂಪ್ರತಂ ॥೩೯॥

---

ಮವನ್ನು ಕುರಿತು ಯೋಚಿಸುತ್ತಾ, ಅಲ್ಲಿಂದ ಪಟ್ಟಣಕ್ಕೆ ಬಂದು, ರಾಣಿವಾಸಕ್ಕೆ ಹೊರಟುಹೋದನು. ॥೩೪॥

ಏನು ? ನಾನು ಈ ರಾಜ್ಯವೆಲ್ಲವನ್ನೂ ಕೊಟ್ಟು ಬಿಟ್ಟೆನಲ್ಲವೇ ? ಇನ್ನು ನನ್ನದಾಗಿ ಉಳಿದಿರುವುದೇನು ? ಮುನಿಯೂ ದಾನವನ್ನು ತೆಗೆದುಕೊಂಡನು. ಅಲ್ಲದೆ ಈ ವನದಲ್ಲಿ ಕಳ್ಳರಂತೆ ಈ ಬ್ರಾಹ್ಮಣನು ನನಗೇ ತಿಳಿಯದಂತೆ ನನ್ನನ್ನು ಮೋಸಪಡಿಸಿದನು. ॥೩೫॥

ಸಮಸ್ತ ವಸ್ತುಗಳಿಂದ ಕೂಡಿದ ರಾಜ್ಯವನ್ನೇ ಕೊಡುತ್ತೇನೆಂದು ಮಾತು ಕೊಟ್ಟಿರುವೆನು. ಇದರ ಮೇಲೆ ಎರಡೂವರೆಭಾರ ಸುವರ್ಣನಾಣ್ಯಗಳ ದಕ್ಷಿಣೆಯನ್ನೂ ಕೊಡಬೇಕು. ನಾನು ಈ ಮುನಿಯ ಕಪಟವನ್ನು ತಿಳಿಯದೆ ಬುದ್ಧಿಹೀನನಾದೆನು. ತಪಸ್ವಿಯಾದ ಈ ಬ್ರಾಹ್ಮಣನು ಅಕಸ್ಮಾತ್ತಾಗಿ ನನ್ನನ್ನು ಮೋಸಗೊಳಿಸಿದನು. ಅಥವಾ ಇದು ನನ್ನ ಅದೃಷ್ಟವಿಶೇಷದ ಫಲವಾಗಿರಬಹುದು. ಅಯ್ಯೋ ಅದೃಷ್ಟವೇ ! ಮುಂದೇನಾಗುವುದೋ ? ಎಂದು ಚಿಂತಿಸುತ್ತಾ ವಿಷಾದಮೋಹದಿಂದ ಕೂಡಿ ರಾಜನು ಮನೆಗೆ ಹೋದನು. ॥೩೬-೩೭-೩೮॥

ತನ್ನ ಪತಿಯು ಚಿಂತಿಸುತ್ತಿರುವುದನ್ನು ಕಂಡು ರಾಣಿಯು ' ಓ ರಾಜನೇ, ನಿನ್ನ ಈ ಚಿಂತೆಗೆ ಕಾರಣವೇನು ? ಮಗನು ಕಾಡಿಗೆ ಹೋಗಿದ್ದವನು ಹಿಂತಿರುಗಿ

ವನಾತ್ಪುತ್ರಃ ಸಮಾಯಾತೋ ರಾಜಸೂಯಃ ಕೃತಃ ಪುರಾ ।
ಕಸ್ಮಾಚ್ಛೋಚಸಿ ರಾಜೇಂದ್ರ ಶೋಕಸ್ಯ ಕಾರಣಂ ವದ ॥೪೦॥

ನಾರಾತಿರ್ವಿದ್ಯತೇ ಕ್ವಾಪಿ ಬಲವಾನ್ದುರ್ಬಲೋಽಪಿ ವಾ ।
ವರುಣೋಽಪಿ ಸುಸಂತುಷ್ಟಃ ಕೃತಕೃತ್ಯೋಽಸಿ ಭೂತಲೇ ॥೪೧॥

ಚಿಂತಯಾ ಕ್ಷೀಯತೇ ದೇಹೋ ನಾಸ್ತಿ ಚಿಂತಾಸಮಾ ಮೃತಿಃ ।
ತ್ಯಜ್ಯತಾಂ ನೃಪಶಾರ್ದೂಲ ಸ್ವಸ್ಥೋ ಭವ ವಿಚಕ್ಷಣ ॥೪೨॥

ತನ್ನಿಶಮ್ಯ ಪ್ರಿಯಾವಾಕ್ಯಂ ಪ್ರೀತಿಪೂರ್ವಂ ನರಾಧಿಪಃ ।
ಪ್ರೋವಾಚ ಕಿಂಚಿಚ್ಚಿಂತಾಯಾಃ ಕಾರಣಂ ಚ ಶುಭಾಶುಭಂ ॥೪೩॥

ಭೋಜನಂ ನ ಚಕಾರಾಸೌ ಚಿಂತಾವಿಷ್ಟಸ್ತಥಾ ನೃಪಃ ।
ಸುಪ್ತ್ವಾಽಪಿ ಶಯನೇ ಶುಭ್ರೇ ಲೇಭೇ ನಿದ್ರಾಂ ನ ಭೂಮಿಪಃ॥೪೪॥

---

ಬಂದನು! ಹಿಂದೆಯೇ ರಾಜಸೂಯ ಯಜ್ಞವನ್ನೂ ಮಾಡಿರುವೆ! ಹೀಗಿರುವಲ್ಲಿ ನೀನು ದುಃಖಪಡುವುದಕ್ಕೆ ಕಾರಣವೇನು? ಮನಸ್ಸಿನಲ್ಲಿ ದುಗುಡವುಳ್ಳವನಂತೆ ಕಾಣುತ್ತಿರುವೆ. ಅದನ್ನು ಹೇಳು? ಎಂದು ಪ್ರಶ್ನೆ ಮಾಡಿದಳು. ॥೩೯-೪೦॥

ಇದೂ ಅಲ್ಲದೆ ಬಲಿಷ್ಠನಾಗಲಿ ದುರ್ಬಲನಾಗಲಿ ಆದ ಯಾವ ಶತ್ರುವೂ ನಿನಗೆ ಎಲ್ಲಿಯೂ ಇರುವುದಿಲ್ಲ! ವರುಣನೂ ಕೂಡ ನೀನು ಮಾಡಿದ ಯಜ್ಞದಿಂದ ತೃಪ್ತನಾದನು. ಭೂಮಿಯಲ್ಲಿ ನೀನು ಮಾಡಬೇಕಾದ ಕೆಲಸಗಳನ್ನೆಲ್ಲವನ್ನೂ ಮಾಡಿರುವೆ. ಹೀಗಿದ್ದರೂ ನಿನ್ನ ಮನಸ್ಸಿನ ಚಿಂತೆಯಿಂದ ನಿನ್ನ ಶರೀರವು ಕೃಶವಾಗುತ್ತಿರುವುದು. ಚಿಂತೆಗೆ ಸಮಾನವಾದ ಮೃತ್ಯುವು ಮತ್ತೊಂದಿಲ್ಲ. ಓ ರಾಜಶ್ರೇಷ್ಠನೇ, ವಿವೇಕಿಯಾದ ನೀನು ಚಿಂತೆಯನ್ನು ಬಿಟ್ಟು ಶಾಂತಚಿತ್ತನಾಗು. ಎಂದು ಹೇಳಿದಳು. ॥೪೧-೪೨॥

ರಾಜನು ಹೀಗೆ ಪ್ರೀತಿಯಿಂದ ಹೇಳಿದ ತನ್ನ ಹೆಂಡಿತಿಯ ಮಾತನ್ನು ಕೇಳಿ, ಆವಳನ್ನು ಕುರಿತು ತನ್ನ ಚಿಂತೆಗೆ ಕಾರಣವನ್ನೂ ಅದರಿಂದ ಆಗಬಹುದಾದ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳನ್ನೂ, ಸ್ವಲ್ಪಮಟ್ಟಿಗೆ ಹೇಳಿದನು. ಆ ರಾಜನು ಊಟವನ್ನು ಮಾಡಲಿಲ್ಲ. ಪರಿಶುದ್ಧವಾದ ಹಾಸಿಗೆಯಲ್ಲಿ ಮಲಗಿದ್ದರೂ ಚಿಂತೆಯಿಂದ ನಿದ್ರೆಯನ್ನೂ ಮಾಡಲಿಲ್ಲ. ॥೪೩-೪೪॥

ಪ್ರಾತರುತ್ಥಾಯ ಚಿಂತಾರ್ತೋ ಯಾವತ್ಸಂಧ್ಯಾದಿಕಾಃ ಕ್ರಿಯಾಃ ।
ಕರೋತಿ ನೃಪತಿಸ್ತಾವದ್ವಿಶ್ವಾಮಿತ್ರಃ ಸಮಾಗತಃ ॥೪೫॥

ಕ್ಷತ್ರಾ ನಿವೇದಿತೋ ರಾಜ್ಞೋ ಮುನಿಃ ಸರ್ವಸ್ವಹಾರಕಃ ।
ಆಗತ್ಯೋವಾಚ ರಾಜಾನಂ ಪ್ರಣಮಂತಂ ಪುನಃ ಪುನಃ ॥೪೬॥

॥ ವಿಶ್ವಾಮಿತ್ರ ಉವಾಚ ॥

ರಾಜನ್ ತ್ಯಜಸ್ವ ರಾಜ್ಯಂ ಮೇ ದೇಹಿ ವಾಚಾ ಪ್ರತಿಶ್ರುತಂ ।
ಸುವರ್ಣಂ ಸ್ಪೃಶ ರಾಜೇಂದ್ರ ಸತ್ಯವಾಗ್ಭವ ಸಾಂಪ್ರತಂ ॥೪೭॥

॥ ಹರಿಶ್ಚಂದ್ರ ಉವಾಚ ॥

ಸ್ವಾಮಿನ್ರಾಜ್ಯಂ ತವೇದಂ ಮೇ ಮಯಾ ದತ್ತಂ ಕಿಲಾಧುನಾ ।
ತ್ಯಕ್ತ್ವಾಽನ್ಯತ್ರ ಗಮಿಷ್ಯಾಮಿ ಮಾ ಚಿಂತಾಂ ಕುರು ಕೌಶಿಕ ॥೪೮॥

ಸರ್ವಸ್ವಂ ಮಮ ತೇ ಬ್ರಹ್ಮನ್ ಗೃಹೀತಂ ವಿಧಿವದ್ವಿಭೋ ।
ಸುವರ್ಣದಕ್ಷಿಣಾಂ ದಾತುಮಶಕ್ತೋ ಹ್ಯಧುನಾ ದ್ವಿಜ ॥೪೯॥

---

ರಾಜನು ಪ್ರಾತಃಕಾಲದಲ್ಲಿ ಎದ್ದು ಚಿಂತೆಯಿಂದಲೇ ಕೂಡಿ ಸಂಧ್ಯಾದಿಕರ್ಮಗಳನ್ನು ಮಾಡುವಷ್ಟರಲ್ಲಿಯೇ ವಿಶ್ವಾಮಿತ್ರನು ಬಂದನು! ದ್ವಾರಪಾಲಕನು ರಾಜನಿಗೆ ಹೇಳುತ್ತಲು ಸರ್ವಸ್ವವನ್ನೂ ಕಸಿದುಕೊಂಡ ಆ ಮುನಿಯು ಬಂದು ಬಾರಿಬಾರಿಗೂ ನಮಸ್ಕರಿಸುತ್ತಿರುವ ರಾಜನನ್ನು ಕುರಿತು ಹೀಗೆ ಮಾತನಾಡಿದನು. ॥೪೫-೪೬॥

ವಿಶ್ವಾಮಿತ್ರರು ಹೇಳಿದರು —' ಎಲೈ ರಾಜನೇ, ನೀನು ಪ್ರತಿಜ್ಞೆ ಮಾಡಿದಂತೆ ನಿನ್ನ ರಾಜ್ಯವನ್ನು ನನಗೆ ಕೊಡು. ಮತ್ತು ದಕ್ಷಿಣೆಗಾಗಿ ಕೊಡಬೇಕಾದ ಸುವರ್ಣ ನಾಣ್ಯಗಳನ್ನೂ ಈಗಲೇ ಕೊಡು.' ಎಂದು ವಿಶ್ವಾಮಿತ್ರನು ತಗಾದೆಮಾಡಿ ಹೇಳಿದನು. ॥೪೭॥

ಹರಿಶ್ಚಂದ್ರನು ಹೇಳಿದನು —ಓ ವಿಶ್ವಾಮಿತ್ರಮುನಿಯೇ, ಈ ನನ್ನ ಇಡಿಯ ರಾಜ್ಯವನ್ನು ನಿನಗೆ ಕೊಟ್ಟಿರುವೆನು. ಇದು ನಿನ್ನ ರಾಜ್ಯವಾದುದರಿಂದ ನಾನು ಈ ರಾಜ್ಯವನ್ನು ಬಿಟ್ಟು ಬೇರೆ ಕಡೆಗೆ ಹೋಗುವೆನು! ಯೋಚನೆ ಮಾಡಬೇಡ. ನನ್ನ ಸರ್ವಸ್ವವನ್ನೂ ವಿಧಿಗನುಸಾರವಾಗಿ ನೀನು ತೆಗೆದುಕೊಂಡಿರುವೆ. ಈಗ ಸುವರ್ಣ

ದಾನಂ ದದಾಮಿ ತೇ ತಾವದ್ಯಾವನ್ಮೇ ಸ್ಯಾದ್ಧನಾಗಮಃ ।
ಪುನಶ್ಚೇತ್ಕಾಲಯೋಗೇನ ತದಾ ದಾಸ್ಯಾಮಿ ದಕ್ಷಿಣಾಂ ॥೫೦॥

ಇತ್ಯುಕ್ತ್ವಾ ನೃಪತಿಃ ಪ್ರಾಹ ಪುತ್ರಂ ಭಾರ್ಯಾಂ ಚ ಮಾಧವೀಂ ।
ರಾಜ್ಯಮಸ್ಮೈ ಪ್ರದತ್ತಂ ವೈ ಮಯಾ ವೇದ್ಯಾಂ ಸುವಿಸ್ತರಂ ॥೫೧॥

ಹಸ್ತ್ಯಶ್ವರಥಸಂಯುಕ್ತಂ ರತ್ನಹೇಮಸಮನ್ವಿತಂ ।
ತ್ಯಕ್ತ್ವಾ ತ್ರೀಣಿ ಶರೀರಾಣಿ ಸರ್ವಂ ಚಾಸ್ಮೈ ಸಮರ್ಪಿತಂ ॥೫೨॥

ತ್ಯಕ್ತ್ವಾಽಯೋಧ್ಯಾಂ ಗಮಿಷ್ಯಾಮಿ ಕುತ್ರಚಿದ್ವನಗಹ್ವರೇ ।
ಗೃಹ್ಣಾತ್ವಿದಂ ಮುನಿಃ ಸಮ್ಯಗ್ರಾಜ್ಯಂ ಸರ್ವಸಮೃದ್ಧಿಮತ್ ॥೫೩॥

ಇತ್ಯಾಭಾಷ್ಯ ಸುತಂ ಭಾರ್ಯಾಂ ಹರಿಶ್ಚಂದ್ರಃ ಸ್ವಮಂದಿರಾತ್ ।
ವಿನಿರ್ಗತಃ ಸುಧರ್ಮಾತ್ಮಾ ಮಾನಯಂಸ್ತಂ ದ್ವಿಜೋತ್ತಮಂ ॥೫೪॥

---

ದಕ್ಷಿಣೆಯನ್ನು ಕೊಡಲು ನಾನು ಅಶಕ್ತನಾಗಿರುವೆನು. ಆದರೂ ನನಗೆ ಧನವು ಬಂದಾಗ ಆ ದಕ್ಷಿಣೆಯನ್ನು ಕೊಡುವೆನು. ॥೪೮-೪೯-೫೦॥

ವಿಶ್ವಾಮಿತ್ರನನ್ನು ಕುರಿತು ಹೀಗೆಂದು ಹೇಳಿ, ರಾಜನು ಮಗನನ್ನೂ ಹೆಂಡಿತಿಯಾದ ಮಾಧವಿಯನ್ನೂ ಕುರಿತು, ಹೇಳಿದನು. ನಾನು ಅಗ್ನಿಹೋತ್ರಶಾಲೆಯಲ್ಲಿ ನನ್ನ ವಿಸ್ತಾರವಾದ ಆನೆ ಕುದುರೆ ರಥಗಳಿಂದಲೂ ಚಿನ್ನ ಮತ್ತು ರತ್ನಗಳಿಂದಲೂ ಕೂಡಿದ ಒಟ್ಟು ರಾಜ್ಯವನ್ನು, ಈ ನಮ್ಮ ಮೂರು ಶರೀರಗಳನ್ನು ಮಾತ್ರ ಬಿಟ್ಟು, ಮಿಕ್ಕ ಸಕಲ ಸಂಪತ್ತುಗಳನ್ನೂ ಈ ವಿಶ್ವಾಮಿತ್ರಮುನಿಗೆ ದಾನಮಾಡಿರುವೆನು. ॥೫೧-೫೨॥

ಈ ಅಯೋಧ್ಯಾಪಟ್ಟಣವನ್ನು ಬಿಟ್ಟು ಎಲ್ಲಿಯಾದರೂ ಕಾಡಿಗೆ ಹೋಗುವೆನು. ಸಕಲ ಸಂಪತ್ತುಗಳಿಂದ ಕೂಡಿದ ಈ ರಾಜ್ಯವನ್ನು ಈ ಮುನಿಯು ತೆಗೆದುಕೊಳ್ಳಲಿ ! ಎಂದು ಹೇಳಿ, ಆ ಬ್ರಾಹ್ಮಣಶ್ರೇಷ್ಠನಿಗೆ ಮರ್ಯಾದೆಯನ್ನು ಮಾಡುತ್ತಾ, ತುಂಬ ಧರ್ಮಿಷ್ಠನಾದ ಆ ರಾಜನು ತನ್ನ ಮನೆಯಿಂದ ಹೊರಟನು. ॥೫೩-೫೪॥

ವ್ರಜಂತಂ ಭೂಪತಿಂ ವೀಕ್ಷ್ಯ ಭಾರ್ಯಾ ಪುತ್ರಾವುಭಾವಪಿ ।
ಚಿಂತಾತುರೌ ಸುದೀನಾಸ್ಯೌ ಜಗ್ಮತುಃ ಪೃಷ್ಠತಸ್ತದಾ ॥೩೫॥

ಹಾಹಾಕಾರೋ ಮಹಾನಾಸೀನ್ನಗರೇ ವೀಕ್ಷ್ಯ ತಾಂ ಸ್ತಥಾ ।
ಚುಕ್ರುಶುಃ ಪ್ರಾಣಿನಃ ಸರ್ವೇ ಸಾಕೇತಪುರವಾಸಿನಃ ॥೩೬॥

ಹಾರಾಜನ್ ಕಿಂ ಕೃತಂ ಕರ್ಮ ಕುತಃ ಕ್ಲೇಶಃ ಸಮಾಗತಃ ।
ವಂಚಿತೋಽಸಿ ಮಹಾರಾಜ ವಿಧಿನಾ ಪಂಡಿತೇನ ಹ ॥೩೭॥

ಸರ್ವೇ ವರ್ಣಾಸ್ತದಾ ದುಃಖಮಾಪ್ನುಯುಸ್ತಂ ಮಹೀಪತಿಂ ।
ವಿಲೋಕ್ಯ ಭಾರ್ಯಯಾ ಸಾರ್ಧಂ ಪುತ್ರೇಣ ಚ ಮಹಾತ್ಮನಾ ॥೩೮॥

ನಿನಿಂದುರ್ಬ್ರಾಹ್ಮಣಂ ತಂ ತು ದುರಾಚಾರಂ ಪುರೌಕಸಃ ।
ಧೂರ್ತೋಽಯಮಿತಿ ಭಾಷಂತೋ ದುಃಖಾರ್ತಾ ಬ್ರಾಹ್ಮಣಾದಯಃ ॥೩೯॥

---

ಹಾಗೆ ಹೋಗುತ್ತಿರುವ ರಾಜನನ್ನು ನೋಡಿ ಹೆಂಡಿತಿ ಮಕ್ಕಳಿಬ್ಬರೂ ಚಿಂತೆಯಿಂದ ಮಲಿನವಾದ ಮುಖವುಳ್ಳವರಾಗಿ ಆ ರಾಜನ ಹಿಂದೆಯೇ ಹೊರಟರು.||೩೫||

ಹಾಗೆ ಹೋಗುತ್ತಿರುವ ಆ ಮೂವರನ್ನೂ ನೋಡಿ, ಆ ಅಯೋಧ್ಯಾಪಟ್ಟಣದಲ್ಲಿದ್ದ ಸರ್ವರೂ ದುಃಖದಿಂದ ಹಾಹಾಕಾರವನ್ನು ಮಾಡುತ್ತಾ, ಓ ರಾಜನೇ, ನೀನು ಏನು ಕರ್ಮವನ್ನು ಮಾಡಿದೆ? ಈ ಕಷ್ಟವು ಏತಕ್ಕೆ ಬಂದಿತು ? ಅದೃಷ್ಟವು ನಿನಗೆ ಮೋಸಮಾಡಿರುವುದು. ಎಂದು ಹೇಳುತ್ತಾ ದುಃಖಪಟ್ಟರು. ||೩೬-೩೭||

ಹೆಂಡಿತಿ ಮತ್ತು ಉತ್ತಮನಾದ ಮಗನಿಂದೊಡಗೂಡಿ ಪಟ್ಟಣದಿಂದ ತೆರಳುತ್ತಿದ್ದ ಆ ರಾಜನನ್ನು ನೋಡಿ ಸಕಲ ವರ್ಣದವರೂ ದುಃಖಪಟ್ಟರು. ||೩೮||

ಆ ಪಟ್ಟಣದಲ್ಲಿದ್ದ ಬ್ರಾಹ್ಮಣರೇ ಮೊದಲಾದ ಸಮಸ್ತ ಜನರೂ ಗುಟ್ಟಾಗಿ ವಂಚನೆಮಾಡಿ ದುರಾಚಾರಿಯಾದ ಆ ವಿಶ್ವಾಮಿತ್ರನನ್ನು ನೀಚನೆಂದು ಹೇಳುತ್ತಾ ನಿಂದೆಮಾಡುತ್ತಿದ್ದರು. ||೩೯||

ನಿರ್ಗತ್ಯ ನಗರಾತ್ತಸ್ಮಾದ್ವಿಶ್ವಾಮಿತ್ರಃ ಕ್ಷಿತೀಶ್ವರಂ ।
ಗಚ್ಛಂತಂ ತಮುವಾಚೇದಂ ಸಮೇತ್ಯ ನಿಷ್ಠುರಂ ವಚಃ ॥೬೦॥

ದಕ್ಷಿಣಾಯಾಃ ಸುವರ್ಣಂ ಮೇ ದತ್ವಾ ಗಚ್ಛ ನರಾಧಿಪ ।
ನಾಹಂ ದಾಸ್ಯಾಮಿ ವಾ ಬ್ರೂಹಿ ಮಯಾ ತ್ಯಕ್ತಂ ಸುವರ್ಣಕಂ॥೬೧॥

ರಾಜ್ಯಂ ಗೃಹಾಣ ವಾ ಸರ್ವಂ ಲೋಭಶ್ಚೇತ್ ಹೃದಿ ವರ್ತತೇ ।
ದತ್ತಂ ಚೇನ್ಮನ್ಯಸೇ ರಾಜನ್ ದೇಹಿ ಯತ್ತತ್ಪ್ರತಿಶ್ರುತಂ ॥೬೨॥

ಏವಂ ಬ್ರುವಂತಂ ಗಾಧೇಯಂ ಹರಿಶ್ಚಂದ್ರೋ ಮಹೀಪತಿಃ ।
ಪ್ರಣಿಪತ್ಯ ಸುದೀನಾತ್ಮಾ ಕೃತಾಂಜಲಿಪುಟೋಽಬ್ರವೀತ್ ॥೬೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಏಕೋನವಿಂಶೋಽಧ್ಯಾಯಃ.

---

ವಿಶ್ವಾಮಿತ್ರನೂ ಆ ಪಟ್ಟಣದಿಂದ ಹೊರಟು ಮುಂದೆ ಹೋಗುತ್ತಿರುವ ರಾಜನನ್ನು ಸೇರಿ, ಅವನನ್ನು ಕುರಿತು, ಎಲೈ ರಾಜನೇ, ದಕ್ಷಿಣೆಯ ಚಿನ್ನದ ನಾಣ್ಯಗಳನ್ನೂ ನನಗೆ ಕೊಟ್ಟುಬಿಟ್ಟು ಹೋಗು. ಇಲ್ಲದಿದ್ದರೆ ನಾನು ಕೊಡುವುದಿಲ್ಲವೆಂದಾದರೂ ಹೇಳು! ಆಗ ನಾನು ದಕ್ಷಿಣೆಯನ್ನು ಬಿಟ್ಟುಬಿಡುವೆನು. ॥೬೦-೬೧॥

ಅಥವಾ ನಿನಗೆ ಲೋಭಬುದ್ಧಿಯಿದ್ದರೆ ಸಮಸ್ತ ರಾಜ್ಯವನ್ನೂ ಹಿಂದಕ್ಕೆ ತೆಗೆದುಕೋ. ಕೊಟ್ಟೆನೆಂದು ನಿನ್ನ ಮನಸ್ಸಿನಲ್ಲಿ ನಿಜವಾಗಿ ತಿಳಿದಿದ್ದರೆ, ಪ್ರತಿಜ್ಞೆ ಮಾಡಿದುದನ್ನು ಕೊಡು. ಎಂದು ನಿಷ್ಠುರವಾದ ಮಾತನಾಡಿದನು. ॥೬೨॥

ಹೀಗೆ ಹೇಳುತ್ತಿರುವ ವಿಶ್ವಾಮಿತ್ರನಿಗೆ ನಮಸ್ಕರಿಸಿ ರಾಜನು ದೈನ್ಯದಿಂದ ಕೈಮುಗಿದುಕೊಂಡು ಹೇಳಿದನು. ॥೬೩॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಹರಿಶ್ಚಂದ್ರ ಉವಾಚ ||

**ಅದತ್ತ್ವಾ ತೇ ಹಿರಣ್ಯಂ ವೈ ನ ಕರಿಷ್ಯಾಮಿ ಭೋಜನಮ್ ।**
**ಪ್ರತಿಜ್ಞಾ ಮೇ ಮುನಿಶ್ರೇಷ್ಠ ವಿಷಾದಂ ತ್ಯಜ ಸುವ್ರತ ॥೧॥**

**ಸೂರ್ಯವಂಶಸಮುದ್ಭೂತಃ ಕ್ಷತ್ರಿಯೋಽಹಂ ಮಹೀಪತಿಃ ।**
**ರಾಜಸೂಯಸ್ಯ ಯಜ್ಞಸ್ಯ ಕರ್ತಾ ವಾಂಛಿತದೋ ನೃಷು ॥೨॥**

**ಕಥಂ ಕರೋಮಿ ನಾಕಾರಂ ಸ್ವಾಮಿನ್ ದತ್ತ್ವಾ ಯದೃಚ್ಛಯಾ ।**
**ಅವಶ್ಯಮೇವ ದಾತವ್ಯಂ ಋಣಂ ಮೇ ದ್ವಿಜಸತ್ತಮ ॥೩॥**

---

ಹರಿಶ್ಚಂದ್ರನು ಹೇಳಿದನು—ಎಲೈ ಮುನಿಶ್ರೇಷ್ಠನೇ, ನಿನಗೆ ಕೊಡಬೇಕಾಗಿರುವ ಸುವರ್ಣದಕ್ಷಿಣೆಯನ್ನು ಕೊಡದೆ ನಾನು ಭೋಜನವನ್ನೇ ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿರುವೆನು! ಒಳ್ಳೆಯ ವ್ರತಗಳನ್ನು ಮಾಡಿದ ನೀನು ವಿಷಾದವನ್ನು ಬಿಡು. ||೧||

ನಾನು ಸೂರ್ಯವಂಶದಲ್ಲಿ ಹುಟ್ಟಿದ ಕ್ಷತ್ರಿಯನು ಮತ್ತು ಭೂಮಿಗೆ ಒಡೆಯನು. ರಾಜಸೂಯ ಯಜ್ಞವನ್ನು ಮಾಡಿದವನು. ಮನುಷ್ಯರಲ್ಲಿ ಕೇಳಿದವರಿಗೆ ಎಲ್ಲ ಇಷ್ಟಾರ್ಥಗಳನ್ನು ಕೊಡತಕ್ಕವನು! ಇಂತಹ ನಾನು ದಾನಮಾಡಿ, ಕೊಡುವುದಿಲ್ಲವೆಂದು ಹೇಗೆ ಹೇಳುವೆನು? ಬ್ರಾಹ್ಮಣಶ್ರೇಷ್ಠನೇ, ನಾನು ಕೊಡಬೇಕಾದ ಋಣವನ್ನು ಕೊಡಲೇಬೇಕು. ||೨-೩||

**ಸ್ವಸ್ಥೋ ಭವ ಪ್ರದಾಸ್ಯಾಮಿ ಸುವರ್ಣಂ ಮನಸೇಪ್ಸಿತಂ ।**
**ಕಂಚಿತ್ಕಾಲಂ ಪ್ರತೀಕ್ಷಸ್ವ ಯಾವತ್ಪ್ರಾಪ್ಸ್ಯಾಮ್ಯಹಂ ಧನಂ ॥೪॥**

॥ ವಿಶ್ವಾಮಿತ್ರ ಉವಾಚ ॥

**ಕುತಸ್ತೇ ಭವಿತಾ ರಾಜನ್ ಧನಪ್ರಾಪ್ತಿರತಃ ಪರಂ ।**
**ಗತಂ ರಾಜ್ಯಂ ತಥಾ ಕೋಶೋ ಬಲಂ ಚೈವಾರ್ಥಸಾಧನಂ ॥೫॥**

**ವೃಥಾಽಶಾ ತೇ ಮಹೀಪಾಲ ಧನಾರ್ಥೇ ಕಿಂ ಕರೋಮ್ಯಹಂ।**
**ನಿರ್ಧನಂ ತ್ವಾಂ ಚ ಲೋಭೇನ ಪೀಡಯಾಮಿ ಕಥಂ ನೃಪ ॥೬॥**

**ತಸ್ಮಾತ್ಕಥಯ ಭೂಪಾಲ ನ ದಾಸ್ಯಾಮೀತಿ ಸಾಂಪ್ರತಂ ।**
**ತ್ಯಕ್ತ್ವಾಽಶಾಂ ಮಹತೀಂ ಕಾಮಂ ಗಚ್ಛಾಮ್ಯಹಮತಃ ಪರಂ ॥೭॥**

**ಯಥೇಷ್ಟಂ ವ್ರಜ ರಾಜೇಂದ್ರ ಭಾರ್ಯಾಪುತ್ರಸಮನ್ವಿತಃ ।**
**ಸುವರ್ಣಂ ನಾಸ್ತಿ ಕಿಂ ತುಭ್ಯಂ ದದಾಮೀತಿ ವದಾಧುನಾ ॥೮॥**

---

ಓ ಋಷಿಯೇ, ನಿನ್ನ ಮನಸ್ಸಿನಲ್ಲಿ ಅಪೇಕ್ಷಿಸಿದ ಸುವರ್ಣನಾಣ್ಯವನ್ನು ಕೊಡುವೆನು. ಶಾಂತಚಿತ್ತನಾಗು. ಕೆಲವು ಕಾಲದವರೆಗೆ ನಿರೀಕ್ಷಣೆಯನ್ನು ಮಾಡು. ನನಗೆ ಹಣವು ದೊರಕಿದೊಡನೆಯೇ ಕೊಡುವೆನು. ॥೪॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಇನ್ನು ಮುಂದೆ ನಿನಗೆ ಹಣವು ಹೇಗೆ ದೊರೆಯುವುದು ? ರಾಜ್ಯವು ಹೋಯಿತು. ಧನಸಂಪಾದನೆಗೆ ಕಾರಣವಾದ ಸೇನೆಯೂ ಹೋಯಿತು. ನೀನು ಹಣವು ಬರುವುದೆಂದು ವ್ಯರ್ಥವಾದ ಆಸೆಯನ್ನಿಟ್ಟುಕೊಂಡಿರುವೆ ! ನಾನೇನನ್ನು ಮಾಡಲಿ ? ದರಿದ್ರನಾದ ನಿನ್ನನ್ನು ಅತ್ಯಾಸೆಯಿಂದ ನಾನು ಹೇಗೆ ಹಿಂಸೆಪಡಿಸಲಿ ? ॥೫-೬॥

ಆದುದರಿಂದ ಎಲೈ ರಾಜನೇ, 'ನನ್ನಲ್ಲಿ ಸುವರ್ಣವಿಲ್ಲ, ನಿನಗೆ ಹೇಗೆ ಕೊಡಲಿ? ಈಗ ಕೊಡುವುದಿಲ್ಲ.' ಎಂದು ಹೇಳು! ನಾನು ಆಸೆಯನ್ನು ಬಿಟ್ಟು ಹೊರಟುಹೋಗುವೆನು. ಆಮೇಲೆ ನೀನೂ ಹೆಂಡತಿಮಕ್ಕಳೊಡನೆ ನಿನ್ನ ಇಷ್ಟ ಬಂದೆಡೆಗೆ ಹೋಗು. ॥೭-೮॥

॥ ವ್ಯಾಸ ಉವಾಚ ॥

ಗಚ್ಛನ್ವಾಕ್ಯಮಿದಂ ಶ್ರುತ್ವಾ ಬ್ರಾಹ್ಮಣಸ್ಯ ಚ ಭೂಪತಿಃ ।
ಪ್ರತ್ಯುವಾಚ ಮುನಿಂ ಬ್ರಹ್ಮನ್ ಧೈರ್ಯಂ ಕುರು ದದಾಮ್ಯಹಂ ॥೯॥

ಮಮ ದೇಹೋಽಸ್ತಿ ಭಾರ್ಯಾಯಾಃ ಪುತ್ರಸ್ಯ ಚ ಹ್ಯನಾಮಯಃ ।
ಕ್ರೀತ್ವಾ ದೇಹಂ ತು ತಂ ನೂನಮೃಣಂ ದಾಸ್ಯಾಮಿ ತೇ ದ್ವಿಜ ॥೧೦॥

ಗ್ರಾಹಕಂ ಪಶ್ಯ ವಿಪ್ರೇಂದ್ರ ವಾರಾಣಸ್ಯಾಂ ಪುರಿ ಪ್ರಭೋ ।
ದಾಸಭಾವಂ ಗಮಿಷ್ಯಾಮಿ ಸದಾರೋಽಹಂ ಸಪುತ್ರಕಃ ॥೧೧॥

ಗೃಹಾಣ ಕಾಂಚನಂ ಪೂರ್ಣಂ ಸಾರ್ಧಭಾರದ್ವಯಂ ಮುನೇ ।
ಮೌಲ್ಯೇನ ದತ್ವಾ ಸರ್ವಾನ್ನಃ ಸಂತುಷ್ಟೋ ಭವ ಭೂಧರ ॥೧೨॥

ಇತಿ ಬ್ರುವನ್ ಜಗಾಮಾಥ ಸಹ ಪತ್ನ್ಯಾ ಸುತಾನ್ವಿತಃ ।
ಉಮಯಾ ಕಾಂತಯಾ ಸಾರ್ಧಂ ಯತ್ರಾಸ್ತೇ ಶಂಕರಃ ಸ್ವಯಂ ॥೧೩॥

---

ವ್ಯಾಸರು ಹೇಳಿದರು---ಹರಿಶ್ಚಂದ್ರರಾಜನು ಮುಂದೆ ಹೋಗುತ್ತಾ, ವಿಶ್ವಾಮಿತ್ರನು ಹೇಳಿದ ಈ ಮಾತನ್ನು ಕೇಳಿ, ಮುನಿಯನ್ನು ಕುರಿತು, ಓ ಬ್ರಾಹ್ಮಣನೇ, ಧೈರ್ಯವಾಗಿರು. ನನ್ನ ಶರೀರವೂ ನನ್ನ ಪತ್ನಿಯ ಮತ್ತು ಪುತ್ರನ ಶರೀರವೂ ರೋಗವಿಲ್ಲದೆ ಇರುವುವು. ಈ ದೇಹಗಳನ್ನು ಮಾರಿಯಾದರೂ ನಿನ್ನ ಸಾಲವನ್ನು ತೀರಿಸುವೆನು! ॥೯-೧೦॥

ಓ ಬ್ರಾಹ್ಮಣಶ್ರೇಷ್ಠನೇ, ಈ ಅಯೋಧ್ಯಾಪಟ್ಟಣದಲ್ಲಿ ನನ್ನನ್ನು ಕೊಂಡುಕೊಳ್ಳುವವರು ಯಾರಾದರೂ ಇದ್ದರೆ ನೋಡು. ಏಕೆಂದರೆ ಈ ಕಾಶೀಪಟ್ಟಣದಲ್ಲಿ ನನ್ನ ಹೆಂಡಿತಿಯೂ ಮಗನೂ ನಾನೂ ದಾಸರಾಗಿ ಆ ಕ್ರಯದ ಹಣದಿಂದ ನಿನ್ನ ಸಾಲವನ್ನು ತೀರಿಸುತ್ತೇವೆ. ॥೧೧॥

ಓ ಬ್ರಾಹ್ಮಣನೇ, ಎರಡೂವರೆ ಭಾರಸುವರ್ಣಕ್ಕೆ ನಮ್ಮೆಲ್ಲರನ್ನೂ ಮಾರಿ, ಸಂಪೂರ್ಣವಾದ ನಿನ್ನ ದಕ್ಷಿಣಾದ್ರವ್ಯವನ್ನು ತೆಗೆದುಕೊಂಡು, ತೃಪ್ತನಾಗು. ॥೧೨॥

ಹೀಗೆಂದು ಹೇಳುತ್ತಾ, ಹರಿಶ್ಚಂದ್ರನು ಪತ್ನಿಯೊಡನೆಯೂ ಮಗನೊಡನೆಯೂ ಕೂಡಿ, ಪರಾಶಕ್ತಿಯಾದ ಉಮಾದೇವಿಯೊಡನೆ ಶಂಕರನು ಯಾವಾಗಲೂ ಎಲ್ಲಿ ವಾಸವಾಗಿರುವನೋ ಅಂತಹ ಕಾಶೀಪಟ್ಟಣಕ್ಕೆ ಹೋದನು. ॥೧೩॥

ತಾಂ ದೃಷ್ಟ್ವಾ ಚ ಪುರೀಂ ರಮ್ಯಾಂ ಮನಸೋಹ್ಲಾದಕಾರಿಣೀಂ ।
ಉವಾಚ ಸ ಕೃತಾರ್ಥೋಽಸ್ಮಿ ಪುರೀಂ ಪಶ್ಯನ್ಸುವರ್ಚಸಂ ॥೧೪॥

ತತೋ ಭಾಗೀರಥೀಂ ಪ್ರಾಪ್ಯ ಸ್ನಾತ್ವಾ ದೇವಾದಿತರ್ಪಣಂ ।
ದೇವಾರ್ಚನಂ ಚ ನಿರ್ವರ್ತ್ಯ ಕೃತವಾನ್ದಿಗ್ವಿಲೋಕನಂ ॥೧೫॥

ಪ್ರವಿಶ್ಯ ವಸುಧಾಪಾಲೋ ದಿವ್ಯಾಂ ವಾರಾಣಸೀಂ ಪುರೀಂ ।
ನೈಷಾ ಮನುಷ್ಯಭುಕ್ತೇತಿ ಶೂಲಪಾಣೇಃ ಪರಿಗ್ರಹಃ ॥೧೬॥

ಜಗಾಮ ಪದ್ಭ್ಯಾಂ ದುಃಖಾರ್ತಃ ಸಹ ಪತ್ನ್ಯಾ ಸಮಾಕುಲಃ ।
ಪುರೀಂ ಪ್ರವಿಶ್ಯ ಸ ನೃಪೋ ವಿಶ್ವಾಸಮಕರೋತ್ತದಾ ॥೧೭॥

ದದೃಶೇಽಥ ಮುನಿಶ್ರೇಷ್ಠಂ ಬ್ರಾಹ್ಮಣಂ ದಕ್ಷಿಣಾರ್ಥಿನಂ ।
ತಂ ದೃಷ್ಟ್ವಾ ಸಮನುಪ್ರಾಪ್ತಂ ವಿನಯಾವನತೋಽಭವತ್ ॥೧೮॥

---

ಮನಸ್ಸಿಗೆ ಸಂತೋಷವನ್ನುಂಟುಮಾಡುವ ತೇಜಸ್ಸಿನಿಂದ ಕೂಡಿದ ಆ ಪಟ್ಟಣವನ್ನು ನೋಡಿ ನಾನು ಕೃತಾರ್ಥನಾದೆನೆಂದು ಹೇಳುತ್ತಾ, ಗಂಗಾನದಿಗೆ ಹೋಗಿ ಸ್ನಾನಮಾಡಿ ದೇವಋಷಿ ಪಿತೃಗಳಿಗೆ ತರ್ಪಣವನ್ನೂ ದೇವತಾರ್ಚನೆಯನ್ನೂ ಮಾಡಿ, ಯಾವ ಮಾರ್ಗದಿಂದ ಹೋಗಬೇಕೆಂದು ದಿಕ್ಕುಗಳನ್ನೆಲ್ಲವನ್ನೂ ನೋಡಿದನು. ॥೧೪-೧೫॥

ಆ ರಾಜನು ಶ್ರೇಷ್ಠವಾದ ವಾರಾಣಸೀಪಟ್ಟಣವನ್ನು ಪ್ರವೇಶಿಸಿ ಈ ಪಟ್ಟಣವನ್ನು ಶಿವನು ರಕ್ಷಿಸುತ್ತಿರುವನೆಂದೂ, ಮನುಷ್ಯನ ಉಪಭೋಗಕ್ಕಾಗಿ ಯಾರ ಅಧೀನದಲ್ಲೂ ಅದು ಇರತಕ್ಕುದಲ್ಲವೆಂದೂ, ಆದುದರಿಂದ ಶಿವನು ನಮಗೆ ಕ್ರಯವನ್ನು ಕೊಟ್ಟು ಕೊಂಡುಕೊಳ್ಳುವನೆಂದೂ, ನಂಬಿ ಹೆಂಡಿತಿಯೊಡನೆಯೂ ಮಗನೊಡನೆಯೂ ಬರಿಯ ಕಾಲಿನಲ್ಲಿಯೇ ನಡೆಯುತ್ತಾ, ದುಃಖದಿಂದ ಆ ಪಟ್ಟಣವನ್ನು ಪ್ರವೇಶಿಸಿ ಆಗ ಆ ಉಮಾಮಹೇಶ್ವರನಲ್ಲಿ ಹೆಚ್ಚಾದ ಭಕ್ತಿಯಿಂದ ಕೂಡಿ ಇದ್ದನು. ॥೧೬-೧೭॥

ಆಮೇಲೆ ದಕ್ಷಿಣಾದ್ರವ್ಯದಲ್ಲಿ ಅಪೇಕ್ಷೆಯುಳ್ಳ ಮುನಿಶ್ರೇಷ್ಠನಾದ ವಿಶ್ವಾಮಿತ್ರನು ಬಂದುದನ್ನು ಕಂಡು ವಿನಯದಿಂದ ನಮಸ್ಕಾರಮಾಡಿದನು. ॥೧೮॥

ಪ್ರಾಹ ಚೈವಾಂಜಲಿಂ ಕೃತ್ವಾ ಹರಿಶ್ಚಂದ್ರೋ ಮಹಾಮುನಿಂ ।
ಇಮೇ ಪ್ರಾಣಾಃ ಸುತಶ್ಚಾಯಂ ಪ್ರಿಯಾ ಪತ್ನೀ ಮುನೇ ಮಮ ॥೧೯॥

ಯೇನ ತೇ ಕೃತ್ಯಮಸ್ತ್ಯಾಶು ಗೃಹಾಣಾದ್ಯ ದ್ವಿಜೋತ್ತಮ ।
ಯಚ್ಚಾನ್ಯತ್ಕಾರ್ಯಮಸ್ಮಾಭಿಸ್ತನ್ಮಮಾಖ್ಯಾತುಮರ್ಹಸಿ ॥೨೦॥

॥ ವಿಶ್ವಾಮಿತ್ರ ಉವಾಚ ॥

ಪೂರ್ಣಃ ಸ ಮಾಸೋ ಭದ್ರಂ ತೇ ದೀಯತಾಂ ಮಮ ದಕ್ಷಿಣಾ ।
ಪೂರ್ವಂ ತಸ್ಯ ನಿಮಿತ್ತಂ ಹಿ ಸ್ಮರ್ಯತೇ ಸ್ವವಚೋ ಯದಿ ॥೨೧॥

॥ ರಾಜೋವಾಚ ॥

ಬ್ರಹ್ಮನ್ನಾಽದ್ಯಾಪಿ ಸಂಪೂರ್ಣೋ ಮಾಸೋ ಜ್ಞಾನತಪೋಬಲ ।
ತಿಷ್ಠ ತ್ವೇಕದಿನಾರ್ಧಂ ಯತ್ತತ್ಪ್ರತೀಕ್ಷಸ್ವ ನಾಽಪರಂ ॥॥೨೨॥

---

ಮತ್ತು ಆ ಹರಿಶ್ಚಂದ್ರನು ಕೈಮುಗಿದುಕೊಂಡು ಆ ವಿಶ್ವಾಮಿತ್ರಮುನಿಯನ್ನು ಕುರಿತು, ' ಓ ಮುನಿಯೇ, ಈ ನನ್ನ ಪ್ರಾಣವೂ ಈ ಮಗನೂ ಪ್ರೀತಿಪಾತ್ರಳಾದ ಈ ಪತ್ನಿಯೂ ಈ ಮೂವರೂ ಇರುವೆವು. ನಿನ್ನ ದಕ್ಷಿಣಾದ್ರವ್ಯಕ್ಕಾಗಿ ಬೇಗನೆ ನಮ್ಮನ್ನು ಪರಿಗ್ರಹಿಸು. ನಮ್ಮಿಂದ ಯಾವ ಕಾರ್ಯಗಳಾಗಬೇಕೋ ಅವುಗಳನ್ನು ಅಪ್ಪಣೆಮಾಡು.' ಎಂದು ಹೇಳಿದನು. ॥೧೯-೨೦॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಒಂದು ತಿಂಗಳು ವಾಯಿದೆಯಲ್ಲಿ ದಕ್ಷಿಣೆಯ ಹಣವನ್ನು ನನಗೆ ಕೊಡುವೆನೆಂದು ಮಾತುಕೊಟ್ಟಿದ್ದೆಯಷ್ಟೆ? ಆ ತಿಂಗಳು ಕಳೆಯಿತು. ನಿನಗೆ ಮಂಗಳವಾಗಲಿ ಆ ನಿನ್ನ ಮಾತನ್ನು ಜ್ಞಾಪಿಸಿಕೊಂಡು ನನ್ನ ದಕ್ಷಿಣೆಯನ್ನು ಕೊಡು? ಎಂದನು. ॥೨೧॥

ರಾಜನು ಹೇಳಿದನು—ಜ್ಞಾನ ತಪೋಬಲಗಳಿಂದ ಕೂಡಿದ ಬ್ರಹ್ಮಜ್ಞಾನಿಯಾದ ಓ ಮುನಿಯೇ, ಇನ್ನೂ ಆ ಒಂದು ತಿಂಗಳು ಪೂರ್ಣವಾಗಿಲ್ಲ. ಅರ್ಧದಿನವು ಮಿಕ್ಕಿರುತ್ತದೆ. ಅಲ್ಲಿಯವರೆಗೆ ನಿರೀಕ್ಷಿಸು. ಇನ್ನುಮುಂದೆ ತಡೆಯಬೇಕಾದುದಿಲ್ಲ. ಎಂದನು. ॥೨೨॥

|| ವಿಶ್ವಾಮಿತ್ರ ಉವಾಚ ||

ಏವಮಸ್ತು ಮಹಾರಾಜ ಆಗಮಿಷ್ಯಾಮ್ಯಹಂ ಪುನಃ ।
ಶಾಪಂ ತವ ಪ್ರದಾಸ್ಯಾಮಿ ನ ಚೇದದ್ಯ ಪ್ರಯಚ್ಛಸಿ ||೨೩||

ಇತ್ಯುಕ್ತ್ವಾ ಚ ಯಯೌ ವಿಪ್ರೋ ರಾಜಾ ಚಾಚಿಂತಯತ್ತದಾ ।
ಕಥಮಸ್ಮೈ ಪ್ರಯಚ್ಛಾಮಿ ದಕ್ಷಿಣಾ ಯಾ ಪ್ರತಿಶ್ರುತಾ ||೨೪||

ಕುತಃ ಪುಷ್ಟಾನಿ ಮಿತ್ರಾಣಿ ಕುತ್ರಾರ್ಥಃ ಸಾಂಪ್ರತಂ ಮಮ ।
ಪ್ರತಿಗ್ರಹಃ ಪ್ರದುಷ್ಟೋ ಮೇ ತತ್ರ ಯಾಚ್ಞಾ ಕಥಂ ಭವೇತ್ ||೨೫||

ರಾಜ್ಞಾಂ ವೃತ್ತಿತ್ರಯಂ ಪ್ರೋಕ್ತಂ ಧರ್ಮಶಾಸ್ತ್ರೇಷು ನಿಶ್ಚಿತಂ ।
ಯದಿ ಪ್ರಾಣಾನ್ವಿಮುಂಚಾಮಿ ಹ್ಯಪ್ರದಾಯ ಚ ದಕ್ಷಿಣಾಂ ||೨೬||

ಬ್ರಹ್ಮಸ್ವಹಾ ಕೃಮಿಃ ಪಾಪೋ ಭವಿಷ್ಯಾಮ್ಯಧಮಾಧಮಃ ।
ಅಥವಾ ಪ್ರೇತತಾಂ ಯಾಸ್ಯೇ ವರ ಏವಾತ್ಮವಿಕ್ರಯಃ ||೨೭||

---

ವಿಶ್ವಾಮಿತ್ರನು ಹೇಳಿದನು—ಎಲೈ ಮಹಾರಾಜನೇ, ಹಾಗೆಯೇ ಆಗಲಿ. ನಾನು ಮತ್ತೆ ಬರುವೆನು. ಈ ದಿವಸ ನೀನು ದಕ್ಷಿಣಾದ್ರವ್ಯವನ್ನು ಕೊಡದಿದ್ದರೆ ನಿನಗೆ ಶಾಪವನ್ನು ಕೊಡುವೆನು! ಎಂದು ಹೇಳಿ, ಹೊರಟುಹೋದನು. ಆಗ ರಾಜನು ಹೀಗೆ ಆಲೋಚಿಸಿದನು. ||೨೩||

ಈ ಬ್ರಾಹ್ಮಣನಿಗೆ ನಾನು ಮಾತುಕೊಟ್ಟಷ್ಟು ದಕ್ಷಿಣೆಯನ್ನು ಹೇಗೆ ಕೊಡಲಿ? ಈಗ ಧನವಂತರಾದ ಮಿತ್ರರು ಇಲ್ಲಿ ಯಾರಾದರೂ ಇರುವರೇ? ರಾಜನಾದ ನನಗೆ ಯಜನ, ಅಧ್ಯಯನ, ದಾನ ಈ ಮೂರು ವೃತ್ತಿಗಳು ಮಾತ್ರ ಧರ್ಮಶಾಸ್ತ್ರಗಳಲ್ಲಿ ವಿಹಿತವಾಗಿರುವುವು. ಪ್ರತಿಗ್ರಹವು ಕ್ಷತ್ರಿಯನಿಗೆ ನಿಷಿದ್ಧವಾಗಿ ದುಷ್ಟವಾದುದರಿಂದ ಬಿಕ್ಷೆಯನ್ನು ಬೇಡುವುದು ನನಗೆ ನಿಂದ್ಯವಾದುದು. ಮುನಿಗೆ ದಕ್ಷಿಣೆಯನ್ನು ಕೊಡದೆ ಪ್ರಾಣತ್ಯಾಗಮಾಡಿದರೆ ಬ್ರಾಹ್ಮಣ ದ್ರವ್ಯಾಪಹಾರಮಾಡಿದ ಪಾಪವು ಬಂದು ನರಕದಲ್ಲಿ ದುಃಖವನ್ನನುಭವಿಸಿ, ಹುಳುವಾಗಿ ಹುಟ್ಟುವೆನು, ಅಥವಾ ಪಿಶಾಚಿಯಾಗುವೆನು. ಹೀಗೆ ನೀಚವಾಗುವುದಕ್ಕಿಂತಲೂ ನನ್ನ ಶರೀರವನ್ನು ಮಾರಿಯಾದರೂ ದಕ್ಷಿಣಾದ್ರವ್ಯವನ್ನು ಕೊಡುವುದೇ ಉತ್ತಮವಾದುದು. ||೨೪-೨೫-೨೬-೨೭||

|| ಸೂತ ಉವಾಚ ||

ರಾಜಾನಂ ವ್ಯಾಕುಲಂ ದೀನಂ ಚಿಂತಯಾನಮಧೋಮುಖಂ ।
ಪ್ರತ್ಯುವಾಚ ತದಾ ಪತ್ನೀ ಬಾಷ್ಪಗದ್ಗದಯಾ ಗಿರಾ ॥೨೮॥

ತ್ಯಜ ಚಿಂತಾಂ ಮಹಾರಾಜ ಸ್ವಧರ್ಮಮನುಪಾಲಯ ।
ಪ್ರೇತವದ್ವರ್ಜನೀಯೋ ಹಿ ನರಃ ಸತ್ಯಬಹಿಷ್ಕೃತಃ ॥೨೯॥

ನಾತಃ ಪರತರಂ ಧರ್ಮಂ ವದಂತಿ ಪುರುಷಸ್ಯ ಚ ।
ಯಾದೃಶಂ ಪುರುಷವ್ಯಾಘ್ರ ಸ್ವಸತ್ಯಸ್ಯಾನುಪಾಲನಂ ॥೩೦॥

ಅಗ್ನಿಹೋತ್ರಮಧೀತಂ ಚ ದಾನಾದ್ಯಾಃ ಸಕಲಾಃ ಕ್ರಿಯಾಃ ।
ಭವಂತಿ ತಸ್ಯ ವೈಫಲ್ಯಂ ವಾಕ್ಯಂ ಯಸ್ಯಾನೃತಂ ಭವೇತ್ ॥೩೧॥

ಸತ್ಯಮತ್ಯಂತಮುದಿತಂ ಧರ್ಮಶಾಸ್ತ್ರೇಷು ಧೀಮತಾಂ ।
ತಾರಣಾಯಾನೃತಂ ತದ್ವತ್ಪತನಾಯಾಕೃತಾತ್ಮನಾಂ ॥೩೨॥

---

ಸೂತನು ಹೇಳಿದನು—ಹೀಗೆಂದು ಮನಸ್ಸಿನ ದುಃಖದಿಂದ ದರಿದ್ರನಂತೆ ತಲೆಯನ್ನು ಬಗ್ಗಿಸಿಕೊಂಡು ಚಿಂತಿಸುತ್ತಿರುವ ರಾಜನನ್ನು ನೋಡಿ ರಾಣಿಯು ಕಣ್ಣೀರನ್ನು ಸುರಿಸುತ್ತಾ ಗದ್ಗದಧ್ವನಿಯಿಂದ ರಾಜನನ್ನು ಕುರಿತು ಹೀಗೆ ಮಾತನಾಡಿದಳು. ||೨೮||

ಓ ಮಹಾರಾಜನೇ, ಚಿಂತೆಯನ್ನು ಬಿಡು. ನಿನ್ನ ಧರ್ಮವನ್ನು ರಕ್ಷಿಸು. ಸತ್ಯವಾಕ್ಯವನ್ನು ಬಿಟ್ಟ ಮನುಜನು ಹೆಣದಂತೆ ಅಶುದ್ಧನು ಮತ್ತು ಸಮಾಜ ಬಾಹ್ಯನು. ಮನುಷ್ಯನಿಗೆ ಸತ್ಯಕ್ಕಿಂತಲೂ ಉತ್ತಮವಾದ ಧರ್ಮವಿಲ್ಲ. ಆದುದರಿಂದ ಸತ್ಯವನ್ನು ರಕ್ಷಿಸು. ||೨೯-೩೦||

ಯಾವನು ಸುಳ್ಳನ್ನು ಹೇಳುವನೋ ಅವನು ಮಾಡಿರಬಹುದಾದ ಅಗ್ನಿಹೋತ್ರವೂ ವೇದಾಧ್ಯಯನವೂ ದಾನವೇ ಮೊದಲಾದ ಸಮಸ್ತ ಕರ್ಮಗಳೂ ಫಲವಿಲ್ಲದವುಗಳಾಗುವುವು. ಬುದ್ಧಿವಂತರನ್ನು ಕಷ್ಟದಿಂದ ಬಿಡಿಸಬೇಕಾದರೆ ಸತ್ಯವೇ ಅತ್ಯುತ್ತಮವಾದ ಸಾಧನವೆಂದೂ, ಪಾಪಿಗಳನ್ನು ನರಕಕ್ಕೆ ತಳ್ಳಬೇಕಾದರೆ ಸುಳ್ಳೇ ಸಾಧನವೆಂದೂ, ಧರ್ಮಶಾಸ್ತ್ರಗಳಲ್ಲಿ ಹೇಳಿರುವುದು. ||೩೧-೩೨||

**ಶತಾಶ್ವಮೇಧಾನಾಹೃತ್ಯ ರಾಜಸೂಯಂ ಚ ಪಾರ್ಥಿವಃ ।**
**ಕೃತ್ವಾ ರಾಜಾ ಸಕೃತ್ಸ್ವರ್ಗಾದಸತ್ಯವಚನಾಚ್ಚ್ಯುತಃ ॥೩೩॥**

॥ ರಾಜೋವಾಚ ॥

**ವಂಶವೃದ್ಧಿಕರಶ್ಚಾಯಂ ಪುತ್ರಸ್ತಿಷ್ಠತಿ ಬಾಲಕಃ ।**
**ಉಚ್ಯತಾಂ ವಕ್ತುಕಾಮಾಽಸಿ ಯದ್ವಾಕ್ಯಂ ಗಜಗಾಮಿನಿ ॥೩೪॥**

॥ ಪತ್ನ್ಯುವಾಚ ॥

**ರಾಜನ್ಮಾಭೂದಸತ್ಯಂ ತೇ ಪುಂಸಾಂ ಪುತ್ರಫಲಾಃ ಸ್ತ್ರಿಯಃ ।**
**ತನ್ಮಾಂ ಪ್ರದಾಯ ವಿತ್ತೇನ ದೇಹಿ ವಿಪ್ರಾಯ ದಕ್ಷಿಣಾಂ ॥೩೫॥**

॥ ವ್ಯಾಸ ಉವಾಚ ॥

**ಏತದ್ವಾಕ್ಯಮುಪಶ್ರುತ್ಯ ಯಯೌ ಮೋಹಂ ಮಹೀಪತಿಃ ।**
**ಪ್ರತಿಲಭ್ಯ ಚ ಸಂಜ್ಞಾಂ ವೈ ವಿಲಲಾಪಾತಿದುಃಖಿತಃ ॥೩೬॥**

---

ಯಯಾತಿರಾಜನು ನೂರು ಅಶ್ವಮೇಧಯಾಗಗಳನ್ನೂ ರಾಜಸೂಯಯಾಗವನ್ನೂ ಮಾಡಿ ಸ್ವರ್ಗವನ್ನು ಪಡೆದು ಇದ್ದರೂ, ಒಂದು ಅಸತ್ಯವನ್ನು ನುಡಿದುದರಿಂದ ಸ್ವರ್ಗದಿಂದ ಬಿದ್ದುಬಿಟ್ಟನು. ಈ ಕಥೆಯು ಪುರಾಣಾಂತರದಲ್ಲಿ ಪ್ರಸಿದ್ಧವಾಗಿರುವುದು. ॥೩೩॥

ರಾಜನು ಹೇಳಿದನು—ಆನೆಯಂತೆ ಗಂಭೀರವಾದ ನಡಿಗೆಯುಳ್ಳ ಪತ್ನಿಯೇ, ದಕ್ಷಿಣೆಯನ್ನು ಕೊಡಬೇಕಾದುದೆಂದು ನೀನು ನನಗೆ ಹೇಳುತ್ತಿರುವೆಯಷ್ಟೇ; ಈಗ ನನ್ನದಾಗಿ ಉಳಿದಿರುವುದು ಮಗನು ಹೆಂಡಿತಿಯು ಎಂಬ ಎರಡು ಪ್ರಾಣಿಗಳು. ಇವುಗಳಲ್ಲಿ ಮಗನು ವಂಶವೃದ್ಧಿಕಾರಣನಾದುದರಿಂದಲೂ ಹೆಂಡಿತಿಯನ್ನು ಮಾರಬಾರದಾದುದರಿಂದಲೂ ನನಗೆ ಧನಪ್ರಾಪ್ತಿಗೆ ಮಾರ್ಗವಾವುದೂ ಉಳಿಯಲಿಲ್ಲ. ಇಂತಹ ಕಷ್ಟದಲ್ಲಿ ನಾನು ಏನನ್ನು ಮಾಡಬೇಕೆಂಬುದನ್ನು ನೀನೇ ಹೇಳು. ॥೩೪॥

ರಾಜನ ಪತ್ನಿಯು ಹೇಳಿದಳು—ಓ ರಾಜನೇ, ನಿನ್ನಮಾತು ಅಸತ್ಯವಾಗಬಾರದು. ಮಗನು ಹುಟ್ಟಿದಮೇಲೆ ಪುರುಷರಿಗೆ ಸ್ತ್ರೀಯರಿಂದ ಪ್ರಯೋಜನವಿಲ್ಲ. ಆದುದರಿಂದ ನನ್ನನ್ನು ಮಾರಿ ಬಂದ ದ್ರವ್ಯದಿಂದ ಬ್ರಾಹ್ಮಣನ ದಕ್ಷಿಣೆಯನ್ನು ಕೊಟ್ಟುಬಿಡು ! ॥೩೫॥

ವ್ಯಾಸನು ಹೇಳಿದನು—ರಾಜನು ಈ ಉಪಶ್ರುತಿಯ ಮಾತನ್ನು ಕೇಳಿ

ಮಹದ್ದುಃಖಮಿದಂ ಭದ್ರೇ ಯತ್ತ್ವಮೇವಂ ಬ್ರವೀಷಿ ಮೇ ।
ಕಿಂ ತವ ಸ್ಮಿತಸಂಲಾಪಾ ಮಮ ಪಾಪಸ್ಯ ವಿಸ್ಮೃತಾಃ ॥೩೭॥

ಹಾಹಾ ತ್ವಯಾ ಕಥಂ ಯೋಗ್ಯಂ ವಕ್ತುಮೇತಚ್ಛುಚಿಸ್ಮಿತೇ ।
ದುರ್ವಾಚ್ಯಮೇತದ್ವಚನಂ ಕಥಂ ವದಸಿ ಭಾಮಿನಿ ॥೩೮॥

ಇತ್ಯುಕ್ತ್ವಾ ನೃಪತಿಶ್ರೇಷ್ಠೋ ನ ಧೀರೋ ದಾರವಿಕ್ರಯೇ ।
ನಿಪಪಾತ ಮಹೀಪೃಷ್ಠೇ ಮೂರ್ಛಯಾಽತಿಪರಿಪ್ಲುತಃ ॥೩೯॥

ಶಯಾನಂ ಭುವಿ ತಂ ದೃಷ್ಟ್ವಾ ಮೂರ್ಚ್ಛಯಾಽಪಿ ಮಹೀಪತಿಂ ।
ಉವಾಚೇದಂ ಸುಕರುಣಂ ರಾಜಪುತ್ರೀ ಸುದುಃಖಿತಾ ॥೪೦॥

---

ಮೂರ್ಛೆಯನ್ನು ಹೊಂದಿ ಮತ್ತೆ ಎಚ್ಚರಗೊಂಡು ದುಃಖದಿಂದ ಗೋಳಾಡಿದನು. (ಮುಂದೆ ನಡೆವುದನ್ನು ಈಗಲೇ ಹೇಳುವುದು ಉಪಶ್ರುತಿ ಎನಿಸುವುದು.) ||೩೬||

ಎಲೌ ಮಂಗಳಸ್ವರೂಪಳೇ, ನೀನು ನನಗೆ ಅತ್ಯಂತ ದುಃಖವನ್ನುಂಟು ಮಾಡುವ ಮಾತನ್ನು ಹೇಳುತ್ತಿರುವೆ. ನೀನು ಪ್ರೀತಿಯಿಂದ ಹಾಸ್ಯಕರವಾದ ಮಾತ್ತುಗಳನ್ನಾಡುತ್ತಾ ನನ್ನನ್ನು ಸಂತೋಷಪಡಿಸುತ್ತಿದ್ದುದನ್ನು ಪಾಪಿಯಾದ ನಾನು ಮರೆತಿರುವೆನೇ? (ನೀನು ಹೇಳಿದಂತೆ ನಾನು ಕೃತಘ್ನನಾಗಿ ನಿನ್ನನ್ನು ಮಾರುವೆನೆಂದು ತಿಳಿದಿರುವೆಯಾ ? ಎಂದು ಅಭಿಪ್ರಾಯವು.) ||೩೭||

ಯಾವಾಗಲೂ ಸಂತೋಷದಿಂದ ನಗುತ್ತಿರುವ ನೀನು ನನ್ನನ್ನು ಕುರಿತು ಇಂತಹ ಸಹಿಸಲಸಾಧ್ಯವಾದ ಮಾತನ್ನು ಹೇಳುವುದು ಯೋಗ್ಯವಾದುದೇ ? ಹಾ ಕಷ್ಟವು ! ಎಂದು ಹೇಳಿ ರಾಜನು ಹೆಂಡತಿಯನ್ನು ಮಾರುವ ವಿಷಯದಲ್ಲಿ ಧೈರ್ಯ ವನ್ನು ಪಡೆಯದೆ ಭೂಮಿಯ ಮೇಲೆ ಬಿದ್ದು ಮೂರ್ಛೆಯನ್ನು ಹೊಂದಿದನು. ||೩೮-೩೯||

ಶರೀರದ ಮೇಲೆ ಪ್ರಜ್ಞೆಯಿಲ್ಲದೆ ನೆಲದಮೇಲೆ ಮಲಗಿರುವ ರಾಜನನ್ನು ನೋಡಿ ರಾಣಿಯು ಅತ್ಯಂತ ದುಃಖದಿಂದ ಕೂಡಿದ್ದರೂ ದಯೆಯಿಂದ ಕೂಡಿದ ಶೈತ್ಯೋಪಚಾರದಿಂದ ರಾಜನನ್ನು ಎಚ್ಚರಗೊಳಿಸಿ, ಈ ಮಾತನ್ನಾಡಿದಳು. ||೪೦||

ಹಾ ಮಹಾರಾಜ ಕಸ್ಯೇದಮುಪಧ್ಯಾನಾದುಪಾಗತಂ ।
ಯಸ್ತ್ವಂ ನಿಪತಿತೋ ಭೂಮೌ ರಂಕವಚ್ಛರಣೋಚಿತಃ ॥೪೦॥

ಯೇನೈವ ಕೋಟಿಶೋ ವಿತ್ತಂ ವಿಪ್ರಾಣಾಮುಪವರ್ಜಿತಂ ।
ಸ ಏವ ಪೃಥಿವೀನಾಥೋ ಭುವಿ ಸ್ವಪಿತಿ ಮೇ ಪತಿಃ ॥೪೨॥

ಹಾ ಕಷ್ಟಂ ಕಿಂ ತವಾನೇನ ಕೃತಂ ದೈವ ಮಹೀಕ್ಷಿತಾ ।
ಯದಿಂದ್ರೋಪೇಂದ್ರತುಲ್ಯೋಽಯಂ ನೀತಃ ಪಾಪಾಮಿಮಾಂ ದಶಾಂ॥೪೩॥

ಇತ್ಯುಕ್ತ್ವಾ ಸಾಽಪಿ ಸುಶ್ರೋಣೀ ಮೂರ್ಚ್ಛಿತಾ ನಿಪಪಾತ ಹ ।
ಭರ್ತುರ್ದುಃಖಮಹಾಭಾರೇಣಾಽಸಹ್ಯೇನಾಽತಿಪೀಡಿತಾ ॥೪೪॥

---

ಓ ಮಹಾರಾಜನೇ, ಯಾರ ಮತ್ತು ಯಾವ ಬಗೆಯ ಅನುಚಿತವಾದ ಆಲೋಚನೆಯಿಂದ ನಿನಗೆ ಇಂತಹ ಕಷ್ಟವು ಪ್ರಾಪ್ತವಾಯಿತು? ಉತ್ತಮವಾದ ಹಾಸಿಗೆಯಿಂದ ಕೂಡಿದ ಅರಮನೆಯಲ್ಲಿರಬೇಕಾದ, ಎಲ್ಲರನ್ನೂ ಕಾಪಾಡಲು ತಕ್ಕವನಾದ, ನೀನೂ ನಿಕೃಷ್ಟನಂತೆ ನೆಲದ ಮೇಲೆ ಬಿದ್ದಿರುವೆಯಲ್ಲಾ! ॥೪೦॥

ಯಾರು ಕೋಟಿಸಂಖ್ಯೆಯಿಂದ ಕೂಡಿದ ದ್ರವ್ಯವನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದನೋ, ಆ ನನ್ನ ಪತಿಯಾದ ರಾಜನೇ ನೆಲದಮೇಲೆ ಮಲಗಿರುವನು! ॥೪೨॥

ಎಲೈ ಅದೃಷ್ಟವೇ, ಈ ರಾಜನು ನಿನಗೆ ಏನನ್ನು ಮಾಡಿದ್ದನು? ಇಂದ್ರೋಪೇಂದ್ರರಿಗೆ ಸಮಾನನಾದ ಈ ರಾಜನಿಗೆ ಇಂತಹ ಪಾಪಫಲವಾದ ಕಷ್ಟವನ್ನುಂಟು ಮಾಡಿರುವೆಯಲ್ಲಾ! ॥೪೩॥

ಹೀಗೆಂದು ಹೇಳಿ ಆ ರಾಣಿಯೂ ಗಂಡನಿಗೆ ಉಂಟಾಗಿರುವ ಹೆಚ್ಚಾದ ದುಃಖದ ವೇಗವನ್ನು ನೋಡಿ ಸಹಿಸಲಾರದೆ ತಾನೂ ವಿಶೇಷವಾಗಿ ದುಃಖಪಡುತ್ತಾ, ಮೂರ್ಚ್ಛೆಯನ್ನು ಹೊಂದಿ ನೆಲದಮೇಲೆ ಬಿದ್ದಳು. ॥೪೪॥

**ಶಿಶುರ್ದೃಷ್ಟ್ವಾ ಕ್ಷುಧಾಽವಿಷ್ಟಃ ಪ್ರಾಹ ವಾಕ್ಯಂ ಸುದುಃಖಿತಃ ।**
**ತಾತ ತಾತ ಪ್ರದೇಹ್ಯನ್ನಂ ಮಾತರ್ಮೇ ದೇಹಿ ಭೋಜನಂ ॥೪೫॥**
**ಕ್ಷುನ್ಮೇ ಬಲವತೀ ಜಾತಾ ಜಿಹ್ವಾಽಗ್ರೇ ಮೇಽತಿಶುಷ್ಯತಿ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ**
**ವಿಂಶೋಽಧ್ಯಾಯಃ**

---

ಇದನ್ನು ನೋಡಿ ಮಗನಾದ ರೋಹಿತನು ಹಸಿವಿನಿಂದ ಅಪ್ಪಾ! ಅಮ್ಮಾ! ನನಗೆ ಹಸಿವು ಹೆಚ್ಚಾಗಿದೆ. ನಾಲಗೆಯು ಒಣಗುತ್ತಿದೆ. ಊಟಮಾಡಬೇಕು. ಅನ್ನವನ್ನು ಕೊಡಿ. ಎಂದು ಹೇಳುತ್ತಾ, ಬಹಳವಾಗಿ ಅಳುತ್ತಿದ್ದನು. ||೪೫||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಏಕವಿಂಶೋಽಧ್ಯಾಯಃ ॥

### ಇಪ್ಪತ್ತೊಂದನೆಯ ಅಧ್ಯಾಯವು

**ಏತಸ್ಮಿನ್ನಂತರೇ ಪ್ರಾಪ್ತೋ ವಿಶ್ವಾಮಿತ್ರೋ ಮಹಾ ತಪಾಃ ।**
**ಅಂತಕೇನ ಸಮಃ ಕ್ರುದ್ಧೋ ಧನಂ ಸ್ವಂ ಯಾಚಿತುಂ ಹೃದಾ ॥೧॥**

**ತಮಾಲೋಕ್ಯ ಹರಿಶ್ಚಂದ್ರಃ ಪಪಾತ ಭುವಿ ಮೂರ್ಛಿತಃ ।**
**ಸ ವಾರಿಣಾ ತಮಭ್ಯುಕ್ಷ್ಯ ರಾಜಾನಮಿದಮಬ್ರವೀತ್ ॥೨॥**

**ಉತ್ತಿಷ್ಠೋತ್ತಿಷ್ಠ ರಾಜೇಂದ್ರ ಸ್ವಾಂ ದದಸ್ವೇಷ್ಟದಕ್ಷಿಣಾಂ ।**
**ಋಣಂ ಧಾರಯತಾಂ ದುಃಖಮಹನ್ಯಹನಿ ವರ್ಧತೇ ॥೩॥**

---

ಹರಿಶ್ಚಂದ್ರನೂ ಅವನ ಪತ್ನಿಯೂ ದುಃಖಪಡುತ್ತಿರುವ ಈ ಸಮಯದಲ್ಲಿಯೇ ಮಹಾತಪಸ್ಸನ್ನು ಮಾಡಿದ ವಿಶ್ವಾಮಿತ್ರನು ಯಮನಂತೆ ಕೋಪಿಸಿಕೊಂಡು ತನ್ನ ಹಣವನ್ನು ಕೇಳಬೇಕೆಂಬ ಮನಸ್ಸಿನಿಂದ ಬಂದನು. ॥೧॥

ಆ ಮುನಿಯನ್ನು ನೋಡಿ ಹರಿಶ್ಚಂದ್ರನು ಮೂರ್ಛೆಗೊಂಡು ನೆಲದಮೇಲೆ ಬಿದ್ದನು. ವಿಶ್ವಾಮಿತ್ರನು ನೀರನ್ನು ಆ ರಾಜನ ಮೇಲೆ ಚುಮುಕಿಸಿ ಅವನು ಎಚ್ಚರಗೊಂಡಮೇಲೆ ಅವನನ್ನು ಕುರಿತು ಹೇಳಿದನು. ॥೨॥

ರಾಜಶ್ರೇಷ್ಠನೇ, ಏಳು, ಏಳು, ನನಗೆ ಕೊಡಬೇಕಾದ ದಕ್ಷಿಣೆಯನ್ನೂ ಕೊಟ್ಟುಬಿಡು. ಸಾಲವನ್ನಿಟ್ಟುಕೊಂಡಿರುವವರ ದುಃಖವು ದಿನದಿನಕ್ಕೆ ಹೆಚ್ಚುತ್ತಲೇ ಇರುತ್ತದೆ! ॥೩॥

ಆಪ್ಯಾಯ್ಯಮಾನಃ ಸ ತದಾ ಹಿಮಶೀತೇನವಾರಿಣಾ ।
ಅವಾಪ್ಯ ಚೇತನಾಂ ರಾಜಾ ವಿಶ್ವಾಮಿತ್ರಮವೇಕ್ಷ್ಯ ಚ ॥೪॥

ಪುನರ್ಮೋಽಹಂ ಸಮಾಪೇದೇ ಹ್ಯಥ ಕ್ರೋಧಂ ಯಯೌ ಮುನಿಃ ।
ಸಮಾಶ್ವಾಸ್ಯ ಚ ರಾಜಾನಂ ವಾಕ್ಯಮಾಹ ದ್ವಿಜೋತ್ತಮಃ ॥೫॥

॥ ವಿಶ್ವಾಮಿತ್ರ ಉವಾಚ ॥

ದೀಯತಾಂ ದಕ್ಷಿಣಾ ಸಾ ತು ಯದಿ ಧೈರ್ಯಮವೇಕ್ಷಸೇ ।
ಸತ್ಯೇನಾರ್ಕಃ ಪ್ರತಪತಿ ಸತ್ಯೇ ತಿಷ್ಠತಿ ಮೇದಿನೀ ॥೬॥

ಸತ್ಯೇಚೋಕ್ತಃ ಪರೋಧರ್ಮಃ ಸ್ವರ್ಗಃ ಸತ್ಯೇ ಪ್ರತಿಷ್ಠಿತಃ ।
ಅಶ್ವಮೇಧ ಸಹಸ್ರಂತು ಸತ್ಯಂ ಚ ತುಲಯಾ ಧೃತಂ ॥೭॥

ಅಶ್ವಮೇಧ ಸಹಸ್ರಾದ್ಧಿ ಸತ್ಯಮೇಕಂ ವಿಶಿಷ್ಯತೇ ।
ಅಥವಾ ಕಿಂ ಮಮೈತೇನ ಪ್ರೋಕ್ತೇ ನಾಸ್ತಿ ಪ್ರಯೋಜನಂ ॥೮॥

---

ಆಗ ಹರಿಶ್ಚಂದ್ರನು ಹಿಮದಂತೆ ತಣ್ಣಗಿರುವ ನೀರಿನಿಂದ ಸುಖವನ್ನು ಹೊಂದಿ ಪ್ರಜ್ಞೆಯನ್ನು ಪಡೆದು ವಿಶ್ವಾಮಿತ್ರನನ್ನು ನೋಡಿ ಮತ್ತೆ ಮೂರ್ಛೆಯನ್ನು ಹೊಂದಿದನು. ಮತ್ತೆ ಆಗ ಆ ಮುನಿಯು ಕೋಪಗೊಂಡನು. ಆದರೂ ಎಚ್ಚರಗೊಂಡ ರಾಜನನ್ನು ಸಮಾಧಾನಪಡಿಸಿ ಹೀಗೆ ಹೇಳಿದನು. ॥೪-೫॥

ವಿಶ್ವಾಮಿತ್ರನು ಹೇಳಿದನು—ಓ ರಾಜನೇ, ನಿನಗೆ ಸತ್ಯವನ್ನು ಕಾಪಾಡುವ ಧೈರ್ಯವಿದ್ದರೆ ಆ ನನ್ನ ದಕ್ಷಿಣೆಯನ್ನು ಕೊಡು. ಸತ್ಯಸ್ವರೂಪನಾದ ಪರಮಾತ್ಮನಿಂದಲೇ ಸೂರ್ಯನು ಬಿಸಿಲನ್ನು ಕೊಡುತ್ತಾನೆ. ಆ ಸತ್ಯಸ್ವರೂಪದ ಅವಲಂಬನದಲ್ಲಿಯೇ ಈ ಭೂಮಿಯು ನೆಲೆಗೊಂಡು ಮುದುವರಿಯುತ್ತಾ ಇರುತ್ತದೆ. ಆ ಸತ್ಯದ ಪಾಲನೆಯಲ್ಲಿಯೇ ಶ್ರೇಷ್ಠವಾದ ಧರ್ಮವು ಕಾಪಾಡಲ್ಪಟ್ಟು ಇರುವುದೆಂದು ಹೇಳಟ್ಪಟ್ಟಿದೆ. ಆದರಲ್ಲಿಯೇ ಸ್ವರ್ಗವೂ ಫಲವಾಗಿ ಇರುತ್ತದೆ. ಸಾವಿರ ಅಶ್ವಮೇಧಯಜ್ಞಗಳ ಫಲವನ್ನೂ, ಒಂದು ಸತ್ಯವಾಕ್ಯದ ಫಲವನ್ನೂ, ತೂಕ ಮಾಡಿದರೆ, ಸತ್ಯದ ಫಲವೇ ತೂಕದಲ್ಲಿಯೂ ಗುಣದಲ್ಲಿಯೂ ಹೆಚ್ಚಾಗುವುದು ॥೬-೭॥

ಇವುಗಳನ್ನೆಲ್ಲವನ್ನೂ ಹೇಳಿದುದರಿಂದ ನನಗೇನು ಪ್ರಯೋಜನವು ಆಗಬೇಕಾಗಿರುವುದು ? ಎಲೈ ರಾಜನೇ, ಸೂರ್ಯನು ಈದಿನ ಮುಳುಗುವುದರೊಳಗಾಗಿ

ಮದೀಯಾಂ ದಕ್ಷಿಣಾಂ ರಾಜನ್ನದಾಸ್ಯತಿ ಭವಾನ್ಯದಿ ।
ಅಸ್ತಾಚಲಗತೇಽಹ್ನ್ಯರ್ಕೇ ಶಪ್ಸ್ಯಾಮಿ ತ್ವಾಮತೋ ಧ್ರುವಂ ॥೯॥

ಇತ್ಯುಕ್ತ್ವಾ ಸ ಯಯೌ ವಿಪ್ರೋ ರಾಜಾ ಚಾಸೀದ್ಭಯಾತುರಃ ।
ದುಃಖೀಭೂತೋಽವನೇ ನಿಸ್ವೋ ನೃಶಂಸ ಮು(ಧ)ನಿನಾಽರ್ದಿತಃ ॥೧೦॥

ಏತಸ್ಮಿನ್ನಂತರೇ ತತ್ರ ಬ್ರಾಹ್ಮಣೋ ವೇದಪಾರಗಃ ।
ಬ್ರಾಹ್ಮಣೈರ್ಬಹುಭಿಃ ಸಾರ್ಧಂ ನಿರ್ಯಯೌ ಸ್ವಗೃಹಾದ್ಬಹಿಃ ॥೧೧॥

ತತೋ ರಾಜ್ಞೀ ತು ತಂ ದೃಷ್ಟ್ವಾ ಆಯಾಂತಂ ತಾಪಸಂ ಸ್ಥಿತಂ ।
ಉವಾಚ ವಾಕ್ಯಂ ರಾಜಾನಂ ಧರ್ಮಾರ್ಥಸಹಿತಂ ತದಾ ॥೧೨॥

॥ ಸೂತ ಉವಾಚ ॥

ತ್ರಯಾಣಾಮಪಿ ವರ್ಣಾನಾಂ ಪಿತಾ ಬ್ರಾಹ್ಮಣ ಉಚ್ಯತೇ ।
ಪಿತೃದ್ರವ್ಯಂ ಹಿ ಪುತ್ರೇಣ ಗೃಹೀತವ್ಯಂ ನ ಸಂಶಯಃ ॥೧೩॥
ತಸ್ಮಾದಯಂ ಪ್ರಾರ್ಥನೀಯೋ ಧನಾರ್ಥಮಿತಿ ಮೇ ಮತಿಃ ।

---

ನೀನು ನನ್ನ ದಕ್ಷಿಣೆಯ ಹಣವನ್ನು ಕೊಡದೆ ಹೋದರೆ ಖಂಡಿತವಾಗಿಯೂ ನಿನಗೆ ಶಾಪವನ್ನು ಕೊಡುವೆನು! ಎಂದು ಹೇಳಿ ಆ ಬ್ರಾಹ್ಮಣನು ಹೊರಟುಹೋದನು. ರಾಜನು ಕೈಯಲ್ಲಿ ಹಣವಿಲ್ಲದೆ ತುಂಬ ದುಃಖಿತನಾಗಿ ಕ್ರೂರನಾದ ಧನಿಕನು ಹಿಂಸಿಸುತ್ತಿರುವ ದರಿದ್ರನಂತೆ, ಸತ್ಯರಕ್ಷಣೆಯ ವಿಷಯದಲ್ಲಿ ಭಯವನ್ನು ಹೊಂದಿದನು. ॥೮-೯-೧೦॥

ಈ ಸಮಯಕ್ಕೆ ಸರಿಯಾಗಿ ಆ ಕಾಶೀಪಟ್ಟಣದಲ್ಲಿ ವೇದವನ್ನು ಸಂಪೂರ್ಣವಾಗಿ ಬಲ್ಲ ಒಬ್ಬ ಬ್ರಾಹ್ಮಣನು ಅನೇಕ ಜನ ಬ್ರಾಹ್ಮಣರೊಡನೆ ತನ್ನ ಮನೆಯಿಂದ ಹೊರಕ್ಕೆ ಹೊರಟನು. ॥೧೧॥

ಬರುತ್ತಿರುವ ತಪಸ್ವಿಯಾದ ಆ ಬ್ರಾಹ್ಮಣನನ್ನು ನೋಡಿ ರಾಣಿಯು ರಾಜನನ್ನು ಕುರಿತು, ಧರ್ಮ ಮತ್ತು ಅರ್ಥ ಎಂಬ ಎರಡು ಪುರುಷಾರ್ಥಗಳಿಂದ ಕೂಡಿದಂತಿರುವ ಈ ಮಾತನ್ನಾಡಿದಳು. ॥೧೨॥

ಕ್ಷತ್ರಿಯ ವೈಶ್ಯ, ಶೂದ್ರರೆಂಬ ಮೂರು ವರ್ಣಗಳಿಗೂ ಬ್ರಾಹ್ಮಣನೇ ತಂದೆಯು. ತಂದೆಯ ಹಣವನ್ನು ಮಗನು ತೆಗೆದುಕೊಳ್ಳುವುದರಲ್ಲಿ ಸಂದೇಹವಿಲ್ಲ.

|| ರಾಜೋವಾಚ ||

ನಾಹಂ ಪ್ರತಿಗ್ರಹಂ ಕಾಂಕ್ಷೇ ಕ್ಷತ್ರಿಯೋಽಹಂ ಸುಮಧ್ಯಮೇ ||೧೪||

ಯಾಚನಂ ಖಲು ವಿಪ್ರಾಣಾಂ ಕ್ಷತ್ರಿಯಾಣಾಂ ನವಿದ್ಯತೇ ।
ಗುರುರ್ಹಿ ವಿಪ್ರೋ ವರ್ಣಾನಾಂ ಪೂಜನೀಯೋಽಸ್ತಿ ಸರ್ವದಾ||೧೫||

ತಸ್ಮಾದ್ಗುರು ನ್ರಯಾಚ್ಯಃ ಸ್ಯಾತ್ಕ್ಷತ್ರಿಯಾಣಾಂ ವಿಶೇಷತಃ ।
ಯಜನಾಧ್ಯಯನಂ ದಾನಂ ಕ್ಷತ್ರಿಯಸ್ಯ ವಿಧೀಯತೇ ||೧೬||

ಶರಣಾಗತಾನಾಮಭಯಂ ಪ್ರಜಾನಾಂ ಪ್ರತಿಪಾಲನಂ ।
ನ ಚಾಪ್ಯೇವಂ ತು ವಕ್ತವ್ಯಂ ದೇಹೀತಿ ಕೃಪಣಂ ವಚಃ ||೧೭||

ದದಾಮೀತ್ಯೇವ ಮೇ ದೇವಿ ಹೃದಯೇ ನಿಹಿತಂ ವಚಃ ।
ಆರ್ಜಿತಂ ಕುತ್ರಚಿದ್ದ್ರವ್ಯಂ ಬ್ರಾಹ್ಮಣಾಯ ದದಾಮ್ಯಹಂ ||೧೮||

---

ಆದುದರಿಂದ ಹಣಕ್ಕೋಸ್ಕರ ಈತನನ್ನು ಕೇಳಿಕೊಳ್ಳಬೇಕೆಂದು ನನ್ನ ಅಭಿಮತವಿದೆ ಎಂದಳು. ||೧೩||

ರಾಜನು ಹೇಳಿದನು --ಒಳ್ಳೆಯ ನಡುವುಳ್ಳ ರಾಣಿಯೇ, ನಾನು ಕ್ಷತ್ರಿಯನು. ದಾನವನ್ನು ತೆಗೆದುಕೊಳ್ಳುವ ಅಧಿಕಾರವು ನನಗೆ ಇರುವುದಿಲ್ಲ. ಭಿಕ್ಷೆಯನ್ನು ಬೇಡುವುದು, ಬ್ರಾಹ್ಮಣರಿಗೆ ಧರ್ಮ. ಕ್ಷತ್ರಿಯರಿಗಲ್ಲ. ಬ್ರಾಹ್ಮಣನು ಗುರುವು ಎಂಬುದೇನೋ ನಿಜವು. ಅವನು ಯಾವಾಗಲೂ ಪೂಜೆಗೆ ಯೋಗ್ಯನು. ||೧೪-೧೫||

ಓ ರಾಣಿಯೇ, ಕ್ಷತ್ರಿಯರು ಗುರುಗಳಲ್ಲಿ ಭಿಕ್ಷೆಯನ್ನು ಬೇಡಬಾರದು. ಯಜ್ಞಮಾಡುವುದು, ವೇದವನ್ನೋದುವುದು, ದಾನಮಾಡುವುದು, ಈ ಮೂರೂ ಕ್ಷತ್ರಿಯನಿಗೆ ವಿಹಿತವಾದ ವರ್ಣಧರ್ಮರೂಪವಾದ ಕರ್ಮಗಳು. ಶರಣಾಗತರನ್ನು ಕಾಪಾಡುವುದು, ಪ್ರಜೆಗಳನ್ನು ಪಾಲಿಸುವುದು, ಇವೂ ಹಾಗೆಯೇ ವಿಹಿತವಾಗಿರುವ ಧರ್ಮಗಳು. ಕೊಡು ಎಂದು ದೈನ್ಯದಿಂದ ಕೇಳುವುದು ಮಾತ್ರ ಎಂದಿಗೂ ಕ್ಷತ್ರಿಯನಿಗೆ ಕೂಡದು. ದಾನಮಾಡುತ್ತೇನೆ ಎಂಬುದೇ ನನ್ನ ಮನೋಗತವಾದ ಮಾತು. ಎಲ್ಲಿಯಾದರೂ ಸಂಪಾದನೆ ಮಾಡಿಯೇ ಬ್ರಾಹ್ಮಣನಿಗೆ ಹಣವನ್ನು ಕೊಡುವೆನು. ||೧೬-೧೭-೧೮||

|| ಪತ್ನ್ಯುವಾಚ ||

ಕಾಲಃ ಸಮವಿಷಮಕರಃ ಪರಿಭವ ಸನ್ಮಾನ ಮಾನದಃ ಕಾಲಃ ।
ಕಾಲಃ ಕರೋತಿ ಪುರುಷಂ ದಾತಾರಂ ಯಾಚಿತಾರಂ ಚ ॥೧೯॥

ವಿಪ್ರೇಣ ವಿದುಷಾ ರಾಜಾ ಕ್ರುದ್ಧೇನಾತಿ ಬಲೀಯಸಾ ।
ರಾಜ್ಯಾನ್ನಿರಸ್ತಃ ಸೌಖ್ಯಾಚ್ಚ ಪಶ್ಯ ಕಾಲಸ್ಯಚೇಷ್ಟಿತಂ ॥೨೦॥

|| ರಾಜೋವಾಚ ||

ಅಸಿನಾ ತೀಕ್ಷ್ಣಧಾರೇಣ ವರಂ ಜಿಹ್ವಾ ದ್ವಿಧಾ ಕೃತಾ ।
ನ ತು ಮಾನಂ ಪರಿತ್ಯಜ್ಯ ದೇಹಿ ದೇಹೀತಿ ಭಾಷಿತಂ ॥೨೧॥

---

ರಾಣಿಯು, " ರಾಜನ ಧರ್ಮವಿಂತಹುದೆಂದು ನೀನು ಹೇಳಿದರೆ ಬ್ರಾಹ್ಮಣರಿಗೂ ಇತರರಿಗೆ ಹಿಂಸೆಕೊಡದಿರುವುದು ಧರ್ಮವಲ್ಲವೇ! ಕಾಲವಶದಿಂದ ನಿನಗೆ ತೊಂದರೆಯನ್ನು ಕೊಡುವ ಬ್ರಾಹ್ಮಣನು ತನ್ನ ಧರ್ಮವನ್ನು ಹೇಗೆ ಬಿಟ್ಟಿರುವನೋ ಹಾಗೆ ನೀನೂ ಏಕೆ ಆ ಧರ್ಮವನ್ನು ಬಿಡಬಾರದು " ಎಂಬ ಅಭಿಪ್ರಾಯದಿಂದಲೋ ಎಂಬಂತೆ ಹೇಳುತ್ತಾಳೆ. ಕಾಲಕ್ಕೆ ತಕ್ಕಂತೆ ಹೆಚ್ಚುಕಡಿಮೆಗಳಾಗುತ್ತವೆ. ಒಂದೊಂದು ಕಾಲದಲ್ಲಿ ಅವಮಾನವೂ, ಸನ್ಮಾನವೂ ಆಗುವುದು. ಮನುಷ್ಯನನ್ನು ಕಾಲವೇ ದಾನ ಮಾಡುವವನನ್ನಾಗಿಯೂ, ಭಿಕ್ಷೆಬೇಡುವವನನ್ನಾಗಿಯೂ, ಮಾಡುವುದು. ಆದುದರಿಂದ ನಾವಾಗಿ ನಮ್ಮ ಧರ್ಮವನ್ನು ಬಿಟ್ಟರೆ, ಆಗ ಅದು ಪಾಪವು, ಹೇಯವು. ಆದರೆ ದುಷ್ಕಾಲದ ಪ್ರಾಬಲ್ಯದಿಂದ ಧರ್ಮವನ್ನು ಪಾಲಿಸಲಾಗದಿದ್ದರೆ ದೋಷವಿಲ್ಲವು. ಎಂದು ರಾಣಿಯಭಾವವು. ॥೧೯॥

ಧರ್ಮಗಳನ್ನು ತಿಳಿದ, ವಿದ್ವಾಂಸನೂ ಬ್ರಾಹ್ಮಣನೂ ಆಗಿದ್ದರೂ ವರ್ಣಧರ್ಮಕ್ಕೆ ವಿರುದ್ಧವಾದ ಕೋಪವನ್ನು ಹೊಂದಿ ಒಬ್ಬ ರಾಜನ ಸೌಖ್ಯವನ್ನು ಹಾಳು ಮಾಡಿ ಅವನನ್ನು ರಾಜ್ಯದಿಂದಲೂ ಓಡಿಸಿದನೆಂದಮೇಲೆ, ಓ ರಾಜನೇ, ಕಾಲದ ಆಟದ ದುರುಳುತನವನ್ನು ನೋಡು! ಹೇಗಿದೆ? ॥೨೦॥

ರಾಜನು, " ಓ ಭಾಗ್ಯಶಾಲಿನಿಯೇ, ಹರಿತವಾದ ಕತ್ತಿಯಿಂದ ನಾಲಿಗೆಯನ್ನು ಎರಡಾಗಿ ಸೀಳಿದರೂ, ನಾನು ಮಾನವಿಲ್ಲದೆ ' ದೇಹಿ ದೇಹಿ ' ಎಂಬ ಹೇಡಿತನದ ಮಾತನ್ನಾಡುವುದಿಲ್ಲ. ನಾನು ಕ್ಷತ್ರಿಯನು. ಕ್ಷತ್ರಿಯನಿಗೆ ಇರಬೇಕಾದ ಗೌರವದ

ಕ್ಷತ್ರಿಯೋಽಹಂ ಮಹಾಭಾಗೇ ನ ಯಾಚೇ ಕಿಂಚಿದಪ್ಯಹಂ ।
ದದಾಮಿ ವಾಽಹಂ ನಿತ್ಯಂ ಹಿ ಭುಜವೀರ್ಯಾರ್ಜಿತಂ ಧನಂ ॥೨೨॥

॥ ಪತ್ನ್ಯುವಾಚ ॥

ಯದಿ ತೇ ಹಿ ಮಹಾರಾಜ ಯಾಚಿತುಂ ನಕ್ಷಮಂ ಮನಃ ।
ಅಹಂತು ನ್ಯಾಯತೋ ದತ್ತಾ ದೇವೈರಪಿ ಸವಾಸವೈಃ ॥೨೩॥

ಅಹಂ ಶಾಸ್ತ್ರಾ ಚ ಪತ್ಯಾ ಚ ರಕ್ಷ್ಯಾ ಚೈವ ಮಹಾದ್ಯುತೇ ।
ಮನ್ಮೌಲ್ಯಂ ಸಂಗೃಹೀತ್ವಾಽಥ ಗುರ್ವರ್ಥಃ ಸಂಪ್ರದೀಯತಾಂ ॥೨೪॥

ಏತದ್ವಾಕ್ಯಮುಪಶ್ರುತ್ಯ ಹರಿಶ್ಚಂದ್ರೋ ಮಹೀಪತಿಃ ।
ಕಷ್ಟಕಷ್ಟಮಿತಿಪ್ರೋಚ್ಯ ವಿಲಲಾಪಾತಿದುಃಖಿತಃ ॥೨೫॥

ಭಾರ್ಯಾ ಚ ಭೂಯಃ ಪ್ರಾಹೇದಂ ಕ್ರಿಯತಾಂ ವಚನಂ ಮಮ ।
ವಿಪ್ರಶಾಪಾಗ್ನಿ ದಗ್ಧತ್ವಾನ್ನೀಚತ್ವಮುಪಯಾಸ್ಯಸಿ ॥೨೬॥

---

ಅಭಿಮಾನವನ್ನೂ, ಧರ್ಮಶಾಸ್ತ್ರದಲ್ಲಿ ಪ್ರಾಮಾಣ್ಯಬುದ್ಧಿಯನ್ನೂ ಬಿಡಲಾರೆನು! ಯಾರನ್ನೂ ಏನನ್ನೂ ಬೇಡುವುದಿಲ್ಲ. ನನ್ನ ಬಾಹುಪರಾಕ್ರಮದಿಂದ ಸಂಪಾದಿಸಿದುದನ್ನು ಮಾತ್ರ ಪ್ರತಿದಿನವೂ ದಾನಮಾಡುತ್ತೇನೆ ಮತ್ತು ನನ್ನ ವಾಗ್ದಾನದ ಮಾತನ್ನು ಉಳಿಸಿ ಕಾಪಾಡುವೆನು." ಎಂದನು. ॥೨೧-೨೨॥

ರಾಣಿಯು, " ಮಹಾರಾಜನೇ, ನೀನು ಭಿಕ್ಷೆಬೇಡಲು ಒಪ್ಪದಿದ್ದರೆ ಹೋಗಲಿ, ದೇವೇಂದ್ರನೇ ಮೊದಲಾದ ದೇವತೆಗಳ ಸಾಕ್ಷಿಯಾಗಿ ಶಾಸ್ತ್ರಾನುಸಾರವಾಗಿ ನಾನು ನಿನಗೆ ಕೊಡಲ್ಪಟ್ಟಿರುವೆನು. ನೀನು ನನ್ನನ್ನು ರಕ್ಷಿಸಬಹುದು. ನನ್ನನ್ನು ಮಾರಿಯಾದರೂ ಬಂದ ಹಣವನ್ನು ಗುರುದಕ್ಷಿಣೆಯಾಗಿ ಕೊಡು " ಎಂದಳು. ॥೨೩-೨೪॥

ಮುಂದೆ ನಿಜವಾಗಿ ನಡೆಯುವ ಈ ಮಾತನ್ನು ಕೇಳಿ ಹರಿಶ್ಚಂದ್ರನು ಹಾ ಕಷ್ಟ, ಕಷ್ಟ! ಎಂದು ಬಹಳವಾಗಿ ಅತ್ತನು. (ಮುಂದೆ ನಡೆಯುವುದನ್ನು ಈಗಲೇ ಹೇಳುವುದು ಉಪಶ್ರುತಿ ಎನಿಸುವುದು.) ॥೨೫॥

ರಾಜನ ಹೆಂಡಿತಿಯು ಮತ್ತೆಯೂ ಹೀಗೆ ಒತ್ತಾಯಪಡಿಸುತ್ತಾ ಹೇಳಿದಳು, " ಓ ರಾಜನೇ, ನನ್ನ ಮಾತನ್ನು ನಡೆಸದೇಹೋದರೆ ನೀನು ಸತ್ಯಧರ್ಮಭ್ರಷ್ಟನಾಗಿ

ನದ್ಯೂತಹೇತೋರ್ನ ಚ ಮದ್ಯಹೇತೋ
ರ್ನರಾಜ್ಯಹೇತೋರ್ನಚ ಭೋಗಹೇತೋಃ ।
ದದಸ್ವ ಗುರ್ವರ್ಥ ಮತೋ ಮಯಾ ತ್ವಂ
ಸತ್ಯವ್ರತತ್ವಂ ಸಫಲಂ ಕುರುಷ್ವ ॥೨೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಏಕವಿಂಶೋಽಧ್ಯಾಯಃ

---

ಬ್ರಾಹ್ಮಣನ ಶಾಪದಿಂದಲೂ ಹೀನವಾಗಿ ಹೋಗುವೆ! ನೀನು ಜೂಜಿಗಾಗಲಿ, ಮದ್ಯಕ್ಕಾಗಲಿ, ರಾಜ್ಯಸಂಪಾದನೆಗಾಗಲಿ, ನಿನ್ನ ಸುಖಕ್ಕಾಗಲಿ ನನ್ನನ್ನು ಮಾರುವುದಿಲ್ಲ. ಗುರುಗಳಿಗೆ ಕೊಡಬೇಕಾದ ದಕ್ಷಿಣೆಗಾಗಿ ಇಂತಹ ಕಾರ್ಯವನ್ನು ಮಾಡಬೇಕಾಗಿ ಬಂದಿರುವುದರಿಂದ ನನ್ನನ್ನು ಮಾರಿ ಸತ್ಯವ್ರತವನ್ನು ಕಾಪಾಡಿಕೋ.'' ॥೨೬-೨೭॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

## ॥ ದ್ವಾವಿಂಶೋಽಧ್ಯಾಯಃ ॥

### ಇಪ್ಪತ್ತೆರಡನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಸ ತಯಾ ನೋದ್ಯಮಾನಸ್ತು ರಾಜಾ ಪತ್ನ್ಯಾ ಪುನಃ ಪುನಃ ।**
**ಪ್ರಾಹ ಭದ್ರೇ ಕರೋಮ್ಯೇಷ ವಿಕ್ರಯಂ ತೇ ಸುನಿರ್ಘೃಣಃ ॥೧॥**

**ನೃಶಂಸೈರಪಿ ಯತ್ಕರ್ತುಂ ನ ಶಕ್ಯಂ ತತ್ಕರೋಮ್ಯಹಂ ।**
**ಯದಿ ತೇ ಭ್ರಾಜತೇ ವಾಣೀ ವಕ್ತುಮೀದೃಕ್ ಸುನಿಷ್ಠುರಂ ॥೨॥**

**ಏವಮುಕ್ತ್ವಾ ತತೋ ರಾಜಾ ಗತ್ವಾ ನಗರಮಾತುರಃ ।**
**ಅವತಾರ್ಯ ತದಾ ರಂಗೇ ತಾಂ ಭಾರ್ಯಾಂ ನೃಪಸತ್ತಮಃ ॥೩॥**

---

ವ್ಯಾಸನು ಹೇಳಿದನು—ಹರಿಶ್ಚಂದ್ರರಾಜನು ಪತ್ನಿಯಿಂದ ಮತ್ತೆ ಮತ್ತೆ ಪ್ರೇರಿಸಲ್ಪಟ್ಟವನಾಗಿ, 'ಓ ಮಂಗಳಕರಳೇ, ದಯಾಹೀನನಾದ ನಾನು ನಿನ್ನನ್ನು ಮಾರುತ್ತೇನೆ" ಎಂದು ಹೇಳಿದನು. ॥೧॥

ಓ ರಾಣಿಯೇ, ಇಂತಹ ಕಠಿನವಾದ ಮಾತನ್ನಾಡುವುದು ನಿನಗೆ ಚೆನ್ನಾಗಿ ಕಾಣುತ್ತದೆಯಾದರೆ, ಕ್ರೂರಿಗಳಿಂದಲೂ ಯಾವ ಕೆಲಸವನ್ನು ಮಾಡುವುದಕ್ಕೆ ಸಾಧ್ಯವಿಲ್ಲವೋ ಅಂತಹ ಕೆಲಸವನ್ನೂ ನಾನು ಮಾಡುತ್ತೇನೆ! ॥೨॥

ರಾಜನು ಹೀಗೆ ಹೇಳಿದ ಮೇಲೆ ಬೇಗನೆ ಪಟ್ಟಣದೊಳಕ್ಕೆ ಹೋಗಿ ಆತನು ತನ್ನ ಹೆಂಡತಿಯನ್ನು ರಾಜಮಾರ್ಗದಲ್ಲಿ ಮಾರುಕಟ್ಟೆಯಲ್ಲಿ ನಿಲ್ಲಿಸಿ, ದುಃಖದಿಂದ ಕತ್ತಿನ ನರಗಳು ಬಿಗಿಯುತ್ತಿರಲು, ಹೀಗೆ ಮಾತನಾಡಿದನು. ॥೩॥

ಬಾಷ್ಪಗದ್ಗದಕಂಠಸ್ತು ತತೋ ವಚನಮಬ್ರವೀತ್ ।
ಭೋಭೋ ನಾಗರಿಕಾಸ್ಸರ್ವೇ ಶೃಣುಧ್ವಂ ವಚನಂ ಮಮ ॥೪॥

ಕಸ್ಯಚಿದ್ಯದಿ ಕಾರ್ಯಂ ಸ್ಯಾದ್ದಾಸ್ಯಾ ಪ್ರಾಣೇಷ್ಟಯಾ ಮಮ ।
ಸ ಬ್ರವೀತು ತ್ವರಾಯುಕ್ತೋ ಯಾವತ್ತ್ವಂ ಧಾರಯಾಮ್ಯಹಂ ॥೫॥

ತೇಽಬ್ರುವನ್ಪಂಡಿತಾಃ ಕಸ್ತ್ವಂ ಪತ್ನೀಂ ವಿಕ್ರೇತುಮಾಗತಃ ।
॥ ರಾಜೋವಾಚ ॥
ಕಿಂ ಮಾಂ ಪೃಚ್ಛಥ ಕಸ್ತ್ವಂ ಭೋ ನೃಶಂಸೋಽಹ ಮಮಾನುಷಃ ॥೬॥

ರಾಕ್ಷಸೋ ವಾಽಸ್ಮಿ ಕಠಿನಸ್ತತಃ ಪಾಪಂ ಕರೋಮ್ಯಹಂ ।
॥ ವ್ಯಾಸ ಉವಾಚ ॥
ತಂ ಶಬ್ದಂ ಸಹಸಾ ಶ್ರುತ್ವಾ ಕೌಶಿಕೋ ವಿಪ್ರರೂಪಧೃತ್ ॥೭॥

ವೃದ್ಧರೂಪಂ ಸಮಾಸ್ಥಾಯ ಹರಿಶ್ಚಂದ್ರಮಭಾಷತ ।
ಸಮರ್ಪಯಸ್ವ ಮೇ ದಾಸೀಮಹಂ ಕ್ರೇತಾ ಧನಪ್ರದಃ ॥೮॥

ಅಸ್ತಿ ಮೇ ವಿತ್ತಮತುಲಂ ಸುಕುಮಾರೀ ಚ ಮೇ ಪ್ರಿಯಾ ।
ಗೃಹಕರ್ಮ ನ ಶಕ್ನೋತಿ ಕರ್ತುಮಸ್ಮಾತ್ಪ್ರಯಚ್ಛ ಮೇ ॥೯॥

---

ಎಲೈ ಪಟ್ಟಣಿಗರೇ ಕೇಳಿರಿ, ನನ್ನ ಪ್ರಾಣಪ್ರಿಯಳಾದ ಹೆಂಡಿತಿಯಿಂದ ಯಾರಾದರೂ ಕೆಲಸ ಮಾಡಿಸಿಕೊಳ್ಳುವವರಿದ್ದರೆ ಹೇಳಿ, ನನಗೆ ಕೊಡಬೇಕಾದ ಹಣವನ್ನು ಹೇಳುವೆನು.' ಎಂದನು. ॥೪-೫॥

ಹೆಂಡಿತಿಯನ್ನು ಮಾರಲು ಬಂದಿರುವ ನೀನಾರು? ಎಂದು ಅವರು ಕೇಳಿದರು. ನೀನಾರೆಂದು ನನ್ನನ್ನೇಕೆ ಕೇಳುವಿರಿ? ನಾನು ಮನುಷ್ಯನಲ್ಲ! ಕ್ರೂರಾತ್ಮನಾದ ರಾಕ್ಷಸನೇ ಆಗಿದ್ದೇನೆ. ಆದುದರಿಂದಲೇ ಇಂತಹ ಪಾಪಕಾರ್ಯವನ್ನು ಮಾಡುತ್ತೇನೆ. ॥೭॥

ವ್ಯಾಸರು ಹೇಳಿದರು—ಆ ಮಾತನ್ನು ಕೇಳಿದೊಡನೆಯೇ ವಿಶ್ವಾಮಿತ್ರನು ಮುದುಕನಾದ ಬ್ರಾಹ್ಮಣ ರೂಪವನ್ನು ಧರಿಸಿ ಬಂದು ಹರಿಶ್ಚಂದ್ರನೊಡನೆ ಮಾತನಾಡಿದನು. ॥೭॥

ಎಲೈ ವ್ಯಾಪಾರಿಯೇ, ಈ ದಾಸಿಯನ್ನು ನನಗೆ ಕೊಡು. ನಾನು ಹಣವನ್ನು ಕೊಟ್ಟು ಕೊಂಡುಕೊಳ್ಳುವೆನು. ನನಗೆ ತುಂಬಾ ಹಣವಿದೆ. ನನ್ನ ಹೆಂಡಿತಿಯು

ಅಹಂ ಗೃಹ್ಣಾಮಿ ದಾಸೀಂ ತು ಕತಿ ದಾಸ್ಯಾಮಿ ತೇ ಧನಂ ।
ಏವಮುಕ್ತೇ ತು ವಿಪ್ರೇಣ ಹರಿಶ್ಚಂದ್ರಸ್ಯ ಭೂಪತೇ ॥೧೦॥

ವಿದೀರ್ಣಂ ತು ಮನೋ ದುಃಖಾನ್ನ ಚೈನಂ ಕಿಂಚಿದಬ್ರವೀತ್ ।

॥ ವಿಪ್ರ ಉವಾಚ ॥

ಕರ್ಮಣಶ್ಚ ವಯೋರೂಪಶೀಲಾನಾಂ ತವ ಯೋಷಿತಃ ॥೧೧॥

ಅನುರೂಪಮಿದಂ ವಿತ್ತಂ ಗೃಹಾಣಾರ್ಪಯ ಮೇಽಬಲಾಂ ।
ಧರ್ಮಶಾಸ್ತ್ರೇಷು ಯದ್ದೃಷ್ಟಂ ಸ್ತ್ರೀಯೋ ಮೌಲ್ಯಂ ನರಸ್ಯ ಚ ॥೧೨॥

ದ್ವಾತ್ರಿಂಶಲ್ಲಕ್ಷಣೋಪೇತಾ ದಕ್ಷಾ ಶೀಲಗುಣಾನ್ವಿತಾ ।
ಕೋಟಿಮೌಲ್ಯಂ ಸುವರ್ಣಸ್ಯ ಸ್ತ್ರಿಯಃ ಪುಂಸಸ್ತಥಾಽರ್ಬುದಂ ॥೧೩॥

---

ಸುಕುಮಾರಿಯಾದುದರಿಂದ ಮನೆಯ ಕೆಲಸಗಳನ್ನು ಮಾಡಲಾರಳು! ಆದುದರಿಂದ ಇವಳನ್ನು ನನಗೆ ಕೊಡು. ನಿನಗೆಷ್ಟು ಹಣವನ್ನು ಕೊಡಬೇಕು? ॥೮-೯॥

ಆ ಬ್ರಾಹ್ಮಣನು ಹೀಗೆ ಹೇಳುತ್ತಿರಲು ಹರಿಶ್ಚಂದ್ರನ ಮನಸ್ಸು ದುಃಖದಿಂದ ಶೀಳಿಹೋದಂತಾಯಿತು. ಅವನಿಗೆ ಪ್ರತ್ಯುತ್ತರವನ್ನೇ ಕೊಡಲಾಗಲಿಲ್ಲ. ॥೧೦॥

ಆ ಬ್ರಾಹ್ಮಣನು ಮುಂದುವರಿದು ಹೀಗೆ ಹೇಳಿದನು—" ನಿನ್ನ ಹೆಂಡತಿಯ ವಯಸ್ಸು, ರೂಪ, ನಡತೆ, ಕೆಲಸ ಇವುಗಳಿಗೆ ತಕ್ಕಂತೆ ಈ ಹಣವನ್ನು ತೆಗೆದುಕೊ! ಆ ಸ್ತ್ರೀಯನ್ನು ನನಗೆ ಕೊಡು. ಧರ್ಮಶಾಸ್ತ್ರದಲ್ಲಿ ಸ್ತ್ರೀಯರಿಗೂ ಪುರುಷನಿಗೂ ಮೌಲ್ಯವನ್ನು ಹೀಗೆ ಗೊತ್ತುಮಾಡಿರುವರು. ಹೇಗೆಂದರೆ ಮೂವತ್ತೆರಡು ಲಕ್ಷಣಗಳಿಂದ ಕೂಡಿದ, ಕೆಲಸಮಾಡಲು ಶಕ್ತಳಾದ, ಒಳ್ಳೆಯ ಗುಣಗಳಿಂದಲೂ, ನಡತೆಯಿಂದಲೂ ಕೂಡಿದ ಸ್ತ್ರೀಗೆ ಒಂದು ಕೋಟಿ ಸುವರ್ಣನಾಣ್ಯವೇ ಬೆಲೆಯು. ಪುರುಷನಿಗೆ ಅರ್ಬುದ ಸಂಖ್ಯೆಯ ಸುವರ್ಣನಾಣ್ಯವೇ ಬೆಲೆಯು. (ಸ್ತ್ರೀಯ ೩೨ ಲಕ್ಷಣಗಳನ್ನು ವಿರಾಟಪರ್ವದಲ್ಲಿ ದ್ರೌಪದೀವರ್ಣನೆಯಲ್ಲಿಯೂ ಪುರುಷನ ಲಕ್ಷಣಗಳನ್ನು ಕಾಶೀಖಂಡದ ೧೧ನೆಯ ಅಧ್ಯಾಯದಲ್ಲಿಯೂ ನೋಡಬಹುದು.) ॥೧೧-೧೨-೧೩॥

ಇತ್ಯಾಕರ್ಣ್ಯ ವಚಸ್ತಸ್ಯ ಹರಿಶ್ಚಂದ್ರೋ ಮಹೀಪತಿಃ ।
ದುಃಖೇನ ಮಹತಾಽವಿಷ್ಟೋ ನ ಚೈನಂ ಕಿಂಚಿದಬ್ರವೀತ್ ॥೧೪॥

ತತಸ್ಸವಿಪ್ರೋ ನೃಪತೇಃ ಪುರತೋ ವಲ್ಕಲೋಪರಿ ।
ಧನಂ ನಿಧಾಯ ಕೇಶೇಷು ಧೃತ್ವಾ ರಾಜ್ಞೀ ಮಕರ್ಷಯತ್ ॥೧೫॥

॥ ರಾಜ್ಞ್ಯುವಾಚ ॥

ಮುಂಚಮುಂಚಾರ್ಯ ಮಾಂ ಸದ್ಯೋ ಯಾವತ್ಪಶ್ಯಾಮ್ಯಹಂ ಸುತಂ ।
ದುರ್ಲಭಂ ದರ್ಶನಂ ವಿಪ್ರ ಪುನರಸ್ಯ ಭವಿಷ್ಯತಿ ॥೧೬॥

ಪಶ್ಯೇಹ ಪುತ್ರ ಮಾಮೇವಂ ಮಾತರಂ ದಾಸ್ಯತಾಂ ಗತಾಂ ।
ಮಾಂ ಮಾಸ್ಪ್ರಾಕ್ಷೀ ರಾಜಪುತ್ರ ನ ಸ್ಪೃಶ್ಯಾಽಹಂ ತ್ವಯಾಽಧುನಾ ॥೧೭॥

ತತಸ್ಸ ಬಾಲಃ ಸಹಸಾ ದೃಷ್ಟ್ವಾ ಕೃಷ್ಟಾಂ ತು ಮಾತರಂ ।
ಸಮಭ್ಯಧಾವದಂಬೇತಿ ವದನ್ನಾಶ್ರುವಿಲೋಚನಃ ॥೧೮॥

ಹಸ್ತೇ ವಸ್ತ್ರಂ ಸಮಾಕರ್ಷ ನ್ಯಾಕಪಕ್ಷಧರಃ ಸ್ಖಲನ್ ।
ತಮಾಗತಂ ದ್ವಿಜಃ ಕ್ರೋಧಾತ್ ಬಾಲಮಭ್ಯಾಹನತ್ತದಾ ॥೧೯॥
ವದಂಸ್ತಥಾಽಪಿ ಸೋಽಂಬೇತಿ ನೈವ ಮುಂಚತಿ ಮಾತರಂ ।

---

ಹರಿಶ್ಚಂದ್ರರಾಜನು ಈ ಮಾತನ್ನು ಕೇಳಿ ಹೆಚ್ಚಾದ ದುಃಖದಿಂದ ಯಾವ ಮಾತನ್ನೂ ಹೇಳಲಿಲ್ಲ. ಆ ಮೇಲೆ ಆ ಬ್ರಾಹ್ಮಣನು ರಾಜನ ಮುಂದೆ ನಾರುಬಟ್ಟೆಯ ಮೇಲೆ ಹಣವನ್ನು ಇರಿಸಿ ರಾಣಿಯ ತಲೆಯ ಕೂದಲನ್ನು ಹಿಡಿದುಕೊಂಡು ಎಳೆದನು. ॥೧೪-೧೫॥

ಎಲೈ ಪೂಜ್ಯನಾದ ಬ್ರಾಹ್ಮಣನೇ, ಸ್ವಲ್ಪ ನನ್ನನ್ನು ಬಿಡು. ನನ್ನ ಮಗನನ್ನು ನೋಡುತ್ತೇನೆ. ಆಮೇಲೆ ಇವನನ್ನು ನೊಡಲು ಸಾಧ್ಯವಾಗುವುದಿಲ್ಲ. ಎಲೈ ಮಗನೇ, ದಾಸಿಯಾದ ನನ್ನನ್ನು ನೋಡು. ನನ್ನನ್ನು ಮುಟ್ಟಬೇಡ, ರಾಜಪುತ್ರನಾದ ನೀನು ದಾಸಿಯಾದ ನನ್ನನ್ನು ಮುಟ್ಟಬಾರದು.' ಎಂದು ರಾಣಿಯು ನುಡಿದಳು. ॥೧೬-೧೭॥

ಆ ಮೇಲೆ ಆ ಹುಡುಗನು ತಾಯಿಯ ಕಷ್ಟವನ್ನು ನೋಡಿ ಕಣ್ಣೀರು ಸುರಿಸುತ್ತಾ, ಅಮ್ಮಾ ಎಂದು ಓಡಿಬಂದು ಅವಳ ಬಟ್ಟೆಯನ್ನು ಹಿಡಿದು ಎಳೆಯುತ್ತಾ

|| ರಾಜ್ಞ್ಯುವಾಚ ||

ಪ್ರಸಾದಂ ಕುರು ಮೇ ನಾಥ ಕ್ರೀಣೀಷ್ವೇಮಂ ಹಿ ಬಾಲಕಂ ||೨೦||

ಕ್ರೀತಾಽಪಿ ನಾಹಂ ಭವಿತಾ ವಿನ್ನೈನಂ ಕಾರ್ಯಸಾಧಿಕಾ ।
ಇತ್ಥಂ ಮಮಾಲ್ಪ ಭಾಗ್ಯಾಯಾಃ ಪ್ರಸಾದಂ ಕುರು ಮೇ ಪ್ರಭೋ ||೨೧||

|| ಬ್ರಾಹ್ಮಣ ಉವಾಚ ||

ಗೃಹ್ಯತಾಂ ವಿತ್ತ ಮೇತತ್ತ್ವೇ ದೀಯತಾಂ ಮಮ ಬಾಲಕಃ ।
ಸ್ತ್ರೀಪುಂಸೋರ್ಧರ್ಮಶಾಸ್ತ್ರಜ್ಞೈಃ ಕೃತಮೇವ ಹಿ ವೇತನಂ ||೨೨||

ಶತಂ ಸಹಸ್ರಂ ಲಕ್ಷಂ ಚ ಕೋಟಿಮೌಲ್ಯಂ ತಥಾಪರೈಃ ।
ದ್ವಾತ್ರಿಂಶಲ್ಲಕ್ಷಣೋಪೇತಾ ದಕ್ಷಾ ಶೀಲಗುಣಾನ್ವಿತಾ ||೨೩||

---

ಎಡವಿ ಬೀಳುತ್ತಿದ್ದನು. ಹಾಗೆ ಬಂದು ಇನ್ನೂ ಎಳೆಯ ಮುಂಗುರುಳುಗಳಿಂದ ಕೂಡಿದ ಹುಡುಗನನ್ನು ಬ್ರಾಹ್ಮಣನು ಕೋಪದಿಂದ ಹೊಡೆದನು. ಹಾಗಾದರೂ ಆ ಹುಡುಗನು ಅಮ್ಮಾ ಎಂದು ಕೂಗುತ್ತ ತಾಯಿಯನ್ನು ಬಿಡಲಿಲ್ಲ. ||೧೮-೧೯||

ರಾಣಿಯು ' ಎಲೈ ಒಡೆಯನೇ, ದಯವಿಟ್ಟು ಈ ಹುಡುಗನನ್ನೂ ಕ್ರಯಕ್ಕೆ ತೆಗೆದುಕೋ, ನನ್ನನ್ನು ಕೊಂಡರೂ ಇವನಿಲ್ಲದೆ ಹೋದರೆ ದುಃಖದಿಂದ ನಾನು ಮಾಡುವ ನಿಮ್ಮ ಕೆಲಸವೆಲ್ಲ ಕೆಟ್ಟುಹೋಗುವುದು. ನಿರ್ಭಾಗ್ಯೆಯಾದ ನನ್ನ ಮೇಲೆ ದಯೆಯನ್ನು ತೋರಿಸಿ ಪ್ರಸನ್ನನಾಗು ' ಎಂದಳು. ||೨೦-೨೧||

ಬ್ರಾಹ್ಮಣನು, " ಇಗೋ ಈ ಹಣವನ್ನೂ ತೆಗೆದುಕೋ ಹುಡುಗನನ್ನೂ ಕೊಡು, ಧರ್ಮಶಾಸ್ತ್ರದಲ್ಲಿ ಸ್ತ್ರೀಪುರುಷರಿಗೆ ನೂರು, ಸಾವಿರ, ಲಕ್ಷ, ಕೋಟಿ ಮುಂತಾಗಿ ಮೌಲ್ಯವನ್ನು ಗೊತ್ತುಮಾಡಿರುತ್ತಾರೆ. ೩೨ ಲಕ್ಷಣಗಳಿಂದ ಕೂಡಿದ, ಕಾರ್ಯಸಾಮರ್ಥ್ಯವುಳ್ಳ ಒಳ್ಳೆಯ ನಡತೆ ಮತ್ತು ಗುಣಗಳಿಂದ ಕೂಡಿದ ಸ್ತ್ರೀಪುರುಷರಿಗೆ ಕೋಟಿ ಮತ್ತು ಅರ್ಬುದಸಂಖ್ಯೆಯ ಸುವರ್ಣನಾಣ್ಯಗಳ ಬೆಲೆಯು ಗೊತ್ತಾಗಿರುತ್ತದೆ." ಎಂದನು. ||೨೨-೨೩||

ಕೋಟಿಮೌಲ್ಯಂ ಸ್ತ್ರಿಯಃ ಪ್ರೋಕ್ತಂ ಪುರುಷಸ್ಯ ತಥಾಽರ್ಬುದಂ ।

|| ಸೂತ ಉವಾಚ ||

ತಥೈವ ತಸ್ಯ ತದ್ವಿತ್ತಂ ಪುರಃ ಕ್ಷಿಪ್ತಂ ಪಟೇ ಪುನಃ ॥೨೪॥

ಪ್ರಗೃಹ್ಯ ಬಾಲಕಂ ಮಾತ್ರಾ ಸಹೈಕಸ್ಥಮಬಂಧಯತ್ ।
ಪ್ರತಸ್ಥೇ ಸ ಗೃಹಂ ಕ್ಷಿಪ್ರಂ ತಯಾ ಸಹ ಮುದಾಽನ್ವಿತಃ ॥೨೫॥

ಪ್ರದಕ್ಷಿಣಂ ತು ಸಾ ಕೃತ್ವಾ ಜಾನುಭ್ಯಾಂ ಪ್ರಣತಾ ಸ್ಥಿತಾ ।
ಬಾಷ್ಪವತ್ಯಾಕುಲಾ ದೀನಾ ತ್ವಿದಂ ವಚನಮಬ್ರವೀತ್ ॥೨೬॥

ಯದಿ ದತ್ತಂ ಯದಿ ಹುತಂ ಬ್ರಾಹ್ಮಣಾಸ್ತರ್ಪಿತಾ ಯದಿ ।
ತೇನ ಪುಣ್ಯೇನ ಮೇ ಭರ್ತಾ ಹರಿಶ್ಚಂದ್ರೋಽಸ್ತು ವೈ ಪುನಃ ॥೨೭॥

ಪಾದಯೋಃ ಪತಿತಾಂ ದೃಷ್ಟ್ವಾ ಪ್ರಾಣೇಭ್ಯೋಽಪಿ ಗರೀಯಸೀಂ ।
ಹಾಹೇತಿ ಚ ವದನ್ ರಾಜಾ ವಿಲಲಾಪಾಕುಲೇಂದ್ರಿಯಃ ॥೨೮॥

ವಿಯುಕ್ತೇಯಂ ಕಥಂ ಜಾತಾ ಸತ್ಯಶೀಲಾ ಗುಣಾನ್ವಿತಾ ।
ವೃಕ್ಷಚ್ಛಾಯಾಪಿ ವೃಕ್ಷಂ ತಂ ನ ಜಹಾತಿ ಕದಾಚನ ॥೨೯॥

ಏವಂ ಭಾರ್ಯಾಂ ವದಿತ್ವಾಽಥ ಸುಸಂಬದ್ಧಂ ಪರಸ್ಪರಂ ।
ಪುತ್ರಂ ಚ ತಮುವಾಚೇದಂ ಮಾಂ ತ್ವಂ ಹಿತ್ವಾ ಕ್ವ ಯಾಸ್ಯಸಿ ॥೩೦॥

---

ಹಿಂದಿನಂತೆಯೇ ಬ್ರಾಹ್ಮಣನು ರಾಜನ ಮುಂದೆ ಬಟ್ಟೆಯ ಮೇಲೆ ಹಣವನ್ನು ಹಾಕಿ ಹುಡುಗನನ್ನು ತಾಯಿಯೊಡನೆ ಕಟ್ಟಿ ಬೇಗ ನಡೆಯಿರಿ ಎಂದು ಸಂತೋಷದಿಂದ ಮನೆಗೆ ಹೊರಟನು. ||೨೪-೨೫||

ರಾಣಿಯು ರಾಜನಿಗೆ ಪ್ರದಕ್ಷಿಣೆಯನ್ನು ಮಾಡಿ, ಮಂಡಿಯನ್ನೂರಿ, ನಮಸ್ಕರಿಸಿ ನಿಂತು, ಕಣ್ಣೀರು ಬಿಡುತ್ತ "ನನ್ನ ಗಂಡನು ದಾನಮಾಡಿ, ಯಜ್ಞವನ್ನು ಮಾಡಿ, ಬ್ರಾಹ್ಮಣರನ್ನು ಸಂತೋಷಪಡಿಸಿದ್ದರೆ, ಆ ಪುಣ್ಯದಿಂದ ಮತ್ತೆ ಮುಂದಿನ ಜನ್ಮದಲ್ಲೂ ಹರಿಶ್ಚಂದ್ರನೇ ನನಗೆ ಗಂಡನಾಗಲಿ!" ಎಂದಳು. ||೨೬-೨೭||

ಪಾದಕ್ಕೆ ನಮಸ್ಕಾರ ಮಾಡಿದ ಪ್ರಾಣಪ್ರಿಯಳನ್ನು ನೋಡಿ ರಾಜನು ದುಃಖದಿಂದ ಅಳುತ್ತ " ಮರದ ನೆರಳೂ ಮರವನ್ನು ಬಿಟ್ಟಿರುವುದಿಲ್ಲ. ಹೀಗಿರುವಲ್ಲಿ

ಕಾಂ ದಿಶಂ ಪ್ರತಿಯಾಸ್ಯಾಮಿ ಕೋ ಮೇ ದುಃಖಂ ನಿವಾರಯೇತ್ ।
ರಾಜ್ಯತ್ಯಾಗೇ ನ ಮೇ ದುಃಖಂ ವನವಾಸೇ ನ ಮೇ ದ್ವಿಜ ॥೩೦॥

ಯತ್ಪುತ್ರೇಣ ವಿಯೋಗೋ ಮ ಏವಮಾಹ ಸ ಭೂಪತಿಃ ।
ಸದ್ಭರ್ತೃಭೋಗ್ಯಾ ಹಿ ಸದಾ ಲೋಕೇ ಭಾರ್ಯಾ ಭವಂತಿ ಹಿ ॥೩೨॥

ಮಯಾ ತ್ಯಕ್ತಾಽಸಿ ಕಲ್ಯಾಣಿ ದುಃಖೇನ ವಿನಿಯೋಜಿತಾ ।
ಇಕ್ವಾಕುವಂಶಸಂಭೂತಂ ಸರ್ವರಾಜ್ಯ ಸುಖೋಚಿತಂ ॥೩೩॥

ಮಾಮೀದೃಶಂ ಪತಿಂ ಪ್ರಾಪ್ಯ ದಾಸೀಭಾವಂ ಗತಾ ಹ್ಯಸಿ ।
ಈದೃಶೇ ಮಜ್ಜಮಾನಂ ಮಾಂ ಸುಮಹಚ್ಛೋಕಸಾಗರೇ ॥೩೪॥

ಕೋ ಮಾ ಮುದ್ಧರತೇ ದೇವೀ ಪೌರಾಣಾಖ್ಯಾನ ವಿಸ್ತರೈಃ ।

---

ಸತ್ಯಾದಿಸದ್ಗುಣಗಳಿಂದ ಕೂಡಿದ ಈಕೆಯು ನನ್ನನ್ನು ಹೇಗೆ ಅಗಲಿದಳು ? ' ಎಂದು ಹೇಳಿ, ಮಗನನ್ನು ಕುರಿತು, ' ನೀನೂ ನನ್ನನ್ನು ಬಿಟ್ಟು ಎಲ್ಲಿ ಹೋಗುವೆ ? ' ಎಂದನು. ॥೩೦॥

ಎಲೈ ಬ್ರಾಹ್ಮಣನೇ, ರಾಜ್ಯವನ್ನು ಕಳೆದುಕೊಂಡರೂ, ವನವಾಸಪ್ರಾಪ್ತವಾದರೂ ನನಗೆ ಇಷ್ಟು ದುಃಖವಾಗಲಿಲ್ಲ. ಈ ಮಗನನ್ನು ಅಗಲಿ ನಾನು ಯಾವ ದಿಕ್ಕಿಗೆ ಹೋಗಲಿ ? ನನ್ನ ದುಃಖವನ್ನು ನಾಶಮಾಡುವವರಾರು ? ಎಂದನು. ॥೩೧॥

ಮತ್ತೆ ಹೆಂಡಿತಿಯನ್ನು ಕುರಿತು ' ಎಲೈ ದೇವಿಯೇ, ಹೆಂಡಿರಿಗೆ ಒಳ್ಳೆಯ ಗಂಡಂದಿರು ಇರಬೇಕು. ಮಂಗಳೆಯಾದ ನಿನ್ನನ್ನು ನಾನು ಬಿಟ್ಟು ದುಃಖಕ್ಕೆ ಗುರಿ ಮಾಡಿದೆನು. ಇಕ್ವ್ವಾಕುವಂಶದಲ್ಲಿ ಹುಟ್ಟಿ, ಸಮಸ್ತ ರಾಜ್ಯಸುಖವನ್ನು ಅನುಭವಿಸಲು ಯೋಗ್ಯನಾದ ಇಂತಹ ನನ್ನನ್ನು ಗಂಡನನ್ನಾಗಿ ಪಡೆದು ನೀನು ದಾಸಿಯಾದೆ. ಇಂತಹ ದುಃಖಸಮುದ್ರದಲ್ಲಿ ಮುಳುಗುತ್ತಿರುವ ನನ್ನನ್ನು, ನನ್ನಂತೆ ದುಃಖವನ್ನು ಹೊಂದಿದ ಹಿಂದಿನ ರಾಜರ ಕಥೆಯನ್ನು ಹೇಳಿ, ಯಾರು ಸಮಾಧಾನಪಡಿಸಿಯಾರು ? ' ಎಂದನು. ॥೩೨-೩೩-೩೪॥

|| ಸೂತ ಉವಾಚ ||

ಪಶ್ಯತಸ್ತಸ್ಯ ರಾಜರ್ಷೇಃ ಕಶಾಘಾತೈಸ್ಸುದಾರುಣೈಃ ||೩೫||

ಘಾತಯಿತ್ವಾ ತು ವಿಪ್ರೇಶೋ ನೇತುಂ ಸಮುಪಚಕ್ರಮೇ ।
ನೀಯಮಾನೌ ತು ತೌ ದೃಷ್ಟ್ವಾ ಭಾರ್ಯಾಪುತ್ರೌ ಸ ಪಾರ್ಥಿವಃ ||೩೬||

ವಿಲಲಾಪಾತಿ ದುಃಖಾರ್ತೋ ನಿಶ್ವಸ್ಯೋಷ್ಣಂ ಪುನಃಪುನಃ ।
ಯಾಂ ನ ವಾಯುರ್ನ ವಾದಿತ್ಯೋ ನ ಚಂದ್ರೋ ನ ಪೃಥಗ್ಜನಾಃ||೩೭||

ದೃಷ್ಟವಂತಃ ಪುರಾ ಪತ್ನೀಂ ಸೇಯಂ ದಾಸೀತ್ವಮಾಗತಾ ।
ಸೂರ್ಯವಂಶಪ್ರಸೂತೋಽಯಂ ಸುಕುಮಾರ ಕರಾಂಗುಲಿಃ ||೩೮||

ಸಂಪ್ರಾಪ್ತೋ ವಿಕ್ರಯಂ ಬಾಲೋ ಧಿಙ್ಮಾಮಸ್ತು ಸುದುರ್ಮತಿಂ ।
ಹಾಪ್ರಿಯೇ ಹಾ ಶಿಶೋ ವತ್ಸ ಮಮಾನಾರ್ಯಸ್ಯ ದುರ್ನಯಃ ||೩೯||
ದೈವಾಧೀನದಶಾಂ ಪ್ರಾಪ್ತೋ ನ ಮೃತೋಽಸ್ಮಿ ತಥಾಽಪಿ ಧಿಕ್ ।

---

ಸೂತನು ಹೇಳಿದನು—ಆ ರಾಜನು ನೊಡುತ್ತಿದ್ದ ಹಾಗೆಯೇ ಆ ಬ್ರಾಹ್ಮಣನು ರಾಜಪತ್ನಿಯನ್ನು ಬಲವಾಗಿ ಕೊರಡೆಯಿಂದ ಹೊಡೆದು ಎಳೆದುಕೊಂಡು ಹೋಗಲು ಪ್ರಯತ್ನಪಟ್ಟನು. ||೩೫||

ಹೆಂಡಿತಿ ಮಕ್ಕಳಿಬ್ಬರನ್ನೂ ಕರೆದುಕೊಂಡು ಹೋಗುತ್ತಿರುವುದನ್ನು ನೋಡಿ ರಾಜನು ಮತ್ತೆ ಮತ್ತೆ ಬಿಸಿಯಾಗಿ ಉಸಿಗುಬಿಡುತ್ತ ದುಃಖದಿಂದ ಕೂಡಿ ಯಾವ ರಾಣಿಯನ್ನು, ವಾಯುವಾಗಲಿ, ಸೂರ್ಯನಾಗಲಿ, ಚಂದ್ರನಾಗಲಿ, ಮತ್ತೆ ಬೇರೆ ಜನರಾಗಲಿ, ಹಿಂದೆ ನೋಡಲಿಲ್ಲವೋ, ಅಂತಹವಳು ಈಗ ದಾಸಿಯಾದಳು! ಸೂರ್ಯವಂಶದಲ್ಲಿ ಹುಟ್ಟಿದ ಸುಕುಮಾರನಾದ ಈ ಬಾಲಕನನ್ನು ಮಾರಬೇಕಾಯ್ತು. ದುರ್ಬುದ್ಧಿಯಾದ ನನ್ನನ್ನು ನಿಂದಿಸಬೇಕು. ಹಾ ಪ್ರಿಯಪತ್ನಿಯೇ, ಹಾ, ಮಗನೇ, ಇದು ಅಯೋಗ್ಯನಾದ ನನ್ನ ಅನೀತಿಯ ಫಲವು. ನಾನಿನ್ನೂ ಸಾಯಲಿಲ್ಲವಲ್ಲ. ನನ್ನ ಜೀವನವನ್ನು ನಿಂದಿಸಬೇಕು. ||೩೬-೩೭-೩೮-೩೯||

॥ ವ್ಯಾಸ ಉವಾಚ ॥

ಏವಂ ವಿಲಪತೋ ರಾಜ್ಞೋಽಗ್ರೇ ವಿಪ್ರೋಽಂತರಧೀಯತ ॥೪೦॥

ವೃಕ್ಷಗೇಹಾದಿಭಿಸ್ತುಂಗೈಸ್ತಾವಾದಾಯ ತ್ವರಾಽನ್ವಿತಃ ।
ಅತ್ರಾಂತರೇ ಮುನಿಶ್ರೇಷ್ಠಸ್ತ್ವಾಜಗಾಮ ಮಹಾತಪಾಃ ॥೪೧॥

ಸಶಿಷ್ಯಃ ಕೌಶಿಕೇಂದ್ರೋಽಸೌ ನಿಷ್ಠುರಃ ಕ್ರೂರದರ್ಶನಃ ।

॥ ವಿಶ್ವಾಮಿತ್ರ ಉವಾಚ ॥

ಯಾ ತ್ವಯೋಕ್ತಾ ಪುರಾ ರಾಜನ್ರಾಜಸೂಯಸ್ಯ ದಕ್ಷಿಣಾ ॥೪೨॥

ತಾಂ ವದಸ್ವ ಮಹಾಬಾಹೋ ಯದಿ ಸತ್ಯಂ ಪುರಸ್ಕೃತಂ ।
ನಮಸ್ಕರೋಮಿ ರಾಜರ್ಷೇ ಗೃಹಾಣೇಮಾಂ ಸ್ವದಕ್ಷಿಣಾಂ ॥೪೩॥
ರಾಜಸೂಯಸ್ಯ ಯಾಗಸ್ಯ ಯಾ ಮಯೋಕ್ತಾ ಪುರಾಽನಘ ।

---

ವ್ಯಾಸಮುನಿಯು ಹೇಳಿದನು—ಹೀಗೆ ರಾಜನು ದುಃಖಪಡುತ್ತಾ ನೋಡುತ್ತಿದ್ದ ಹಾಗೆಯೇ ಎತ್ತರವಾದ ಮನೆ ಮತ್ತು ಮರಗಳಿಂದ ಕೂಡಿದ ಆ ಪಟ್ಟಣದೊಳಗೆ ಆ ಬ್ರಾಹ್ಮಣನು ಅವರಿಬ್ಬರನ್ನೂ ಕರೆದುಕೊಂಡು ಕಾಣದಂತೆ ಹೊರಟುಹೋದನು. ಈ ಸಮಯಕ್ಕೆ ಸರಿಯಾಗಿ ಮಹಾತಪಸ್ವಿಯಾದ ವಿಶ್ವಾಮಿತ್ರನು ತನ್ನ ಶಿಷ್ಯರೊಡನೆ ಬಂದು ರಾಜನಿಗೆ ಕಠಿನನಾಗಿಯೂ ಭಯಂಕರನಾಗಿಯೂ ಕಾಣಿಸಿಕೊಂಡನು. ॥೪೧॥

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ನೀನು ಹಿಂದೆ ರಾಜಸೂಯಯಜ್ಞದ ದಕ್ಷಿಣೆಯನ್ನು ಕೊಡುತ್ತೇನೆಂದು ಹೇಳಿದೆಯಷ್ಟೆ. ನಿನ್ನ ಮಾತು ನಿಜವಾಗಬೇಕಾದರೆ ಅದನ್ನು ಕೊಡು. ॥೪೨॥

ಹರಿಶ್ಚಂದ್ರನು ಹೇಳಿದನು—ಓ ರಾಜರ್ಷಿಯೇ, ನಾನು ಹಿಂದೆ ವಾಗ್ದಾನಮಾಡಿ ಹೇಳಿದ್ದ ರಾಜಸೂಯಯಾಗದ ನಿನ್ನ ದಕ್ಷಿಣೆಯನ್ನು ತೆಗೆದುಕೊ, ನಿನಗೆ ನಮಸ್ಕಾರಮಾಡುತ್ತೇನೆ. ॥೪೩॥

|| ವಿಶ್ವಾಮಿತ್ರ ಉವಾಚ ||

ಕುತೋ ಲಬ್ಧಮಿದಂದ್ರವ್ಯಂ ದಕ್ಷಿಣಾರ್ಥೇ ಪ್ರದೀಯತೇ ||೪೪||

ಏತದಾಚಕ್ಷ್ವ ರಾಜೇಂದ್ರ ಯಥಾದ್ರವ್ಯಂ ತ್ವಯಾಽರ್ಜಿತಂ ।

|| ರಾಜೋವಾಚ ||

ಕಿಮನೇನ ಮಹಾಭಾಗ ಕಥಿತೇನ ತವಾನಘ ||೪೫||

ಶೋಕಸ್ತು ವರ್ಧತೇ ವಿಪ್ರ ಶ್ರುತೇನಾನೇನ ಸುವ್ರತ ।

|| ಋಷಿರುವಾಚ ||

ಅಶಸ್ತಂ ನೈವ ಗೃಹ್ಣಾಮಿ ಶಸ್ತಮೇವ ಪ್ರಯಚ್ಛ ಮೇ ||೪೬||

ದ್ರವ್ಯಸ್ಯಾಗಮನಂ ರಾಜನ್ಕಥಯಸ್ವ ಯಥಾತಥಂ ।

|| ರಾಜೋವಾಚ ||

ಮಯಾ ದೇವೀ ತು ಸಾ ಭಾರ್ಯಾ ವಿಕ್ರೀತಾ ಕೋಟಿಸಮ್ಮಿತೈಃ ||೪೭||

---

ವಿಶ್ವಾಮಿತ್ರನು ಹೇಳಿದನು— ಎಲೈ ರಾಜಶ್ರೇಷ್ಠನೇ, ದಕ್ಷಿಣೆಗೋಸ್ಕರ ಕೊಡುವ ಈ ಹಣವು ನಿನಗೆ ಹೇಗೆ ಸಿಕ್ಕಿತು ? ಹೇಗೆ ನೀನು ಇದನ್ನು ಸಂಪಾದಿಸಿದೆ ? ಅದನ್ನು ಹೇಳು. ||೪೪||

ರಾಜನು ಹೇಳಿದನು—ಓ ಮಹಾತ್ಮನೇ, ಅದನ್ನು ಹೇಳುವುದರಿಂದ ನಿನಗೇನು ಪ್ರಯೋಜನ ? ಅದನ್ನು ಕೇಳಿದರೆ, ನನ್ನ ದುಃಖವು ಹೆಚ್ಚುವುದು. ಪರರ ದುಃಖವನ್ನು ಹೆಚ್ಚಿಸುವುದು ಒಳ್ಳೆಯ ವ್ರತವನ್ನಾಚರಿಸುವ ನಿನಗೆ ತಕ್ಕುದಲ್ಲವಲ್ಲವೇ ? ||೪೫||

ಋಷಿಯು ಹೇಳಿದನು—ಅಯೋಗ್ಯವಾದ ಧನವನ್ನು ನಾನು ತೆಗೆದುಕೊಳ್ಳುವುದಿಲ್ಲ. ಯೋಗ್ಯವಾದುದನ್ನೇ ನನಗೆ ಕೊಡು. ಆದುದರಿಂದ ಈ ಹಣವು ಬಂದ ಬಗೆಯನ್ನು ನಿಜವಾಗಿ ಹೇಳು. ||೪೬||

ರಾಜನು ಹೇಳಿದನು—ನಾನು ಆ ನನ್ನ ಪತ್ನಿಯನ್ನು ಒಂದು ಕೋಟಿ ಸುವರ್ಣನಾಣ್ಯಕ್ಕೂ, ರೋಹಿತನೆಂಬ ಮಗನನ್ನು ಒಂದು ಅರ್ಬುದ ಚಿನ್ನದ

ನಿಷ್ಕ್ರೈಃ ಪುತ್ರೋ ರೋಹಿತಾಖ್ಯೋ ವಿಕ್ರೀತೋಽರ್ಬುದಸಂಖ್ಯಯಾ ।
ವಿಪ್ರೈಕಾದಶಕೋಟ್ಯ(ಟೀ)ಸ್ತ್ವಂ ಸುವರ್ಣಸ್ಯ ಗೃಹಾಣ ಮೇ ॥೪೮॥

॥ ಸೂತ ಉವಾಚ ॥

ತದ್ವಿತ್ತಂ ಸ್ವಲ್ಪಮಾಲಕ್ಷ್ಯ ದಾರವಿಕ್ರಯಸಂಭವಂ ।
ಶೋಕಾಭಿಭೂತಂ ರಾಜಾನಂ ಕುಪಿತಃ ಕೌಶಿಕೋಽಬ್ರವೀತ್ ॥೪೯॥

॥ ಋಷಿರುವಾಚ ॥

ರಾಜಸೂಯಸ್ಯ ಯಜ್ಞಸ್ಯ ನೈಷಾ ಭವತಿ ದಕ್ಷಿಣಾ ।
ಅನ್ಯದುತ್ಪಾದಯ ಕ್ಷಿಪ್ರಂ ಸಂಪೂರ್ಣಾ ಯೇನ ಸಾ ಭವೇತ್ ॥೫೦॥

ಕ್ಷತ್ರಬಂಧೋ ಮಮೇಮಾಂ ತ್ವಂ ಸದೃಶೀಂ ಯದಿ ದಕ್ಷಿಣಾಂ ।
ಮನ್ಯಸೇ ತರ್ಹಿ ತತ್ಕ್ಷಿಪ್ರಂ ಪಶ್ಯ ತ್ವಂ ಮೇ ಪರಂ ಬಲಂ ॥೫೧॥

ತಪಸೋಽಸ್ಯ ಸುತಪ್ತಸ್ಯ ಬ್ರಾಹ್ಮಣ್ಯಸ್ಯಾಮಲಸ್ಯ ಚ ।
ಮತ್ಪ್ರಭಾವಸ್ಯ ಚೋಗ್ರಸ್ಯ ಶುದ್ಧಸ್ಯಾಧ್ಯಯನಸ್ಯ ಚ ॥೫೨॥

---

ನಾಣ್ಯಕ್ಕೂ ಮಾರಿದೆನು. ಈ ಹನ್ನೊಂದುಕೋಟಿ ಚಿನ್ನದನಾಣ್ಯವನ್ನು ನೀನು ತೆಗೆದುಕೋ. ॥೪೭-೪೮॥

ಋಷಿಯು ಹೇಳಿದನು—ರಾಜಸೂಯಯಜ್ಞಕ್ಕೆ ಇದು ತಕ್ಕುದಾದ ದಕ್ಷಿಣೆಯಲ್ಲ. ನಾನು ಕೇಳಿದಷ್ಟಕ್ಕೆ ಜಿರ್ತಿಯಾಗಿ ಸಂಪೂರ್ಣವಾದ ದಕ್ಷಿಣೆಯನ್ನು ಬೇಗನೆ ಸಂಪಾದಿಸಿಕೊಡು. ಎಲೈ ದುಷ್ಟಕ್ಷತ್ರಿಯನೇ, ನನ್ನ ತಪಸ್ಸು ವೇದಾಧ್ಯಯನ, ಬ್ರಾಹ್ಮಣ್ಯ, ಮಹಿಮೆ, ಇವುಗಳಿಗೆ ಈ ದಕ್ಷಿಣೆಯು ಸಮವೆಂದು ತಿಳಿದಯೋ ? ಹಾಗೆ ನೀನು ತಿಳಿದಿದ್ದರೆ ನನ್ನ ಸಾಮರ್ಥ್ಯವನ್ನೂ ತೋರಿಸುವೆನು, ನೋಡು ! (ದರಿದ್ರನು ಮಾಡಿದ ಯಜ್ಞದಕ್ಷಿಣೆಗೆ ಸಮವಾದ ದಕ್ಷಿಣೆಯನ್ನು ನಾನು ಮುಟ್ಟುವುದಿಲ್ಲ. ಮಹಾರಾಜನ ಯಜ್ಞಕ್ಕೆ ಮತ್ತು ನನ್ನ ಯೋಗ್ಯತೆಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕೆಂದು ವಿಶ್ವಾಮಿತ್ರನ ಅಭಿಪ್ರಾಯವು.) ॥೪೯-೫೦-೫೧-೫೨॥

|| ರಾಜೋವಾಚ ||

ಅನ್ಯದ್ದಾಸ್ಯಾಮಿ ಭಗವನ್ಕಾಲಃ ಕಶ್ಚಿತ್ಪ್ರತೀಕ್ಷ್ಯತಾಂ ।
ಅಧುನೈವಾಸ್ತಿ ವಿಕ್ರೀತಾ ಪತ್ನೀಪುತ್ರಶ್ಚ ಬಾಲಕಃ ॥೫೩॥

|| ವಿಶಾಮಿತ್ರ ಉವಾಚ ||

ಚತುರ್ಭಾಗಃಸ್ಥಿತೋಽಯೋಽಯಂ ದಿವಸಸ್ಯ ನರಾಧಿಪ ।
ಏಷ ಏವ ಪ್ರತೀಕ್ಷ್ಯೋ ಮೇ ವಕ್ತವ್ಯಂ ನೋತ್ತರಂ ತ್ವಯಾ ॥೫೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ದ್ವಾವಿಂಶೋಽಧ್ಯಾಯಃ

---

ರಾಜನು ಹೇಳಿದನು—ಓ ಮಹಾತ್ಮನೇ, ಈಗ ತಾನೇ ಪತ್ನೀಪುತ್ರರನ್ನು ಮಾರಿ ಬಂದ ಹಣವನ್ನು ಕೊಟ್ಟಿರುವೆನು. ದಕ್ಷಿಣೆಯ ಬಹುಭಾಗವು ತೀರಿದೆ. ಇನ್ನು ಸ್ವಲ್ಪಕಾಲ ನಿರೀಕ್ಷಿಸಿದರೆ ಮಿಕ್ಕ ದಕ್ಷಿಣೆಯನ್ನೂ ಕೊಡುವೆನು. ||೫೩||

ವಿಶ್ವಾಮಿತ್ರನು ಹೇಳಿದನು—ಎಲೈ ರಾಜನೇ, ಹಗಲಿನ ಒಂದು ಯಾಮವು ಮಾತ್ರ ಮಿಕ್ಕಿದೆ. ಅಲ್ಲಿಯವರೆಗೆ ನಾನು ನಿರೀಕ್ಷಿಸುವೆನು. ಅಷ್ಟರೊಳಗೆ ಬೇರೆ ಉತ್ತರವನ್ನು ಹೇಳದೆ ದಕ್ಷಿಣೆಯನ್ನೆಲ್ಲವನ್ನೂ ಕೊಟ್ಟುಬಿಡಬೇಕು. ||೫೪||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಮೇವ ಮುಕ್ತ್ವಾ ರಾಜಾನಂ ನಿರ್ಘೃಣಂ ನಿಷ್ಠುರಂ ವಚಃ ।**
**ತದಾದಾಯ ಧನಂ ಪೂರ್ಣಂ ಕುಪಿತಃ ಕೌಶಿಕೋ ಯಯೌ ॥೧॥**

**ವಿಶ್ವಾಮಿತ್ರೇ ಗತೇ ರಾಜಾ ತತಃ ಶೋಕಮುಪಾಗತಃ ।**
**ಶ್ವಾಸೋಚ್ಛ್ವಾಸಂ ಮುಹುಃ ಕೃತ್ವಾ ಪ್ರೋವಾಚೋಚ್ಚೈರಧೋಮುಖಃ॥೨॥**

**ವಿತ್ತಕ್ರೀತೇನ ಯಸ್ಯಾರ್ತಿರ್ಮಯಾ ಪ್ರೇತೇನ ಗಚ್ಛತಿ ।**
**ಸ ಬ್ರವೀತು ತ್ವರಾಯುಕ್ತೋ ಯಾಮೋ ತಿಷ್ಠತಿ ಭಾಸ್ಕರಃ ॥೩॥**

---

ವ್ಯಾಸನು ಹೇಳಿದನು—ವಿಶ್ವಾಮಿತ್ರನು ಹರಿಶ್ಚಂದ್ರನನ್ನು ಕುರಿತು ಹೀಗೆ ದಯಾಹೀನನಾಗಿ ಕಠಿಣವಾದ ಮಾತುಗಳನ್ನಾಡಿ ಅಲ್ಲಿದ್ದ ಹಣವನ್ನೆಲ್ಲವನ್ನೂ ತೆಗೆದುಕೊಂಡು ಕೋಪದ ನಟನೆಯಿಂದ ಹೊರಟುಹೋದನು. ||೧||

ವಿಶ್ವಾಮಿತ್ರನು ಹೊರಟುಹೋದ ಮೇಲೆ ರಾಜನು ದುಃಖವನ್ನು ಹೊಂದಿ ಬಾರಿಬಾರಿಗೆ ನಿಟ್ಟುಸಿರನ್ನು ಬಿಟ್ಟು ಮುಖವನ್ನು ತಗ್ಗಿಸಿಕೊಂಡು, ಗಟ್ಟಿಯಾಗಿ ಹೀಗೆ ಸಾರಿ ಹೇಳಿದನು. ||೨||

"ಶವರೂಪನಾದ ನನ್ನನ್ನು ಹಣವನ್ನು ಕೊಟ್ಟು ಕೊಂಡುಕೊಳ್ಳುವುದರಿಂದ ಯಾವನ ತೊಂದರೆಯು ನಾಶವಾಗುವುದೊ, ಅಂತಹನು ಈ ಹಗಲಿನ ಕೊನೆಯ ಯಾಮವು ಕಳೆಯುವುದರೊಳಗಾಗಿ ಬೇಗನೆ ನನ್ನ ಮೌಲ್ಯವನ್ನು ಹೇಳಲಿ!" ಎಂದನು. ||೩||

ಅಥಾ ಜಗಾಮ ತ್ವರಿತೋ ಧರ್ಮಶ್ಚಾಂಡಾಲರೂಪಧೃಕ್ ।
ದುರ್ಗಂಧೋಽಪಿ(ವಿ) ಕೃತೋರಸ್ಕಃ ಶ್ಮಶ್ರುಲೋ ದಂತುರೋಽಘೃಣೀ ॥೪॥

ಕೃಷ್ಣೋ ಲಂಬೋದರಸ್ನಿಗ್ಧಃ ಕರಾಲಃ ಪುರುಷಾಧಮಃ ।
ಹಸ್ತಜರ್ಜರಯಷ್ಟಿಶ್ಚ ಶವಮಾಲ್ಯೈರಲಂಕೃತಃ ॥೫॥

॥ ಚಂಡಾಲ ಉವಾಚ ॥

ಅಹಂ ಗೃಹ್ಣಾಮಿ ದಾಸತ್ವೇ ಭೃತ್ಯಾರ್ಥಂ ಸುಮಹಾನ್ಮಮ ।
ಕ್ಷಿಪ್ರಮಾಚಕ್ಷ್ವ ಮೌಲ್ಯಂ ಕಿಮೇತತ್ತೇ ಸಂಪ್ರದೀಯತೇ ॥೬॥

॥ ವ್ಯಾಸ ಉವಾಚ ॥

ತಂ ತಾದೃಶಮಥಾಲಕ್ಷ್ಯ ಕ್ರೂರದೃಷ್ಟಿಂ ಸುನಿರ್ಘೃಣಂ ।
ವದಂತಮತಿದುಶ್ಶೀಲಂ ಕಸ್ತ್ವಮಿತ್ಯಾಹ ಪಾರ್ಥಿವಃ ॥೭॥

---

ಆ ಮೇಲೆ ಯಮಧರ್ಮರಾಜನು ಚಂಡಾಲರೂಪದಿಂದ ಅಲ್ಲಿಗೆ ಬಂದನು. ಅವನು ದಯಾಹೀನನಾಗಿಯೂ ಕೆಟ್ಟ ವಾಸನೆಯಿಂದ ಕೂಡಿ, ವಿಕಾರವೂ ಕ್ರೂರವೂ ಆದ, ಕಪ್ಪು ಬಣ್ಣದ ಕೂದಲುಗಳಿಂದ ತುಂಬಿದ ಗಡ್ಡ ಮೀಸೆಗಳೂ, ಹೆಣದ ಮೇಲಿನ ಹೂವಿನ ಅಲಂಕಾರವೂ ಉಳ್ಳ, ನೀಚನಂತೆ ಕಾಣುತ್ತಿದ್ದನು. ಮತ್ತು ಅವನು ದೊಡ್ಡ ಹೊಟ್ಟೆಯ ಶರೀರವನ್ನು ಧರಿಸಿ, ಮುಪ್ಪಿನಿಂದ ಜೀರ್ಣವಾಗಿದ್ದ ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಬೇಗನೆ ಬಂದನು. ॥೪-೫॥

ಚಂಡಾಲನು ಹೇಳಿದನು—ನಾನು ನಿನ್ನನ್ನು ಕೊಂಡುಕೊಳ್ಳುತ್ತೇನೆ. ನನಗೊಬ್ಬ ಆಳು ಅವಶ್ಯಕವಾಗಿ ಬೇಕು. ಬೇಗ ನಿನ್ನ ಬೆಲೆಯನ್ನು ಹೇಳು. ಅದನ್ನು ನಿನಗೆ ಕೊಡುತ್ತೇನೆ.' ಎಂದನು. ॥೬॥

ವ್ಯಾಸನು ಹೇಳಿದನು—ಆ ರಾಜನು, ದಯಾಹೀನನೂ, ಕ್ರೂರವಾದ ನೋಟವುಳ್ಳವನೂ, ಕೆಟ್ಟ ನಡತೆಯುವನೂ ಆದ ಆ ಚಂಡಾಲನನ್ನು ನೋಡಿ, ನೀನಾರೆಂದು ಪ್ರಶ್ನೆಮಾಡಿದನು. ॥೭॥

|| ಚಂಡಾಲ ಉವಾಚ ||

**ಚಂಡಾಲೋಽಹ ಮಿಹ ಖ್ಯಾತಃ ಪ್ರವೀರೇತಿ ನೃಪೋತ್ತಮ ।**
**ಶಾಸನೇ ಸರ್ವದಾ ತಿಷ್ಠ ಮೃತಚೈಲಾಪಹಾರತಃ ॥೮॥**

**ಏವಮುಕ್ತಸ್ತದಾ ರಾಜಾ ವಚನಂ ಚೇದಮಬ್ರವೀತ್ ।**
**ಬ್ರಾಹ್ಮಣಃ ಕ್ಷತ್ರಿಯೋವಾಽಪಿ ಗೃಹ್ಣಾತ್ವಿತಿ ಮತಿರ್ಮಮ ॥೯॥**

**ಉತ್ತಮಸ್ಯೋತ್ತಮೋ ಧರ್ಮೋ ಮಧ್ಯಮಸ್ಯ ಚ ಮಧ್ಯಮಃ ।**
**ಅಧಮಸ್ಯಾಧಮ ಶ್ಚೈವ ಇತಿ ಪ್ರಾಹುರ್ಮನೀಷಿಣಃ ॥೧೦॥**

|| ಚಂಡಾಲ ಉವಾಚ ||

**ಏವಮೇವ ತ್ವಯಾ ಧರ್ಮಃ ಕಥಿತೋ ನೃಪಸತ್ತಮ ।**
**ಅವಿಚಾರ್ಯ ತ್ವಯಾ ರಾಜನ್ನಧುನೋಕ್ತಂ ಮಮಾಗ್ರತಃ ॥೧೧॥**

---

ಚಂಡಾಲನು ಹೇಳಿದನು—'ಎಲೈ ರಾಜನೇ, ನಾನು ಇಲ್ಲಿ ಪ್ರಸಿದ್ಧನಾದ ಪ್ರವೀರನೆಂಬ ಚಂಡಾಲನು, ಶವದ ಮೇಲಿನ ಬಟ್ಟೆಯನ್ನು ತೆಗೆದುಕೊಳ್ಳುತ್ತಾ ಇರುವುದು ನನ್ನ ವೃತ್ತಿಯಾಗಿದೆ. ನಾನು ನಿನ್ನನ್ನು ಕೊಳ್ಳಲು ಒಪ್ಪಿದರೆ ನೀನೂ ಯಾವಾಗಲೂ ನನ್ನ ಅಪ್ಪಣೆಯಂತೆ ಇರಬೇಕು.' ಎಂದನು. ||೮||

ರಾಜನು ಈ ಮಾತನ್ನು ಕೇಳಿ "ಬ್ರಾಹ್ಮಣಕ್ಷತ್ರಿಯರಲ್ಲಿ ಯಾರಾದರೂ ನನ್ನನ್ನು ಕೊಂಡುಕೊಳ್ಳಲಿ, ಎಂದು ನನ್ನ ಅಭಿಪ್ರಾಯವಿತ್ತು. ನಾಲ್ಕು ವರ್ಣದವರಲ್ಲಿ ಉತ್ತಮ ಮಧ್ಯಮಾಧಮರಿಗೆ ಆಯಾ ವರ್ಣಕ್ಕೆ ತಕ್ಕಂತೆ ಉತ್ತಮಮಧ್ಯಮಾಧಮರೇ ಅವರವರ ಧರ್ಮರಕ್ಷಣೆಗೆ ಸಹಾಯಕರು. ಉತ್ತಮರಲ್ಲಿ ಅಧಮರ ಧರ್ಮರಕ್ಷಣೆಯೂ ಆಗಿರುತ್ತದೆ. ಆದರೆ ಅಧಮರಲ್ಲಿ ಉತ್ತಮರ ಧರ್ಮರಕ್ಷಣೆಯಾಗಲಾರದು." ಎಂದು ಹೇಳಿದನು. ||೯-೧೦||

ಚಂಡಾಲನು ಹೇಳಿದನು—ಎಲೈ ರಾಜಶ್ರೇಷ್ಠನೇ, ನಿನ್ನ ಧರ್ಮನಿಯಮವನ್ನು ಎಂದರೆ ನನಗಿಂತಲೂ ವರ್ಣೋತ್ತಮನೇ ನನ್ನನ್ನು ಕೊಂಡುಕೊಳ್ಳಲಿ, ಎಂಬ ಅಂಶವನ್ನು ಮೊದಲು ಹೇಳಿದೆಯೋ? ಇಲ್ಲ! ವಿಚಾರಮಾಡದೆ ನನ್ನೆದುರಿಗೆ ಈಗ ತಾನೇ ಯಾವ ನಿಯಮವೂ ಇಲ್ಲದಂತೆ ಹೇಳಿದೆ! ವಿಚಾರಮಾಡಿ ಮಾತನಾಡಿದರೆ

ವಿಚಾರಯಿತ್ವಾ ಯೋ ಬ್ರೂತೇ ಸೋಽಭೀಷ್ಟಂ ಲಭತೇ ನರಃ ।
ಸಾಮಾನ್ಯಮೇವ ತತ್ಪ್ರೋಕ್ತಮವಿಚಾರ್ಯ ತ್ವಯಾಽನಘ ॥೧೨॥

ಯದಿ ಸತ್ಯಂ ಪ್ರಮಾಣಂ ತೇ ಗೃಹೀತೋಽಸಿ ನ ಸಂಶಯಃ ।

॥ ಹರಿಶ್ಚಂದ್ರ ಉವಾಚ ॥

ಅಸತ್ಯಾನ್ನರಕೇ ಗಚ್ಛೇತ್ಸದ್ಯಃ ಕ್ರೂರೇ ನರಾಧಮಃ ॥೧೩॥

ತತಶ್ಚಾಂಡಾಲತಾ ಸಾಧ್ವೀ ನ ವರಾ ಮೇ ಹ್ಯಸತ್ಯತಾ ।

॥ ವ್ಯಾಸ ಉವಾಚ ॥

ತಸ್ಯೈವಂ ವದತಃ ಪ್ರಾಪ್ತೋ ವಿಶ್ವಾಮಿತ್ರಸ್ತಪೋನಿಧಿಃ ॥೧೪॥

ಕ್ರೋಧಾಮರ್ಷ ವಿವೃತ್ತಾಕ್ಷಃ ಪ್ರಾಹ ಚೇದಂ ನರಾಧಿಪಂ ।
ಚಂಡಾಲೋಽಯಂ ಮನಸ್ಥಂ ತೇ ದಾತುಂ ವಿತ್ತಮುಪಸ್ಥಿತಃ ॥೧೫॥

---

ಮನುಷ್ಯನ ಇಷ್ಟಸಿದ್ಧಿಯಾಗುವುದು. ನೀನು ವಿಚಾರಮಾಡದೆ ಸಾಮಾನ್ಯವಾಗಿ ಯಾರುಬೇಕಾದರೂ ಕೊಂಡುಕೊಳ್ಳಬಹುದೆಂದು ಹೇಳಿರುವೆ. ನಿನ್ನ ಮಾತು ನಿಜವಾಗಬೇಕಾದರೆ ನಾನೂ ನಿನ್ನನ್ನು ಕೊಂಡುಕೊಳ್ಳಬಹುದೆಂದು ತೋರುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಎಂದನು. ॥೧೧-೧೨॥

ಹರಿಶ್ಚಂದ್ರನು ಹೇಳಿದನು—ಅಸತ್ಯವನ್ನಾಡಿದ ನೀಚನು ಈಗಲೇ ಕ್ರೂರವಾದ ನರಕಕ್ಕೆ ಹೋಗುವನು. ಅಸತ್ಯಕ್ಕಿಂತಲೂ ಚಂಡಾಲತ್ವವೇ ಉತ್ತಮವಾದುದು. ಅಸತ್ಯವು ನನಗೆ ಹೇಗೂ ಒಳ್ಳೆಯದಾಗಿ ಕಾಣುವುದಿಲ್ಲ! ಎಂದನು. ॥೧೩॥

ರಾಜನು ಹೀಗೆ ಹೇಳುತ್ತಿದ್ದಹಾಗೆಯೇ ತಪಸ್ವಿಯಾದ ವಿಶ್ವಾಮಿತ್ರನು ಬಂದು ಕೋಪದಿಂದ ಕ್ರೂರವಾಗಿ ನೋಡುತ್ತಾ ರಾಜನನ್ನು ಕುರಿತು ಹೀಗೆ ಹೇಳಿದನು. ಓ ರಾಜನೇ, ಈ ಚಂಡಾಲನು ನಿನ್ನ ಮನಸ್ಸಿನಲ್ಲಿರುವಷ್ಟು ಹಣವನ್ನು ಕೊಡುವುದಕ್ಕಾಗಿ ಬಂದಿರುತ್ತಾನೆ. ನನ್ನ ಎಲ್ಲ ಯಜ್ಞದಕ್ಷಿಣೆಯನ್ನೂ ಏತಕ್ಕೆ ಕೊಡಬಾರದು ? ಎಂದು ಹೇಳಿ ಒತ್ತಾಯ ಪಡಿಸಿದನು. ॥೧೪-೧೫॥

ಕಸ್ಮಾನ್ನ ದೀಯತೇ ಮಹ್ಯಮಶೇಷಾ ಯಜ್ಞದಕ್ಷಿಣಾ ।

|| ರಾಜೋವಾಚ ||

ಭಗವನ್ ಸೂರ್ಯವಂಶೋತ್ಥಮಾತ್ಮಾನಂ ವೇದ್ಮಿ ಕೌಶಿಕ ||೧೬||

ಕಥಂ ಚಂಡಾಲದಾಸತ್ವಂ ಗಮಿಷ್ಯೇ ವಿತ್ತಕಾಮತಃ ।

|| ವಿಶ್ವಾಮಿತ್ರ ಉವಾಚ ||

ಯದಿ ಚಾಂಡಾಲ ವಿತ್ತಂ ತ್ವಮಾತ್ಮವಿಕ್ರಯಜಂ ಮಮ ||೧೭||

ನ ಪ್ರದಾಸ್ಯಸಿ ಚೇತ್ತರ್ಹಿ ಶಪ್ಸ್ಯಾಮಿ ತ್ವಾ ಮಸಂಶಯಃ ।
ಚಾಂಡಾಲಾದಥವಾ ವಿಪ್ರಾದ್ದೇಹಿ ಮೇ ದಕ್ಷಿಣಾ ಧನಂ ||೧೮||

ವಿನಾ ಚಾಂಡಾಲಮಧುನಾ ನಾನ್ಯಃ ಕಶ್ಚಿದ್ಧನಪ್ರದಃ ।
ಧನೇನಾಹಂ ವಿನಾ ರಾಜನ್ನಯಾಸ್ಯಾಮಿ ನ ಸಂಶಯಃ ||೧೯||

ಇದಾನೀಮೇವ ಮೇ ವಿತ್ತಂ ನ ಪ್ರದಾಸ್ಯಸಿ ಚೇನ್ನೃಪ ।
ದಿನೇಽರ್ಧಘಟಿಕಾಶೇಷೇ ತತ್ತ್ವಾಂ ಶಾಪಾಗ್ನಿನಾ ದಹೇ ||೨೦||

---

ರಾಜನು ಹೇಳಿದನು—ಓ, ಮಹಾತ್ಮನಾದ ವಿಶ್ವಾಮಿತ್ರನೇ, ನಾನು ಸೂರ್ಯ ವಂಶದಲ್ಲಿ ಹುಟ್ಟಿದವನು ಎಂಬುದನ್ನು ತಿಳಿದಿರುವೆನು. ಆದುದರಿಂದ ಹಣದಾಸೆಗಾಗಿ ಚಂಡಾಲನಿಗೆ ಹೇಗೆ ದಾಸನಾಗಲಿ! ಎಂದನು. ||೧೬||

ವಿಶ್ವಾಮಿತ್ರನು ಹೇಳಿದನು—ರಾಜನೇ, ನಿನ್ನನ್ನು ಮಾರುವುದರಿಂದ ಬರುವ ಚಂಡಾಲನ ಹಣವನ್ನು ನನಗೆ ನೀನು ಕೊಡದೆ ಹೋದರೆ, ಖಂಡಿತವಾಗಿಯೂ ನಾನು ನಿನಗೆ ಶಾಪವನ್ನು ಕೊಡುವೆನು. ಚಂಡಾಲನಿಂದಲೋ, ಬ್ರಾಹ್ಮಣನಿಂದಲೋ, ನನಗೆ ಕೊಡಬೇಕಾಗಿರುವ ದಕ್ಷಿಣೆಯ ಹಣವನ್ನು ಕೊಡಿಸು! ಅಲ್ಲದೆ ಈಗ ಚಂಡಾಲನು ಹೊರತು ಮತ್ತೊಬ್ಬನು ಅಷ್ಟು ಹಣವನ್ನು ಕೊಡತಕ್ಕವನಿಲ್ಲವು. ||೧೭-೧೮||

'ಹಣವಿಲ್ಲದೆ ನಾನು ಈಗ ಹೋಗುವುದಿಲ್ಲವು. ಈ ವಿಷಯದಲ್ಲಿ ಸಂದೇಹ ವಿಲ್ಲವು. ಈಗ ಸೂರ್ಯಾಸ್ತಕ್ಕೆ ಇನ್ನರ್ಧಘಳಿಗೆ ಮಾತ್ರವಿದೆ. ಅಷ್ಟರೊಳಗೇ ನನ್ನ ದಕ್ಷಿಣಾದ್ರವ್ಯವನ್ನು ನೀನು ಕೊಡದಿದ್ದರೆ ನಿನ್ನನ್ನು ಶಾಪಾಗ್ನಿಯಿಂದ ಸುಟ್ಟುಬಿಡು ವೆನು!' ಎಂದನು. ||೧೯-೨೦||

॥ ವ್ಯಾಸ ಉವಾಚ ॥

**ಹರಿಶ್ಚಂದ್ರಸ್ತತೋ ರಾಜಾ ಮೃತವಚ್ಛ್ರುತಜೀವಿತಃ ।**
**ಪ್ರಸೀದೇತಿ ವದನ್ ಪಾದೌ ಋಷೇರ್ಜಗ್ರಾಹ ವಿಹ್ವಲಃ ॥೨೧॥**

॥ ಹರಿಶ್ಚಂದ್ರ ಉವಾಚ ॥

**ದಾಸೋಽಸ್ಮ್ಯಾರ್ತೋಽಸ್ಮಿ ದೀನೋಽಸ್ಮಿ ತ್ವದ್ಭಕ್ತಶ್ಚ ವಿಶೇಷತಃ ।**
**ಪ್ರಸಾದಂ ಕುರು ವಿಪ್ರರ್ಷೇ ಕಷ್ಟಶ್ಚಾಂಡಾಲಸಂಕರಃ ॥೨೨॥**

**ಭವೇಯಂ ವಿತ್ತಶೇಷೇಣ ತವ ಕರ್ಮಕರೋ ವಶಃ ।**
**ತವೈವ ಮುನಿಶಾರ್ದೂಲ ಪ್ರೇಷ್ಯಶ್ಚಿತ್ತಾನುವರ್ತಕಃ ॥೨೩॥**

॥ ವಿಶ್ವಾಮಿತ್ರ ಉವಾಚ ॥

**ಏವ ಮಸ್ತು ಮಹಾರಾಜ ಮಮೈವ ಭವ ಕಿಂಕರಃ ।**
**ಕಿಂತು ಮದ್ವಚನಂ ಕಾರ್ಯಂ ಸರ್ವದೈವ ನರಾಧಿಪ ॥೨೪॥**

---

ವ್ಯಾಸನು ಹೇಳಿದನು---ಆಮೇಲೆ ಹರಿಶ್ಚಂದ್ರನು ಉಸಿರು ಹತ್ತಿಕೊಂಡಿರುವ ಸತ್ತವನಂತೆ ಆಗಿ ಪ್ರಸನ್ನನಾಗೆಂದು ದುಃಖದಿಂದ ವಿಶ್ವಾಮಿತ್ರನ ಪಾದಗಳನ್ನು ಹಿಡಿದುಕೊಂಡನು. ॥೨೧॥

ಹರಿಶ್ಚಂದ್ರನು ಹೇಳಿದನು—ಓ ಬ್ರಹ್ಮರ್ಷಿಯೇ, ನಾನು ನಿನ್ನ ಭಕ್ತನಾಗಿಯೂ ಸೇವಕನಾಗಿಯೂ ದೀನನಾಗಿ ದುಃಖಿಯಾದರೂ ವಿನೀತನಾಗಿರುತ್ತೇನೆ. ಚಂಡಾಲನ ಸಹವಾಸವೂ ಸೇವೆಯೂ ಕಷ್ಟವಾದುದು. ನನ್ನ ಮೇಲೆ ಪ್ರಸನ್ನನಾಗು. ಮಿಕ್ಕ ದಕ್ಷಿಣೆಗಾಗಿ ನಾನು ನಿನ್ನ ಅಧೀನನಾಗಿ ನೀನು ಹೇಳಿದುದನ್ನು ಮಾಡುತ್ತಾ ನಿನಗೇ ದಾಸನಾಗಿರುವೆನು ! ಎಂದನು. ॥೨೨-೨೩॥

ವಿಶ್ವಾಮಿತ್ರನು ಹೇಳಿದನು—ಎಲೈ ಮಹಾರಾಜನೇ, ಹಾಗೆಯೇ ಆಗಲಿ, ನನ್ನ ಸೇವಕನೇ ಆಗು. ಆದರೆ ಯಾವಾಗಲೂ ನನ್ನ ಮಾತಿನಂತೆ ನಡೆಯಬೇಕು ! ಎಂದನು. ॥೨೪॥

|| ವ್ಯಾಸ ಉವಾಚ ||

**ಏವಮುಕ್ತೇಽಥ ವಚನೇ ರಾಜಾ ಹರ್ಷಸಮನ್ವಿತಃ ।**
**ಅಮನ್ಯತಪುನರ್ಜಾತ ಮಾತ್ಮಾನಂ ಪ್ರಾಹ ಕೌಶಿಕಂ ॥೨೫॥**

**ತವಾದೇಶಂ ಕರಿಷ್ಯಾಮಿ ಸದೈವಾಹಂ ನ ಸಂಶಯಃ ।**
**ಆದೇಶಯ ದ್ವಿಜಶ್ರೇಷ್ಠ ಕಿಂ ಕರೋಮಿ ತವಾನಘ ॥೨೬॥**

|| ವಿಶ್ವಾಮಿತ್ರ ಉವಾಚ ||

**ಚಂಡಾಲಾಗಚ್ಛ ಮದ್ದಾಸಮೌಲ್ಯಂ ಕಿಂ ಮೇ ಪ್ರಯಚ್ಛಸಿ ।**
**ಗೃಹಾಣ ದಾಸಂ ಮೌಲ್ಯೇನ ಮಯಾ ದತ್ತಂ ತವಾಧುನಾ ॥೨೭॥**

**ನಾಸ್ತಿ ದಾಸೇನ ತು ಕಾರ್ಯಂ ವಿತ್ತಾಶಾ ವರ್ತತೇ ಮಮ ।**

|| ವ್ಯಾಸ ಉವಾಚ ||

**ಏವಮುಕ್ತೇ ತದಾ ತೇನ ಶ್ವಪಚೋ ಹೃಷ್ಟಮಾನಸಃ ॥೨೮॥**

---

ವಿಶ್ವಾಮಿತ್ರನು ಹೀಗೆ ಹೇಳುತ್ತಲು, ರಾಜನು ಸಂತೋಷದಿಂದ ಹಿಂದಿನ ಕಷ್ಟದುಃಖಗಳನ್ನು ಮರೆತು ತಾನು ಮತ್ತೆ ಹುಟ್ಟಿದೆನೆಂದು ತಿಳಿದು, ಋಷಿಯನ್ನು ಕುರಿತು, ' ಓ ಬ್ರಾಹ್ಮಣಶ್ರೇಷ್ಠನೇ, ಯಾವಾಗಲೂ ನಿನ್ನ ಅಪ್ಪಣೆಯಂತೆ ನಡೆವೆನು, ಸಂದೇಹವಿಲ್ಲ. ಈಗಲೇ ಅಪ್ಪಣೆಮಾಡು. ಯಾವ ಕಾರ್ಯವನ್ನು ಮಾಡಲಿ ! ' ಎಂದನು. ||೨೫-೨೬||

ವಿಶ್ವಾಮಿತ್ರನು ಆ ಚಂಡಾಲನನ್ನು ಕುರಿತು ಹೇಳಿದನು—ಓ ಚಂಡಾಲನೇ, ಇಲ್ಲಿ ಬಾ, ನನ್ನ ಈ ಆಳಿಗೆ ಏನು ಬೆಲೆಯನ್ನು ಕೊಡುವೆ ? ನನಗೆ ಈ ಆಳಿನಿಂದ ಕೆಲಸವೇನೂ ಇಲ್ಲ. ಹಣದಾಸೆಯು ಮಾತ್ರ ಇರುತ್ತದೆ. ಆದುದರಿಂದ ನನ್ನ ಆಳನ್ನು ಈಗಲೇ ನಿನಗೆ ಮಾರುವೆನು ! ಎಂದನು. ||೨೭||

ಹೀಗೆ ಆ ವಿಶ್ವಾಮಿತ್ರಋಷಿಯು ಹೇಳುತ್ತಲು, ಆಗ ಆ ಚಂಡಾಲನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಹತ್ತಿರಕ್ಕೆ ಬೇಗನೆ ಬಂದು ವಿಶ್ವಾಮಿತ್ರನಿಗೆ ಹೇಳಿದನು. ||೨೮||

ಆಗತ್ಯ ಸನ್ನಿಧೌ ತೂರ್ಣಂ ವಿಶ್ವಾಮಿತ್ರಮುಭಾಷತ ।

|| ಚಾಂಡಾಲ ಉವಾಚ ||

ದಶಯೋಜನವಿಸ್ತೀರ್ಣೇ ಪ್ರಯಾಗಸ್ಯ ಚ ಮಂಡಲೇ ||೨೯||

ಭೂಮಿಂ ರತ್ನಮಯೀಂ ಕೃತ್ವಾ ದಾಸ್ಯೇ ತೇಽಹಂ ದ್ವಿಜೋತ್ತಮ ।
ಅಸ್ಯ ವಿಕ್ರಯಣೇನೇಯಮಾರ್ತಿಶ್ಚ ಪ್ರಹ(ಹೃ)ತಾ ತ್ವಯಾ ||೩೦||

ತತೋ ರತ್ನಸಹಸ್ರಾಣಿ ಸುವರ್ಣ ಮಣಿ ಮೌಕ್ತಿಕೈಃ ।
ಚಾಂಡಾಲೇನ ಪ್ರದತ್ತಾನಿ ಜಗ್ರಾಹ ದ್ವಿಜಸತ್ತಮಃ ||೩೧||

ಹರಿಶ್ಚಂದ್ರಸ್ತಥಾ ರಾಜಾ ನಿರ್ವಿಕಾರಮುಖೋಽಭವತ್ ।
ಅಮನ್ಯತ ತಥಾ ಧೈರ್ಯಾದ್ವಿಶ್ವಾಮಿತ್ರೋ ಹಿ ಮೇ ಪತಿಃ ||೩೨||

ತತ್ತದೇವ ಮಯಾ ಕಾರ್ಯಂ ಯದಯಂ ಕಾರಯಿಷ್ಯತಿ ।
ಅಥಾಂತರಿಕ್ಷೇ ಸಹಸಾ ವಾಗುವಾಚಾಽಶರೀರಿಣೀ ||೩೩

ಅನೃಣೋಽಸಿ ಮಹಾಭಾಗ ದತ್ತಾ ಸಾ ದಕ್ಷಿಣಾ ತ್ವಯಾ ।
ತತೋ ದಿವಃ ಪುಷ್ಪವೃಷ್ಟಿಃ ಪಪಾತ ನೃಪಮೂರ್ಧನಿ ||೩೪||

---

ಚಂಡಾಲನು ಹೇಳಿದನು— ಓ ಬ್ರಾಹ್ಮಣೋತ್ತಮನೇ, ಹತ್ತುಗಾವುದ ವಿಸ್ತಾರವಾದ ಈ ಪ್ರಯಾಗಕ್ಷೇತ್ರದ ಭೂಮಿಯಲ್ಲಿ ರತ್ನಗಳನ್ನು ತುಂಬುವಂತೆ ಹರಡಿ ಅವನ್ನೆಲ್ಲಾ ನಿನಗೆ ಕೊಡುತ್ತೇನೆ. ಈ ಕ್ರಯ (ವ್ಯಾಪಾರ) ದಿಂದ ನನಗುಂಟಾಗಿದ್ದ ನಿರಾಶೆಯ ದುಃಖವನ್ನು ನೀನು ನಾಶಮಾಡಿದೆ! ||೨೯-೩೦||

ಆ ಮೇಲೆ ವಿಶ್ವಾಮಿತ್ರನು ಚಂಡಾಲನು ಕೊಟ್ಟ ಅನೇಕ ರತ್ನಗಳನ್ನೂ, ಚಿನ್ನ, ಮುತ್ತು, ಮುಂತಾದುವುಗಳನ್ನೂ ತೆಗೆದುಕೊಂಡನು. ರಾಜನು ನಿರ್ವಿಕಾರವಾದ ಮುಖದಿಂದ ಕೂಡಿ, ತಾನು ವಿಶ್ವಾಮಿತ್ರನ ಆಳೆಂದೂ, ತಾನಾಗಿ ತನ್ನನ್ನು ಧರ್ಮಲೋಪಕರವಾದ ಚಂಡಾಲದಾಸ್ಯಕ್ಕೆ ಮಾರಿಕೊಳ್ಳಬೇಕಾದುದು ತಪ್ಪಿತೆಂದೂ ಧೈರ್ಯವಾಗಿ ತಿಳಿದು, ಆತನು ತನ್ನಿಂದ ಏನನ್ನು ಮಾಡಿಸುತ್ತಾನೋ ಅದನ್ನೆಲ್ಲಾ ತಾನು ಮಾಡಬೇಕೆಂದು ನಿಶ್ಚಯಿಸಿದನು. ||೩೧-೩೨||

ಆ ಮೇಲೆ ಆಕ್ಷಣದಲ್ಲಿಯೇ 'ಎಲೈ ಪುಣ್ಯಶಾಲಿಯಾದ ರಾಜನೇ, ದಕ್ಷಿಣೆಯನ್ನು ಕೊಟ್ಟು ನೀನು ಋಣಮುಕ್ತನಾದೆ!' ಎಂಬುದಾಗಿ ಆಕಾಶವಾಣಿಯು ಕೇಳಿಸಿತು. ದೇವಲೋಕದ ದೆಸೆಯಿಂದ ರಾಜನ ತಲೆಯ ಮೇಲೆ ಹೂಮಳೆಗರೆಯಿತು.

ಸಾಧುಸಾಧ್ವಿತಿ ತಂ ದೇವಾಃ ಪ್ರೋಚುಃ ಸೇಂದ್ರಾ ಮಹೌಜಸಃ ।
ಹರ್ಷೇಣ ಮಹತಾಽವಿಷ್ಟೋ ರಾಜಾ ಕೌಶಿಕ ಮಬ್ರವೀತ್ ॥೩೫॥

॥ ರಾಜೋವಾಚ ॥

ತ್ವಂ ಹಿ ಮಾತಾ ಪಿತಾ ಚೈವ ತ್ವಂ ಹಿ ಬಂಧುರ್ಮಹಾಮತೇ ।
ಯದರ್ಥಂ ಮೋಚಿತೋಽಹಂ ತೇ ಕ್ಷಣಾಚ್ಚೈವಾನೃಣೀ ಕೃತಃ॥೩೬॥

ಕಿಂ ಕರೋಮಿ ಮಹಾಬಾಹೋ ಶ್ರೇಯೋ ಮೇ ವಚನಂ ತವ ।
ಏವಮುಕ್ತೇತು ವಚನೇ ನೃಪಂ ಮುನಿರಭಾಷತ ॥೩೭॥

॥ ವಿಶ್ವಾಮಿತ್ರ ಉವಾಚ ॥

ಚಾಂಡಾಲವಚನಂ ಕಾರ್ಯಮದ್ಯಪ್ರಭೃತಿ ತೇ ನೃಪ ।
ಸ್ವಸ್ತಿ ತೇಽಸ್ತ್ವಿತಿ ತಂ ಪ್ರೋಚ್ಯ ತದಾದಾಯ ಧನಂ ಯಯೌ ॥೩೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ತ್ರಯೋವಿಂಶೋಽಧ್ಯಾಯಃ

---

ಇಂದ್ರನೇ ಮೊದಲಾದ ದೇವತೆಗಳು ಮಹಾತ್ಮನಾದ ರಾಜನನ್ನು ಒಳ್ಳೆಯ ಕೆಲಸವನ್ನು ಮಾಡಿದೆ ಎಂದು ಹೊಗಳಿದರು. ರಾಜನೂ ಸಂತೋಷದಿಂದ ವಿಶ್ವಾಮಿತ್ರನನ್ನು ಕುರಿತು ಮಾತನಾಡಿದನು. ||೩೩-೩೪-೩೫||

ದೊರೆಯು ಹೇಳಿದನು— ಮಹಾಬುದ್ಧಿಶಾಲಿಯಾದ ವಿಶ್ವಾಮಿತ್ರನೇ, ನೀನೇ ನನಗೆ ತಾಯಿ, ತಂದೆ, ಮತ್ತು ನಂಟನು. ಒಂದು ಕ್ಷಣದೊಳಗಾಗಿ ನನ್ನನ್ನು ಋಣ ಮುಕ್ತನನ್ನಾಗಿ ಮಾಡಿದೆ. ನಿನ್ನ ಮಾತೇ ನನಗೆ ಶ್ರೇಯಸ್ಸನ್ನುಂಟುಮಾಡುವುದು. ನಾನು ಏನನ್ನು ಮಾಡಲಿ? ಅಪ್ಪಣೆಮಾಡು, ಎನ್ನುತ್ತಲು ವಿಶ್ವಾಮಿತ್ರನು ರಾಜನನ್ನು ಕುರಿತು ಹೇಳಿದನು. ||೩೬-೩೭||

ವಿಶ್ವಾಮಿತ್ರನು ಹೇಳಿದನು— ಎಲೈ ರಾಜನೇ, ಇಲ್ಲಿಂದ ಮುಂದೆ ನೀನು ಚಂಡಾಲನ ಮಾತಿನಂತೆ ನಡೆಯಬೇಕು! ನಿನಗೆ ಮಂಗಳವಾಗಲಿ. ಎಂದು ಹೇಳಿ, ಆ ಹಣವನ್ನು ತೆಗೆದುಕೊಂಡು ವಿಶ್ವಾಮಿತ್ರನು ಹೊರಟುಹೋದನು. ||೩೮||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

॥ ಚತುರ್ವಿಂಶೋಽಧ್ಯಾಯಃ ॥

### ಇಪ್ಪತ್ತು ನಾಲ್ಕನೆಯ ಅಧ್ಯಾಯವು

॥ ಶೌನಕ ಉವಾಚ ॥

**ತತಃ ಕಿಮಕರೋದ್ರಾಜಾ ಚಾಂಡಾಲಸ್ಯ ಗೃಹೇ ಗತಃ ।**
**ತದ್ಬ್ರೂಹಿ ಸೂತವರ್ಯ ತ್ವಂ ಪೃಚ್ಛತಃ ಸತ್ವರಂ ಹಿ ಮೇ ॥೧॥**

॥ ಸೂತ ಉವಾಚ ॥

**ವಿಶ್ವಾಮಿತ್ರೇ ಗತೇ ವಿಪ್ರೇ ಶ್ವಪಚೋ ಹೃಷ್ಟಮಾನಸಃ ।**
**ವಿಶ್ವಾಮಿತ್ರಾಯ ತದ್ದ್ರವ್ಯಂ ದತ್ವಾ ಬಧ್ವಾ ನರೇಶ್ವರಂ ॥೨॥**

**ಅಸತ್ಯೋ ಯಾಸ್ಯಸೀತ್ಯುಕ್ತ್ವಾ ದಂಡೇನಾತಾಡಯತ್ತದಾ ।**
**ದಂಡಪ್ರಹಾರಸಂಭ್ರಾಂತಮತೀವ ವ್ಯಾಕುಲೇಂದ್ರಿಯಂ ॥೩॥**

**ಇಷ್ಟಬಂಧು ವಿಯೋಗಾರ್ತ ಮಾನೀಯ ನಿಜಪಕ್ಕಣೇ ।**
**ನಿಗಡೇ ಸ್ಥಾಪಯಿತ್ವಾ ತಂ ಸ್ವಯಂ ಸುಷ್ವಾಪ ವಿಜ್ವರಃ ॥೪॥**

---

ಶೌನಕನು ಹೇಳಿದನು—ಓ ಸೂತಶ್ರೇಷ್ಠನೇ, ಆಮೇಲೆ ದೊರೆಯು ಚಂಡಾಲನ ಮನೆಯನ್ನು ಪಡೆದು ಏನನ್ನು ಮಾಡಿದನು? ಇದೆಲ್ಲವನ್ನೂ ಕೇಳಬಯಸುತ್ತಿರುವ ನನಗೆ ಬೇಗನೆ ಹೇಳು. ॥೧॥

ಸೂತನು ಹೇಳಿದನು— ಹಣವನ್ನು ಕೊಟ್ಟಮೇಲೆ ವಿಶ್ವಾಮಿತ್ರನು ಹೊರಟು ಹೋಗುತ್ತಲು, ಚಂಡಾಲನು ಸಂತೋಷದಿಂದ ರಾಜನನ್ನು ಕಟ್ಟಿ ಅಸತ್ಯವಂತನಾಗುತ್ತೀಯಾ? ಎಂಬದಾಗಿ ದೊಣ್ಣೆಯಿಂದ ಹೊಡೆದನು. ಆ ಏಟನಿಂದ ಭ್ರಾಂತನಾದ,

ನಿಗಡಸ್ಥಸ್ತತೋ ರಾಜಾ ವಸಂಶ್ಚಾಂಡಾಲಪಕ್ಕಣೇ ।
ಅನ್ನಪಾನೇ ಪರಿತ್ಯಜ್ಯ ಸದಾ ವೈ ತದ ಶೋಚಯತ್ ॥೫॥

ತನ್ವೀ ದೀನ ಮುಖೀ ದೃಷ್ಟ್ವಾ ಬಾಲಂ ದೀನಮುಖಂ ಪುರಃ ।
ಮಾಂ ಸ್ಮರತ್ಯಸುಖಾವಿಷ್ಟಾ ಮೋಕ್ಷ್ಯಯಿಷ್ಯತಿ ನೌ ನೃಪಃ ॥೬॥

ಉಪಾತ್ತ ವಿತ್ತೋ ವಿಪ್ರಾಯ ದತ್ವಾ ವಿತ್ತಂ ಪ್ರತಿಶ್ರುತಂ ।
ರೋದಮಾನಂ ಸುತಂ ವೀಕ್ಷ್ಯ ಮಾಂ ಚ ಸಂಬೋಧಯಿಷ್ಯತಿ ॥೭॥

ತಾತಪಾರ್ಶ್ವಂ ವ್ರಜಾಮೀತಿ ರುದಂತಂ ಬಾಲಕಂ ಪುನಃ ।
ತಾತ ತಾತೇತಿ ಭಾಷಂತಂ ತಥಾ ಸಂಬೋಧಯಿಷ್ಯತಿ ॥೮॥

ನ ಸಾ ಮಾಂ ಮೃಗಶಾಬಾಕ್ಷೀ ವೇತ್ತಿ ಚಾಂಡಾಲತಾಂ ಗತಂ ।
ರಾಜ್ಯನಾಶಃ ಸುಹೃತ್ತ್ಯಾಗೋ ಭಾರ್ಯಾತನಯ ವಿಕ್ರಯಃ ॥೯॥

---

ಹೆಂಡಿತಿಮಕ್ಕಳನ್ನು ಬಿಟ್ಟು, ಹೆಚ್ಚಾಗಿ ದುಃಖಪಡುತ್ತಿದ್ದ ರಾಜನನ್ನು, ಅವನು ತನ್ನ ಮನೆಗೆ ಎಳೆದುಕೊಂಡು ಬಂದು ಸಂಕೋಲೆಯಲ್ಲಿ ಕಟ್ಟಿ ತಾನು ಸುಖವಾಗಿ ಮಲಗಿದನು. ||೨-೩-೪||

ಸಂಕೋಲೆಗೆ ಸಿಕ್ಕಿಕೊಂಡು, ಚಂಡಾಲನ ಮನೆಯಲ್ಲಿದ್ದ ಆ ರಾಜನು ಅನ್ನ ನೀರನ್ನು ಬಿಟ್ಟು ಯಾವಾಗಲೂ ಮುಂದೆ ಹೇಳುವಂತೆ ದುಃಖಪಡುತ್ತಿದ್ದನು. ||೫||

ಕೃಶಾಂಗಿಯಾದ, ದೈನ್ಯದಿಂದ ಕೂಡಿದ, ನನ್ನ ಹೆಂಡತಿಯು ದೀನನಾಗಿ ಬೆಪ್ಪುಹಿಡಿದ ಮುಖದಿಂದ ಕೂಡಿದ ಬಾಲಕನನ್ನು ನೋಡಿ ನನ್ನನ್ನು ಜ್ಞಾಪಿಸಿಕೊಂಡು, ರಾಜನು ಹಣವನ್ನು ಹೊಂದಿ ಬ್ರಾಹ್ಮಣನಿಗೆ ತಾನು ಹೇಳಿದ್ದಷ್ಟು ಹಣವನ್ನು ಕೊಟ್ಟು ನಮ್ಮಿಬ್ಬರನ್ನೂ ಬಿಡಿಸಿಕೊಳ್ಳುವನು. ಎಂದು ಮನಸ್ಸಿನಲ್ಲಿ ಯೋಚಿಸುತ್ತಾ ದುಃಖಿಸುವಳು. ಅಪ್ಪನ ಸಮೀಪಕ್ಕೆ ಹೋಗುತ್ತೇನೆಂದು ಹೇಳುತ್ತಾ ಅಳುತ್ತಿರುವ ಮಗನನ್ನು ನೋಡಿ ಪುನಃ ಪ್ರಾಯಶಃ ಅದೇ ಮಾತುಗಳಿಂದ ತಿಳಿಯ ಹೇಳುತ್ತಾ ಸಮಾಧಾನ ಮಾಡುವಳು. ||೬-೭-೮||

ಆ ಮೃಗದಂತೆ ಕಣ್ಣುಳ್ಳ ನನ್ನ ಪತ್ನಿಯು ಚಂಡಾಲದಾಸತ್ವವನ್ನು ಹೊಂದಿರುವ ಈ ನನ್ನನ್ನು ತಿಳಿಯಳು. ರಾಜ್ಯಾಧಿಕಾರವು ಕೈತಪ್ಪಿಹೋಯಿತು. ಸ್ನೇಹಿತರೂ ನಮ್ಮನ್ನು ಕೈಬಿಟ್ಟರು. ಹೆಂಡಿತಿಮಕ್ಕಳನ್ನೂ ಮಾರಿದೆನು. ಚಾಂಡಾಲದಾಸತ್ವವೂ

**ತತಶ್ಚಾಂಡಾಲತಾ ಚೇಯ ಮಹೋ ದುಃಖ ಪರಂಪರಾ ।**
**ಏವಂ ಸ ನಿವಸನ್ನಿತ್ಯಂ ಸ್ಮರಂಶ್ಚ ದಯಿತಾಂ ಸುತಂ ॥೧೦॥**

**ನಿನಾಯ ದಿವಸಾನ್ ರಾಜಾ ಚತುರೋ ವಿಧಿಪೀಡಿತಃ ।**
**ಅಥಾಹ್ನಿ ಪಂಚಮೇ ತೇನ ನಿಗಡಾನ್ಮೋಚಿತೋ ನೃಪಃ ॥೧೧॥**

**ಚಾಂಡಾಲೇನಾನುಶಿಷ್ಟಶ್ಚ ಮೃತಚೈಲಾಪಹಾರಣೇ ।**
**ಕ್ರುದ್ಧೇನ ಪರುಷೈರ್ವಾಕ್ಯೈರ್ನಿರ್ಭರ್ತ್ಸ್ಯ ಚ ಪುನಃ ಪುನಃ ॥೧೨॥**

**ಕಾಶ್ಯಾಶ್ಚ ದಕ್ಷಿಣೇ ಭಾಗೇ ಸ್ಮಶಾನಂ ವಿದ್ಯತೇ ಮಹತ್ ।**
**ತದ್ರಕ್ಷಸ್ವ ಯಥಾನ್ಯಾಯಂ ನ ತ್ಯಾಜ್ಯಂ ತತ್ತ್ವಯಾ ಕ್ವಚಿತ್ ॥೧೩॥**

**ಇಮಂ ಚ ಜರ್ಜರಂ ದಂಡಂ ಗೃಹೀತ್ವಾ ಯಾಹಿ ಮಾಚಿರಂ ।**
**ವೀರಬಾಹೋರಯಂ ದಂಡ ಇತಿ ಘೋಷಸ್ವ ಸರ್ವತಃ ॥೧೪॥**

॥ ಸೂತ ಉವಾಚ ॥

**ಕಸ್ಮಿಂಶ್ಚಿದಥ ಕಾಲೇ ತು ಮೃತ ಚೈಲಾಪಹಾರಕಃ ।**
**ಹರಿಶ್ಚಂದ್ರೋಽಭವದ್ರಾಜಾ ಸ್ಮಶಾನೇ ತದ್ವಶಾನುಗಃ ॥೧೫॥**

---

ಬಂದಿತು. ಈ ದುಃಖಗಳ ಪರಂಪರೆಯ ಸಾಲನ್ನು ಏನೆಂದು ಹೇಳಲಿ! ಎಂದು ರಾಜನು ಹೆಂಡಿತಿಯನ್ನೂ ಮಗನನ್ನೂ ನೆನೆಯುತ್ತಾ ದೈವವಶನಾಗಿ ನಾಲ್ಕು ದಿನಗಳನ್ನು ಕಳೆಯುತ್ತಿದ್ದನು. ॥೯-೧೦॥

ಐದನೆಯ ದಿನ ಆ ಚಂಡಾಲನು ರಾಜನ ಸಂಕೋಲೆಯನ್ನು ಬಿಚ್ಚಿ, ಕೋಪದಿಂದ ಮತ್ತೆ ಮತ್ತೆ ರಾಜನನ್ನು ಹೆದರಿಸುತ್ತಾ, ಅವನನ್ನು ಕುರಿತು, " ಕಾಶೀಪಟ್ಟಣದ ದಕ್ಷಿಣಭಾಗದಲ್ಲಿರುವ ದೊಡ್ಡ ಸ್ಮಶಾನದಲ್ಲಿ ಯಾವಾಗಲೂ ನ್ಯಾಯವನ್ನು ಬಿಡದೆ ಕಾಯ್ದುಕೊಂಡಿರಬೇಕು. ಸತ್ತವರ ಬಟ್ಟೆಗಳನ್ನು ತೆಗೆದುಕೊಳ್ಳುತ್ತಿರಬೇಕು. ಅಲ್ಲಿಂದ ಬಿಟ್ಟು ಹೋಗಬಾರದು. ಈ ನನ್ನ ದೊಣ್ಣೆಯನ್ನು ಹಿಡಿದುಕೊಂಡು ವೀರಬಾಹುವಿನ ದೊಣ್ಣೆ ಎಂದು ಎಲ್ಲ ಕಡೆಗಳಲ್ಲೂ ಕೂಗುತ್ತಾ ಬೇಗನಡೆ." ಎಂದನು. ॥೧೧-೧೨-೧೩-೧೪॥

ಸೂತನು ಹೇಳಿದನು-- ಸ್ವಲ್ಪಕಾಲದಲ್ಲೇ ಆ ಹರಿಶ್ಚಂದ್ರರಾಜನು ಶವದ

ಚಾಂಡಾಲೇನಾನುಶಿಷ್ಟಸ್ತು ಮೃತಚೈಲಾಪಹಾರಿಣಾ ।
ರಾಜಾ ತೇನ ಸಮಾದಿಷ್ಟೋ ಜಗಾಮ ಶವ ಮಂದಿರಂ ॥೧೬॥

ಪುರ್ಯಾಸ್ತು ದಕ್ಷಿಣೇ ದೇಶೇ ವಿದ್ಯಮಾನಂ ಭಯಾನಕಂ ।
ಶವಮಾಲ್ಯ ಸಮಾಕೀರ್ಣಂ ದುರ್ಗಂಧ ಬಹು ಧೂಮಕಂ ॥೧೭॥

ಸ್ಮಶಾನಂ ಘೋರಸನ್ನಾದಂ ಶಿವಾಶತ ಸಮಾಕುಲಂ ।
ಗೃಧ್ರಗೋಮಾಯುಸಂಕೀರ್ಣಂ ಶ್ವವೃಂದ ಪರಿವಾರಿತಂ ॥೧೮॥

ಅಸ್ಥಿಸಂಘಾತ ಸಂಕೀರ್ಣಂ ಮಹಾದುರ್ಗಂಧ ಸಂಕುಲಂ ।
ಅರ್ಧದಗ್ಧ ಶವಾಸ್ಯಾನಿ ವಿಕಸದ್ದಂತಪಂಙ್ತಿಭಿಃ ॥೧೯॥

ಹಸಂತೀವಾಗ್ನಿ ಮಧ್ಯಸ್ಥ ಕಾಯಸ್ಯೈವಂ ವ್ಯವಸ್ಥಿತಿಃ ।
ನಾನಾಮೃತಸುಹೃನ್ನಾದಂ ಮಹಾಕೋಲಾಹಲಾಕುಲಂ ॥೨೦॥

ಹಾಪುತ್ರ ಮಿತ್ರ ಹಾಬಂಧೋ ಭ್ರಾತರ್ವತ್ಸ ಪ್ರಿಯಾದ್ಯಮೇ ।
ಹಾಪ್ಯತೇ ಭಾಗಿನೇಯಾರ್ಹ ಹಾಮಾತುಲ ಪಿತಾಮಹ ॥೨೧॥

---

ಬಟ್ಟೆಗಳನ್ನು ತೆಗೆದುಕೊಳ್ಳುವ ಆಳಾಗಿ ನಿಯಮಿಸಲ್ಪಟ್ಟನು. ಅವನಪ್ಪಣೆಯಂತೆ ತಾನೂ ಶವದ ಬಟ್ಟೆಗಳನ್ನು ತೆಗೆದುಕೊಳ್ಳುವುದಕ್ಕಾಗಿ ಸ್ಮಶಾನಕ್ಕೆ ಹೋದನು. ॥೧೫-೧೬॥

ಆ ಕಾಶೀಪಟ್ಟಣದ ದಕ್ಷಿಣದಿಕ್ಕಿನಲ್ಲಿದ್ದ ವಿಸ್ತಾರವಾದ ಆ ಸ್ಮಶಾನವು ಭಯಾನಕರಸಕ್ಕೆ ಸ್ಥಾಯಿಯಾದ ಅಸಹ್ಯತೆಯನ್ನು ಹುಟ್ಟಿಸುತ್ತಿದ್ದಿತು. ಎಲ್ಲೆಡೆಯಲ್ಲಿಯೂ ಹೆಣಕ್ಕೆ ಅಲಂಕರಿಸಿದ್ದ ಹೂಗಳು ಚೆಲ್ಲಿದ್ದುವು. ಹದ್ದುಗಳು, ನರಿಗಳು, ನಾಯಿಗಳು, ಗುಂಪುಕಟ್ಟಿಕೊಂಡಿದ್ದುವು. ಕೆಟ್ಟವಾಸನೆಯ ಹೊಗೆಯು ತುಂಬಿದ್ದಿತು. ಅಲ್ಲಲ್ಲಿ ಮೂಳೆಯ ರಾಶಿಗಳು ಬಿದ್ದು ಕೊಳೆತ ನಾತವು ಬರುತ್ತಿದ್ದಿತು. ॥೧೭-೧೮॥

ಅರ್ಧಭಾಗ ಸುಟ್ಟ ಹೆಣದ ಮುಖದಲ್ಲಿರುವ ಹಲ್ಲುಗಳನ್ನು ನೋಡಿದರೆ ಬೆಂಕಿಯ ನಡುವೆ ಇರುವ ಶರೀರದ ದುಸ್ಸ್ಥಿತಿಯನ್ನು ನೋಡಿ ನಗುವಂತಿದ್ದಿತು.॥೧೯॥

ಆ ಸ್ಮಶಾನದಲ್ಲಿ ಸತ್ತವರ ನಂಟರು ಬಂದು, ಅವರವರ ಸಂಬಂಧಗಳನ್ನು ಹೇಳಿಕೊಂಡು ಮಗನೇ, ಸ್ನೇಹಿತನೇ, ಅಣ್ಣನೇ, ತಮ್ಮನೇ, ಪ್ರಿಯೇ, ಸೋದರ

ಮಾತಾಮಹ ಪಿತಃ ಪೌತ್ರ ಕ್ವಗತೋಽಸ್ಯೇಹಿ ಬಾಂಧವ ।
ಇತಿ ಶಬ್ದೈಃ ಸಮಾಕೀರ್ಣಂ ಭೈರವೈಃ ಸರ್ವದೇಹಿನಾಂ ॥೨೨॥

ಜ್ವಲನ್ಮಾಂಸವಸಾಮೇದಚ್ಛ್ವಮಿತಿ ಧ್ವನಿಸಂಕುಲಂ ।
ಅಗ್ನೇಶ್ಚಟಚಟಾಶಬ್ದೋ ಭೈರವೋ ಯತ್ರ ಜಾಯತೇ ॥೨೩॥

ಕಲ್ಪಾಂತಸದೃಶಾಕಾರಂ ಸ್ಮಶಾನಂ ತತ್ಸುದಾರುಣಂ ।
ಸ ರಾಜಾ ತತ್ರ ಸಂಪ್ರಾಪ್ತೋ ದುಃಖಾದೇವ ಮಶೋಚತ ॥೨೪॥

ಹಾಭೃತ್ಯಾ ಮಂತ್ರಿಣೋ ಯೂಯಂ ಕ್ವತದ್ರಾಜ್ಯಂ ಕುಲೋಚಿತಂ ।
ಹಾ ಪ್ರಿಯೇ ಪುತ್ರ ಮೇ ಬಾಲ ಮಾಂ ತ್ಯಕ್ತ್ವಾ ಮಂದಭಾಗ್ಯಕಂ ॥೨೫॥

ಬ್ರಾಹ್ಮಣಸ್ಯ ಚ ಕೋಪೇನ ಗತಾ ಯೂಯಂ ಕ್ವ ದೂರತಃ ।
ವಿನಾ ಧರ್ಮಂ ಮನುಷ್ಯಾಣಾಂ ಜಾಯತೇ ನ ಶುಭಂ ಕ್ವಚಿತ್ ॥೨೬॥

---

ಳಿಯನೇ, ನನ್ನನ್ನು ಬಿಟ್ಟುಹೋದೆಯಾ? ತಂದೆಯೇ, ತಾತನೇ, ಮೊಮ್ಮಗನೇ, ನಂಟನೇ, ಎಲ್ಲಿಗೆ ಹೋಗಿರುವೆ? ಎಂದು ಮುಂತಾಗಿ ಗಟ್ಟಿಯಾಗಿ ಅಳುತ್ತಿರುವ ಧ್ವನಿಯು ಕೇಳುತ್ತಿದ್ದಿತು. ॥೨೦-೨೧-೨೨॥

ಉರಿಯುತ್ತಿರುವ ಮಾಂಸ, ಮೇದಸ್ಸು ಇವುಗಳಿಂದ ಚೋಙ್ ಎಂಬ ಶಬ್ದವಾಗುತ್ತಿದ್ದಿತು. ಬೆಂಕಿಯು ಉರಿಯುವಾಗ ಭಯಂಕರವಾದ ಚಟಪಟಶಬ್ದ ವಾಗುತ್ತಿರಲು ಆ ಸ್ಮಶಾನವು ಪ್ರಳಯಕಾಲವೇ ಬಂದಿತೋ ಎಂಬಂತೆ ಭಯವ ನ್ನುಂಟುಮಾಡುತ್ತಿದ್ದಿತು. ॥೨೩॥

ಆ ರಾಜನು ಆ ಸ್ಮಶಾನಕ್ಕೆ ಬಂದು ದುಃಖದಿಂದ ಕೂಡಿ, ಹಾ ಮಂತ್ರಿಗಳೇ, ಸೇವಕರೇ, ನನ್ನ ವಂಶಕ್ರಮವಾಗಿ ಬಂದ ರಾಜ್ಯವೂ, ನೀವೂ ಎಲ್ಲಿ ಹೋದಿರಿ? ಹಾ ಪ್ರಿಯೇ, ಮಗನೇ, ಬ್ರಾಹ್ಮಣನ ಕೋಪದಿಂದ ನೀವೂ ನನ್ನನ್ನು ಬಿಟ್ಟು ಹೋದಿರಾ! ಎಂದು ಅತ್ತನು.- ॥೨೪-೨೫॥

ಮಾನವರಿಗೆ ಧರ್ಮಾಚರಣೆಯಿಲ್ಲದೆ ಸುಖವೆಂದಿಗೂ ಉಂಟಾಗುವುದಿಲ್ಲ. ಆದುದರಿಂದ ಮನುಷ್ಯನು ಧರ್ಮವನ್ನೇ ಆಚರಿಸಬೇಕು, ಎಂದು ಚಿಂತಿಸುತ್ತಾ

ಯತ್ನತೋ ಧಾರಯೇತ್ತಸ್ಮಾತ್ಪುರುಷೋ ಧರ್ಮಮೇವ ಹಿ ।
ಇತ್ಯೇವಂ ಚಿಂತಯಂ ಸ್ತತ್ರ ಚಾಂಡಾಲೋಕ್ತಂ ಪುನಃ ಪುನಃ ॥೨೭॥

ಮಲೇನ ದಿಗ್ಧಸರ್ವಾಂಗಃ ಶವಾನಾಂ ದರ್ಶನೇ ವ್ರಜನ್ ।
ಲಕುಟಾಕಾರಕಲ್ಪಶ್ಚ ಧಾವಂಶ್ಚಾಪಿ ತತಸ್ತತಃ ॥೨೮॥

ಅಸ್ಮಿಞ್ಛವ ಇದಂ ಮೌಲ್ಯಂ ಶತಂ ಪ್ರಾಪ್ಸ್ಯಾಮಿ ಚಾಗ್ರತಃ ।
ಇದಂ ಮಮ ಇದಂ ರಾಜ್ಞ ಇದಂ ಚಾಂಡಾಲಕಸ್ಯ ಚ ॥೨೯॥

ಇತ್ಯೇವಂ ಚಿಂತಯನ್ರಾಜಾ ವ್ಯವಸ್ಥಾಂ ದುಸ್ತರಾಂ ಗತಃ ।
ಜೀರ್ಣೈಕಪಟಿಸುಗ್ರಂಥಿಕೃತ ಕಂಥಾಪರಿಗ್ರಹಃ ॥೩೦॥

ಚಿತಾಭಸ್ಮರಜೋಲಿಪ್ತ ಮುಖ ಬಾಹೂದರಾಂಘ್ರಿಕಃ ।
ನಾನಾಮೇದವಸಾಮಜ್ಜಾ ಲಿಪ್ತಪಾಣ್ಯಂಗುಲಿಃ ಶ್ವಸನ್ ॥೩೦॥

ನಾನಾ ಶವೌದನಕೃತ ಕ್ಷುನ್ನಿವೃತ್ತಿಪರಾಯಣಃ ।
ತದೀಯಮಾಲ್ಯ ಸಂಶ್ಲೇಷ ಕೃತಮಸ್ತಕಮಂಡಲಃ ॥೩೨॥

---

ಮತ್ತೆ ಮತ್ತೆ ಆ ಚಂಡಾಲನು ಹೇಳಿದ ಮಾತನ್ನೂ ನೆನೆಯುತ್ತಾ, ರಾಜನು ಆ ಸ್ಮಶಾನದಲ್ಲಿ ತನ್ನ ದಣಿಯ ಅಪ್ಪಣೆಯಂತೆ ತಿರುಗುತ್ತಿದ್ದನು. ॥೨೬-೨೭॥

ತನ್ನ ಮೈಗೆಲ್ಲ ಕೊಳೆಯು ತುಂಬಿಕೊಂಡಿರಲು, ಬಂದ ಬಂದ ಹೆಣವನ್ನು ನೋಡುವುದಕ್ಕಾಗಿ ಅಲ್ಲಲ್ಲಿ ಓಡಾಡುತ್ತಾ, ಇಲ್ಲಿ ಹೆಣವು, ಈ ಹೆಣಕ್ಕೆ ಇಷ್ಟು ತೆರಿಗೆ, ಈ ದಿನ ಒಂದುನೂರು ಸುವರ್ಣನಾಣ್ಯವಾದರೂ ಬರಬಹುದು, ಅದರಲ್ಲಿಷ್ಟು ನನಗೆ, ಇಷ್ಟು ರಾಜನಿಗೆ, ಇಷ್ಟು ನನ್ನೊಡೆಯನಾದ ಚಾಂಡಾಲನಿಗೆ, ಎಂದು ಮುಂತಾಗಿ ಲೆಕ್ಕವನ್ನು ಮಾಡುತ್ತಾ, ಕಷ್ಟದಿಂದ ಕಾಲವನ್ನು ಕಳೆಯುತ್ತಿದ್ದನು. ॥೨೮-೨೯॥

ಆ ರಾಜನು ಹೀಗೆ ಅಪಾರವಾದ ಹೀನಸ್ಥಿತಿಯನ್ನು ಪಡೆದು ಆತಂಕಪಡುತ್ತಾ, ಹಳೆಯದಾದ ಒಂದೇ ಒಂದು ಬಟ್ಟೆಯನ್ನು ಹರಿದ ಕಡೆಗಳಲ್ಲಿ ಗಂಟುಗಳನ್ನು ಹಾಕಿ ಹೊದೆದುಕೊಂಡು, ಚಿತೆಯ ಬೂದಿಯು ಕವಿದುಕೊಂಡಿರುವ ಮುಖ ಹೊಟ್ಟೆ ಕೈಕಾಲುಗಳುಳ್ಳವನಾಗಿ, ಹೆಣದ ಮೇದಸ್ಸು, ಕೊಬ್ಬು ಮುಂತಾದುವು ಕೈಬೆರಳುಗಳಿಗೆ

ನ ರಾತ್ರೌ ನ ದಿವಾ ಶೇಶೇ ಹಾಹೇತಿ ಪ್ರವದನ್ಮುಹುಃ ।
ಏವಂ ದ್ವಾದಶಮಾಸಾಸ್ತು ನೀತಾ ವರ್ಷಶತೋಪಮಾಃ ॥೩೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಚತುರ್ವಿಂಶೋಽಧ್ಯಾಯಃ.

---

ಹತ್ತಿಕೊಂಡಿರಲು, ನಿಟ್ಟುಸಿರನ್ನು ಬಿಡುತ್ತಾ, ಪ್ರೇತಕ್ಕಾಗಿ ಹಾಕಿದ್ದ ಪಿಂಡಗಳಿಂದ ಹಸಿವನ್ನು ನಿವಾರಿಸಿಕೊಳ್ಳುತ್ತಾ, ಹೆಣಕ್ಕೆ ಅಲಂಕರಿಸಿದ ಹೂಗಳನ್ನೂ ತನ್ನ ತಲೆಗೆ ಮುಡಿದುಕೊಂಡು, ರಾತ್ರಿಯೂ ಹಗಲೂ ನಿದ್ದೆಮಾಡದೆ, ಹಾ ಹೂ ಎಂಬದಾಗಿ ಬಾರಿಬಾರಿಗೆ ಘೋಷಿಸುತ್ತಾ, ಹನ್ನೆರಡು ತಿಂಗಳುಗಳನ್ನು ಒಂದುನೂರು ವರ್ಷಕ್ಕೆ ಸಮಾನವಾಗಿರುವಂತೆ ಭಾವಿಸುತ್ತಾ ಕಳೆದನು. ॥೩೦-೩೧-೩೨-೩೩॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### || ಪಂಚವಿಂಶೋಽಧ್ಯಾಯಃ ||

### ಇಪ್ಪತ್ತೈದನೆಯ ಅಧ್ಯಾಯವು

|| ಸೂತ ಉವಾಚ ||

**ಏಕದಾ ತು ಗತೋ ರಂತುಂ ಬಾಲಕೈಸ್ಸಹಿತೋ ಬಹಿಃ ।**
**ವಾರಾಣಸ್ಯಾ ನಾತಿದೂರೇ ರೋಹಿತಾಖ್ಯಃ ಕುಮಾರಕಃ ||೧||**

**ಕ್ರೀಡಾಂ ಕೃತ್ವಾ ತತೋ ದರ್ಭಾ ನ್ಗೃಹೀತು ಮುಪಚಕ್ರಮೇ ।**
**ಕೋಮಲಾನಲ್ಪ ಮೂಲಾಂಶ್ಚ ಸಾಗ್ರಾಞ್ಛಕ್ತ್ಯನುಸಾರತಃ ||೨||**

**ಆರ್ಯ ಪ್ರೀತ್ಯರ್ಥಮಿತ್ಯುಕ್ತ್ವಾ ಹಸ್ತಯುಗ್ಮೇನ ಯತ್ನತಃ ।**
**ಸಲಕ್ಷಣಾಶ್ಚ ಸಮಿಧೋ ಬರ್ಹಿರಿಧ್ಮಂ ಸಲಕ್ಷಣಂ ||೩||**

---

ಸೂತನು ಹೇಳಿದನು—ಒಂದಾನೊಂದು ದಿನ ಆ ರೋಹಿತನೆಂಬ ಕುಮಾರನು ಕಾಶೀಪಟ್ಟಣದ ಹೊರಗೆ ಸಮೀಪದಲ್ಲಿಯೇ ಜತೆಯ ಹುಡುಗರೊಂದಿಗೆ ಆಡುವುದಕ್ಕೆ ಹೋದನು. ||೧||

ಆಟವಾಡಿದ ಮೇಲೆ ತುದಿಯಿಂದ ಕೂಡಿದ, ತೆಳುವಾದ ಬುಡವುಳ್ಳ, ಮೃದುವಾದ ದರ್ಭೆಗಳನ್ನು ತನ್ನ ಶಕ್ತಿಗನುಸಾರವಾಗಿ ಸಂಗ್ರಹಿಸಲು ಕೊಯ್ಯುವುದಕ್ಕೆ ಮೊದಲುಮಾಡಿದನು. ||೨||

ನಮ್ಮೊಡೆಯನಾದ ಬ್ರಾಹ್ಮಣನ ಸಂತೋಷಕ್ಕೆಂದು ಹೇಳುತ್ತಾ, ತನ್ನೆರಡು ಕೈಗಳಿಂದಲೂ ಶಾಸ್ತ್ರೋಕ್ತವಾದ ಲಕ್ಷಣಗಳಿಂದ ಕೂಡಿದ ದರ್ಭೆಯ ಮತ್ತು ಸಮಿತ್ತಿನ ಕಂತೆಗಳನ್ನು ಕಟ್ಟಿ, ||೩||

**ಪಲಾಶ ಕಾಷ್ಠಾನ್ಯಾದಾಯ ತ್ವಗ್ನಿಹೋಮಾರ್ಥ ಮಾದರಾತ್ ।**
**ಮಸ್ತಕೇ ಭಾರಕಂ ಕೃತ್ವಾ ಖಿದ್ಯಮಾನಃ ಪದೇಪದೇ ॥೪॥**

**ಉದಕಸ್ಥಾನಮಾಸಾದ್ಯ ತದಾ ಬಾಲಸ್ತೃಷಾಽನ್ವಿತಃ ।**
**ಭುವಿ ಭಾರಂ ವಿನಿಕ್ಷಿಪ್ಯ ಜಲಸ್ಥಾನೇ ತದಾ ಶಿಶುಃ ॥೫॥**

**ಕಾಮತಃ ಸಲಿಲಂ ಪೀತ್ವಾ ವಿಶ್ರಮ್ಯ ಚ ಮುಹೂರ್ತಕಂ ।**
**ವಲ್ಮೀಕೋಪರಿ ವಿನ್ಯಸ್ತಭಾರೋ ಹರ್ತುಂ ಪ್ರಚಕ್ರಮೇ ॥೬॥**

**ವಿಶ್ವಾಮಿತ್ರಾಜ್ಞಯಾ ತಾವತ್ಕೃಷ್ಣಸರ್ಪೋ ಭಯಾವಹಃ ।**
**ಮಹಾವಿಷೋ ಮಹಾಘೋರೋ ವಲ್ಮೀಕಾನ್ನಿರ್ಗತಸ್ತದಾ ॥೭॥**

**ತೇನಾಸೌ ಬಾಲಕೋ ದಷ್ಟಸ್ತತ್ರೈವ ಚ ಪಪಾತ ಹ ।**
**ರೋಹಿತಾಖ್ಯಂ ಮೃತಂ ದೃಷ್ಟ್ವಾ ಯಯುರ್ಬಾಲಾ ದ್ವಿಜಾಲಯಂ॥೮॥**

---

ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಆದರಮೊಡನೆ ಮುತ್ತುಗದ ಸಮಿತ್ತಿನ ಕಡ್ಡಿಗಳನ್ನು ಆರಿಸಿ ತೆಗೆದುಕೊಂಡು ಎಲ್ಲವೂ ಒಂದು ತಲೆಹೊರೆಯಷ್ಟಾಗಲು ಅದನ್ನು ತಲೆಯ ಮೇಲಿಟ್ಟುಕೊಂಡು ಮತ್ತೆ ಮತ್ತೆ ವ್ಯಸನಪಡುತ್ತಾ, ॥೪॥

ನೀರಿನ ಸಮೀಪಕ್ಕೆ ಬಂದು ಅಲ್ಲಿ ಹೊರೆಯನ್ನು ಭೂಮಿಯ ಮೇಲಿಟ್ಟು ಬಾಯಾರಿಕೆಯಿಂದ ತನಗೆ ಬೇಕಾದಷ್ಟು ನೀರನ್ನು ಕುಡಿದು ಒಂದು ಗಳಿಗೆಯ ವರೆಗೆ ವಿಶ್ರಾಂತಿಯನ್ನು ಹೊಂದಿ, ಒಂದು ಎತ್ತರವಾದ ಹುತ್ತದ ಮೇಲೆ ಇಟ್ಟಿದ್ದ ಆ ಹೊರೆಯನ್ನು ತಲೆಯ ಮೇಲಕ್ಕೆ ತೆಗೆದುಕೊಳ್ಳುವುದಕ್ಕೆ ಪ್ರಯತ್ನಪಟ್ಟನು. ॥೫-೬॥

ಆಗ ವಿಶ್ವಾಮಿತ್ರನ ಅಪ್ಪಣೆಯಿಂದ ಹೆಚ್ಚಾದ ವಿಷವುಳ್ಳ ಕ್ರೂರವಾದ ಭಯವನ್ನುಂಟುಮಾಡುವ ಒಂದು ಕರಿಯ ನಾಗರಹಾವು ಆ ಹುತ್ತದಿಂದ ಹೊರಕ್ಕೆ ಬಂದು ಆ ಬಾಲಕನನ್ನು ಕಚ್ಚಿತು. ಒಡನೆಯೇ ಅವನು ಜ್ಞಾನತಪ್ಪಿ ನೆಲದ ಮೇಲೆ ಬಿದ್ದುಬಿಟ್ಟನು. ॥೭॥

ರೋಹಿತನು ಸತ್ತುದನ್ನು ನೋಡಿ, ಅವನ ಜತೆಯ ಹುಡುಗರು ಆ ಬ್ರಾಹ್ಮಣನ ಮನೆಗೆ ಹೋದರು. ಅವನ ತಾಯಿಯ ಎದುರಿಗೆ ಆತುರವಾಗಿ ಭಯ

ತ್ವರಿತಾ ಭಯಸಂವಿಗ್ನಾಃ ಪ್ರೋಚುಸ್ತನ್ಮಾತುರಗ್ರತಃ ।
ಹೇ ವಿಪ್ರದಾಸಿ ತೇ ಪುತ್ರಃ ಕ್ರೀಡಾಂ ಕರ್ತುಂ ಬಹಿರ್ಗತಃ ॥೯॥

ಅಸ್ಮಾಭಿಸ್ಸಹಿತಸ್ತತ್ರ ಸರ್ಪದಷ್ಟೋ ಮೃತಸ್ತತಃ ।
ಇತಿಸಾ ತದ್ವಚಃ ಶ್ರುತ್ವಾ ವಜ್ರಪಾತೋಪಮಂ ತದಾ ॥೧೦॥

ಪಪಾತ ಮೂರ್ಛಿತಾ ಭೂಮೌ ಛಿನ್ನೇವ ಕದಲೀ ಯಥಾ ।
ಅಥ ತಾಂ ಬ್ರಾಹ್ಮಣೋ ರುಷ್ಟಃ ಪಾನೀಯೇನಾಭ್ಯಷಿಂಚತ ॥೧೧॥

ಮುಹೂರ್ತಾಚ್ಚೇತನಾಂ ಪ್ರಾಪ್ತಾ ಬ್ರಾಹ್ಮಣಸ್ತಾಮಥಾಬ್ರವೀತ್ ।

॥ ಬ್ರಾಹ್ಮಣ ಉವಾಚ ॥

ಅಲಕ್ಷ್ಮೀಕಾರಕಂ ನಿಂದ್ಯಂ ಜಾನತೀ ತ್ವಂ ನಿಶಾಮುಖೇ ॥೧೨॥

ರೋದನಂ ಕುರುಷೇ ದುಷ್ಟೇ ಲಜ್ಜಾ ತೇ ಹೃದಯೇ ನ ಕಿಂ ।
ಬ್ರಾಹ್ಮಣೇನೈವಮುಕ್ತಾ ಸಾ ನ ಕಿಂಚಿದ್ವಾಕ್ಯಮಬ್ರವೀತ್ ॥೧೩॥

---

ಪಡುತ್ತಾ, ಎಲೈ ಬ್ರಾಹ್ಮಣನ ದಾಸಿಯೇ, ನಿನ್ನ ಮಗನು ನಮ್ಮೊಡನೆ ಆಟವಾಡುವುದಕ್ಕೆ ಬಂದಿದ್ದನು. ಅಲ್ಲಿ ಅವನನ್ನು ಹಾವು ಕಚ್ಚಿತು. ಆದರಿಂದ ಸತ್ತುಹೋದನು. ಎಂದು ಹೇಳಿದರು. ॥೮-೯॥

ಆಕೆಯು ಸಿಡಿಲಿನ ಬಡಿತಕ್ಕೆ ಸಮಾನವಾದ, ಆ ಹುಡುಗರ ಮಾತನ್ನು ಕೇಳಿ, ಬಾಳೆಯ ಗಿಡವನ್ನು ಕಡಿದರೆ ಭೂಮಿಯ ಮೇಲೆ ಹೇಗೆ ಬೀಳುವುದೋ ಹಾಗೆ, ಮೂರ್ಛೆಗೊಂಡು ಭೂಮಿಯಮೇಲೆ ಬಿದ್ದಳು. ॥೧೦॥

ಆಮೇಲೆ ಆ ಬ್ರಾಹ್ಮಣನು ಕೋಪಗೊಂಡು ಅವಳ ಮೇಲೆ ನೀರನ್ನೆರಚಿದನು. ಆಕೆಯು ಒಂದು ಗಳಿಗೆಯ ಮೇಲೆ ಜ್ಞಾನವನ್ನು ಪಡೆದಳು. ತರುವಾಯ ಆ ಬ್ರಾಹ್ಮಣನು ಆಕೆಯನ್ನು ಕುರಿತು ಹೇಳಿದನು. ॥೧೧॥

ಬ್ರಾಹ್ಮಣನು ಹೇಳಿದನು—ಎಲೈ ಕೆಟ್ಟ ಹೆಂಗಸೇ, ಸಂಧ್ಯಾಕಾಲದಲ್ಲಿ ಅಳುವುದು ಅಮಂಗಳಕರವು ಮತ್ತು ನಿಂದ್ಯವಾದುದು, ಎಂದು ತಿಳಿದಿದ್ದರೂ ಅಳುತ್ತಿರುವೆಯಲ್ಲ! ನಿನಗೆ ನಾಚಿಕೆಯಿಲ್ಲವೇ? ಎಂದು ಬ್ರಾಹ್ಮಣನು ನುಡಿದನು. ॥೧೨॥

ಬ್ರಾಹ್ಮಣನು ಹೀಗೆ ಹೇಳಿದರೂ ಆಕೆಯು ಒಂದು ಮಾತನ್ನೂ ಆಡಲಿಲ್ಲ. ಮಗನು ಸತ್ತ ದುಃಖದಿಂದ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ, ಮೈಯೆಲ್ಲ ಕೊಳೆ

ರುರೋದ ಕರುಣಂ ದೀನಾ ಪುತ್ರಶೋಕೇನ ಪೀಡಿತಾ ।
ಅಶ್ರುಪೂರ್ಣಮುಖೀ ದೀನಾ ಧೂಸರಾ ಮುಕ್ತಮೂರ್ಧಜಾ ॥೧೪॥

ಅಥ ತಾಂ ಕುಪಿತೋ ವಿಪ್ರೋ ರಾಜಪತ್ನೀ ಮಭಾಷತ ।
ಧಿಕ್ತ್ವಾಂ ದುಷ್ಟೇ ಕ್ರಯಂ ಗೃಹ್ಯ ಮಮ ಕಾರ್ಯಂ ವಿಲುಂಪಸಿ ॥೧೫॥

ಅಶಕ್ತಾ ಚೇತ್ಕಥಂ ತರ್ಹಿ ಗೃಹೀತಂ ಮಮ ತದ್ಧನಂ ।
ಏವಂ ನಿರ್ಭರ್ತ್ಸಿತಾ ತೇನ ಕ್ರೂರವಾಕ್ಯೈಃ ಪುನಃಪುನಃ ॥೧೬॥

ರುದಿತಾ ಕರುಣಂ ಪ್ರಾಹ ವಿಪ್ರಂ ಗದ್ಗದಯಾ ಗಿರಾ ।
ಸ್ವಾಮಿನ್ಮಮ ಸುತೋ ಬಾಲಃ ಸರ್ಪದಷ್ಟೋ ಮೃತೋ ಬಹಿಃ॥೧೭॥

ಅನುಜ್ಞಾಂ ಮೇ ಪ್ರಯಚ್ಛಸ್ವ ದ್ರಷ್ಟುಂ ಯಾಸ್ಯಾಮಿ ಬಾಲಕಂ ।
ದುರ್ಲಭಃ ದರ್ಶನಂ ತೇನ ಸಂಜಾತಂ ಮಮ ಸುವ್ರತ ॥೧೮॥
ಇತ್ಯುಕ್ತ್ವಾ ಕರುಣಂ ಬಾಲಾ ಪುನರೇವ ರುರೋದ ಹ ।

---

ಯಾಗಿ ತಲೆಯ ಕೂದಲು ಬಿಚ್ಚಿಕೊಂಡಿರಲು, ದೈನ್ಯದಿಂದ ಕೂಡಿ ನೋಡಿದವರಿಗೂ ದುಃಖಬರುವಂತೆ ಅತ್ತಳು. ॥೧೩-೧೪॥

ಆಮೇಲೆ ಬ್ರಾಹ್ಮಣನು ಕೋಪಿಸಿಕೊಂಡು ರಾಜಪತ್ನಿಯನ್ನು ಕುರಿತು, "ಎಲೈ ದುಷ್ಟೆಯೇ, ಕ್ರಯದ ಹಣವನ್ನೂ ತೆಗೆದುಕೊಂಡು ನನ್ನ ಕೆಲಸವನ್ನೂ ಹಾಳು ಮಾಡುತ್ತಿರುವೆಯಲ್ಲ! ನಿನ್ನನ್ನು ನಿಂದಿಸಬೇಕು." ಎಂದು ಆಕ್ಷೇಪಿಸಿದನು. ॥೧೫॥

ನಿನಗೆ ಕೆಲಸಮಾಡಲು ಶಕ್ತಿಯಿಲ್ಲದಿದ್ದರೆ ನನ್ನ ಹಣವನ್ನೇಕೆ ತೆಗೆದುಕೊಂಡೆ? ಎಂದು ಮತ್ತೆ ಮತ್ತೆ ಕ್ರೂರವಾದ ಮಾತುಗಳಿಂದ ಗದರಿಸಿದ ಮೇಲೆ, ರಾಣಿಯು ಅಳುತ್ತಾ ಗದ್ಗದ ಧ್ವನಿಯಿಂದ ಬ್ರಾಹ್ಮಣನಿಗೆ ಹೀಗೆ ಹೇಳಿದಳು. ॥೧೬॥

ಸ್ವಾಮಿ, ನನ್ನ ಮಗನು ಚಿಕ್ಕವನು, ಹಾವು ಕಚ್ಚಿದುದರಿಂದ ಸತ್ತುಹೋಗಿರುವನು. ನನಗೆ ಅವನನ್ನು ನೋಡುವುದಕ್ಕೂ ಇದುವರೆಗಿನ ಕೆಲಸದಿಂದ ಸಾಧ್ಯವಿಲ್ಲವಾಗಿದೆ. ಅಪ್ಪಣೆಯನ್ನು ನನಗೆ ಕೊಡಿ, ಆ ಹುಡುಗನನ್ನು ನೋಡುವುದಕ್ಕೆ ಹೋಗುತ್ತೇನೆ. ಎಂದು ಹೇಳಿ ಮತ್ತೆಯೂ ಗಟ್ಟಿಯಾಗಿ ಅತ್ತಳು. ॥೧೭-೧೮॥

|| ಬ್ರಾಹ್ಮಣ ಉವಾಚ ||

ಪುನಸ್ತಾಂ ಕುಪಿತೋ ವಿಪ್ರೋ ರಾಜಪತ್ನೀ ಮಭಾಷತ ||೧೯||

ಶಠೇ ದುಷ್ಟಸಮಾಚಾರೇ ಕಿಂ ನ ಜಾನಾಸಿ ಪಾತಕಂ ।
ಯಃ ಸ್ವಾಮಿ-ವೇತನಂ ಗೃಹ್ಯ ತಸ್ಯ ಕಾರ್ಯಂ ವಿಲುಂಪತಿ ||೨೦||

ನರಕೇ ಪಚ್ಯತೇ ಸೋಽಥ ಮಹಾರೌರವಪೂರ್ವಕೇ ।
ಉಷಿತ್ವಾ ನರಕೇ ಕಲ್ಪಂ ತತೋಽಸೌ ಕುಕ್ಕುಟೋ ಭವೇತ್ ||೨೧||

ಕಿಮನೇನಾಽಥವಾ ಕಾರ್ಯಂ ಧರ್ಮಸಂಕೀರ್ತನೇನ ಮೇ ।
ಯಸ್ತು ಪಾಪರತೋ ಮೂರ್ಖಃ ಕ್ರೂರೋ ನೀಚೋಽನೃತಃ ಶಠಃ||೨೨||

ತದ್ವಾಕ್ಯಂ ನಿಷ್ಫಲಂ ತಸ್ಮಿನ್ ಭವೇದ್ಬೀಜಮಿವೋಷರೇ ।
ಏಹಿ ತೇ ವಿದ್ಯತೇ ಕಿಂಚಿತ್ಪರಲೋಕಭಯಂ ಯದಿ ||೨೩||

ಏವಮುಕ್ತ್ವಾಽಥ ಸಾ ವಿಪ್ರಂ ವೇಪಮಾನಾಽಬ್ರವೀದ್ವಚಃ ।

---

ಮತ್ತೆ ಬ್ರಾಹ್ಮಣನು ಕೋಪಗೊಂಡು ರಾಣಿಯನ್ನು ಕುರಿತು, ಕೆಟ್ಟ ನಡತೆಯ ಮೂಢಳೇ! ಒಡೆಯನ ಹಣವನ್ನು ತೆಗೆದುಕೊಂಡು ಯಾರು ಅವನ ಕಾರ್ಯವನ್ನು ಸರಿಯಾಗಿ ಮಾಡದೆ ಹಾಳುಮಾಡುವರೋ, ಅಂಥವರು ಪಾಪಿಗಳಾಗುವರೆಂದು ನಿನಗೆ ತಿಳಿಯದೇ? ಅಂಥವರು ರೌರವವೇ ಮೊದಲಾದ ನರಕದಲ್ಲಿ ಒಂದು ಕಲ್ಪಕಾಲವಿದ್ದು ಆಮೇಲೆ ಕೋಳಿಯಾಗಿ ಹುಟ್ಟುವರು. ||೧೯-೨೦-೨೧||

ಈಗ ನಿನಗೆ ಈ ಧರ್ಮಶ್ರವಣವನ್ನು ಮಾಡಿಸುವುದರಿಂದ ನನಗೇನು ಪ್ರಯೋಜನ? ಏಕೆಂದರೆ ಯಾವನು ಪಾಪಿಯೋ, ಮೂಢನೋ, ಕ್ರೂರಿಯೋ, ನೀಚನೋ, ಸುಳ್ಳುಗಾರನೋ, ದಡ್ಡನೋ, ಅಂಥವನ ಹಿತಕ್ಕಾಗಿ ಧರ್ಮೋಪದೇಶವನ್ನು ಮಾಡುವುದು ಚೌಳುಭೂಮಿಯಲ್ಲಿ ಬಿತ್ತಿದ ಬೀಜದಂತೆ ನಿಷ್ಫಲವಾಗುವುದು. ||೨೨||

ನಿನಗೆ ಪರಲೋಕದ ಭಯವು ಸ್ವಲ್ಪವಾದರೂ ಇದ್ದರೆ ಕೆಲಸವನ್ನು ಮಾಡಲು ಬಾ! ಎಂದು ಹೇಳುತ್ತಲು, ಆ ರಾಣಿಯು ನಡುಗುತ್ತಾ ಆ ಬ್ರಾಹ್ಮಣನನ್ನು ಕುರಿತು ಹೀಗೆ ಹೇಳಿದಳು. ||೨೩||

ಕಾರುಣ್ಯಂ ಕುರು ಮೇ ನಾಥ ಪ್ರಸೀದ ಸುಮುಖೋ ಭವ ॥೨೪॥

ಪ್ರಸ್ಥಾಪಯ ಮುಹೂರ್ತಂ ಮಾಂ ಯಾವದ್ದ್ರಕ್ಷ್ಯಾಮಿ ಬಾಲಕಂ ।
ಏವಮುಕ್ತ್ವಾಽಥ ಸಾ ಮೂರ್ಧ್ನಿ(ಧ್ನಾ) ನಿಪತ್ಯ ದ್ವಿಜಪಾದಯೋಃ ॥೨೫॥

ರುರೋದ ಕರುಣಂ ಬಾಲಾ ಪುತ್ರಶೋಕೇನ ಪೀಡಿತಾ ।
ಅಥಾಹ ಕುಪಿತೋ ವಿಪ್ರಃ ಕ್ರೋಧಸಂರಕ್ತಲೋಚನಃ ॥೨೬॥

॥ ವಿಪ್ರ ಉವಾಚ ॥

ಕಿಂ ತೇ ಪುತ್ರೇಣ ಮೇ ಕಾರ್ಯಂ ಗೃಹಕರ್ಮ ಕುರುಷ್ವ ಮೇ ।
ಕಿಂ ನ ಜಾನಾಸಿ ಮೇ ಕ್ರೋಧಂ ಕಶಾಘಾತ ಫಲಪ್ರದಂ ॥೨೭॥

ಏವಮುಕ್ತಾ ಸ್ಥಿತಾ ಧೈರ್ಯಾದ್ಗೃಹಕರ್ಮ ಚಕಾರ ಹ ।
ಅರ್ಧರಾತ್ರೋ ಗತಸ್ತಸ್ಯಾಃ ಪಾದಾಭ್ಯಂಗಾದಿಕರ್ಮಣಾ ॥೨೮॥

ಬ್ರಾಹ್ಮಣೇನಾಥ ಸಾ ಪ್ರೋಕ್ತಾ ಪುತ್ರಪಾರ್ಶ್ವಂ ವ್ರಜಾಧುನಾ ।
ತಸ್ಯ ದಾಹಾದಿಕಂ ಕೃತ್ವಾ ಪುನರಾಗಚ್ಛ ಸತ್ವರಂ ॥೨೯॥
ನ ಲುಪ್ಯೇತ ಯಥಾಪ್ರಾತರ್ಗೃಹಕರ್ಮ ಮಮೇತಿ ಚ ।

---

ಓ ಒಡೆಯನೇ, ನನ್ನ ಮೇಲೆ ಪ್ರಸನ್ನನಾಗಿ ದಯವಿಟ್ಟು ಒಂದುಗಳಿಗೆಯ ವರೆಗೆ ಮಾತ್ರ ಕಳುಹಿಸಿಕೊಡು. ಮಗನನ್ನು ನೋಡಿಕೊಂಡು ಬರುತ್ತೇನೆ, ಎಂದು ಹೇಳಿ ರಾಣಿಯು ಬ್ರಾಹ್ಮಣನ ಪಾದದ ಮೇಲೆ ತಲೆಯನ್ನಿಟ್ಟು ಪುತ್ರಶೋಕದಿಂದ ಅತ್ತಳು. ॥೨೪-೨೫॥

ಆಮೇಲೆ ಬ್ರಾಹ್ಮಣನು ಕೋಪದಿಂದ ಕಣ್ಣನ್ನು ಕೆಂಪಗೆಮಾಡಿಕೊಂಡು, ನಿನ್ನ ಮಗನಿಂದ ನನಗೇನಾಗಬೇಕು ? ನನ್ನ ಮನೆಯ ಕೆಲಸವನ್ನು ಮಾಡು. ನನ್ನ ಕೋಪದಿಂದ ಆಗುವ ಫಲವನ್ನು ನೀನು ಕಾಣೆಯಾ ? ಕೊರಡೆಯ ಏಟೇ ಅದರ ಫಲವು. ಎಂದನು. ॥೨೬-೨೭॥

ಈ ಮಾತನ್ನು ಕೇಳಿದ ರಾಣಿಯು ಧೈರ್ಯದಿಂದ ಮನೆಯಲ್ಲಿಯೇ ಇದ್ದು ಕೆಲಸಗಳನ್ನು ಮಾಡಿದಳು. ಕಾಲುಗಳಿಗೆ ಎಣ್ಣೆಯನ್ನೊತ್ತುವುದೇ ಮುಂತಾದ ಸೇವೆಯ ಕೆಲಸಗಳಿಂದ ಅರ್ಧರಾತ್ರಿಯು ಕಳೆಯಿತು. ॥೨೮॥

ಆಮೇಲೆ ಆ ಬ್ರಾಹ್ಮಣನು, ಈಗ ನಿನ್ನ ಮಗನ ಸಮೀಪಕ್ಕೆ ಹೋಗು.

ತತಸ್ತ್ವೇಕಾಕಿನೀ ರಾತ್ರೌ ವಿಲಪಂತೀ ಜಗಾಮ ಹ ॥೩೦॥

ದೃಷ್ಟ್ವಾ ಮೃತಂ ನಿಜಂ ಪುತ್ರಂ ಭೃಶಂ ಶೋಕೇನ ಪೀಡಿತಾ ।
ಯೂಥಭ್ರಷ್ಟಾ ಕುರಂಗೀವ ವಿವತ್ಸಾ ಸೌರಭೀ ಯಥಾ ॥೩೧॥

ವಾರಾಣಸ್ಯಾ ಬಹಿರ್ಗತ್ವಾ ಕ್ಷಣಾದ್ದೃಷ್ಟ್ವಾ ನಿಜಂ ಸುತಂ ।
ಶಯಾನಂ ರಂಕವದ್ಭೂಮೌ ಕಾಷ್ಠದರ್ಭತೃಣೋಪರಿ ॥೩೨॥

ವಿಲಲಾಪಾತಿದುಃಖಾರ್ತಾ ಶಬ್ದಂ ಕೃತ್ವಾ ಸುನಿಷ್ಠುರಂ ।
ಏಹಿ ಮೇ ಸಮ್ಮುಖಂ ಕಸ್ಮಾದ್ರೋಷಿತೋಽಸಿ ವದಾಧುನಾ ॥೩೩॥

ಆಯಾಸ್ಯಭಿಮುಖೋ ನಿತ್ಯಮಂಬೇತ್ಯುಕ್ತ್ವಾ ಪುನಃ ಪುನಃ ।
ಗತ್ವಾ ಸ್ಖಲತ್ಪದಾ ತಸ್ಯ ಪಪಾತೋಪರಿ ಮೂರ್ಛಿತಾ ॥೩೪॥

---

ಅವನ ದಹನ ಮುಂತಾದ ಕ್ರಿಯೆಗಳನ್ನು ಮಾಡಿ, ಬೇಗನೆ ಬಾ. ನಾಳೆ ಬೆಳಗಿನ ನನ್ನ ಮನೆಯ ಕೆಲಸಗಳಿಗೆ ತೊಂದರೆ ಬರಬಾರದು. ಎಂದು ಹೇಳಿದನು. ॥೨೯॥

ಆ ಮೇಲೆ ರಾಣಿಯು ರಾತ್ರಿಯಲ್ಲಿ ಒಬ್ಬಳೇ ಅಳುತ್ತಾ ಹೋಗಿ, ಸತ್ತ ಮಗ ನನ್ನು ನೋಡಿ, ಮಂದೆಯನ್ನು ಬಿಟ್ಟು ಬಂದ ಹೆಣ್ಣು ಜಿಂಕೆಯಂತೆಯೂ, ಕರುವನ್ನು ಕಳೆದುಕೊಂಡ ಹಸುವಿನಂತೆಯೂ, ಬಹಳವಾಗಿ ದುಃಖದಿಂದ ನೊಂದಳು.॥೩೦-೩೧॥

ಆ ಬಳಿಕ ರಾಣಿಯು ಒಂದು ಕ್ಷಣದೊಳಗಾಗಿ ಕಾಶೀಪಟ್ಟಣದ ಹೊರಗೆ ಹೋಗಿ ತನ್ನ ಮಗನು ತಾನು ತಂದ ಸಮಿತ್ತು ಮತ್ತು ದರ್ಭೆಯು ಹುಲ್ಲಿನ ಮೇಲೆ ನೆಲದಲ್ಲಿ ಒಣಕಟ್ಟಿಗೆಯಂತೆ ಮಲಗಿರುವುದನ್ನು ನೋಡಿ, ಭಯಂಕರವಾದ ಅಳು ವಿಕೆಯ ಶಬ್ದವನ್ನು ಮಾಡುತ್ತಾ ದುಃಖದಿಂದ ಗಟ್ಟಿಯಾಗಿ ಅತ್ತಳು. ॥೩೨॥

ಎಲೈ ಮಗನೇ, ಪ್ರತಿದಿನವೂ ಅಮ್ಮಾ ಎಂದು ಕೂಗುತ್ತಾ ನನ್ನೆದುರಿಗೆ ಬರು ತ್ತಿದ್ದೆ. ಈಗಲೂ ಹಾಗೆಯೇ ಬಾ. ಇಲ್ಲದಿದ್ದರೆ ಯಾವ ಕಾರಣದಿಂದ ಕೋಪ ಗೊಂಡಿರುವೆ? ಹೇಳು. ನನ್ನೆದುರಿಗೆ ಬಾ. ಎಂದು ಚೀರುತ್ತಾ ಮುಂದಕ್ಕೆ ಹೋಗಿ ಕಾಲು ತಪ್ಪಿ ಎಡವಿದ ರಾಣಿಯು ರೋಹಿತನ ಮೇಲೆ ಬಿದ್ದು ಮೈ ಮರೆತಳು. ॥೩೩-೩೪॥

ಪುನಃ ಸಾ ಚೇತನಾಂ ಪ್ರಾಪ್ಯ ದೋರ್ಭ್ಯಾಮಾಲಿಂಗ್ಯ ಬಾಲಕಂ ।
ತನ್ಮುಖೇ ವದನಂ ನ್ಯಸ್ಯ ರುರೋದಾರ್ತ ಸ್ವನೈಸ್ತದಾ ॥೩೫॥

ಕರಾಭ್ಯಾಂ ತಾಡನಂ ಚಕ್ರೇ ಮಸ್ತಕಸ್ಯೋದರಸ್ಯ ಚ ।
ಹಾ ಬಾಲ ಹಾ ಶಿಶೋ ವತ್ಸ ಹಾ ಕುಮಾರಕ ಸುಂದರ ॥೩೬॥

ಹಾ ರಾಜ ಕ್ವಗತೋಽಸಿ ತ್ವಂ ಪಶ್ಯೇಮಂ ಬಾಲಕಂ ನಿಜಂ ।
ಪ್ರಾಣೇಭ್ಯೋಽಪಿ ಗರಿಯಾಂಸಂ ಭೂತಲೇ ಪತಿತಂ ಮೃತಂ ॥೩೭॥

ತಥಾಽಪಶ್ಯನ್ಮುಖಂ ತಸ್ಯ ಭೂಯೋ ಜೀವಿತಶಂಕಯಾ ।
ನಿರ್ಜೀವ ವದನಂ ಜ್ಞಾತ್ವಾ ಮೂರ್ಛಿತಾ ನಿಪಪಾತ ಹ ॥೩೮॥

ಹಸ್ತೇನ ವದನಂ ಗೃಹ್ಯ ಪುನರೇವ ಮಭಾಷತ ।
ಶಯನಂ ತ್ಯಜ ಹೇ ಬಾಲ ಶೀಘ್ರಂ ಜಾಗೃಹಿ ಭೀಷಣಂ ॥೩೯॥
ನಿಶಾರ್ಧಂ ವರ್ಧತೇ ಚೇದಂ ಶಿವಾಶತನಿನಾದಿತಂ ।

---

ಮತ್ತೆ ಆಕೆಯು ಎಚ್ಚತ್ತು, ತನ್ನ ತೋಳುಗಳಿಂದ ಮಗನನ್ನು ತಬ್ಬಿಕೊಂಡು, ಅವನ ಮುಖದಲ್ಲಿ ತನ್ನ ಮುಖವನ್ನಿಟ್ಟು, ಸಂಕಟಕರವಾದ ಧ್ವನಿಯೊಡನೆ ಗಟ್ಟಿಯಾಗಿ ಅತ್ತಳು. ॥೩೫॥

ಕೈಗಳಿಂದ ತಲೆಯನ್ನೂ ಹೊಟ್ಟೆಯನ್ನೂ ಬಡಿದುಕೊಂಡಳು. ಅಯ್ಯೋ ಮಗುವೇ, ಪ್ರೀತಿಪಾತ್ರನೂ, ಸುಂದರನೂ, ಚಿಕ್ಕವನೂ ಆದ ಮಗನೇ, ನಿನಗೆ ಮರಣವು ಸಂಭವಿಸಿತೇ? ॥೩೬॥

ಅಯ್ಯೋ ರಾಜನೇ, ನೀನು ಈಗ ಎಲ್ಲಿಗೆ ಹೋಗಿರುವೆ. ನಿನ್ನ ಪ್ರಾಣಕ್ಕಿಂತಲೂ ಹೆಚ್ಚಿನವನಾದ, ಭೂಮಿಯಮೇಲೆ ಸತ್ತುಬಿದ್ದಿರುವ, ನಿನ್ನ ಮಗನನ್ನು ನೋಡು! ಎಂದು ಚೀರಿದಳು. ॥೩೭॥

ಆ ರಾಣಿಯು ಹಾಗೆಯೇ ಅವನ ಮುಖವನ್ನು ಪುನಃ ದೃಷ್ಟಿಸಿ ನೋಡಿ ಮತ್ತೆ ಬದುಕಿರುತ್ತಾನೆಯೋ ಏನೋ, ಎಂದು ಸಂದೇಹಪಟ್ಟು ಚನ್ನಾಗಿ ಪರೀಕ್ಷಿಸಿ ಕಡೆಗೆ ಈ ಮುಖವು ಪ್ರಾಣವಿಲ್ಲದ ಲಕ್ಷಣವುಳ್ಳುದಾಗಿರುವುದೆಂದು ತಿಳಿದು, ಮೈಮರೆದು ಬಿದ್ದಳು. ॥೩೮॥

ಆ ರಾಣಿಯು ಮತ್ತೆ ಎಚ್ಚತ್ತು ತನ್ನ ಕೈಯಿಂದ ಅವನ ಮುಖವನ್ನು ಹಿಡಿದುಕೊಂಡು ಹೀಗೆ ಮಾತನಾಡಿದಳು! ಎಲೈ ಮಗನೇ, ಹಾಸಿಗೆಯನ್ನು ಬಿಟ್ಟು ಬೇಗನೆ

ಭೂತಪ್ರೇತಪಿಶಾಚಾದಿ ಡಾಕಿನೀ ಯೂಥನಾದಿತಂ ॥೪೦॥

ಮಿತ್ರಾಣಿ ತೇ ಗತಾನ್ಯತ್ರ ತ್ವಮೇಕಸ್ತು ಕುತಃ ಸ್ಥಿತಃ ।
ಏವಮುಕ್ತ್ವಾ ಪುನಸ್ತನ್ವೀ ಕರುಣಂ ಪ್ರರುರೋದ ಹ ॥೪೧॥

ಹಾ ಶಿಶೋ ಬಾಲ ಹಾವತ್ಸ ರೋಹಿತಾಖ್ಯ ಕುಮಾರಕ ।
ರೇ ಪುತ್ರ ಪ್ರತಿಶಬ್ದಂ ಮೇ ಕಸ್ಮಾತ್ತ್ವಂ ನ ಪ್ರಯಚ್ಛಸಿ ॥೪೨॥

ತವಾಹಂ ಜನನೀ ವತ್ಸ ಕಿಂ ನ ಜಾನಾಸಿ ಪಶ್ಯ ಮಾಂ ।
ದೇಶತ್ಯಾಗಾದ್ರಾಜ್ಯನಾಶಾತ್ಪುತ್ರ ಭರ್ತ್ರಾ ಸ್ವ ವಿಕ್ರಯಾತ್ ॥೪೩॥

ಯದ್ದಾಸೀತ್ವಾಚ್ಚ ಜೀವಾಮಿ ತ್ವಾಂ ದೃಷ್ಟ್ವಾ ಪುತ್ರ ಕೇವಲಂ ।
ತೇ ಜನ್ಮಸಮಯೇ ವಿಪ್ರೈರಾದಿಷ್ಟಂ ಯತ್ತನಾಗತಂ ॥೪೪॥

---

ಎಚ್ಚರಗೊಂಡು ಏಳು. ಈಗ ಅರ್ಧ ರಾತ್ರಿಯು ಮೀರಿತು. ನೂರಾರು ನರಿಗಳೂ, ಭೂತ, ಪ್ರೇತ, ಪಿಶಾಚ, ಡಾಕಿನೀ ಮುಂತಾದ ಭಯಂಕರವಾದ ಪ್ರಾಣಿಗಳೂ ಕೂಗಿ ಕೊಳ್ಳುವುದರಿಂದ ಹೆದರಿಕೆಯಾಗುತ್ತಿದೆ! ॥೩೯-೪೦॥

ನಿನ್ನ ಗೆಳೆಯರು ಎಲ್ಲರೂ ಹಿಂತಿರುಗಿ ಊರಿಗೆ ಹೋದರು. ನೀನೊಬ್ಬನೇ ಏಕೆ ಇಲ್ಲಿರುವೆ? ಎಂದು ಹೇಳಿ, ರಾಣಿಯು ಮತ್ತೆಯೂ ಬಹಳ ದುಃಖದಿಂದ ಕನಿಕರವನ್ನುಂಟುಮಾಡುವಂತೆ ಅತ್ತಳು. ॥೪೧॥

ಅಯ್ಯೋ ಮಗುವೇ, ಹುಡುಗನೇ, ಪ್ರೀತಿಪಾತ್ರನೇ, ಮಗನೇ, ರೋಹಿತನೇ, ನೀನು ಏತಕ್ಕಾಗಿ ನನಗೆ ಪ್ರತ್ಯುತ್ತರವನ್ನು ಕೊಡುವುದಿಲ್ಲ? ಈ ನಾನು ನಿನ್ನ ತಾಯಿ ಎಂಬುದು ನಿನಗೆ ತಿಳಿಯದೇ? ಪ್ರೀತಿಪಾತ್ರನಾದ ಮಗನೇ, ನನ್ನನ್ನು ನೋಡು? ॥೪೨॥

ಎಲೈ ಮಗನೇ, ದೇಶವನ್ನೂ ರಾಜ್ಯವನ್ನೂ ಬಿಟ್ಟೆವು. ಗಂಡನು ನನ್ನನ್ನು ಮಾರಿದನು. ಪರರ ಮನೆಯ ಆಳಾದರೂ ನಿನ್ನನ್ನು ನೋಡಿ ನಾನು ಅದೆಲ್ಲವನ್ನೂ ಹೇಗೋ ಸಹಿಸಿಕೊಂಡು ಬದುಕಿರುವೆನು! ॥೪೩॥

ಮಗನೇ ನೀನು ಹುಟ್ಟಿದಾಗ ಬ್ರಾಹ್ಮಣರು ಜಾತಕಫಲವನ್ನು ಹೇಳುತ್ತಾ ಈ ಬಾಲಕನು ಬಹಳ ಕಾಲ ಬದುಕಿ, ಭೂಮಿಗೆ ರಾಜನಾಗಿ, ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿ ಇರುವನು, ಎಂದು ಭವಿಷ್ಯವನ್ನು ನುಡಿದಿದ್ದರು! ॥೪೪॥

ದೀರ್ಘಾಯುಃ ಪೃಥಿವೀರಾಜಃ ಪುತ್ರಪೌತ್ರಸಮನ್ವಿತಃ ।
ಶೌರ್ಯ ದಾನರತಿಃ ಸತ್ಯೋ ಗುರುದೇವದ್ವಿಜಾರ್ಚಕಃ ॥೪೫॥

ಮಾತಾಪಿತ್ರೋಸ್ತು ಪ್ರಿಯಕೃತ್ಸತ್ಯವಾದೀ ಜಿತೇಂದ್ರಿಯಃ ।
ಇತ್ಯಾದಿ ಸಕಲಂ ಜಾತಮಸತ್ಯಮಧುನಾ ಸುತ ॥೪೬॥

ಚಕ್ರಮತ್ಸ್ಯಾತಪತ್ರ ಶ್ರೀವತ್ಸ ಸ್ವಸ್ತಿಕಧ್ವಜಾಃ ।
ತವ ಪಾಣಿತಲೇ ಪುತ್ರ ಕಲಶಶ್ಚಾಮರಂ ತಥಾ ॥೪೭॥

ಲಕ್ಷಣಾನಿ ತಥಾಽನ್ಯಾನಿ ತ್ವದ್ಧಸ್ತೇ ಯಾನಿ ಸಂತಿ ಚ ।
ತಾನಿ ಸರ್ವಾಣಿ ಮೋಘಾನಿ ಸಂಜಾತಾನ್ಯಧುನಾ ಸುತ ॥೪೮॥

ಹಾ ರಾಜನ್ಪೃಥಿವೀನಾಥ ಕ್ವ ತೇ ರಾಜ್ಯಂ ಕ್ವ ಮಂತ್ರಿಣಃ ।
ಕ್ವ ತೇ ಸಿಂಹಾಸನಂ ಛತ್ರಂ ಕ್ವ ತೇ ಖಡ್ಗಂ ಕ್ವ ತದ್ಧನಂ ॥೪೯॥

ಕ್ವ ಸಾಽಯೋಧ್ಯಾ ಕ್ವ ಹರ್ಮ್ಯಾಣಿ ಕ್ವ ಗಜಾಶ್ವರಥಪ್ರಜಾಃ ।
ಸರ್ವಮೇತತ್ತಥಾ ಪುತ್ರ ಮಾಂ ತ್ಯಕ್ತ್ವಾ ಕ್ವ ಗತೋಽಸಿ ರೇ ॥೫೦॥

---

ಓ ಮಗನೇ, ನೀನು ಪರಾಕ್ರಮಿಯಾಗಿಯೂ, ದಾನಶೀಲನಾಗಿಯೂ, ಸಾತ್ವಿಕನಾಗಿ ಗುರುಗಳನ್ನೂ ದೇವತೆಗಳನ್ನೂ ಬ್ರಾಹ್ಮಣರನ್ನೂ ಪೂಜೆಮಾಡತಕ್ಕವನಾಗಿಯೂ, ತಾಯಿತಂದೆಗಳಿಗೆ ಹಿತವನ್ನು ಮಾಡುತ್ತಾ, ನಿಜವಾದ ಮಾತನಾಡುತ್ತಾ, ಇಂದ್ರಿಯಗಳನ್ನು ಜಯಿಸಿರುವೆ. ಎಂದು ಆ ಬ್ರಾಹ್ಮಣರು ಹರಸಿ ಹೇಳಿದ ಭವಿಷ್ಯವೆಲ್ಲವೂ ಈಗ ಸುಳ್ಳಾಯಿತು! ॥೪೫-೪೬॥

ಎಲೈ ಮಗನೇ, ನಿನ್ನ ಅಂಗೈಯಲ್ಲಿರುವ ಚಕ್ರ, ಮೀನು, ಛತ್ರಿ, ಶ್ರೀವತ್ಸ, ಸ್ವಸ್ತಿಕ, ಬಾವುಟ, ಕಲಶ, ಚಾಮರ, ಮುಂತಾದ ಮಂಗಳಕರವಾದ ರೇಖೆಗಳ, ಗುರುತುಗಳ ಫಲವು ಎಲ್ಲವೂ ಈಗ ವ್ಯರ್ಥವಾಯಿತು! ॥೪೭॥

ಅಯ್ಯೋ ರಾಜನೇ, ನಿನ್ನ ರಾಜ್ಯವೆಲ್ಲಿ? ಸಿಂಹಾಸನ, ಛತ್ರಿ, ಕತ್ತಿ, ಹಣ, ಇವುಗಳೆಲ್ಲಿ? ಆ ಅಯೋಧ್ಯಾಪಟ್ಟಣವೂ, ಆ ಉಪ್ಪರಿಗೆ ಮನೆಗಳೂ, ಆನೆ, ಕುದುರೆ, ತೇರು ಕಾಲಾಳುಗಳೂ, ಪ್ರಜೆಗಳೂ, ಎಲ್ಲಿ ಹೋದರು? ಎಲ್ಲವೂ ಈ ಮಗನೆಂದು ತಿಳಿದಿದ್ದೆನಲ್ಲಾ! ಎಲೈ ಮಗನೇ, ನನ್ನನ್ನು ಬಿಟ್ಟು ನೀನೂ ಈಗ ಎಲ್ಲಿಗೆ ಹೋದೆ? ॥೪೯-೫೦॥

ಹಾ ಕಾಂತ ಹಾ ನೃಪಾಽಗಚ್ಛ ಪಶ್ಯೇಮಂ ಸ್ವಸುತಂ ಪ್ರಿಯಂ ।
ಯೇನ ತೇ ರಿಂಗತಾ ವಕ್ಷಃ ಕುಂಕುಮೇನಾವಲೇಪಿತಂ ॥೫೧॥

ಸ್ವಶರೀರ ರಜಃ ಪಂಕೈರ್ವಿಶಾಲಂ ಮಲಿನೀಕೃತಂ ।
ಯೇನ ತೇ ಬಾಲಭಾವೇನ ಮೃಗನಾಭಿವಿಲೇಪಿತಃ ॥೫೨॥

ಭ್ರಂಶಿತೋ ಭಾ(ಫಾ)ಲತಿಲಕಃ ತವಾಂಕಸ್ಥೇನ ಭೂಪತೇ ।
ಯಸ್ಯ ವಕ್ತ್ರಂ ಮೃದಾಲಿಪ್ತಂ ಸ್ನೇಹಾದ್ವೈ ಚುಂಬಿತಂ ಮಯಾ॥೫೩॥

ತನ್ಮುಖಂ ಮಕ್ಷಿಕಾಲಿಂಗ್ಯಂ ಪಶ್ಯೇ ಕೀಟೈರ್ವಿದೂಷಿತಂ ।
ಹಾರಾಜನ್ಪಶ್ಯ ತಂ ಪುತ್ರಂ ಭುವಿ ಸ್ಥಂ ರಂಕವನ್ಮೃತಂ ॥೫೪॥

ಹಾ ದೇವ ಕಿಂ ಮಯಾ ಕೃತ್ಯಂ ಕೃತಂ ಪೂರ್ವ ಭವಾಂತರೇ ।
ತಸ್ಯ ಕರ್ಮಫಲಸ್ಯೇಹ ನ ಪಾರಮುಪಲಕ್ಷಯೇ ॥೫೫॥

---

ಅಯ್ಯೋ ಪ್ರಿಯನೇ, ಮಹಾರಾಜನೇ, ಪ್ರೀತಿಪಾತ್ರನಾದ ನಿನ್ನ ಮಗನನ್ನು ನೋಡು, ಬಾ! ಎಳೆಯ ಮಗುವಾಗಿದ್ದಾಗ ಈ ಮಗನು ನಿನ್ನ ತೊಡೆಯಮೇಲೆ ಮಲಗಿಕೊಂಡು ಚಲಿಸುತ್ತಾ, ಅವನ ಮೈಯಿನ ದೂಳು ನಿನ್ನ ಮೈಯಿಗೆ ಸಂಬಂಧಿಸುತ್ತಿರಲು ನಿನ್ನೆದೆಯಲ್ಲಿದ್ದ ಕುಂಕುಮಕೇಸರಿಯ ಗಂಧವನ್ನು ತೀಡಿದನು ಮತ್ತು ನಿನ್ನ ಹಣೆಯಲ್ಲಿದ್ದ ಕಸ್ತೂರಿಯ ತಿಲಕವನ್ನೂ ಅಲುಗಿಸಿದನು. ॥೫೧-೫೨॥

ಯಾವ ಬಾಲಕನ ಆಟದಕಾಲದಲ್ಲಿ ಮಣ್ಣಿನಿಂದ ಬಳಿದಿದ್ದ ಮುಖವನ್ನು ನಾನು ಪ್ರೀತಿಯಿಂದ ಮುತ್ತಿಟ್ಟೆನೋ, ಆ ಮುಖಕ್ಕೆ ಈಗ ಕ್ರಿಮಿಗಳು ಮುತ್ತಿಕೊಂಡು, ಹುಳುಗಳು ತಿನ್ನುತ್ತಿರುವುದನ್ನು ನೋಡುತ್ತಿರುವೆನಲ್ಲಾ! ಅಯ್ಯೋ ರಾಜನೇ, ಭೂಮಿಯಮೇಲೆ ಕಟ್ಟಿಗೆಯಂತೆ ಬಿದ್ದಿರುವ ಆ ಮಗನನ್ನು ನೋಡು! ॥೫೩-೫೪॥

ಅಯ್ಯೋ ದೇವರೇ, ನಾನು ಪೂರ್ವಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದೆನೋ, ಅದರ ಫಲವಿನ್ನೂ ಮುಗಿಯಲಿಲ್ಲವೆಂದೂ, ಅಪಾರವಾಗಿದೆ ಎಂದೂ, ತೋರುತ್ತಿದೆ! ॥೫೫॥

ಹಾ ಪುತ್ರ ಹಾ ಶಿಶೋ ವತ್ಸ ಹಾ ಕುಮಾರಕ ಸುಂದರ ।
ಏವಂ ತಸ್ಯಾ ವಿಲಾಪಂ ತೇ ಶ್ರುತ್ವಾ ನಗರಪಾಲಕಾಃ ॥೫೬॥

ಜಾಗೃತಾಸ್ತ್ವರಿತಾಸ್ತಸ್ಯಾಃ ಪಾರ್ಶ್ವ ಮೀಯುಃ ಸುವಿಸ್ಮಿತಾಃ ।

॥ ಜನಾ ಊಚುಃ ॥

ಕಾ ತ್ವಂ ಬಾಲಶ್ಚ ಕಸ್ಯಾಯಂ ಪತಿಸ್ತೇ ಕುತ್ರ ತಿಷ್ಠತಿ ॥೫೭॥

ಏಕೈವ ನಿರ್ಭಯಾ ರಾತ್ರೌ ಕಸ್ಮಾತ್ತ್ವಮಿಹ ರೋದಿಷಿ ।
ಏವಮುಕ್ತಾಽಥ ಸಾ ತನ್ವೀ ನ ಕಿಂಚಿದ್ವಾಕ್ಯಮಬ್ರವೀತ್ ॥೫೮॥

ಭೂಯೋಽಪಿ ಪೃಷ್ಟಾ ಸಾ ತೂಷ್ಣೀಂ ಸ್ತಬ್ಧೀಭೂತಾ ಬಭೂವ ಹ ।
ವಿಲಲಾಪಾತಿ ದುಃಖಾರ್ತಾ ಶೋಕಾಶ್ರುಪ್ಲುತಲೋಚನಾ ॥೫೯॥

ಅಥ ತೇ ಶಂಕಿತಾಸ್ತಸ್ಯಾಂ ರೋಮಾಂಚಿತ ತನೂರುಹಾಃ ।
ಸಂತ್ರಸ್ತಾಃ ಪ್ರಾಹುರನ್ಯೋಽನ್ಯಮುದ್ಧೃತಾಯುಧಪಾಣಯಃ ॥೬೦॥

---

ಅಯ್ಯೋ ಸುಂದರನಾದ ಮಗನೇ, ಎಂದು ಮುಂತಾಗಿ ಗಟ್ಟಿಯಾಗಿ ಅಳುತ್ತಿರುವ ಆ ರಾಣಿಯ ಅಳುವ ಶಬ್ದವನ್ನು ನಗರರಕ್ಷಕರೇ ಮುಂತಾದವರು ಕೇಳಿ ಎಚ್ಚರಗೊಂಡು, ಬೇಗನೆ ಆಕೆಯ ಸಮೀಪಕ್ಕೆ ಬಂದು ನೋಡಿ ಆಶ್ಚರ್ಯಪಟ್ಟರು.॥೫೬॥

ಜನಗು ಹೇಳಿದರು—ಆ ರಾಣಿಯನ್ನು ಕುರಿತು, ನೀನು ಯಾರು? ಈ ಹುಡುಗನು ಯಾರ ಮಗನು? ನಿನ್ನ ಗಂಡನೆಲ್ಲಿರುವನು? ನೀನೊಬ್ಬಳೇ ಈ ರಾತ್ರಿಯಲ್ಲಿ ಭಯಪಡದೆ ಯಾವ ಕಾರಣದಿಂದ ಇಲ್ಲಿ ಅಳುತ್ತಿರುವೆ? ಎಂದು ಕೇಳಿದರು. ಆಕೆಯು ಮಾತನ್ನೇ ಆಡಲಿಲ್ಲ. ॥೫೭-೫೮॥

ಪುನಃ ಪ್ರಶ್ನೆ ಮಾಡಿದರೂ ಆಕೆಯು ದುಃಖಭಾರದಿಂದ ಸುಮ್ಮನೆ ಅಲ್ಲಾಡದೆ ಕಣ್ಣೀರನ್ನು ಸುರಿಸುತ್ತಾ ಅಳುತ್ತಿದ್ದಳು. ॥೫೯॥

ಆಮೇಲೆ ಕೈಯಲ್ಲಿ ಆಯುಧವನ್ನು ಎತ್ತಿ ಹಿಡಿದುಕೊಂಡಿರುವ ಆ ನಗರ ರಕ್ಷಕರು ಆಕೆಯ ವಿಷಯದಲ್ಲಿ ಸಂದೇಹಪಟ್ಟು ಭಯದಿಂದ ಒಬ್ಬರಿಗೊಬ್ಬರು ಹೀಗೆ ಮಾತನಾಡಿದರು. ॥೬೦॥

ನೂನಂ ಸ್ತ್ರೀ ನ ಭವತ್ಯೇಷಾ ಯತಃ ಕಿಂಚಿನ್ನ ಭಾಷತೇ ।
ತಸ್ಮಾದ್ವಧ್ಯಾ ಭವೇದೇಷಾ ಯತ್ನತೋ ಬಾಲಘಾತಿನೀ ॥೬೧॥

ಶುಭಾ ಚೇತ್ತರ್ಹಿ ಕಿಂ ಹ್ಯತ್ರ ನಿಶಾರ್ಧೇ ತಿಷ್ಠತೇ ಬಹಿಃ ।
ಭಕ್ಷ್ಯಾರ್ಥಮನಯಾ ನೂನಮಾನೀತಃ ಕಸ್ಯಚಿಚ್ಛಿಶುಃ ॥೬೨॥

ಇತ್ಯುಕ್ತ್ವಾ ತೈರ್ಗೃಹೀತಾ ಸಾ ಗಾಢಂ ಕೇಶೇಷು ಸತ್ವರಂ ।
ಭುಜಯೋರಪರೈಶ್ಚೈವ ಕೈಶ್ಚಾಪಿ ಗಲಕೇ ತಥಾ ॥೬೩॥

ಖೇಚರೀ ಯಾಸ್ಯತೀ ತ್ಯುಕ್ತಂ ಬಹುಭಿಃ ಶಸ್ತ್ರಪಾಣಿಭಿಃ ।
ಆಕೃಷ್ಯ ಪಕ್ಕಣೇ ನೀತಾ ಚಾಂಡಾಲಾಯ ಸಮರ್ಪಿತಾ ॥೬೪॥

ಹೇ ಚಂಡಾಲ ಬಹಿರ್ದೃಷ್ಟಾ ಹ್ಯಸ್ಮಾಭಿ ರ್ಬಾಲಘಾತಿನೀ ।
ವಧ್ಯತಾಂ ವಧ್ಯತಾಮೇಷಾ ಶೀಘ್ರಂ ನೀತ್ವಾ ಬಹಿಃಸ್ಥಲೇ ॥೬೫॥

---

ಇವಳು ಒಂದು ಮಾತನ್ನೂ ಆಡುವುದಿಲ್ಲ. ಆದುದರಿಂದ ಇವಳು ನಿಜವಾದ ಹೆಂಗುಸಲ್ಲದಿರಬೇಕು! ಇವಳು ಪ್ರಯತ್ನಪೂರ್ವಕವಾಗಿ ಈ ಬಾಲಕನನ್ನು ಕೊಂದವಳಾಗಿರಬೇಕು! ಆದುದರಿಂದ ಇವಳನ್ನು ನಾವು ತಕ್ಕ ಪ್ರಯತ್ನವನ್ನು ಮಾಡಿ ಕೊಲ್ಲಬೇಕು! ॥೬೧॥

ಹಾಗಲ್ಲದೆ ಇವಳು ಒಳ್ಳೆಯವಳಾದ ಹೆಂಗುಸಾಗಿದ್ದರೆ ಈ ಅರ್ಧರಾತ್ರಿಯಲ್ಲಿ ಈ ಪಟ್ಟಣದ ಹೊರಗೆ ಹೇಗಿದ್ದಾಳು? ನಿಜವಾಗಿಯೂ ಇವಳು ಆಹಾರಕ್ಕಾಗಿ ಯಾರದೋ ಮಗುವನ್ನು ಕೊಂದು ತಿನ್ನಲು ತಂದಿರುವಳು! ॥೬೨॥

ಹೀಗೆಂದು ಹೇಳಿ ಅವರಲ್ಲಿ ಕೆಲವರು ಆಕೆಯ ಕೂದಲನ್ನೂ, ಕೆಲವರು ಕುತ್ತಿಗೆಯನ್ನೂ ಹಿಡಿದುಕೊಂಡರು. ॥೬೩॥

ಆಯುಧವನ್ನು ಧರಿಸಿದ ಆ ನಗರರಕ್ಷಕರು ಇವಳು ಆಕಾಶದಲ್ಲಿ ಹಾರಿ ಹೋಗುವಳೆಂದು ಹೇಳಿ, ಅವಳನ್ನು ಎಳೆದುಕೊಂಡು ಚಂಡಾಲನ ಮನೆಗೆ ಹೋಗಿ ಆ ಚಂಡಾಲನ ವಶಮಾಡಿದರು. ॥೬೪॥

ಎಲೈ ಚಂಡಾಲನೇ, ಇವಳು ಒಂದು ಮಗುವನ್ನು ಕೊಂದಳು! ಈ ಪಟ್ಟಣದ ಹೊರಗೆ ನಮಗೆ ಸಿಕ್ಕಿದಳು! ಇವಳನ್ನು ಪಟ್ಟಣದ ಹೊರಗೆ ಬೇಗನೆ ಕೊಲ್ಲು, ಎಂದರು. ॥೬೫॥

**ಚಾಂಡಾಲಃಸ್ರಾಹ ತಾಂ ದೃಷ್ಟ್ವಾ ಜ್ಞಾತೇಯಂ ಲೋಕವಿಶ್ರುತಾ ।**
**ನ ದೃಷ್ಟಪೂರ್ವಾ ಕೇನಾಪಿ ಲೋಕಡಿಂಭಾನ್ಯನೇಕಧಾ ॥೬೬॥**

**ಭಕ್ಷಿತಾನ್ಯನಯಾ ಭೂರಿ ಭವದ್ಭಿಃ ಪುಣ್ಯಮಾರ್ಜಿತಂ ।**
**ಖ್ಯಾತಿರ್ವಃ ಶಾಶ್ವತೀ ಲೋಕೇ ಗಚ್ಛಧ್ವಂ ಚ ಯಥಾಸುಖಂ ॥೬೭॥**

**ದ್ವಿಜಸ್ತ್ರೀಬಾಲಗೋಘಾತೀ ಸ್ವರ್ಣಸ್ತೇಯೀ ಚ ಯೋ ನರಃ ।**
**ಅಗ್ನಿದೋ ವರ್ತ್ಮಘಾತೀ ಚ ಮದ್ಯಪೋ ಗುರುತಲ್ಪಗಃ ॥೬೮॥**

**ಮಹಾಜನವಿರೋಧೀ ಚ ತಸ್ಯ ಪುಣ್ಯಪ್ರದೋ ವಧಃ ।**
**ದ್ವಿಜಸ್ಯಾಪಿ ಸ್ತ್ರಿಯೋ ವಾಽಪಿ ನ ದೋಷೋ ವಿದ್ಯತೇ ವಧೇ ॥೬೯॥**

**ಅಸ್ಯಾ ವಧಶ್ಚ ಮೇ ಯೋಗ್ಯ ಇತ್ಯುಕ್ತ್ವಾ ಗಾಢ ಬಂಧನೈಃ ।**
**ಬಧ್ವಾ ಕೇಶೇಷ್ವಥಾಕೃಷ್ಯ ರಜ್ಜುಭಿಸ್ತಾಮತಾಡಯತ್ ॥೭೦॥**

---

ಆ ಚಂಡಾಲನು ಅವಳನ್ನು ನೋಡಿ, ಪ್ರಸಿದ್ಧಳಾದ ಇವಳು ಸಿಕ್ಕಿದಳು! ಹಿಂದೆ ಅನೇಕರ ಮಕ್ಕಳು ಏನಾದರೋ ಯಾರಿಗೂ ತಿಳಿಯಲಿಲ್ಲ. ಇವಳೇ ಆ ಅನೇಕ ಮಕ್ಕಳನ್ನು ತಿಂದವಳು! ನೀವು ಇವಳನ್ನು ಹಿಡಿದು ಪುಣ್ಯವನ್ನು ಸಂಪಾದಿಸಿದಿರಿ! ನಿಮಗೆ ಯಶಸ್ಸು ಬರುವುದು. ನೀವು ಹೋಗಿ! ಎಂದು ಹೇಳಿದನು. ||೬೬-೬೭||

ಯಾರು ಬ್ರಾಹ್ಮಣನನ್ನೂ, ಹೆಂಗುಸನ್ನೂ, ಮಕ್ಕಳನ್ನೂ, ಹಸುವನ್ನೂ ಕೊಲ್ಲುವರೋ ಯಾರು ಚಿನ್ನವನ್ನು ಕದಿಯುವ, ಮನೆ, ಮೆದೆ ಮುಂತಾದುವುಗಳಿಗೆ ಬೆಂಕಿಯನ್ನು ಹಾಕುವ, ದಾರಿಯನ್ನು ಹಾಳುಮಾಡುವ, ದಾರಿಗರನ್ನು ನಾಶ ಮಾಡುವ, ಹೆಂಡವನ್ನು ಕುಡಿಯುವ, ಗುರುವಿನ ಹೆಂಡಿತಿಯಲ್ಲಿ ವ್ಯಭಿಚರಿಸುವ, ಮತ್ತು ಮಹಾಜನರಿಗೆ ವಿರೋಧವಾದ ನಡತೆಯಿಂದಿರುವ, ಕೆಲಸಗಳನ್ನು ಮಾಡುವರೋ ಅಂಥವರಿಗೆ ಮರಣದಂಡನೆಯೇ ಪುಣ್ಯಪ್ರದವಾದುದು! ||೬೮||

ಮೇಲೆ ಹೇಳಿದ ಯಾವ ತಪ್ಪಿತವಿದ್ದರೂ ಬ್ರಾಹ್ಮಣನಾಗಲಿ, ಹೆಂಗುಸಾಗಲಿ, ಅಂಥವರನ್ನು ಕೊಲ್ಲುವುದರಲ್ಲಿ ದೋಷವಿಲ್ಲವು. ಆದುದರಿಂದ ಈಕೆಯನ್ನು ಕೊಲ್ಲುವುದು ನನಗೆ ಯೋಗ್ಯವಾದ ಕೆಲಸ! ಎಂದು ಹೇಳಿ ಗಟ್ಟಿಯಾದ ಹಗ್ಗಗಳಿಂದ ಆಕೆಯನ್ನು ಕಟ್ಟಿ, ಕೂದಲುಗಳನ್ನು ಹಿಡಿದು ಎಳೆದು, ಹಗ್ಗಗಳಿಂದ ಅವಳನ್ನು ಹೊಡೆದನು. ||೬೯-೭೦||

ಹರಿಶ್ಚಂದ್ರಮಥೋವಾಚ ವಾಚಾ ಪರುಷಯಾ ತದಾ ।
ರೇ ದಾಸ ವಧ್ಯತಾಮೇಷಾ ದುಷ್ಟಾತ್ಮಾ ಮಾ ವಿಚಾರಯ ॥೨೦॥

ತದ್ವಾಕ್ಯಂ ಭೂಪತಿಃ ಶ್ರುತ್ವಾ ವಜ್ರಪಾತೋಪಮಂ ತದಾ ।
ವೇಪಮಾನೋಽಥ ಚಾಂಡಾಲಂ ಪ್ರಾಹ ಸ್ತ್ರೀವಧಶಂಕಿತಃ ॥೨೧॥

ನ ಶಕ್ತೋಽಹಮಿದಂ ಕರ್ತುಂ ಪ್ರೇಷ್ಯಂ ದೇಹಿ ಮಮಾಪರಂ ।
ಅಸಾಧ್ಯಮಪಿಯತ್ಕರ್ಮ ತತ್ಕರಿಷ್ಯೇ ತ್ವಯೋದಿತಂ ॥೨೩॥

ಶ್ರುತ್ವಾ ತದುಕ್ತಂ ವಚನಂ ಶ್ವಪಚೋ ವಾಕ್ಯಮಬ್ರವೀತ್ ।
ಮಾಭೈಷೀ ಸ್ತ್ವಂ ಗೃಹಾಣಾಽಸಿಂ ವಧೋಽಸ್ಯಾಃ ಪುಣ್ಯದೋ ಮತಃ ॥೨೪॥

ಬಾಲಾನಾಮೇವ ಭಯದಾ ನೇಯಂ ರಕ್ಷ್ಯಾ ಕಥಾಚನ ।
ತಚ್ಛ್ರುತ್ವಾ ವಚನಂ ತಸ್ಯ ರಾಜಾ ವಚನಮಬ್ರವೀತ್ ॥೨೫॥

---

ಆಮೇಲೆ ಹರಿಶ್ಚಂದ್ರನನ್ನು ಕುರಿತು, ಎಲೋ ದಾಸಾ, ಎಂದು ಗಟ್ಟಿಯಾಗಿ ಕೂಗಿ, ಈ ಕೆಟ್ಟ ಹೆಂಗುಸನ್ನು ಕೊಲ್ಲು. ಯಾವ ವಿಚಾರವನ್ನೂ ಮಾಡಬೇಡ! ಎಂದು ಅಪ್ಪಣೆಯನ್ನು ಮಾಡಿದನು. ॥೨೦॥

ಸಿಡಿಲಿನ ಹೊಡೆತಕ್ಕೆ ಸಮಾನವಾದ ಅವನ ಆ ಮಾತನ್ನು ಕೇಳಿ, ರಾಜನು ಹೆಂಗುಸನ್ನು ಕೊಲ್ಲಬೇಕಾಯಿತಲ್ಲ! ಎಂದು ನಡುಗುತ್ತಾ ಚಾಂಡಾಲನನ್ನು ಕುರಿತು ಹೀಗೆ ಹೇಳಿದನು. ॥೨೧॥

ಓ ದಣಿಯೇ, ನಾನು ಈ ಕೆಲಸವನ್ನು ಮಾತ್ರ ಮಾಡಲಾರೆ. ಮತ್ತೇನನ್ನಾದರೂ ಕಾರ್ಯವನ್ನು ನನಗೆ ಅಪ್ಪಣೆ ಮಾಡು. ಇದು ಹೊರತು ಮತ್ತೆ ಯಾವ ಕಷ್ಟಸಾಧ್ಯವಾದ ಕೆಲಸವನ್ನು ನೀನು ಹೇಳಿದರೂ ಅದನ್ನು ನಾನು ಮಾಡುವೆನು. ॥೨೩॥

ಆ ರಾಜನು ಹೇಳಿದ ಮಾತನ್ನು ಕೇಳಿ, ಚಾಂಡಾಲನು, ನೀನು ಹೆಂಗುಸಿನ ವಧೆಗೆ ಹೆದರಬೇಡ. ಕತ್ತಿಯನ್ನು ಹಿಡಿ, ಮಕ್ಕಳನ್ನು ತಿನ್ನುವ ಇವಳನ್ನು ಬಿಡಬಾರದು. ಇವಳನ್ನು ಕೊಲ್ಲುವುದರಿಂದ ಪುಣ್ಯವು ಬರುವುದು! ಎಂದನು. ॥೨೪॥

ಅವನ ಮಾತನ್ನು ಕೇಳಿ ರಾಜನು ಹೀಗೆ ಹೇಳಿದನು—ಸ್ತ್ರೀಯರನ್ನು ಯಾವಾಗಲೂ ಕೊಲ್ಲಕೂಡದು. ಅವರನ್ನು ಪ್ರಯತ್ನಪಟ್ಟು ಕಾಪಾಡಬೇಕು.

ಸ್ತ್ರಿಯೋ ರಕ್ಷ್ಯಾಃ ಪ್ರಯತ್ನೇನ ನ ಹಂತವ್ಯಾಃ ಕದಾಚನ ।
ಸ್ತ್ರೀವಧೇ ಕೀರ್ತಿತಂ ಪಾಪಂ ಮುನಿಭಿರ್ಧರ್ಮತತ್ಪರೈಃ ॥೭೬॥

ಪುರುಷೋ ಯಃ ಸ್ತ್ರಿಯಂ ಹನ್ಯಾತ್ ಜ್ಞಾನತೋಽಜ್ಞಾನತೋಽಪಿವಾ ।
ನರಕೇ ಪಚ್ಯತೇ ಸೋಽಥ ಮಹಾರೌರವಪೂರ್ವಕೇ ॥೭೭॥

॥ ಚಾಂಡಾಲ ಉವಾಚ ॥

ಮಾ ವದಾಽಸಿಂ ಗೃಹಾಣೈನಂ ತೀಕ್ಷ್ಣವಿದ್ಯುತ್ಸಮಪ್ರಭಂ ।
ಯತ್ರೈಕಸ್ಮಿನ್ವಧಂ ನೀತೇ ಬಹೂನಾಂ ತು ಸುಖಂ ಭವೇತ್ ॥೭೮॥

ತಸ್ಯ ಹಿಂಸಾ ಕೃತಾ ನೂನಂ ಬಹುಪುಣ್ಯಪ್ರದಾ ಭವೇತ್ ।
ಭಕ್ಷಿತಾನ್ಯನಯಾ ಭೂರಿ ಲೋಕೇ ಡಿಂಭಾನಿ ದುಷ್ಟಯಾ ॥೭೯॥

ತತ್ಕ್ಷಿಪ್ರಂ ವಧ್ಯತಾಮೇಷಾ ಲೋಕಃ ಸ್ವಸ್ಥೋ ಭವಿಷ್ಯತಿ ।

॥ ರಾಜೋವಾಚ ॥

ಚಾಂಡಾಲಾಧಿಪತೇ ತೀವ್ರಂ ವ್ರತಂ ಸ್ತ್ರೀವಧ ವರ್ಜನಂ ॥೮೦॥
ಆಜನ್ಮತಸ್ತತೋ ಯತ್ನಂ ನ ಕುರ್ಯಾಂ ಸ್ತ್ರೀಧೇ ತವ ।

---

ಧರ್ಮಾಸಕ್ತರಾದ ಮುನಿಗಳು ಸ್ತ್ರೀವಧೆಯನ್ನು ಮಾಡುವುದು ಪಾಪವೆಂದು ಹೇಳಿರುವರು. ॥೭೫-೭೬॥

ಮನುಷ್ಯನು ತಿಳಿದಾದರೂ ತಿಳಿಯದೆಯಾದರೂ ಸ್ತ್ರೀವಧೆಯನ್ನು ಮಾಡಿದರೆ ಭಯಂಕರವಾದ ಮಹಾರೌರವವೇ ಮೊದಲಾದ ನರಕದಲ್ಲಿ ದುಃಖದ ಬೇನೆಯನ್ನನುಭವಿಸುವನು. ॥೭೭॥

ಚಾಂಡಾಲನು ಹೇಳಿದನು—ಎಲೈ ದಾಸನೇ, ನೀನು ಹಾಗೆ ಹೇಳಬೇಡ. ಹರಿತವಾದ ಮಿಂಚಿನಂತೆ ಹೊಳೆಯುವ ಕತ್ತಿಯನ್ನು ಹಿಡಿ. ಯಾವ ಸಂದರ್ಭದಲ್ಲಿ ಒಬ್ಬರನ್ನು ಕೊಲ್ಲುವುದರಿಂದ ಅನೇಕರಿಗೆ ಸುಖವಾಗುವುದೋ, ॥೭೮॥

ಅಂಥವರನ್ನು ಕೊಲ್ಲುವುದು ನಿಜವಾಗಿಯೂ ಪುಣ್ಯಕರವಾದುದು. ಈ ಕೆಟ್ಟ ಹೆಂಗುಸು ಅನೇಕ ಮಕ್ಕಳನ್ನು ತಿಂದಿರುವಳು. ಆದುದರಿಂದ ಇವಳನ್ನು ಬೇಗನೆ ಕೊಲ್ಲು. ಜನರಿಗೆ ಕ್ಷೇಮವಾಗುವುದು. ॥೭೯॥

ರಾಜನು ಹೇಳಿದನು – ಎಲೈ ಚಂಡಾಲರ ಒಡೆಯನೇ, ನಾನು ಹುಟ್ಟಿದಂದಿನಿಂದ ಸ್ತ್ರೀಯನ್ನು ಕೊಲ್ಲುವುದಿಲ್ಲವೆಂಬ ವ್ರತವನ್ನು ಕಟ್ಟುನಿಟ್ಟಿನಿಂದ ನಡೆಸಿಕೊಂಡು

|| ಚಾಂಡಾಲ ಉವಾಚ ||

ಸ್ವಾಮಿಕಾರ್ಯಂ ವಿನಾ ದುಷ್ಟ ಕಿಂ ಕಾರ್ಯಂ ವಿದ್ಯತೇ ಪರಂ ||೪೧||

ಗೃಹೀತ್ವಾ ವೇತನಂ ಮೋಽದ್ಯ ಕಸ್ಮಾತ್ಕಾರ್ಯಂ ವಿಲುಂಪಸಿ ।
ಯಃ ಸ್ವಾಮಿವೇತನಂ ಗೃಹ್ಯ ಸ್ವಾಮಿಕಾರ್ಯಂ ವಿಲುಂಪತಿ ||೪೨||

ನರಕಾನ್ನಿಷ್ಕೃತಿಸ್ತಸ್ಯ ನಾಸ್ತಿ ಕಲ್ಪಾಯುತೈರಪಿ ।

|| ರಾಜೋವಾಚ ||

ಚಾಂಡಾಲನಾಥ ಮೇ ದೇಹಿ ಪ್ರಾಪ್ಯಮನ್ಯತ್ಸುದಾರುಣಂ ||೪೩||

ಸ್ವ ಶತ್ರುಂ ಬ್ರೂಹಿ ತಂ ಕ್ಷಿಪ್ರಂ ಘಾತಯಿಷ್ಯಾಮ್ಯಸಂಶಯಂ ।
ಘಾತಯಿತ್ವಾ ತು ತಂ ಶತ್ರುಂ ತವ ದಾಸ್ಯಾಮಿ ಮೇದಿನೀಂ ||೪೪||

ದೇವದೇವೋರಗೈಃ ಸಿದ್ಧೈರ್ಗಂಧರ್ವೈರಪಿ ಸಂಯುತಂ ।
ದೇವೇಂದ್ರಮಪಿ ಜೇಷ್ಯಾಮಿ ನಿಹತ್ಯ ನಿಶಿತೈಃ ಶರೈಃ ||೪೫||

---

ಬಂದಿರುವೆನು. ಆದುದರಿಂದ ಸ್ತ್ರೀವಧೆರೂಪವಾದ ಈ ನಿನ್ನ ಒಂದು ಆಜ್ಞೆಯನ್ನು ಮಾತ್ರ ನಾನು ನಡೆಸಲಾರೆನು. ||೪೦||

ಚಾಂಡಾಲನು ಹೇಳಿದನು---ಎಲೈ ದುಷ್ಟನೇ, ಆಳಿಗೆ ಒಡೆಯನ ಅಪ್ಪಣೆಯನ್ನು ನಡೆಸುವುದನ್ನು ಬಿಟ್ಟು ಬೇರೆ ಉತ್ತಮವಾದ ಕೆಲಸವಿದೆಯೇ? ಸಂಬಳವನ್ನು ತೆಗೆದುಕೊಂಡು ಒಡೆಯನ ಕಾರ್ಯವನ್ನು ಯಾವನು ನೆರವೇರಿಸದೆ ಹಾಳುಮಾಡುತ್ತಾನೆಯೋ ಅವನಿಗೆ ಹತ್ತುಸಾವಿರ ಕಲ್ಪಗಳಾದರೂ ನರಕವಾಸವು ತಪ್ಪುವುದಿಲ್ಲ. ||೪೧-೪೨||

ರಾಜನು ಹೇಳಿದನು---ಓ ಚಂಡಾಲರ ಒಡೆಯನೇ, ನನಗೆ ಬಹಳ ಕಷ್ಟವಾದ ಮತ್ತೊಂದು ತುಂಬ ಕಠಿನವಾದ ಕೆಲಸವನ್ನು ಕೊಡು. ನಿನ್ನ ಶತ್ರುವಾದರೂ ಇದ್ದರೆ ಹೇಳು, ಅವನನ್ನು ಬೇಗನೆ ಕೊಂದು ನಿನಗೆ ಭೂಮಿಯನ್ನೇ ವಶಮಾಡುವೆನು. ||೪೩-೪೪||

ಓ ಒಡೆಯನೇ, ದೇವತೆಗಳು, ಉರಗರು, ಸಿದ್ಧರು, ಗಂಧರ್ವರು, ಇವರೊಡನೆ ಸೇರಿದ ದೇವೇಂದ್ರನನ್ನೂ ಕೂಡ ನಿನಗೋಸ್ಕರವಾಗಿ ಕ್ರೂರವಾದ ಬಾಣಗಳಿಂದ ಕೊಂದು ಜಯವನ್ನು ಪಡೆಯುವೆನು. ||೪೫||

ಏತಚ್ಛ್ರುತ್ವಾ ತತೋ ವಾಕ್ಯಂ ಹರಿಶ್ಚಂದ್ರಸ್ಯ ಭೂಪತೇಃ ।
ಚಾಂಡಾಲಃ ಕುಪಿತಃ ಪ್ರಾಹ ವೇಪಮಾನಂ ಮಹೀಪತಿಂ ॥೮೬॥

॥ ಚಾಂಡಾಲ ಉವಾಚ ॥

ನೈತದ್ವಾಕ್ಯಂ ಸುಘಟಿತಂ ಯದ್ವಾಕ್ಯಂ ದಾಸಕೀರ್ತಿತಂ ।
ಚಾಂಡಾಲದಾಸತಾಂ ಕೃತ್ವಾ ಶೂರಾಣಾಂ ಭಾಷಸೇ ವಚಃ ॥೮೭॥

ದಾಸ ಕಿಂ ಬಹುನಾ ನೂನಂ ಶೃಣು ಮೇ ಗದತೋ ವಚಃ ।
ನಿರ್ಲಜ್ಜ ತವ ಚೇದಸ್ತಿ ಕಿಂಚಿತ್ಪಾಪಭಯಂ ಹೃದಿ ॥೮೮॥

ಕಿಮರ್ಥಂ ದಾಸತಾಂ ಯಾತಶ್ಚಾಂಡಾಲಸ್ಯತು ವೇಶ್ಮನಿ ।
ಗೃಹಾಣೈನಂ ತತಃ ಖಡ್ಗಮಸ್ಯಾಶ್ಛಿಂಧಿ ಶಿರೋಽಂಬುಜಂ ॥೮೯॥
ಏವಮುಕ್ತ್ವಾಽಥ ಚಾಂಡಾಲೋ ರಾಜ್ಞೇ ಖಡ್ಗಂ ನ್ಯವೇದಯತ್ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಪಂಚವಿಂಶೋಽಧ್ಯಾಯಃ

---

ಆಮೇಲೆ ಹೀಗೆಂದು ಹೇಳಿ ನಡುಗುತ್ತಾ ಇರುವ ದೊರೆಯಾದ ಹರಿಶ್ಚಂದ್ರನ ಮಾತನ್ನು ಕೇಳಿ ಚಾಂಡಾಲನು ಕೋಪದಿಂದ ಆ ದೊರೆಯನ್ನು ಕುರಿತು ಹೀಗೆ ಹೇಳಿದನು. ॥೮೬॥

ಚಾಂಡಾಲನು ಹೇಳಿದನು—ಎಲೈ ದಾಸನೇ, ಆಳಾದ ನೀನು ಹೇಳುತ್ತಿರುವ ಈ ಮಾತನ್ನು ನನಗೆ ಹೇಳುವುದು ನಿನಗೆ ತಕ್ಕುದಲ್ಲ. ನೀನು ಚಾಂಡಾಲನಾದ ನನ್ನ ಆಳಾಗಿದ್ದರೂ ಶೂರನಾದ ಕ್ಷತ್ರಿಯರ ವೀರವಾದದ ಮಾತನ್ನಾಡುತ್ತೀಯೆ? ಹೆಚ್ಚಾಗಿ ಹೇಳುವುದೇನು? ನನ್ನ ಮಾತನ್ನು ತಪ್ಪದೆ ಕೇಳು. ॥೮೭॥

ನಾಚಿಕೆಯಿಲ್ಲದವನೇ, ನಿನ್ನ ಮನಸ್ಸಿನಲ್ಲಿ ಪಾಪದ ಭಯವಿದ್ದರೆ ಚಾಂಡಾಲನ ಮನೆಯಲ್ಲಿ ಏತಕ್ಕೆ ಆಳಾಗಿರುವೆ? ॥೮೮॥

ಆದುದರಿಂದ ಬದಲು ಮಾತನ್ನಾಡದೆ ಈ ಕತ್ತಿಯನ್ನು ತೆಗೆದುಕೋ, ಈಕೆಯ ತಲೆಯನ್ನು ಕತ್ತರಿಸು, ಎಂದು ಹೇಳಿ ಚಾಂಡಾಲನು ರಾಜನ ಕೈಗೆ ಕತ್ತಿಯನ್ನು ಕೊಟ್ಟನು. ॥೮೯॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಷಡ್ವಿಂಶೋಽಧ್ಯಾಯಃ ||

### ಇಪ್ಪತ್ತಾರನೆಯ ಅಧ್ಯಾಯವು

|| ಸೂತ ಉವಾಚ ||

ತತೋಽಥ ಭೂಪತಿಃ ಪ್ರಾಹ ರಾಜ್ಞೀಂ ಸ್ಥಿತ್ವಾ ಹ್ಯಧೋಮುಖಃ ।
ಅತ್ರೋಪವಿಶ್ಯತಾಂ ಬಾಲೇ ಪಾಪಸ್ಯ ಪುರತೋ ಮಮ ॥೧॥

ಶಿರಸ್ತೇ ಛೇದಯಿಷ್ಯಾಮಿ ಹಂತುಂ ಶಕ್ನೋತಿ ಚೇತ್ಕರಃ ।
ಏವಮುಕ್ತ್ವಾ ಸಮುದ್ಯಮ್ಯ ಖಡ್ಗಂ ಹಂತುಂ ಗತೋ ನೃಪಃ ॥೨॥

ನ ಜಾನಾತಿ ನೃಪಃ ಪತ್ನೀಂ ಸಾ ನ ಜಾನಾತಿ ಭೂಪತಿಂ ।
ಅಬ್ರವೀದ್ಭೃಶಂ ದುಃಖಾರ್ತಾ ಸ್ವಮೃತ್ಯುಮಭಿಕಾಂಕ್ಷತೀ ॥೩॥

---

ಆಮೇಲೆ ಹರಿಶ್ಚಂದ್ರರಾಜನು ತಲೆಯನ್ನು ತಗ್ಗಿಸಿ ನೆಲವನ್ನು ನೋಡುತ್ತಾ ನಿಂತುಕೊಂಡು ರಾಣಿಯನ್ನು ಕುರಿತು, ಎಲೈ ಹುಡುಗಿಯೇ, ಪಾಪಿಯಾದ ನನ್ನ ಇದುರಿಗೆ ಇಲ್ಲಿ ಕುಳಿತುಕೋ, ಕೊಲ್ಲುವುದಕ್ಕೆ ನನ್ನ ಕೈಯಲ್ಲಿ ಶಕ್ತಿ ಇದ್ದರೆ ನಿನ್ನ ತಲೆಯನ್ನು ಕತ್ತರಿಸುವೆನು. ||೧||

ಹೀಗೆಂದು ಹೇಳಿ ರಾಜನು ಕತ್ತಿಯನ್ನು ಮೇಲಕ್ಕೆ ಎತ್ತಿ ಕೊಲ್ಲುವುದಕ್ಕೆ ಹೋದನು. ರಾಜನಿಗೆ ಅವಳು ತನ್ನ ಹೆಂಡಿತಿಯು ಎಂಬುದೂ, ಆಕೆಗೆ ಇವನು ತನ್ನ ಗಂಡನಾದ ರಾಜನೆಂಬುದೂ ತಿಳಿಯಲಿಲ್ಲ. ಆಗ ಆಕೆಯು ತನ್ನ ಮರಣವನ್ನು ಅಪೇಕ್ಷಿಸುತ್ತಾ ಅತ್ಯಂತ ದುಃಖದಿಂದ ಹೇಳಿದಳು. ||೨-೩||

॥ ಸ್ತ್ರ್ಯುವಾಚ ॥

ಚಾಂಡಾಲ ಶೃಣು ಮೇ ವಾಕ್ಯಂ ಕಿಂಚಿತ್ತ್ವಂ ಯದಿ ಮನ್ಯಸೇ ।
ಮೃತಸ್ತಿಷ್ಠತಿ ಮೇ ಪುತ್ರೋ ನಾತಿದೂರೇ ಬಹಿಃಪುರಾತ್ ॥೪॥

ತಂ ದಹಾಮಿ ಹತಂ ಯಾವದಾನಯಿತ್ವಾ ತವಾಂತಿಕಂ ।
ತಾವತ್ಪ್ರತೀಕ್ಷ್ಯತಾಂ ಪಶ್ಚಾದಸಿನಾ ಘಾತಯಸ್ವ ಮಾಂ ॥೫॥

ತೇನಾಥ ಬಾಢಮಿತ್ಯುಕ್ತ್ವಾ ಪ್ರೇಷಿತಾ ಬಾಲಕಂ ಪ್ರತಿ ।
ಸಾ ಜಗಾಮಾತಿದುಃಖಾರ್ತಾ ವಿಲಪಂತೀ ಸುಚಾರುಣಂ ॥೬॥

ಭಾರ್ಯಾ ತಸ್ಯ ನರೇಂದ್ರಸ್ಯ ಸರ್ಪದಷ್ಟಂ ಹಿ ಬಾಲಕಂ ।
ಹಾ ಪುತ್ರ ಹಾ ವತ್ಸ ಶಿಶೋ ಇತ್ಯೇವಂ ವದತೀ ಮುಹುಃ ॥೭॥

ಕೃಶಾ ವಿವರ್ಣಾ ಮಲಿನಾ ಪಾಂಸುಧ್ವಸ್ತ ಶಿರೋರುಹಾ ।
ಸ್ಮಶಾನಭೂಮಿ ಮಾಗತ್ಯ ಬಾಲಂ ಸ್ಥಾಪ್ಯಾವಿಶದ್ಭುವಿ ॥೮॥

---

ಎಲೈ ಚಾಂಡಾಲನೇ, ನಿನಗೆ ಮನಸ್ಸಿಗೆ ಒಪ್ಪಿಗೆ ಬಂದರೆ ನಾನು ಹೇಳುವ ಮಾತನ್ನು ಸ್ವಲ್ಪ ಕೇಳು. ಈ ಪಟ್ಟಣದ ಹೊರಗೆ ಸ್ವಲ್ಪ ದೂರದಲ್ಲಿಯೇ ನನ್ನ ಮಗನು ಸತ್ತು ಬಿದ್ದಿರುವನು. ಅವನನ್ನು ನಿನ್ನ ಸಮಿಪಕ್ಕೆ ತಂದು, ಇಲ್ಲಿಯೇ ದಹನಕ್ರಿಯೆಯನ್ನು ಮಾಡುವೆನು. ಅಲ್ಲಿಯವರೆಗೆ ನನಗೆ ಅವಕಾಶವನ್ನು ಕೊಟ್ಟು, ಆ ಮೇಲೆ ಕತ್ತಿಯಿಂದ ನನ್ನನ್ನು ಕತ್ತರಿಸು. ಎಂದಳು. ॥೪-೫॥

ಆಮೇಲೆ ಅವನು ಹಾಗೆಯೇ ಆಗಲಿ. ಎಂದು ಹೇಳಿ ಹುಡುಗನ ಸಮಿಪಕ್ಕೆ ಕಳುಹಿಸಿಕೊಟ್ಟನು. ಆಕೆಯು ಬಹಳ ದುಃಖದಿಂದ ಗಟ್ಟಿಯಾಗಿ ಅಳುತ್ತಾ ಹೊರಟು ಹೋದಳು. ॥೬॥

ಆ ರಾಜನ ಪತ್ನಿಯು ಹಾವು ಕಚ್ಚಿದ ಮಗನನ್ನು ಕುರಿತು ಅಯ್ಯೋ ಮಗನೇ, ಪ್ರೀತಿಯ ಚಿಕ್ಕ ಹುಡುಗನೇ, ಎಂದು ಮುಂತಾಗಿ ಹಂಬಲಿಸಿ ಅಳುತ್ತಾ, ಕೃಶಳಾಗಿ ಕೊಳೆಬಟ್ಟೆಯನ್ನುಟ್ಟು, ಧೂಳು ತುಂಬಿದ ತಲೆಯ ಕೂದಲುಗಳಿಂದ ಕೂಡಿರುವ ಅವಳು ಮಗನನ್ನೆತ್ತಿಕೊಂಡು ಬಂದು, ಸ್ಮಶಾನ ಭೂಮಿಯಲ್ಲಿ ಇಟ್ಟು ತಾನೂ ನೆಲದ ಮೇಲೆ ಕುಳಿತಳು. ॥೭-೮॥

ರಾಜನ್ನದ್ಯ ಸ್ವಬಾಲಂ ತಂ ಪಶ್ಯಸೀಹ ಮಹೀತಲೇ ।
ರಮಮಾಣಂ ಸ್ವಸಖಾಭಿರ್ದಷ್ಟಂ ದುಷ್ಟಾಹಿನಾ ಮೃತಂ ॥೯॥

ತಸ್ಯಾ ವಿಲಾಪಶಬ್ದಂ ತನ್ನಾಕರ್ಣ್ಯ ಸ ನರಾಧಿಪಃ ।
ಶವಸನ್ನಿಧಿಮಾಗತ್ಯ ವಸ್ತ್ರಮುಸ್ಯಾಕ್ಷಿಪತ್ತದಾ ॥೧೦॥

ತಾಂ ತಥಾ ರುದತೀಂ ಭಾರ್ಯಾಂ ನಾಭಿಜಾನಾತಿ ಭೂಮಿಪಃ ।
ಚಿರಪ್ರವಾಸಸಂತಪ್ತಾಂ ಪುನರ್ಜಾತಾ ಮಿವಾಬಲಾಂ ॥೧೧॥

ಸಾಽಪಿ ತಂ ಚಾರು ಕೇಶಾಂತಂ ಪುರೋ ದೃಷ್ಟ್ವಾ ಜಟಾಲಕಂ ।
ನಾಭ್ಯಜಾನಾನ್ನೃಪವರಂ ಶುಷ್ಕವೃಕ್ಷತ್ವಚೋಪಮಂ ॥೧೨॥

ಭೂಮೌ ನಿಪತಿತಂ ಬಾಲಂ ದೃಷ್ಟ್ವಾಽಶೀವಿಷಪೀಡಿತಂ ।
ನರೇಂದ್ರ ಲಕ್ಷಣೋಪೇತಮಚಿಂತಯದಸೌ ನೃಪಃ ॥೧೩॥

---

ಓ ರಾಜನೇ, ತನ್ನ ಗೆಳೆಯರ ಜತೆಯಲ್ಲಿ ಆಡುತ್ತಿದ್ದಾಗ ಕೆಟ್ಟ ಹಾವು ಕಡಿದು ಸತ್ತಿರುವ ಈಗ ಇಲ್ಲಿ ನೆಲದ ಮೇಲೆ ಬಿದ್ದಿರುವ ನನ್ನ ಈ ಮಗನನ್ನು ನೋಡುತ್ತಿರುವೆಯಾ ? ಎಂದು ಅಳುತ್ತಿರುವ ಆಕೆಯ ಶಬ್ದವನ್ನು ಕೇಳಿ ರಾಜನು ಹೆಣದ ಬಳಿಗೆ ಬಂದು, ಆ ಹೆಣಕ್ಕೆ ಮುಚ್ಚಿದ್ದ ಬಟ್ಟೆಯನ್ನು ತೆಗೆದುಕೊಳ್ಳಲು ಎಳೆದನು. ||೯-೧೦||

ರಾಜನು ಬಹಳಕಾಲದಿಂದ ಅಗಲಿದ್ದುದರಿಂದುಂಟಾದ ದುಃಖದಿಂದ ರೂಪಾಂತರವನ್ನು ಹೊಂದಿದ್ದ ತನ್ನ ಹೆಂಡಿತಿಯನ್ನು ಗುರುತಿಸಲಾಗಲಿಲ್ಲ. ||೧೧||

ಆಕೆಯೂ ಕೂಡ ಒಣಗಿದ ಮರದ ತೊಗಟೆಯಂತೆ ವಿಕಾರವಾದ ಮತ್ತು ಜಟೆಯಾಗಿ ಕಟ್ಟಿದ ಕೂದಲುಗಳುಳ್ಳ ರಾಜನನ್ನು ಎದುರಿಗೆ ನೋಡುತ್ತಿದ್ದರೂ ತನ್ನ ಗಂಡನಾದ ದೊರೆಯೆಂದು ಗುರುತಿಸಲಾಗಲಿಲ್ಲ. ||೧೨||

ಆದರೆ ಹಾವು ಕಡಿದು ಸತ್ತು ಭೂಮಿಯ ಮೇಲೆ ಬಿದ್ದಿರುವ ಬಾಲಕನು ರಾಜಲಕ್ಷಣಗಳಿಂದ ಕೂಡಿರುವುದನ್ನು ನೋಡಿ ರಾಜನು ಆಲೋಚಿಸಿದನು. ||೧೩||

ಅಸ್ಯ ಪೂರ್ಣೇಂದುವದ್ವಕ್ತ್ರಂ ಶುಭಮುನ್ನಸಮುನ್ನಸಂ ।
ದರ್ಪಣಪ್ರತಿಮೋತ್ತುಂಗಂ ಕಪೋಲಯುಗಶೋಭಿತಂ ॥೧೪॥

ನೀಲಾನ್ಕೇಶಾನ್ಕುಂಚಿತಾಗ್ರಾನ್ಸಮಾನ್ದೀರ್ಘಾಂಸ್ತರಂಗಿಣಃ ।
ರಾಜೀವ ಸದೃಶೇ ನೇತ್ರೇ ಓಷ್ಠೌ ಬಿಂಬಫಲೋಪಮೌ ॥೧೫॥

ವಿಶಾಲವಕ್ಷಾ ದೀರ್ಘಾಕ್ಷೋ ದೀರ್ಘಬಾಹೂನ್ನತಾಂಸಕಃ ।
ವಿಶಾಲಪಾದೋ ಗಂಭೀರಃ ಸೂಕ್ಷ್ಮಾಂಗುಲ್ಯವನೀಧರಃ ॥೧೬॥

ಮೃಣಾಲಪಾದೋ ಗಂಭೀರನಾಭಿರುದ್ಧತಕಂಧರಃ ।
ಅಹೋ ಕಷ್ಟಂ ನರೇಂದ್ರಸ್ಯ ಕಸ್ಯಾಪ್ಯೇಷ ಕುಲೇ ಶಿಶುಃ ॥೧೭॥

ಜಾತೋ ನೀತಃ ಕೃತಾಂತೇನ ಕಾಲಪಾಶಾದ್ದುರಾತ್ಮನಾ ।

---

ಈ ಹುಡುಗನಿಗೆ ಪೂರ್ಣಚಂದ್ರನಂತೆ ನೋಡುವವರ ಮನಸ್ಸಿಗೆ ಸಂತೋಷ ವನ್ನುಂಟುಮಾಡುವ ಮುಖವೂ, ಮಂಗಳಕರವಾದ ಪೆಟ್ಟಿನ ಕಲೆಗಳಿಲ್ಲದ, ಎತ್ತರ ವಾದ ಮೂಗೂ, ಕನ್ನಡಿಯಂತೆ ಹೊಳೆಯುತ್ತಿರುವ ಕೆನ್ನೆಗಳೂ ಪ್ರಕಾಶಿಸುತ್ತಿವೆ. ॥೧೪॥

ಇವನ ತಲೆಯಲ್ಲಿ ಕೂದಲುಗಳು ನೀಲವರ್ಣವಾಗಿಯೂ, ಸರಳವಾಗಿಯೂ, ಉದ್ದವಾಗಿಯೂ, ತುದಿಯಲ್ಲಿ ಬಗ್ಗಿಯೂ, ಅಲೆಗಳಂತೆ ಇರುವ ಮುಂಗುರುಳಿನಿಂದ ಕೂಡಿಯೂ ಶೋಭಿಸುತ್ತಿವೆ. ಕಣ್ಣುಗಳು ಕಮಲದಂತೆಯೂ, ತುಟಿಗಳು ತೊಂಡೆಯ ಹಣ್ಣಿನಂತೆ ಕೆಂಪಗೂ, ಇವೆ. ॥೧೫॥

ವಿಸ್ತಾರವಾದ ಎದೆಯೂ, ಉದ್ದವಾದ ಕಣ್ಣುಗಳೂ, ನೀಳವಾದ ತೋಳು ಗಳೂ, ಎತ್ತರವಾದ ಭುಜಗಳೂ, ವಿಸ್ತಾರವಾದ ಹೆಜ್ಜೆಯೂ, ಸೂಕ್ಷ್ಮವಾದ ಬೆರಳೂ ಇರುವುವು. ॥೧೬॥

ತಾವರೆದಂಟಿನಂತೆ ಮೃದುವಾದ ಕಾಲುಗಳೂ, ಆಳವಾದ ಹೊಕ್ಕುಳೂ, ಉದ್ದವಾದ ಕುತ್ತಿಗೆಯೂ, ಇರುವುವು. ಇವನು ಯಾವನೋ ಒಬ್ಬ ರಾಜನ ವಂಶ ದಲ್ಲಿ ಹುಟ್ಟಿದವನಾಗಿರಬೇಕು ! ದುಷ್ಟನಾದ ಯಮನು ಇವನನ್ನು ಕಾಲಪಾಶದಿಂದ ಕಟ್ಟಿ ತೆಗೆದುಕೊಂಡು ಹೋಗಿರುವನು ! ॥೧೭॥

|| ಸೂತ ಉವಾಚ ||

ಏವಂ ದೃಷ್ಟ್ವಾಽಥ ತಂ ಬಾಲಂ ಮಾತುರಂಕೇ ಪ್ರಸಾರಿತಂ ॥೧೮॥

ಸ್ಮೃತಿಮಭ್ಯಾಗತೋ ರಾಜಾ ಹಾಹೇತ್ಯಶ್ರೂಣ್ಯಪಾತಯತ್ ।
ಸೋಽಪ್ಯುವಾಚ ಚ ವತ್ಸೋ ಮೇ ದಶಾಮೇತಾಮುಪಾಗತಃ ॥೧೯॥

ನೀತೋ ಯದಿ ಚ ಘೋರೇಣ ಕೃತಾಂತೇನಾತ್ಮನೋ ವಶಂ ।
ವಿಚಾರಯಿತ್ವಾ ರಾಜಾಽಸೌ ಹರಿಶ್ಚಂದ್ರಸ್ತಥಾ ಸ್ಥಿತಃ ॥೧೯॥

ತತೋ ರಾಜ್ಞೀ ಮಹಾದುಃಖಾವೇಶಾದಿದಮಭಾಷತ ।

|| ರಾಜ್ಞ್ಯುವಾಚ ||

ಹಾವತ್ಸ ಕಸ್ಯ ಪಾಪಸ್ಯ ತ್ವಪಧ್ಯಾನಾದಿದಂ ಮಹತ್ ॥೨೦॥

ದುಃಖಮಾಪತಿತಂ ಘೋರಂ ತದ್ರೂಪಂ ನೋಪಲಭ್ಯತೇ ।
ಹಾ ನಾಥ ರಾಜನ್ ಭವತಾ ಮಾಮಪಾಸ್ಯ ಸುದುಃಖಿತಾಂ ॥೨೨॥

---

ಸೂತನು ಹೇಳಿದನು—ತಾಯಿಯ ತೊಡೆಯ ಮೇಲೆ ಮಲಗಿದ್ದ ಬಾಲಕನನ್ನು ನೋಡಿ ರಾಜನು ತನ್ನ ಮಗನನ್ನು ನೆನೆದು ಅಯ್ಯೋ ಎಂದು ಕಣ್ಣೀರನ್ನು ಸುರಿಸಿದನು. ||೧೮||

ಮತ್ತು ರಾಜನು ನನ್ನ ಮಗನೇ ಏನಾದರೂ ಹೀಗಾದನೇ? ಕ್ರೂರನಾದ ಯಮನು ನನ್ನ ಪ್ರಿಯಪುತ್ರನನ್ನು ತನ್ನ ವಶಮಾಡಿಕೊಂಡು ತೆಗೆದುಕೊಂಡು ಹೋದನೇ? ಎಂದು ವಿಚಾರಮಾಡುತ್ತಾ, ಹಾಗೆಯೇ ಆತಂಕಪಡುತ್ತಾ ನಿಂತುಕೊಂಡನು. ||೧೯-೨೦||

ಆ ಮೇಲೆ ರಾಣಿಯೂ ವಿಶೇಷವಾದ ದುಃಖದಿಂದ ಅಯ್ಯೋ ಮಗನೇ ಯಾವ ಪಾಪಕಾರ್ಯದಿಂದ ಮತ್ತು ದುರಾಲೋಚನೆಯಿಂದ ಈ ಭಯಂಕರವಾದ ದುಃಖವು ಬಂದಿತು. ಆ ಪಾಪದ ಸ್ವರೂಪವನ್ನು ಕಾಣೆನಲ್ಲಾ! ||೨೧||

ಅಯ್ಯೋ ನನ್ನೊಡೆಯನಾದ ಧೊರೆಯೇ, ನೀನು ದುಃಖಪಡುತ್ತಿರುವ ನನ್ನನ್ನು ಬಿಟ್ಟು ಯಾವ ಸ್ಥಳದಲ್ಲಿ ಮನಸ್ಸಿಗೆ ಸ್ವಲ್ಪವೂ ಯೋಚನೆ ಇಲ್ಲದೆ ಇರುವೆ? ||೨೨||

**ಕಸ್ಮಿನ್ಸಂಸ್ಥೀಯತೇ ಸ್ಥಾನೇ ವಿಶ್ರಬ್ಧಂ ಕೇನ ಹೇತುನಾ ।**
**ರಾಜ್ಯನಾಶಃ ಸುಹೃತ್ತ್ಯಾಗೋ ಭಾರ್ಯಾತನಯ ವಿಕ್ರಯಃ ॥೨೩॥**

**ಹರಿಶ್ಚಂದ್ರಸ್ಯ ರಾಜರ್ಷೇಃ ಕಿಂ ವಿಧಾತಃ ಕೃತಂ ತ್ವಯಾ ।**
**ಇತಿ ತಸ್ಯಾ ವಚಃ ಶ್ರುತ್ವಾ ರಾಜಾ ಸ್ಥಾನಚ್ಯುತಸ್ತದಾ ॥೨೪॥**

**ಪ್ರತ್ಯಭಿಜ್ಞಾಯ ದೇವೀಂ ತಾಂ ಪುತ್ರಂ ಚ ನಿಧನಂ ಗತಂ ।**
**ಕಷ್ಟಂ ಮಮೈವ ಪತ್ನೀಯಂ ಬಾಲಕಶ್ಚಾಪಿ ಮೇ ಸುತಃ ॥೨೫॥**

**ಜ್ಞಾತ್ವಾ ಪಪಾತ ಸಂತಪ್ತೋ ಮೂರ್ಛಾಮತಿ ಜಗಾಮ ಹ ।**
**ಸಾ ಚ ತಂ ಪ್ರತ್ಯಭಿಜ್ಞಾಯ ತಾಮವಸ್ಥಾಮುಪಾಗತಂ ॥೨೬॥**

**ಮೂರ್ಛಿತಾ ನಿಪಪಾತಾರ್ತಾ ನಿಶ್ಚೇಷ್ಟಾ ಧರಣೀ ತಲೇ ।**
**ಚೇತನಾಂ ಪ್ರಾಪ್ಯ ರಾಜೇಂದ್ರೋ ರಾಜಪತ್ನೀ ಚ ತೌ ಸಮಂ ॥೨೭॥**
**ವಿಲೇಪತುಃ ಸುಸಂತಪ್ತೌ ಶೋಕಭಾರೇಣ ಪೀಡಿತೌ ।**

---

ಎಲೈ ವಿಧಿಯೇ! ರಾಜರ್ಷಿಯಾದ ಆ ಹರಿಶ್ಚಂದ್ರನಿಗೆ ರಾಜ್ಯನಾಶವನ್ನೂ ಮಿತ್ರರ ಅಗಲಿಕೆಯನ್ನೂ ಹೆಂಡತಿಮಕ್ಕಳ ಮಾರಾಟವನ್ನೂ ಏತಕ್ಕಾಗಿ ಉಂಟು ಮಾಡಿಸಿದೆ ? ॥೨೩॥

ಹೀಗೆಂದ ಆಕೆಯ ಮಾತನ್ನು ಕೇಳಿ, ಹೋಗಿದ್ದ ಪದವಿಯ ರಾಜನು ತಾನು ನಿಂತಿದ್ದ ಸ್ಥಳವನ್ನು ಬಿಟ್ಟು, ರಾಣಿಯನ್ನೂ ಸತ್ತಮಗನನ್ನೂ ತನ್ನ ಪತ್ನೀಪುತ್ರರೇ ಇವರೆಂದೂ ತನ್ನ ಆ ಮಗನೇ ಸತ್ತುಹೋಗಿರುವನೆಂದೂ ನಿಶ್ಚಯಿಸಿ, ॥೨೪॥

ಹಾ ವಿಧಿಯೇ, ಇವಳೇ ನನ್ನ ಪತ್ನಿಯು, ಇವನೇ ನನ್ನ ಮಗನು ; ಎಂದು ತಿಳಿದು ದುಃಖದಿಂದ ಸಂತಾಪಗೊಂಡು ಹೆಚ್ಚಾಗಿ ಮೈಮರೆತು ಮೂರ್ಛಿತನಾಗಿ ಬಿದ್ದನು. ॥೨೫॥

ಹಾಗೆ ಮೈಮರೆತು ಬಿದ್ದ ರಾಜನನ್ನು ನೋಡಿ, ರಾಣಿಯೂ ಕೂಡ ಇವನೇ ತನ್ನ ಪತಿಯೆಂದು ನಿಶ್ಚಯಿಸಿ, ತಾನೂ ಮೈಮರೆತು ನೆಲದಮೇಲೆ ಬಿದ್ದಳು. ಆ ಮೇಲೆ ಇಬ್ಬರೂ ಸ್ವಲ್ಪಕಾಲದಲ್ಲಿಯೇ ಎಚ್ಚತ್ತು ದುಃಖದಿಂದ ಇಬ್ಬರೂ ಒಂದೇ ಸಮವಾಗಿ ಹೆಚ್ಚಾಗಿ ಸಂತಾಪ ಪಡುತ್ತಾ ಅತ್ತರು. ॥೨೬-೨೭॥

|| ರಾಜೋವಾಚ ||

ಹಾ ವತ್ಸ ಸುಕುಮಾರಂ ತೇ ವದನಂ ಕುಂಚಿತಾಲಕಂ ||೨೮||

ಪಶ್ಯತೋ ಮೇ ಮುಖಂ ದೀನಂ ಹೃದಯಂ ಕಿಂ ನ ದೀರ್ಯತೇ ।
ತಾತ ತಾತೇತಿ ಮಧುರಂ ಬ್ರುವಾಣಂ ಸ್ವಯಮಾಗತಂ ||೨೯||

ಉಪಗುಹ್ಯೈಕದಾ ವಕ್ಷ್ಯೇ ವತ್ಸ ವತ್ಸೇತಿ ಸೌಹೃದಾತ್ ।
ಕಸ್ಯ ಜಾನುಪ್ರಣೀತೇನ ಪಿಂಗೇನ ಕ್ಷಿತಿರೇಣುನಾ ||೩೦||

ಮಮೋತ್ತರೀಯಮುತ್ಸಂಗಂ ತಥಾಂಗಂ ಮಲಮೇಷ್ಯತಿ ।
ನವಾಽಲಂ ಮಮ ಸಂಭೂತಂ ಮನೋ ಹೃದಯನಂದನ ||೩೧||

ಮಯಾಽಸಿ ಪಿತೃಮಾನ್ಪಿತ್ರಾ ವಿಕ್ರೀತೋ ಯೇನ ವಸ್ತುವತ್ ।
ಗತಂ ರಾಜ್ಯಮಶೇಷಂ ಮೇ ಸಬಾಂಧವ ಧನಂ ಮಹತ್ ||೩೨||
ಹೀನ ದೈವಾನ್ನೃಶಂಸೇನ ದೃಷ್ಟೋ ಮೇ ತನಯಸ್ತತಃ ।

---

ರಾಜನು ಹೇಳಿದನು—ಅಯ್ಯೋ ಮಗನೆ! ಬಗ್ಗಿದ ಮುಂಗುರುಳುಗಳಿಂದ ಕೂಡಿದ ನಿನ್ನ ಮನೋಹರವಾಗಿದ್ದ ಮುಖವನ್ನು ಈಗ ಮರಣದಿಂದ ಸಂಕಟಕರವಾಗಿರುವುದನ್ನು ನೋಡುತ್ತಿರುವ ನನ್ನ ಬಾಡಿರುವ ಮುಖವೂ ಮಾಸಲಾಗಿರುವ ಎದೆಯೂ ಏಕೆ ಸೀಳಿಹೋಗಲಿಲ್ಲ! ||೨೮||

ಅಪ್ಪಾ! ಅಪ್ಪಾ! ಎಂದು ಇಂಪಾಗಿ ಮಾತನಾಡುತ್ತಾ ನೀನಾಗಿಯೇ ನನ್ನ ಹತ್ತಿರಕ್ಕೆ ಬಂದ ನಿನ್ನನ್ನು ತಬ್ಬಿಕೊಂಡು ಪ್ರೀತಿಯಿಂದ ಮಗುವೇ, ಮಗುವೇ, ಎಂದು ಒಂದೊಂದು ಸಾರಿ ಎನ್ನುತ್ತಿದ್ದೆನು! ||೨೯||

ಬಾಲಕವಾದ ನಿನ್ನ ಮಂಡಿಗೆ ಅಂಟಿಕೊಂಡಿದ್ದ ಕೆಂಪಾದ ಧೂಳುಗಳಿಂದ ನನ್ನ ವಸ್ತ್ರವೂ, ತೊಡೆಯೂ ಮತ್ತು ಅವಯವಗಳೂ ಕೊಳೆಯಾಗುತ್ತಿದ್ದುವು. ಅದರೂ ಎಲೈ ಹೃದಯಕ್ಕೆ ಆನಂದವನ್ನುಂಟುಮಾಡುತ್ತಿದ್ದ ಮಗನೇ! ನನ್ನ ಮನಸ್ಸಿಗೆ ಮಗನನ್ನು ಎತ್ತಿಕೊಂಡು ಮುದ್ದಾಡುವುದರಿಂದುಂಟಾದ ಸುಖವು ತೃಪ್ತಿಯನ್ನು ಎಂದರೆ, ಇಷ್ಟು ಸಾಕು, ಇನ್ನು ಬೇಡ, ಎನ್ನಿಸದೆ ಇದೆಯಲ್ಲ! ||೩೦-೩೧||

ಎಲೈ ಮಗನೇ, ಪದಾರ್ಥಗಳಂತೆ ಇಂಥಾ ನಿನ್ನನ್ನೂ ಮಾರಿದಂತಹ ನನ್ನಿಂದ ನೀನು ತಂದೆಯುಳ್ಳವನಾದೆ! ನೆಂಟರಿಷ್ಟರಿಂದಲೂ, ಐಶ್ವರ್ಯಸಂಪತ್ತುಗಳಿಂದಲೂ

ಅಹಂ ಮಹಾಹಿದಷ್ಟಸ್ಯ ಪುತ್ರಸ್ಯಾನನ ಪಂಕಜಂ ||೩೩||

ನಿರೀಕ್ಷನ್ನದ್ಯ ಘೋರೇಣ ವಿಷೇಣಾಧಿಕೃತೋಽಧುನಾ |
ಏವ ಮುಕ್ತ್ವಾ ತಮಾದಾಯ ಬಾಲಕಂ ಬಾಷ್ಪಗದ್ಗದಃ ||೩೪||

ಪರಿಷ್ವಜ್ಯ ಚ ನಿಶ್ಚೇಷ್ಟೋ ಮೂರ್ಛಯಾ ನಿಪಪಾತ ಹ |
ತತಸ್ತಂ ಪತಿತಂ ದೃಷ್ಟ್ವಾ ಶೈಬ್ಯಾಚೈವಮಚಿಂತಯತ್ ||೩೫||

ಅಯಂ ಸ ಪುರುಷವ್ಯಾಘ್ರಃ ಸ್ವರೇಣೈವೋಪಲಕ್ಷ್ಯತೇ |
ವಿದ್ವಜ್ಜನ ಮನಶ್ಚಂದ್ರೋ ಹರಿಶ್ಚಂದ್ರೋ ನಸಂಶಯಃ ||೩೬||

ತಥಾಽಸ್ಯ ನಾಸಿಕಾ ತುಂಗಾ ತಿಲಪುಷ್ಪೋಪಮಾ ಶುಭಾ |
ದಂತಾಶ್ಚ ಮುಕುಳಪ್ರಖ್ಯಾಃ ಖ್ಯಾತಕೀರ್ತೇರ್ಮಹಾತ್ಮನಃ ||೩೭||

---

ಕೂಡಿದ ವಿಸ್ತಾರವಾದ ರಾಜ್ಯವೂ ನಿಶ್ಶೇಷವಾಗಿ ಕೈಬಿಟ್ಟುಹೋಯಿತು! ಹೀಗೆ ಅದೃಷ್ಟಹೀನನಾದ ನಾನು ಕ್ರೂರವಾದ ದುರ್ದೈವದಿಂದ ಈಗ ನಿನ್ನನ್ನು ಇಂತಹ ಶೋಚನೀಯ ಸ್ಥಿತಿಯಲ್ಲಿರುವುದನ್ನು ನೋಡುತ್ತಿರುವೆನು! ||೩೨||

ಇಂತಹ ನಾನು ಕ್ರೂರವಾದ ಘಟಸರ್ಪವು ಕಚ್ಚಿದ ಆ ನನ್ನ ಮಗನ ಮುಖಕಮಲವನ್ನು ನೋಡುತ್ತಾ ಈ ದಿನ ಕ್ರೂರವಾದ ಸಂತಾಪರೂಪವಾದ ವಿಷದಿಂದ ಉಂಟಾಗಿರುವ ಸಂಕಟದಿಂದ ಕೂಡಿರುವೆನು! ||೩೩||

ಹೀಗೆಂದು ಹೇಳಿ ರಾಜನು ಆ ಮಗನನ್ನು ಎತ್ತಿಕೊಂಡು ಆಲಂಗಿಸಿ, ಕಣ್ಣೀರು ಸುರಿಯುತ್ತಿರಲು, ಗದ್ಗದವಾದ ಧ್ವನಿಯು ಕುತ್ತಿಗೆಯನ್ನು ಬಿಗಿಯುತ್ತಿರಲು, ಮೂರ್ಛೆಯಿಂದ ಅವಯವಗಳು ಚಲಿಸದೆ ಮೈಮರೆದು ಕೆಳಗೆ ಬಿದ್ದುಬಿಟ್ಟನು.||೩೪||

ಆ ಮೇಲೆ ಬಿದ್ದ ಆತನನ್ನು ನೋಡಿ ಅವನ ಹೆಂಡಿತಿಯಾದ ಶಿಬಿರಾಜ ಪುತ್ರಿಯು ಹೀಗೆ ಯೋಚಿಸಿದಳು. ||೩೫||

ಇವನೇ ಪುರುಷಶ್ರೇಷ್ಠನೂ ವಿದ್ವಾಂಸರ ಮನಸ್ಸಿಗೆ ಚಂದ್ರನಂತೆ ಸಂತೋಷವನ್ನುಂಟುಮಾಡುವವನೂ ಆದ ಹರಿಶ್ಚಂದ್ರರಾಜನು. ಧ್ವನಿಯಿಂದ ರಾಜನೆಂದೇ ತೋರುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ||೩೬||

ಇವನ ಮೂಗು ಎತ್ತರವಾಗಿ ಎಳ್ಳುಹೂವಿನ ಮಾಟವಾಗಿ ಅಂದವಾಗಿರುವುದು. ಇವನು ಯಶೋವಂತನೂ, ಮಹಾತ್ಮನೂ ಆಗಿರುವನು. ಇವನ ಹಲ್ಲುಗಳು ಮಗ್ಗುಗಳಂತೆ ಮನೋಹರವಾಗಿರುವುವು. ||೩೭||

ಸ್ಮಶಾನಮಾಗತಃ ಕಸ್ಮಾದ್ಯದ್ಯೇವಂ ಸ ನರೇಶ್ವರಃ ।
ವಿಹಾಯ ಪುತ್ರಶೋಕಂ ಸಾ ಪಶ್ಯಂತೀ ಪತಿತಂ ಪತಿಂ ॥೩೮॥

ಪ್ರಹೃಷ್ಟಾ ವಿಸ್ಮಿತಾ ದೀನಾ, ಭರ್ತೃಪುತ್ರಾರ್ತಿಪೀಡಿತಾ ।
ವೀಕ್ಷಂತೀ ಸಾ ತದಾಽಪಪ್ತನ್ಮೂರ್ಛಯಾ ಧರಣೀತಲೇ ॥೩೯॥

ಪ್ರಾಪ್ಯ ಚೇತಶ್ಚ ಶನಕೈಃ ಸಾ ಗದ್ಗದಮಭಾಷತ ।
ಧಿಕ್ತ್ವಾಂ ದೈವ ಹ್ಯಕರುಣ ನಿರ್ಮರ್ಯಾದ ಜುಗುಪ್ಸಿತ ॥೩೮॥

ಯೇನಾಯಮಮರಪ್ರಖ್ಯೋ ನೀತೋ ರಾಜಾ ಶ್ವಪಾಕತಾಂ ।
ರಾಜ್ಯನಾಶಂ ಸುಹೃತ್ತ್ಯಾಗಂ ಭಾರ್ಯಾತನಯ ವಿಕ್ರಯಂ ॥೩೯॥

ಪ್ರಾಪಯಿತ್ವಾಽಪಿ ಯೇನಾದ್ಯ ಚಾಂಡಾಲೋಽಯಂ ಕೃತೋ ನೃಪಃ ।
ನಾದ್ಯ ಪಶ್ಯಾಮಿ ತೇ ಛತ್ರಂ ಸಿಂಹಾಸನಮಥಾಪಿ ವಾ ॥೪೦॥

---

ಇವನೇ ಆ ಪ್ರಸಿದ್ಧನಾದ ರಾಜನಾದರೆ, ಈ ಸ್ಮಶಾನಕ್ಕೆ ಏಕೆ ಬಂದನು? ಎಂದು ಆಕೆಯು ಪುತ್ರಶೋಕವನ್ನು ಬಿಟ್ಟು ನೆಲದಮೇಲೆ ಬಿದ್ದಿರುವ ಗಂಡನನ್ನು ನೋಡುತ್ತಾ, ॥೩೮॥

ಪತಿದರ್ಶನದಿಂದ ಸಂತೋಷವನ್ನು ಹೊಂದಿ, ದೈವದ ಮಹಿಮೆಯನ್ನು ಕಂಡು ಆಶ್ಚರ್ಯಪಡುತ್ತಾ, ದುಃಖಾತಿಶಯದಿಂದುಂಟಾದ ದೈನ್ಯದಿಂದ ಗಂಡ ಮತ್ತು ಮಗನಿಗೆ ಸಂಭವಿಸಿದ ತೊಂದರೆಯಿಂದ ಮನದಲ್ಲಿ ಸಂಕಟದ ನೋವನ್ನು ಹೊಂದಿ, ನೋಡುತ್ತಿದ್ದ ಹಾಗೆಯೇ ಮೈಮರೆದು ನೆಲದಮೇಲೆ ಬಿದ್ದಳು. ॥೩೯॥

ಆಕೆಯು ಮೆಲ್ಲಗೆ ಎಚ್ಚತ್ತು ಅಸ್ಪಷ್ಟಧ್ವನಿಯಿಂದ ಹೀಗೆ ಮಾತನಾಡಿದಳು. ದಯೆಯಿಲ್ಲದ, ಹೀನಕಾರ್ಯವನ್ನೂ ಮಾಡುವುದರಿಂದ ಅಸಹ್ಯಕರವಾದ, ಎಲ್ಲೆ ಕಟ್ಟಿಲ್ಲದ ಅದೃಷ್ಟವೇ, ನಿನ್ನನ್ನು ನಿಂದಿಸಬೇಕು. ॥೩೮॥

ಯಾವ ಅದೃಷ್ಟಪ್ರಾಬಲ್ಯದಿಂದ ಪ್ರಸಿದ್ಧನಾದ ದೇವನಂತಿರುವ ಈ ರಾಜನು ರಾಜ್ಯವನ್ನೂ ಮಿತ್ರರನ್ನೂ ಬಿಟ್ಟು, ಹೆಂಡಿತಿ ಮಕ್ಕಳನ್ನೂ ಮಾರಿ, ಚಾಂಡಾಲನೂ ಆದನು. ॥೩೯॥

ಓ ದೊರೆಯೇ, ಈ ದಿನ ನಾನು ನಿನ್ನ ಛತ್ರಿಯನ್ನೂ, ಸಿಂಹಾಸನವನ್ನೂ, ಚಾಮರವನ್ನೂ ಕಾಣೆನು. ಆ ಐಶ್ವರ್ಯ, ಅಧಿಕಾರ, ಭೋಗ, ಉಪಚಾರಗಳು ಯಾವುವೂ ಇಲ್ಲವಾಗಿವೆ! ಇದೆಂತಹ ಅದೃಷ್ಟದ ಕೆಟ್ಟ ಆಟವು? ॥೪೦॥

**ಚಾಮರವ್ಯಜನೇ ರ್ವಾಪಿ ಕೋಽಯಂ ವಿಧಿವಿಪರ್ಯಯಃ ।**
**ಯಸ್ಯಾಸ್ಯ ವ್ರಜತಃ ಪೂರ್ವಂ ರಾಜಾನೋ ಭೃತ್ಯತಾಂ ಗತಾಃ ॥೪೧॥**

**ಸ್ವೋತ್ತರೀಯೈಃ ಪ್ರಕುರ್ವಂತಿ ವಿರಜಸ್ಕಂ ಮಹೀತಲಂ ।**
**ಸೋಽಯಂ ಕಪಾಲಸಂಲಗ್ನೇ ಘಟೇ ಪಟ ನಿರಂತರೇ ॥೪೨॥**

**ಮೃತನಿರ್ಮಾಲ್ಯ ಸೂತ್ರಾಂತರ್ಲಗ್ನ ಕೇಶಸುದಾರುಣೇ ।**
**ವಸಾನಿಷ್ಯಂದ ಸಂಶುಷ್ಕ ಮಹಾಪಟಲ ಮಂಡಿತೇ ॥೪೩॥**

**ಭಸ್ಮಾಂಗಾರಾರ್ಧದಗ್ಧಾಸ್ಥಿ ಮಜ್ಜಾಸಂಘಟ್ಟಭೀಷಣೇ ।**
**ಗೃಧ್ರಗೋಮಾಯು ನಾದಾರ್ತೇ ಪುಷ್ಟಕ್ಷುದ್ರವಿಹಂಗಮೇ ॥೪೪॥**

**ಚಿತಾಧೂಮಾಯತಪಟ ನೀಲೀಕೃತ ದಿಗಂತರೇ ।**
**ಕುಣಪಾಸ್ವಾದನಮುದಾ ಸಂಪ್ರಹೃಷ್ಟ ನಿಶಾಚರೇ ॥೪೫॥**
**ಚರತ್ಯಮೇಧ್ಯೇ ರಾಜೇಂದ್ರಃ ಸ್ಮಶಾನೇ ದುಃಖಪೀಡಿತಃ ।**

---

ಐಶ್ವರ್ಯದಲ್ಲಿದ್ದ ಈ ರಾಜನು ಹೊರಕ್ಕೆ ಸಂಚಾರಕ್ಕಾಗಿ ಹೊರಟರೆ, ಇವನ ಸಾಮಂತರಾದ ರಾಜರು ಉಪಚಾರಕರಾಗಿ ಮುಂದೆ ಹೊರಟು ತಮ್ಮ ಹೊದಿಕೆಯ ವಸ್ತ್ರಗಳಿಂದ ನೆಲದ ಮೇಲಿನ ಧೂಳನ್ನು ಒರೆಸುತ್ತಿದ್ದರು. ॥೪೧॥

ಅಂತಹ ರಾಜಾಧಿರಾಜನೂ ಈಗ ಈ ಸ್ಮಶಾನದಲ್ಲಿ ಇಂತಹ ದುಸ್ಥಿತಿಯಲ್ಲಿರ ಬೇಕಾಗಿದೆ. ಈ ಸ್ಮಶಾನವು ಹೆಣದ ತಲೆಯ ಬುರುಡೆಯಿಂದಲೂ ಶವಸಂಸ್ಕಾರದ ಮಡಕೆಗಳಿಂದಲೂ, ಹೆಣದ ಬಟ್ಟೆಗಳಿಂದಲೂ ತುಂಬಿದೆ; ಹೆಣಕ್ಕೆ ಅಲಂಕರಿಸಿದ್ದ ಹೂವಿನ ಸರದ ದಾರದಲ್ಲಿ ಸಿಕ್ಕಿಕೊಂಡಿರುವ ಹೆಣದ ಕೂದಲುಗಳಿಂದ ಭಯಂಕರ ವಾಗಿದೆ; ಹೆಣದ ಮೈಯಿಂದ ಸುರಿದ ಕೊಬ್ಬು ನೆಲದ ಮೇಲೆ ಬಿದ್ದು ಒಣಗಿರುವ ಮಹಾಪಟಲಭೂಭಾಗದಿಂದ ಭೀಕರತೆಯು ಹೆಚ್ಚಿದೆ; ಮತ್ತು ಕೆಂಡಗಳಿಂದಲೂ, ಅರ್ಧ ಸುಟ್ಟ ಶವಗಳಿಂದಲೂ, ಮಜ್ಜೆ ಎಂಬ ಮಾಂಸವಿಕಾರದಿಂದಲೂ, ಇವನ್ನು ತಿನ್ನಲು ಬಂದಿರುವ ಭಯಂಕರವಾದ ಹದ್ದು, ನರಿ ಮುಂತಾದುವುಗಳ ಕೂಗಿನಿಂದಲೂ, ಮತ್ತು ಮಾಂಸವನ್ನು ತಿಂದು ಕೊಬ್ಬಿದ ಕಾಗೆಗಳಿಂದಲೂ ಕೂಡಿದ, ಈ ಸ್ಮಶಾನವು ದುಃಖಭಯಗಳನ್ನುಂಟುಮಾಡುತ್ತಿದೆ! ॥೪೨-೪೩-೪೪॥

ಚಿತೆಯ ಹೊಗೆಯಿಂದ ನೀಲಿಬಣ್ಣವಾದ ವಸ್ತ್ರಗಳುಳ್ಳಂತೆ ತೋರುವ ದಿಕ್ಕುಗಳುಳ್ಳ, ಹೆಣಗಳನ್ನು ತಿನ್ನುವ ಆಶೆಯಿಂದ ಬಂದ ಸಂತೋಷದಿಂದ ಕೂಡಿದ

ಏವಮುಕ್ತ್ವಾಽಥ ಸಂಶ್ಲಿಷ್ಯ ಕಂಠೇ ರಾಜ್ಞೋ ನೃಪಾತ್ಮಜಾ ॥೪೬॥

ಕಷ್ಟಂ ಶೋಕಸಮಾವಿಷ್ಟಾ ವಿಲಲಾಪಾರ್ತಯಾ ಗಿರಾ ।
ರಾಜನ್ಸ್ವಪ್ನೋಽಥ ತಥ್ಯಂ ವಾ ಯದೇತನ್ಮನ್ಯತೇ ಭವಾನ್ ॥೪೭॥

ತತ್ಕಥ್ಯತಾಂ ಮಹಾಭಾಗ ಮನೋ ವೈ ಮುಹ್ಯತೇ ಮಮ ।
ಯದ್ಯೇತದೇವಂ ಧರ್ಮಜ್ಞ ನಾಸ್ತಿ ಧರ್ಮೇ ಸಹಾಯತಾ ॥೪೮॥

ತಥೈವ ವಿಪ್ರದೇವಾದಿಪೂಜನೇ ಸತ್ಯಪಾಲನೇ ।
ನಾಸ್ತಿ ಧರ್ಮಃ ಕುತಃ ಸತ್ಯಂ ನಾಽರ್ಜವಂ ನಾನೃತಾಂಶತಾ ॥೪೯॥

---

ರಾಕ್ಷಸರುಳ್ಳ, ನಾನಾಬಗೆಯ ಹೊಲಸುಗಳಿಂದ ಮಲಿನವಾದ ಈ ಸ್ಮಶಾನದಲ್ಲಿ ಈ ಶ್ರೇಷ್ಠರಾಜನೂ ದುಃಖದಿಂದ ಕೂಡಿ ಸಂಚರಿಸುತ್ತಿರುವನು ! ॥೪೫॥

ಹೀಗೆಂದು ಹೇಳಿ ಆ ರಾಜಪುತ್ರಿಯಾದ ರಾಣಿಯು ಆ ರಾಜನ ಕುತ್ತಿಗೆಯನ್ನು ತಬ್ಬಿಕೊಂಡು ದುಃಖದಿಂದ ಗಟ್ಟಿಯಾಗಿ ಅತ್ತಳು. ॥೪೬॥

ಓ ರಾಜನೇ, ಇದು ಸ್ವಪ್ನವೋ? ನಿಜವೋ? ನಿನಗೆ ಹೇಗೆ ತೋರುತ್ತಿದೆ? ಹೇಳು! ನನ್ನ ಮನಸ್ಸಾದರೋ, ಓ ಪುಣ್ಯಶಾಲಿಯೇ, ಭ್ರಾಂತಿಯನ್ನು ಹೊಂದಿದೆ! ನೀನು ಚಂಡಾಲದಾಸನಾಗಿರುವೆನೆಂದು ಹೇಳಿದುದಾದರೂ ನಿಜವೇ? ಭ್ರಾಂತಿಯೇ? ನನಗೆ ತಿಳಿಯಹೇಳು! ॥೪೭॥

ಓ ಧರ್ಮವನ್ನು ಬಲ್ಲ ಮಹಾರಾಜನೇ, ಧರ್ಮದಿಂದ ನಡೆವ ನಮಗೇ ದುರ್ಗತಿಯು ಸಂಭವಿಸಿ ಹೀಗಾದಮೇಲೆ ಧರ್ಮವು ಜನರ ಸುಖಪ್ರಾಪ್ತಿಗೆ ನೆರವಾಗಿ ರಕ್ಷಿಸುವುದೆಂಬ ಮಾತು ಸುಳ್ಳಾಗುವುದು. ಇನ್ನು ಸತ್ಯವೆಲ್ಲಿದ್ದೀತು? ಹಾಗೆಯೇ ಬ್ರಾಹ್ಮಣರನ್ನೂ, ದೇವತೆಗಳನ್ನೂ ಪೂಜಿಸುವುದೂ, ಸತ್ಯವನ್ನು ಕಾಪಾಡಿಕೊಳ್ಳುವುದೂ ನಿಷ್ಫಲವೆಂದಾಗುವುದು. ಧರ್ಮವೇ ಇಲ್ಲದ ಮೇಲೆ, ಸತ್ಯವೂ ಇಲ್ಲ. ಸರಳತೆಯೂ ಇಲ್ಲ. ಸುಳ್ಳೂ ಇಲ್ಲವು. ಧರ್ಮಕ್ಕೆ ಸುಖವೂ, ಅಧರ್ಮಕ್ಕೆ ದುಃಖವೂ, ಫಲವು. ಎಂಬ ವಿವೇಚನೆಯೂ ಸುಳ್ಳಾಗಬೇಕಾಗುತ್ತದೆ! ಏಕೆಂದರೆ, ॥೪೮-೪೯॥

ಧರ್ಮವೇ ಮುಖ್ಯವೆಂದು ನಡೆವ ನಿನಗೆ ರಾಜ್ಯವೇ ಮುಂತಾದ ಸುಖವು ತಪ್ಪಿಹೋಯಿತು. ದುಃಖವೂ ನಾನಾರೂಪದಲ್ಲಿ ಬಂದೊದಗಿದೆ!

ಯತ್ರ ತ್ವಂ ಧರ್ಮಪರಮಃ ಸ್ವರಾಜ್ಯಾದವರೋಪಿತಃ ।

|| ಸೂತ ಉವಾಚ ||

ಇತಿ ತಸ್ಯಾ ವಚಃ ಶ್ರುತ್ವಾ ನಿಃಶ್ವಸ್ಯೋಷ್ಣಂ ಸಗದ್ಗದಃ ॥೫೦॥

ಕಥಯಾಮಾಸ ತನ್ವಂಗ್ಯೈ ಯಥಾ ಪ್ರಾಪ್ತಃ ಶ್ವಪಾಕತಾಂ ।
ರುದಿತ್ವಾ ಸಾ ತು ಸುಚಿರಂ ನಿಶ್ವಸ್ಯೋಷ್ಣಂ ಸುದುಃಖಿತಾ ॥೫೧॥

ಸ್ವಪುತ್ರಮರಣಂ ಭೀರುರ್ಯಥಾವತ್ತಂ ನ್ಯವೇದಯುತ್ ।
ಶ್ರುತ್ವಾ ರಾಜಾ ತಥಾ ವಾಕ್ಯಂ ನಿಪಪಾತ ಮಹೀತಲೇ ॥೫೨॥

ಮೃತಪುತ್ರಂ ಸಮಾನೀಯ ಜಿಹ್ವಯಾ ವಿಲಿಹನ್ಮುಹುಃ ।
ಹರಿಶ್ಚಂದ್ರಮಥೋಪ್ರಾಹ ಶೈಬ್ಯಾ ಗದ್ಗದಯಾಗಿರಾ ॥೫೩॥

ಕುರುಷ್ವ ಸ್ವಾಮಿನಃ ಪ್ರೇಷ್ಯಂ ಛೇದಯಿತ್ವಾ ಶಿರೋ ಮಮ ।
ಸ್ವಾಮಿದ್ರೋಹೋ ನ ತೇಽಸ್ತ್ವದ್ಯ ಮಾಸತ್ಯೋ ಭವ ಭೂಪತೇ ॥೫೪॥

---

ಸೂತನು ಹೇಳಿದನು---ಹೀಗೆಂದು ಹೇಳಿದ ರಾಣಿಯ ಮಾತನ್ನು ಕೇಳಿ ರಾಜನು ಬಿಸಿಯಾಗಿ ಉಸಿರನ್ನು ಬಿಟ್ಟು, ದುಃಖದ ಧ್ವನಿಯಿಂದ ಕೂಡಿದವನಾಗಿ ಆ ಕೃಶಾಂಗಿಯನ್ನು ಕುರಿತು ತಾನು ಚಾಂಡಾಲದಾಸನಾದ ಬಗೆಯನ್ನು ವಿವರಿಸಿ ತಿಳಿಯಹೇಳಿದನು. ||೫೦||

ಆ ರಾಜಪತ್ನಿಯೂ ಬಹಳ ಹೊತ್ತು ಅತ್ತು, ಬಿಸಿಯಾಗಿ ಉಸಿರನ್ನು ಬಿಡುತ್ತಾ, ತನ್ನ ಮಗನು ಸತ್ತ ಬಗೆಯನ್ನೂ ರಾಜನಿಗೆ ನಡೆದಂತೆಯೇ ಹೇಳಿದಳು. ರಾಜನು ಆ ಮಾತನ್ನು ಕೇಳಿ ಆಶ್ಚರ್ಯಶೋಕಗಳಿಂದ ಪರವಶನಾಗಿ ನೆಲದ ಮೇಲೆ ಬಿದ್ದನು. ||೫೧-೫೨||

ರಾಣಿಯು ಸತ್ತ ಮಗನನ್ನು ಎತ್ತಿಕೊಂಡು ಬಂದು, ಬಾರಿಬಾರಿಗೂ, ಮುತ್ತುಕೊಡುತ್ತಾ, ದುಃಖದ ಧ್ವನಿಯಿಂದ ಹರಿಶ್ಚಂದ್ರನನ್ನು ಕುರಿತು ಪುನಃ ಹೀಗೆ ಹೇಳಿದಳು. ||೫೩||

ಎಲೈ ರಾಜಶ್ರೇಷ್ಠನೇ, ನನ್ನ ತಲೆಯನ್ನು ಕತ್ತರಿಸಿ ನಿನ್ನೊಡೆಯನಪ್ಪಣೆಯನ್ನು ನೆರವೇರಿಸು. ನೀನು ಸ್ವಾಮಿದ್ರೋಹಿಯೂ, ಅಸತ್ಯಭಾಷಿಯೂ, ಆಗಬೇಡ. ನಿನಗೆ ಅಸತ್ಯದೋಷವು ಬರಬಾರದು. ಪರರಿಗೆ ಮೋಸಮಾಡುವುದು ಮಹಾಪಾಪವು. ದುಃಖಗಳೂ, ಸಂಶಯವೂ ಧರ್ಮಾಚರಣೆಗೆ ಅಡ್ಡಿಯಾಗದಿರುವುದು ದೃಢ

ಮಾಽಸತ್ಯಂ ತವ ರಾಜೇಂದ್ರ ಪರದ್ರೋಹಸ್ತು ಪಾತಕಂ ।
ಏತದಾಕರ್ಣ್ಯ ರಾಜಾ ತು ಪಪಾತ ಭುವಿ ಮೂರ್ಛಿತಃ ॥೫೫॥
ಕ್ಷಣೇನ ಚೇತನಾಂ ಪ್ರಾಪ್ಯ ವಿಲಲಾಪಾತಿದುಃಖಿತಃ ।

॥ ರಾಜೋವಾಚ ॥

ಕಥಂ ಪ್ರಿಯೇ ತ್ವಯಾ ಪ್ರೋಕ್ತಂ ವಚನಂ ತ್ವತಿ ನಿಷ್ಠುರಂ ॥೫೬॥
ಯದಶಕ್ಯಂ ಭವೇದ್ವಕ್ತುಂ ತತ್ಕರ್ಮ ಕ್ರಿಯತೇ ಕಥಂ ।

॥ ಪತ್ನ್ಯುವಾಚ ॥

ಮಯಾ ಚ ಪೂಜಿತಾ ಗೌರೀ ದೇವಾ ವಿಪ್ರಾಸ್ತಥೈವ ಚ ॥೫೭॥
ಭವಿಷ್ಯಸಿ ಪತಿಸ್ತ್ವಂ ಮೇ ಹ್ಯನ್ಯಸ್ಮಿನ್ನನ್ಮನಿ ಪ್ರಭೋ ।
ಶ್ರುತ್ವಾ ರಾಜಾ ತದಾ ವಾಕ್ಯಂ ನಿಪಪಾತ ಮಹೀತಲೇ ॥೫೮॥
ಮೃತಸ್ಯ ಪುತ್ರಸ್ಯ ತದಾ ಚುಚುಂಬ ದುಃಖಿತೋ ಮುಖಂ ।

---

ಮೂಲವಾದ ಧಾರ್ಮಿಕ ಸಂಸ್ಕೃತಿಯ ಆನುವಂಶಿಕವಾದ ಫಲವು. ಎಂಬುದನ್ನು ಗಮನಿಸಬಹುದು ॥೫೪॥

ಈ ಮಾತನ್ನು ಕೇಳಿ ರಾಜನು ಮೈಮರೆದು ನೆಲದ ಮೇಲೆ ಬಿದ್ದನು. ಒಂದು ಕ್ಷಣದೊಳಗಾಗಿ ಮೂರ್ಛೆಯಿಂದ ಎಚ್ಚತ್ತು ಬಹಳ ದುಃಖದಿಂದ ಅತ್ತನು. ॥೫೫॥

ರಾಜನು ಹೇಳಿದನು — ಪ್ರಿಯ ಪತ್ನಿಯೇ, ಬಹಳ ಕ್ರೂರವಾದ ಈ ಮಾತನ್ನು ನೀನು ಹೇಗೆ ಹೇಳಿದೆ? ಬಾಯಿಯಿಂದ ಹೇಳುವುದಕ್ಕೂ ಕಷ್ಟವಾದ ಈ ಕೆಲಸವನ್ನು ನಾನು ಮಾಡುವುದು ಹೇಗೆ? ॥೫೬॥

ರಾಣಿಯು ಹೇಳಿದಳು — ನಾನು ಗೌರೀದೇವಿಯನ್ನು ಭಕ್ತಿಯಿಂದ ಪೂಜಿಸಿರುವೆನು. ಹಾಗೆಯೇ ದೇವತೆಗಳನ್ನೂ ಬ್ರಾಹ್ಮಣರನ್ನೂ ಸತ್ಕರಿಸಿ ಪೂಜಿಸಿರುವೆನು. ಆದುದರಿಂದ ಆ ಧರ್ಮಾಚರಣೆಯ ಫಲವಾಗಿ ಮತ್ತೊಂದು ಜನ್ಮದಲ್ಲಿಯೂ ನೀನೇ ನನಗೆ ಪತಿಯಾಗುವೆ! ಸತ್ಯಧರ್ಮನಿಷ್ಠೆಯಲ್ಲಿ ಪತ್ನಿಯು ಸಹಧರ್ಮಚಾರಿಣಿಯು! ॥೫೭॥

ರಾಜನು ಪತ್ನಿಯ ಈ ಧರ್ಮಸಾಫಲ್ಯದಲ್ಲಿ ನಂಬಿಕೆಯ ಮಾತನ್ನು ಕೇಳಿ ಅಂತಹ ಹೆಂಡತಿಯ ವಿಯೋಗದ ವ್ಯಥೆಯಿಂದ ಮೂರ್ಛೆಗೊಂಡಿದ್ದು ಮತ್ತು ಎಚ್ಚತ್ತು ಆಗ ದುಃಖದಿಂದ ಸತ್ತುಬಿದ್ದಿದ್ದ ಮಗನ ಮುಖವನ್ನು ಇನ್ನೊಂದಾವೃತ್ತಿ ಮುದ್ದಿಸಿದನು. ಆ ಮೇಲೆ ಹೆಂಡತಿಯನ್ನು ಕುರಿತು, ॥೫೮॥

|| ರಾಜೋವಾಚ ||

ಪ್ರಿಯೇ ನ ರೋಚತೇ ದೀರ್ಘಂ ಕಾಲಂ ಕ್ಲೇಶಂ ಮಯಾಽಶಿತುಂ ||೫೯||

ನಾತ್ಮಾಯತ್ತೋಽಹಂ ತನ್ವಂಗಿ ಪಶ್ಯ ಮೇ ಮಂದಭಾಗ್ಯತಾಂ ।
ಚಾಂಡಾಲೇನಾನನುಜ್ಞಾತಃ ಪ್ರವೇಕ್ಷ್ಯೇ ಜ್ವಲನಂ ಯದಿ ||೬೦||

ಚಾಂಡಾಲದಾಸತಾಂ ಯಾಸ್ಯೇ ಪುನರಪ್ಯನ್ಯ ಜನ್ಮನಿ ।
ನರಕಂ ಚ ವರಂ ಪ್ರಾಪ್ಯ ಖೇದಂ ಪ್ರಾಪ್ಸ್ಯಾಮಿ ದಾರುಣಂ ||೬೧||

ತಾಪಂ ಪ್ರಾಪ್ಸ್ಯಾಮಿ ಸಂಪ್ರಾಪ್ಯ ಮಹಾರೌರವ ರೌರವೇ ।
ಮಗ್ನಸ್ಯ ದುಃಖ ಜಲಧೌ ವರಂ ಪ್ರಾಣೈರ್ವಿಯೋಜನಂ ||೬೨||

ಏಕೋಽಪಿ ಬಾಲಕೋ ಯೋಽಯಮಾಸೀದ್ವಂಶಕರಃಸುತಃ ।
ಮಮ ದೈವಾನುಯೋಗೇನ ಮೃತಃ ಸೋಽಪಿ ಬಲೀಯಸಾ ||೬೩||

---

ರಾಜನು ಹೇಳಿದನು—ಪ್ರಿಯಪತ್ನಿಯೇ, ಇನ್ನು ಸ್ವಲ್ಪ ಹೆಚ್ಚುಕಾಲವೂ ಈ ಕಷ್ಟವನ್ನು ನಾನು ಸಹಿಸಲಾರೆನು. ಆದರೂ ಏನನ್ನು ಮಾಡಲಿ? ನನ್ನ ಮನಸ್ಸೂ ಈ ದೇಹವೂ ನನ್ನ ಅಧೀನವಲ್ಲಿಲ್ಲ. ನಾನು ನನ್ನನ್ನು ಕೊಂಡುಕೊಂಡಿರುವವನ ಅಧೀನನಾಗಿರುವೆನು! ನನ್ನ ಈ ನಿರ್ಭಾಗ್ಯತೆಯನ್ನು ನೋಡು. ನನ್ನ ಈ ದುಃಖ ಜನ್ಮವನ್ನು ಕೊನೆಗಾಣಿಸಲಾರದೆ ಇರುವೆನು. ಏಕೆಂದರೆ, ||೫೯||

ಆ ನನ್ನ ದಣಿಯಾದ ಚಾಂಡಾಲನ ಅಪ್ಪಣೆಯಿಲ್ಲದೆ ಅಗ್ನಿಪ್ರವೇಶವನ್ನು ಮಾಡಿದರೂ ಋಣಶೇಷದಿಂದ ಮತ್ತೊಂದು ಜನ್ಮದಲ್ಲಿಯೂ ಚಾಂಡಾಲನ ಆಳಾಗ ಬೇಕಾಗುವುದು. ||೬೦||

ಮತ್ತು ಭಯಂಕರವಾದ ಮಹಾರೌರವವೆಂಬ ನರಕವನ್ನು ಹೊಂದಿ ದುಃಖವನ್ನೂ ಸಂತಾಪವನ್ನೂ ಹೊಂದುವೆನು. ದುಃಖವೆಂಬ ಸಮುದ್ರದಲ್ಲಿ ಮುಳುಗಿದವನಿಗೆ ಪ್ರಾಣತ್ಯಾಗವೇ ಒಳ್ಳೆಯದು. ||೬೧-೬೨||

ನನ್ನ ವಂಶದ ಅಭಿವೃದ್ಧಿಗೆ ಕಾರಣನಾದ ಯಾವ ಒಬ್ಬನೇ ಮಗನಿದ್ದನೋ ಅವನೂ ಕೂಡ, ಬಲವಾದ ನನ್ನ ದುರದೃಷ್ಟದಿಂದ ಸತ್ತುಹೋದನು! ||೬೩||

ಕಥಂ ಪ್ರಾಣಾನ್ವಿಮುಂಚಾಮಿ ಪರಾಯತ್ತೋಽಸ್ಮಿ ದುರ್ಗತಃ ।
ತಥಾಽಪಿ ದುಃಖಬಾಹುಳ್ಯಾ ತ್ತ್ಯಕ್ಷ್ಯಾಮಿ ತು ನಿಜಾಂ ತನುಂ ॥೬೪॥

ತ್ರೈಲೋಕ್ಯೇ ನಾಸ್ತಿ ಯದ್ದುಃಖಂ ನಾಸಿಪತ್ರವನೇ ತಥಾ ।
ವೈತರಿಣ್ಯಾಂ ಕುತಸ್ತದ್ವದ್ಯಾ ದೃಶಂ ಪುತ್ರವಿಪ್ಲವೇ ॥೬೫॥

ಸೋಽಹಂ ಸುತ ಶರೀರೇಣ ದೀಪ್ಯಮಾನೇ ಹುತಾಶನೇ ।
ನಿಪತಿಷ್ಯಾಮಿ ತನ್ವಂಗಿ ಕ್ಷಂತವ್ಯಂ ತನ್ಮಮಾಧುನಾ ॥೬೬॥

ನ ವಕ್ತವ್ಯಂ ತ್ವಯಾ ಕಿಂಚಿದತಃ ಕಮಲಲೋಚನೇ ।
ಮಮ ವಾಕ್ಯಂ ಚ ತನ್ವಂಗಿ ನಿಬೋಧ್ಯಾಽಹತಮಾನಸಾ ॥೬೭॥

ಅನುಜ್ಞಾತಾಽಥ ಗಚ್ಛ ತ್ವಂ ವಿಪ್ರವೇಶ್ಮ ಶುಚಿಸ್ಮಿತೇ ।
ಯದಿ ದತ್ತಂ ಯದಿ ಹುತಂ ಗುರವೋ ಯದಿ ತೋಷಿತಾಃ ॥೬೮॥
ಸಂಗಮಃ ಪರಲೋಕೇ ಮೇ ನಿಜಪುತ್ರೇಣ ಚ ತ್ವಯಾ ।

---

ನಾನು ದುರ್ಗತಿಯನ್ನು ಹೊಂದಿ ಪರಾಧೀನನಾಗಿದ್ದೇನೆ. ಆದುದರಿಂದ ಹೇಗೆ ತಾನೇ ಸ್ವತಂತ್ರನಂತೆ ಪ್ರಾಣವನ್ನು ಬಿಡಲಿ? ಹಾಗಾದರೂ ನಾನು ಸಹಿಸಲಾರದಷ್ಟುಮಟ್ಟಿಗೆ ಹೆಚ್ಚಾದ ದುಃಖದಿಂದ ಈ ಶರೀರವನ್ನು ಬಿಡುತ್ತೇನೆ. ॥೬೪॥

ಪುತ್ರಮರಣದಿಂದುಂಟಾದ ದುಃಖದಂತಹ ಇನ್ನೊಂದು ದುಃಖವು ಮೂರು ಲೋಕದಲ್ಲೆಲ್ಲಿಯೂ ಇಲ್ಲ. ಅಸಿಪತ್ರವನವೆಂಬ ನರಕದಲ್ಲಿಯೂ, ವೈತರಣೀ ಎಂಬ ನರಕದ ನದಿಯಲ್ಲಿಯೂ, ಅಂತಹ ದುಃಖವಿಲ್ಲ. ॥೬೫॥

ಅಂತಹ ದುಃಖಕ್ಕೆ ಗುರಿಯಾದ ನಾನು ಮಗನ ಶರೀರದೊಡನೆ ಉರಿಯುತ್ತಿರುವ ಬೆಂಕಿಯಲ್ಲಿ ಬೀಳುತ್ತೇನೆ. ಎಲೈ ಕೃಶಾಂಗಿಯಾದ ದೇವಿಯೇ, ನನ್ನ ಈ ಅಪರಾಧವನ್ನು ನೀನು ಕ್ಷಮಿಸಬೇಕು. ॥೬೬॥

ಎಲೌ ಕೃಶಾಂಗಿಯೇ, ನೀನು ನನ್ನ ಮಾತನ್ನು ತಿಳಿದು ಮನಸ್ಸಿನಲ್ಲಿ ದುಃಖಿಸದೆ ಇರು. ಇಲ್ಲಿಂದ ಮುಂದೆ ಇನ್ನು ಹೆಚ್ಚಾಗಿ ಯಾವ ಮಾತನ್ನೂ ಆಡಬೇಡ. ॥೬೭॥

ಬೆಳ್ನಗೆಯುಳ್ಳ ರಾಣಿಯೇ, ನನ್ನಪ್ಪಣೆಯಿಂದ ನೀನು ಆಮೇಲೆ ಬ್ರಾಹ್ಮಣನ ಮನೆಗೆ ಹೋಗು. ನಾನು ದಾನವನ್ನೂ ಹೋಮವನ್ನೂ ಮಾಡಿದ್ದರೆ, ಗುರುಗಳನ್ನು

**ಇಹಲೋಕೇ ಕುತಸ್ತ್ವೇತದ್ಭವಿಷ್ಯತಿ ಸಮೀಪ್ಸಿತಂ ॥೬೯॥**

**ಯನ್ಮಯಾ ಹಸತಾ ಕಿಂಚಿದ್ರಹಸಿ ತ್ವಾಂ ಶುಚಿಸ್ಮಿತೇ ।**
**ಅಶೇಷ ಮುಕ್ತಂ ತತ್ಸರ್ವಂ ಕ್ಷಂತವ್ಯಂ ಮಮ ಯಾಸ್ಯತಃ ॥೭೦॥**

**ರಾಜಪತ್ನೀತಿ ಗರ್ವೇಣ ನಾವಜ್ಞೇಯಃ ಸ ಮೇ ದ್ವಿಜಃ ।**
**ಸರ್ವಯತ್ನೇನ ತೋಷ್ಯಃ ಸ್ಯಾತ್ಸ್ವಾಮೀ ದೈವತವಚ್ಛುಭೇ ॥೭೧॥**

॥ ರಾಜ್ಞ್ಯುವಾಚ ॥

**ಅಹಮಪ್ಯತ್ರ ರಾಜರ್ಷೇ ನಿಪತಿಷ್ಯೇ ಹುತಾಶನೇ ।**
**ದುಃಖಭಾರಾಸಹಾ ದೇವ ಸಹ ಯಾಸ್ಯಾಮಿ ವೈ ತ್ವಯಾ ॥೭೨॥**

**ತ್ವಯಾ ಸಹ ಮಮ ಶ್ರೇಯೋ ಗಮನಂ ನಾನ್ಯಥಾ ಭವೇತ್ ।**
**ಸಹ ಸ್ವರ್ಗಂ ಚ ನರಕಂ ತ್ವಯಾ ಭೋಕ್ಷ್ಯಾಮಿ ಮಾನದ ॥೭೩॥**

---

ಪೂಜಿಸಿದ್ದರೆ, ಪರಲೋಕದಲ್ಲಿ ನನ್ನ ಮಗನೊಡನೆಯೂ ನಿನ್ನೊಡನೆಯೂ ಸಂಬಂಧ ಉಂಟಾಗಲಿ ! ॥೬೮॥

ಈ ಸಂದರ್ಭದಲ್ಲಿ ಈ ಲೋಕದಲ್ಲಿ ನಮ್ಮ ಈ ಇಷ್ಟಾರ್ಥವು ಹೇಗೆತಾನೇ ಸಫಲವಾದೀತು ? ಬೆಳ್ನಗೆಯ ರಾಣಿಯೇ, ನಗುತ್ತಾ ನಾನು ಹೇಳಿರಬಹುದಾದ, ಗುಟ್ಟಾದ, ಸಕಲವಾದ ಮಾತುಗಳನ್ನೂ, ನಿನ್ನನ್ನೂ ಅಗಲಿ ಪ್ರಯಾಣ ಮಾಡುವವನಾಗಿರುವ ನನ್ನನ್ನು ನೋಡಿ ದೋಷವಿದ್ದರೆ ನೀನು ಕ್ಷಮಿಸಬೇಕು. ॥೬೯-೭೦॥

ಎಲೌ ಮಂಗಳಕರಳೇ, ದೊರೆಯ ಹೆಂಡಿತಿ ಎಂಬ ಹೆಮ್ಮೆಯಿಂದ ಆ ಬ್ರಾಹ್ಮಣನನ್ನು ತಿರಸ್ಕರಿಸಬೇಡ. ಒಡೆಯನಾದ ಅವನನ್ನು ನಿನ್ನ ಎಲ್ಲಾ ಪ್ರಯತ್ನಗಳಿಂದಲೂ ದೇವರಂತೆ ಸಂತೋಷಪಡಿಸಬೇಕು ! ಎಂದನು. ॥೭೧॥

ರಾಣಿಯು ಹೇಳಿದಳು — ಮಾನವಂತನಾದ ಮಹಾರಾಜನೇ, ರಾಜರ್ಷಿಯೇ, ನಾನೂ ಕೂಡ ದುಃಖವನ್ನು ಸಹಿಸಲಾರೆದೆಯೇ, ಇಲ್ಲಿಯೇ ನಿನ್ನೊಡನೆ ಅಗ್ನಿಯಲ್ಲಿ ಬೀಳುವೆನು. ನಿನ್ನೊಡನೆ ಸ್ವರ್ಗವನ್ನೋ, ನರಕವನ್ನೋ ಅನುಭವಿಸುವೆನು. ನಿನ್ನೊಡನೆ ಬರುವುದರಿಂದಲೇ ನನಗೆ ಶ್ರೇಯಸ್ಸಾಗುವುದು. ॥೭೨-೭೩॥

ಶ್ರುತ್ವಾ ರಾಜಾ ತದೋವಾಚ ಏವಮಸ್ತು ಪತಿವ್ರತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಷಡ್ವಿಂಶೋಽಧ್ಯಾಯಃ.

---

ಆಗ ರಾಜನು ರಾಣಿಯು ಹೇಳಿದ ಈ ಮಾತನ್ನು ಕೇಳಿ, ಎಲೈ ಪತಿವ್ರತೆಯೇ, ನಿನ್ನ ಇಚ್ಛೆಯು ಹೇಗಿರುವುದೋ ಹಾಗೆಯೇ ಆಗಲಿ! ಎಂದನು.

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಸಪ್ತವಿಂಶೋಽಧ್ಯಾಯಃ ||

### ಇಪ್ಪತ್ತೇಳನೆಯ ಅಧ್ಯಾಯವು

|| ಸೂತ ಉವಾಚ ||

ತತಃ ಕೃತ್ವಾ ಚಿತಾಂ ರಾಜಾ ಆರೋಪ್ಯ ತನಯಂ ಸ್ವಕಂ ।
ಭಾರ್ಯಯಾ ಸಹಿತೋ ರಾಜಾ ಬದ್ಧಾಂಜಲಿಪುಟಸ್ತದಾ ||೧||

ಚಿಂತಯನ್ ಪರಮೇಶಾನೀಂ ಶತಾಕ್ಷೀಂ ಜಗದೀಶ್ವರೀಂ ।
ಪಂಚಕೋಶಾಂತರಗತಾಂ ಪುಚ್ಛಬ್ರಹ್ಮಸ್ವರೂಪಿಣೀಂ ||೨||

ರಕ್ತಾಂಬರ ಪರೀಧಾನಾಂ ಕರುಣಾರಸಸಾಗರಾಂ ।
ನಾನಾಯುಧಧರಾಮಂಬಾಂ ಜಗತ್ಪಾಲನ ತತ್ಪರಾಂ ||೩||

---

ಸೂತನು ಹೇಳಿದನು—ಆ ಮೇಲೆ ರಾಜನು ಒಂದು ಚಿತೆಯನ್ನು ಮಾಡಿ ತನ್ನ ಮಗನನ್ನು ಅದರ ಮೇಲಿಟ್ಟು ಹೆಂಡಿತಿಯೊಡನೆ ಕೈ ಮುಗಿದುಕೊಂಡು ನಿಂತು, ದೇವಿಯನ್ನು ಹೀಗೆ ಧ್ಯಾನಮಾಡಿದನು. ||೧||

ಪರಮೇಶ್ವರಿಯೂ, ಪ್ರಪಂಚಕ್ಕೆ ಒಡೆಯಳೂ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಕ್ರಮವಾಗಿ, ಸೂಕ್ಷ್ಮವಾದ ಒಂದರೊಳಗೊಂದು ಅಡಗಿರುವ ಐದು ಕೋಶಗಳ ನಡುವೆ ಜೀವರಿಗೆ ಜ್ಞಾನ ಗೋಚರವಾಗಿ ಇರುವ "ಬ್ರಹ್ಮಪುಚ್ಛಂಪ್ರತಿಷ್ಠಾ" ಎಂಬ ತೈತ್ತಿರೀಯೋಪನಿಷತ್ತಿನಲ್ಲಿ ಹೇಳುವಂತೆ ಸತ್ಯಜ್ಞಾನಾನಂತರೂಪವಾದ ಆನಂದಮಯಕೋಶದೊಳಗೆ ಎಲ್ಲರಿಗೂ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಾಗಿರುವ, ಶಾಶ್ವತವಾದ, ಪರಬ್ರಹ್ಮಸ್ವರೂಪಳಾದ, ನಿರ್ವಿಕಾರಸ್ವರೂಪವುಳ್ಳ, ದೇವಿಯ ವಾಸ್ತವರೂಪವನ್ನೂ ಧ್ಯಾನಿಸಿ, ಮತ್ತು ಕೆಂಪಾದ

ತಸ್ಯ ಚಿಂತಯಮಾನಸ್ಯ ಸರ್ವೇ ದೇವಾಸ್ಸವಾಸವಾಃ ।
ಧರ್ಮಂ ಪ್ರಮುಖತಃ ಕೃತ್ವಾ ಸಮಾಜಗ್ಮುಸ್ತ್ವರಾಽನ್ವಿತಾಃ ॥೪॥

ಆಗತ್ಯ ಸರ್ವೇ ಪ್ರೋಚುಸ್ತೇ ರಾಜಞ್ಛೃಣು ಮಹಾಪ್ರಭೋ ।
ಅಹಂ ಪಿತಾಮಹಸ್ಸಾಕ್ಷಾದ್ಧರ್ಮಶ್ಚ ಭಗವಾನ್ಸ್ವಯಂ ॥೫॥

ಸಾಧ್ಯಾಃಸವಿಶ್ವೇ ಮರುತೋ ಲೋಕಪಾಲಾಸ್ಸಚಾರಣಾಃ ।
ನಾಗಾಃ ಸಿದ್ಧಾಃ ಸಗಂಧರ್ವಾ ರುದ್ರಾಶ್ಚೈವ ತಥಾಽಶ್ವಿನೌ ॥೬॥

ಏತೇ ಚಾನ್ಯೇಽಥ ಬಹವೋ ವಿಶ್ವಾಮಿತ್ರಸ್ತಥೈವ ಚ ।
ವಿಶ್ವತ್ರಯೇಣ ಯೋ ಮೈತ್ರೀಂ ಕರ್ತುಮಿಚ್ಛತಿ ಧರ್ಮತಃ ॥೭॥

---

ಪೀತಾಂಬರವನ್ನುಟ್ಟು ನಾನಾವಿಧವಾದ ಆಯುಧಗಳನ್ನು ಧರಿಸಿ, ಪ್ರಪಂಚವನ್ನು ಕಾಪಾಡುವುದರಲ್ಲಿ ಆಸಕ್ತಳಾಗಿ, ದಯಾಮೂರ್ತಿಯಾದ, ಸಾಕಾರ ಸ್ವರೂಪವನ್ನೂ ಹೊಂದಿರುವ, ತನ್ನ ಕುಲದವರಿಗೂ ತನಗೂ ಉಪಾಸ್ಯದೇವತೆಯಾದ ಶತಾಕ್ಷೀ ದೇವಿಯನ್ನು ಆ ಹರಿಶ್ಚಂದ್ರಮಹಾರಾಜನು ಧ್ಯಾನಮಾಡುತ್ತಾ ಇದ್ದನು. ॥೧-೩॥

ಹಾಗೆ ರಾಜನು ಶತಾಕ್ಷೀದೇವಿಯನ್ನು ಧ್ಯಾನಮಾಡುತ್ತಿರಲು, ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ಧರ್ಮದೇವನನ್ನು ಮುಂದುಮಾಡಿಕೊಂಡು ಆತುರದಿಂದ ಅಲ್ಲಿಗೆ ಬಂದರು. " ತ್ವರಾಽನ್ವಿತಾಃ " ಎಂಬುದಾಗಿ ಹೇಳಿರುವುದರಿಂದ ಪರಮೇಶ್ವರಿಯನ್ನು ಧ್ಯಾನಿಸುವ ಭಕ್ತರ ವಿಷಯದಲ್ಲಿ ಅವರಿಗೆ ಕಷ್ಟವನ್ನು ಕೊಟ್ಟು ಪರೀಕ್ಷಿಸಿಯೂ ಅನುಗ್ರಹಿಸದೆ ವಂಚಿಸಿದರೆ ತಮ್ಮ ತಲೆಯು, ಸಾವಿರಚೂರುಗಳಾ ದೀತು ! ಎಂದು, ಬೇಗನೆ ದೇವೀಭಕ್ತನ ಕಷ್ಟವನ್ನು ನಿವಾರಿಸಿ ಅನುಗ್ರಹವನ್ನು ಮಾಡಿಸಲೋಸುಗ ದೇವತೆಗಳು ಬಂದರೆಂದು ವ್ಯಕ್ತವಾಗುತ್ತದೆ. ॥೪॥

ಆಗ ದೇವತೆಗಳು ಎಲ್ಲರೂ ಬಂದು ಎಲೈ ತುಂಬ ಪ್ರಭಾವಶಾಲಿಯಾದ ಮಹಾರಾಜನೇ, ಕೇಳು, ನಾನು ಬ್ರಹ್ಮನು, ಇವನು ಸಾಕ್ಷಾದ್ಧರ್ಮಸ್ವರೂಪನು, ಇವರು ಸಾಧ್ಯರೂ ವಿಶ್ವೇದೇವತೆಗಳೂ, ಲೋಕಪಾಲಕರೂ, ಚಾರಣರೂ, ನಾಗರೂ, ಸಿದ್ಧರೂ, ಗಂಧರ್ವರೂ, ಏಕಾದಶರುದ್ರರೂ, ಅಶ್ವಿನೀದೇವತೆಗಳೂ, ಹೀಗೆ ನಾವೆಲ್ಲರೂ ನಿನ್ನ ಸತ್ಯಧರ್ಮನಿಷ್ಠೆಗೂ, ದೇವಿಭಕ್ತಿಗೂ ಸಹ ಮೆಚ್ಚಿ ಬಂದಿರುವೆವು. ॥೫-೬॥

ಇವರಲ್ಲದೆ ಇನ್ನೂ ಅನೇಕ ದೇವತೆಗಳೂ, ವಿಶ್ವಾಮಿತ್ರನೂ ಕೂಡ ಬಂದಿರುವರು. ಈ ವಿಶ್ವಾಮಿತ್ರನು ಧರ್ಮಾಚರಣೆಯಿಂದ ಮೂರು ಲೋಕಕ್ಕೂ ಪರಸ್ಪರ

ವಿಶ್ವಾಮಿತ್ರಃ ಸ ತೇಽಭೀಷ್ಟಮಾಹರ್ತುಂ ಸಮ್ಯಗಿಚ್ಛತಿ ।

॥ ಧರ್ಮ ಉವಾಚ ॥

ಮಾರಾಜನ್ ಸಾಹಸಂ ಕಾರ್ಷೀಃ ಧರ್ಮೋಽಹಂ ತ್ವಾಮುಪಾಗತಃ ॥೮॥

ತಿತಿಕ್ಷಾದಮಸತ್ವಾದ್ಯೈಸ್ತ್ವದ್ಗುಣೈಃ ಪರಿತೋಷಿತಃ ।

॥ ಇಂದ್ರ ಉವಾಚ ॥

ಹರಿಶ್ಚಂದ್ರ ಮಹಾಭಾಗ ಪ್ರಾಪ್ತಃ ಶಕ್ರೋಽಸ್ಮಿ ತೇಽಂತಿಕಂ ॥೯॥

ತ್ವಯಾಽದ್ಯ ಭಾರ್ಯಾ ಪುತ್ರೇಣ ಜಿತಾ ಲೋಕಾಸ್ಸನಾತನಾಃ ।

ಆರೋಹ ತ್ರಿದಿವಂ ರಾಜನ್ ಭಾರ್ಯಾಪುತ್ರಸಮನ್ವಿತಃ ॥೧೦॥

ಸುದುಷ್ಪ್ರಾಪಂ ನರೈರನ್ಯೈರ್ಜಿತಮಾತ್ಮೀಯ ಕರ್ಮಭಿಃ ।

---

ಮೈತ್ರಿಯನ್ನು ಧರ್ಮಸಂಬಂಧ ಮೂಲಕವಾದ ಬಾಂಧವ್ಯವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದ, ಅನ್ವರ್ಥವಾದ ಹೆಸರನ್ನು ಪಡೆದು, ನಿನ್ನ ಇಷ್ಟಾರ್ಥವನ್ನೂ ನೆರವೇರಿಸಿ ಕೊಡುವುದಕ್ಕಾಗಿ ಮನಃಪೂರ್ವಕವಾಗಿ ಇಲ್ಲಿಗೆ ಬಂದಿರುವನು. ॥೭॥

ಧರ್ಮದೇವನು ಹೇಳಿದನು—ಎಲೈ ರಾಜನೇ, ಸಾಹಸಕಾರ್ಯವನ್ನು ಮಾಡಬೇಡ, ನಾನು ಧರ್ಮದೇವನು. ನಿನ್ನ ಸಹನೆ, ಇಂದ್ರಿಯನಿಗ್ರಹ, ಸಾತ್ವಿಕಗುಣ ಇವುಗಳಿಂದ ಸಂತೋಷಗೊಂಡು ಅನುಗ್ರಹಿಸಲು ನಿನ್ನ ಸಮೀಪಕ್ಕೆ ಬಂದಿರುವೆನು! ॥೮॥

ದೇವೇಂದ್ರನು ರಾಜನನ್ನು ಕುರಿತು ಪುಣ್ಯವಂತನಾದ ಹರಿಶ್ಚಂದ್ರನೇ, ನಾನು ದೇವೇಂದ್ರನು. ನಿನ್ನ ಸಮೀಪಕ್ಕೆ ಬಂದಿರುವೆನು. ನೀನು ಹೆಂಡತಿಮಕ್ಕಳೊಂದಿಗೆ ನೀನು ಆಚರಿಸಿದ ಸತ್ಯಧರ್ಮದಿಂದ ಶಾಶ್ವತಸುಖರೂಪವಾದ ಪುಣ್ಯಲೋಕವನ್ನು ವಶಮಾಡಿಕೊಂಡಿರುವೆ! ಇತರ ಜನರು ಸಾಮಾನ್ಯವಾಗಿ ಹೊಂದಲಸಾಧ್ಯವಾದ ಪುಣ್ಯವನ್ನು ನಿನ್ನ ನಡತೆಯಿಂದ ಸಂಪಾದಿಸಿರುವೆ. ಆದುದರಿಂದ ಹೆಂಡತಿಮಕ್ಕಳೊಡನೆ ಸ್ವರ್ಗಲೋಕಕ್ಕೆ ನೀನು ಏರಿ ಬರಬೇಕು. ಎಂದನು. ಇದರಿಂದ ಮಾನವನಿಗೆ ಎಷ್ಟು ಕಷ್ಟಗಳು ಒದಗಿದ್ದರೂ ಧರ್ಮದಲ್ಲಿ ಆದರವನ್ನೂ ದೇವರಲ್ಲಿ ಭಕ್ತಿಯನ್ನೂ ಬಿಡದೆ ಸಹನೆಯಿಂದ ಇದ್ದರೆ, ಕಡೆಗೆ ಸುಖವಾಗುವುದೆಂಬ ಅಂಶವನ್ನು, "ಯತೋಧರ್ಮ ಸ್ತತೋಜಯಃ" ಎಂಬ ಸೂಕ್ತಿಯನ್ನನುಸರಿಸಿ ತಿಳಿಯಬಹುದು. ಧಾರ್ಮಿಕವಾದ ಸಂಸ್ಕೃತಿಯ ಫಲವಿದು. ॥೯-೧೦॥

|| ಸೂತ ಉವಾಚ ||

ತತೋಽಮೃತಮಯಂ ವರ್ಷಮಪಮೃತ್ಯು ವಿನಾಶನಂ ||೧೧||
ಇಂದ್ರಃ ಪ್ರಾಸೃಜದಾಕಾಶಾಚ್ಚಿತಾಮಧ್ಯಗತೇ ಶಿಶೌ ।
ಪುಷ್ಪವೃಷ್ಟಿಶ್ಚ ಮಹತೀ ದುಂದುಭಿಸ್ವನ ಏವ ಚ ||೧೨||

ಸಮುತ್ತಸ್ಥೌ ಮೃತಃ ಪುತ್ರೋ ರಾಜ್ಞಸ್ತಸ್ಯ ಮಹಾತ್ಮನಃ ।
ಸುಕುಮಾರ ತನುಃ ಸ್ವಸ್ಥಃ ಪ್ರಸನ್ನಃ ಪ್ರೀತಮಾನಸಃ ||೧೩||

ತತೋ ರಾಜಾ ಹರಿಶ್ಚಂದ್ರಃ ಪರಿಷ್ವಜ್ಯ ಸುತಂ ತದಾ ।
ಸಭಾರ್ಯಃ ಸ್ವಶ್ರಿಯಾ ಯುಕ್ತೋ ದಿವ್ಯಮಾಲ್ಯಾಂಬರಾವೃತಃ||೧೪||

ಸ್ವಸ್ಥಃ ಸಂಪೂರ್ಣ ಹೃದಯೋ ಮುದಾಪರಮಯಾ ವೃತಃ ।
ಬಭೂವ ತತ್ಕ್ಷಣಾದಿಂದ್ರೋ ಭೂಪಂ ಚೈವಮಭಾಷತ ||೧೫||

ಸಭಾರ್ಯಸ್ತ್ವಂ ಸಪುತ್ರಶ್ಚ ಸ್ವರ್ಲೋಕಂ ಸದ್ಗತಿಂ ಪರಾಂ ।
ಸಮಾರೋಹ ಮಹಾಭಾಗ ನಿಜಾನಾಂ ಕರ್ಮಣಾಂ ಫಲಂ ||೧೬||

---

ಸೂತನು ಹೇಳಿದನು—ಆಮೇಲೆ ದೇವೇಂದ್ರನು ಚಿತೆಯ ಮಧ್ಯದಲ್ಲಿರುವ ರಾಜಪುತ್ರನ ಮೇಲೆ ಅಪಮೃತ್ಯುವನ್ನು ನಾಶಮಾಡುವ ಅಮೃತದ ಮಳೆಯನ್ನು ಆಕಾಶದಿಂದ ಸುರಿಸಿದನು. ವಿಶೇಷವಾದ ಹೂವಿನ ಮಳೆಯೂ, ದೇವದುಂದುಭಿಗಳ ಧರ್ಮಜಯಘೋಷದ ಧ್ವನಿಯೂ ಆಯಿತು. ||೧೧-೧೨||

ಮರಣವನ್ನು ಹೊಂದಿದ್ದ, ಮಹಾತ್ಮನಾದ ಆ ರಾಜನ ಮಗನು ಆರೋಗ್ಯ ವಾದ ಮೃದುವಾದ ಶರೀರದಿಂದಲೂ ಶುದ್ಧವಾದ ಸಂತೋಷಚಿತ್ತದಿಂದಲೂ ಕೂಡಿ ಎದ್ದು ನಿಂತನು. ||೧೩||

ಆಮೇಲೆ ಹರಿಶ್ಚಂದ್ರನು ಹೆಂಡಿತಿಯೊಡನೆ ಕೂಡಿ ಮಗನನ್ನು ತಬ್ಬಿಕೊಂಡಿರಲು, ರಾಜತೇಜಸ್ಸಿನಿಂದ ಪ್ರಕಾಶಿಸುತ್ತ ದಿವ್ಯವಾದ ವಸ್ತ್ರಗಳನ್ನು ಧರಿಸಿ, ಹೂವುಗಳನ್ನು ಮುಡಿದುಕೊಂಡು, ಆ ಕ್ಷಣದಲ್ಲಿಯೇ ವಿಶೇಷ ಸಂತೋಷವನ್ನು ಹೊಂದಿದವನಾದನು. ಆಗ ದೇವೇಂದ್ರನು ರಾಜನನ್ನು ಕುರಿತು ಹೀಗೆ ಹೇಳಿದನು. ||೧೪-೧೫||

ಪುಣ್ಯವಂತನಾದ ಮಹಾರಾಜನೇ, ನಿನ್ನ ಶುಭಕರ್ಮದಿಂದ ಸಂಪಾದಿಸಿದ ಫಲರೂಪವಾದ ಉತ್ತಮ ಸುಖವನ್ನು ಹೆಂಡತಿಮಕ್ಕಳೊಡನೆ ಸ್ವರ್ಗಲೋಕಕ್ಕೆ ಏರಿಬಂದು ಅನುಭವಿಸು. ||೧೬||

|| ಹರಿಶ್ಚಂದ್ರ ಉವಾಚ ||

**ದೇವರಾಜಾನನುಜ್ಞಾತಃ ಸ್ವಾಮಿನಾ ಶ್ವಪಚೇನ ಹಿ ।**
**ಅಕೃತ್ವಾ ನಿಷ್ಕೃತಿಂ ತಸ್ಯ ನಾರೋಕ್ಷ್ಯೇ ವೈ ಸುರಾಲಯಂ ॥೧೭॥**

|| ಧರ್ಮ ಉವಾಚ ||

**ತವೈವಂ ಭಾವಿನಂ ಕ್ಲೇಶಮುಪಗಮ್ಯಾತ್ಮಮಾಯಯಾ ।**
**ಆತ್ಮಾ ಶ್ವಪಾಕತಾಂ ನೀತೋ ದರ್ಶಿತಂ ತಚ್ಚ ಪಕ್ಕಣಂ ॥೧೮॥**

|| ಇಂದ್ರ ಉವಾಚ ||

**ಪ್ರಾರ್ಥ್ಯತೇ ಯತ್ಪರಂ ಸ್ಥಾನಂ ಸಮಸ್ತೈರ್ಮನುಜೈರ್ಭುವಿ ।**
**ತದಾರೋಹ ಹರಿಶ್ಚಂದ್ರ ಸ್ಥಾನಂ ಪುಣ್ಯಕೃತಾಂ ನೃಣಾಂ ॥೧೯॥**

|| ಹರಿಶ್ಚಂದ್ರ ಉವಾಚ ||

**ದೇವರಾಜ ನಮಸ್ತುಭ್ಯಂ ವಾಕ್ಯಂ ಚೇದಂ ನಿಬೋಧ ಮೇ ।**
**ಮಚ್ಛೋಕಮಗ್ನ ಮನಸಃ ಕೋಸಲೇ ನಗರೇ ನರಾಃ ॥೨೦॥**
**ತಿಷ್ಠಂತಿ ತಾನಪಾಸ್ಯೈವಂ ಕಥಂ ಯಾಸ್ಯಾಮ್ಯಹಂ ದಿವಂ ।**

---

ಹರಿಶ್ಚಂದ್ರನು ಹೇಳಿದನು—ದೇವೇಂದ್ರನೇ, ನನ್ನ ಒಡೆಯನಾದ ಚಾಂಡಾಲನಿಂದ ಅಪ್ಪಣೆಯನ್ನು ಪಡೆಯದೆ, ಚಾಂಡಾಲನ ದಾಸನಾಗಿದ್ದುದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ, ನಾನು ಸ್ವರ್ಗಕ್ಕೆ ಏರಿಬರುವುದಿಲ್ಲ! ॥೧೭॥

ಧರ್ಮದೇವನು ಹೇಳಿದನು— ಎಲೈ ರಾಜನೇ, ನಿನಗೆ ಹೀಗೆ ಮುಂದೆ ಒದಗುವ ತೊಂದರೆಗಳನ್ನು ತಿಳಿದು ಅವನ್ನು ಸರಿಹರಿಸಲು ನಾನೇ ನನ್ನ ಮಾಯೆಯಿಂದ ಚಾಂಡಾಲನಾಗಿ ಬಂದು ನನ್ನ ಮನೆಯನ್ನೂ, ಕೇರಿಯನ್ನೂ, ಕಾರ್ಯಸ್ಥಾನವನ್ನೂ, ನಿನಗೆ ತೋರಿಸಿದ್ದೆನು. ॥೧೮॥

ದೇವೇಂದ್ರನು ಹೇಳಿದನು—ಹರಿಶ್ಚಂದ್ರನೇ, ಭೂಮಿಯಲ್ಲಿ ಸಮಸ್ತ ಮನುಜರೂ ಯಾವ ಉತ್ತಮವಾದ ಸ್ಥಾನವನ್ನು ಪಡೆಯಲು ಕೋರುತ್ತಿರುವರೋ, ಅಂತಹ ಪುಣ್ಯವಂತರಾದ ಮನುಜರು ಪಡೆಯುವ ಸ್ಥಾನವನ್ನು ನೀನು ಹೊಂದು ಎಂದನು. ॥೧೯॥

ಹರಿಶ್ಚಂದ್ರನು ಹೇಳಿದನು—ದೇವರಾಜನೇ, ನಿನಗೆ ನಮಸ್ಕಾರ ಮಾಡುತ್ತೇನೆ. ಈ ನನ್ನ ಮಾತನ್ನು ಲಾಲಿಸಿ ಕೇಳು. ಕೋಸಲನಗರದಲ್ಲಿರುವ ಜನರು

ಬ್ರಹ್ಮಹತ್ಯಾ ಸುರಾಪಾನಂ ಗೋವಧಃ ಸ್ತ್ರೀವಧಸ್ತಥಾ ॥೨೧॥

ತುಲ್ಯಮೇಭಿರ್ಮಹತ್ಪಾಪಂ ಭಕ್ತತ್ಯಾಗಾದುದಾಹೃತಂ ।
ಭಜಂತಂ ಭಕ್ತಮತ್ಯಾಜ್ಯಂ ತ್ಯಜತಃ ಸ್ಯಾತ್ಕಥಂ ಸುಖಂ ॥೨೨॥

ತೈರ್ವಿನಾ ನ ಪ್ರಯಾಸ್ಯಾಮಿ ತಸ್ಮಾಚ್ಛಕ್ರ ದಿವಂ ವ್ರಜ ।
ಯದಿ ತೇ ಸಹಿತಾಃ ಸ್ವರ್ಗಂ ಮಯಾ ಯಾಂತಿ ಸುರೇಶ್ವರ ॥೨೩॥

ತತೋಽಹಮಪಿ ಯಾಸ್ಯಾಮಿ ನರಕಂ ವಾಽಪಿ ತೈಃ ಸಹ ।

॥ ಇಂದ್ರ ಉವಾಚ ॥

ಬಹೂನಿ ಪುಣ್ಯಪಾಪಾನಿ ತೇಷಾಂ ಭಿನ್ನಾನಿ ವೈ ನೃಪ ॥೨೪॥

ಕಥಂ ಸಂಘಾತಭೋಜ್ಯಂ ತ್ವಂ ಭೂಪ ಸ್ವರ್ಗಮಭೀಪ್ಸಸಿ ॥೨೫॥

---

ನನಗುಂಟಾದ ದುಃಖವನ್ನು ನೋಡಿ ತಾವೂ ದುಃಖಪಡುತ್ತಿರುತ್ತಾರೆ. ಅವರನ್ನು ಬಿಟ್ಟು ನಾನೊಬ್ಬನೇ ಹೇಗೆ ಸ್ವರ್ಗಕ್ಕೆ ಬಂದೇನು ? ॥೨೦॥

ಬ್ರಾಹ್ಮಣನನ್ನೂ ಗೋವನ್ನೂ ಸ್ತ್ರೀಯನ್ನೂ ಕೊಲ್ಲುವುದು, ಹೆಂಡವನ್ನು ಕುಡಿಯುವುದು, ಇವುಗಳಿಗೆ ಎಂತಹ ಪಾಪವೆಂದು ಹೇಳಿದೆಯೋ, ನಂಬಿದವರನ್ನು ಕೈಬಿಡುವುದರಿಂದ ಉಂಟಾಗುವ ಪಾಪವೂ ಅದಕ್ಕೆ ಸಮವಾದುದೇ ಎಂದು ಹೇಳಿದೆ. ನನ್ನನ್ನೇ ನಂಬಿಕೊಂಡು ಸೇವಿಸುವ, ಆದುದರಿಂದ ಬಿಡಬಾರದ, ಭಕ್ತರನ್ನು ಬಿಟ್ಟವರಿಗೆ ಹೇಗೆತಾನೇ ಸುಖವುಂಟಾದೀತು ? ॥೨೧-೨೨॥

ಅವರನ್ನು ಬಿಟ್ಟು ನಾನು ಸ್ವರ್ಗಕ್ಕೆ ಬರುವವನಲ್ಲ. ಆದುದರಿಂದ ದೇವೇಂದ್ರನೇ, ಸ್ವರ್ಗಕ್ಕೆ ಹೋಗು. ಅವರೂ ನನ್ನೊಡನೆ ಸ್ವರ್ಗಕ್ಕೆ ಬರುವುದಾದರೆ ನಾನೂ ಬರುವೆನು. ಅಥವಾ ನರಕಕ್ಕಾದರೂ ಅವರೊಡನೆ ಹೋಗುತ್ತೇನೆ ! ಎಂದನು ॥೨೩॥

ಇಂದ್ರನು ಹೇಳಿದನು—ಎಲೈ ರಾಜನೇ, ಆ ಸೇವಕರ ಪುಣ್ಯಪಾಪಗಳು ಅನೇಕವಾಗಿ ಬೇರೆ ಬೇರೆಯಾದ ಫಲಗಳನ್ನು ಕೊಡುವುವಾಗಿವೆ. ಸ್ವರ್ಗಸುಖವನ್ನು ಗುಂಪಿನೊಡನೆ ಅನುಭವಿಸುವುದನ್ನು ನೀನು ಹೇಗೆ ಅಪೇಕ್ಷಿಸುವೆ? ಎಂದನು. ॥೨೪-೨೫॥

|| ಹರಿಶ್ಚಂದ್ರ ಉವಾಚ ||

ಭುಙ್ಕ್ತೇ ಶಕ್ರ ನೃಪೋ ರಾಜ್ಯಂ ಪ್ರಭಾವಾತ್ಸುಕೃತೇರ್ಧ್ರುವಂ||೨೫||

ಯಜತೇ ಚ ಮಹಾಯಜ್ಞೈಃ ಕರ್ಮಪೂರ್ತಂ ಕರೋತಿ ಚ ।
ತಚ್ಚ ತೇಷಾಂ ಪ್ರಭಾವೇನ ಮಯಾ ಸರ್ವಮನುಷ್ಠಿತಂ ||೨೬||

ಉಪದಾದಾನ್ನ ಸಂತ್ಯಕ್ಷ್ಯೇ ತಾನಹಂ ಸ್ವರ್ಗಲಿಪ್ಸಯಾ ।
ತಸ್ಮಾದ್ಯನ್ಮಮ ದೇವೇಶ ಕಿಂಚಿದಸ್ತಿ ಸುಚೇಷ್ಟಿತಂ ||೨೭||

ದತ್ತಮಿಷ್ಟಮಥೋ ಜಪ್ತಂ ಸಾಮಾನ್ಯಂ ತೈಸ್ತದಸ್ತು ನಃ ।
ಬಹುಕಾಲೋಪಭೋಜ್ಯಂ ಚ ಫಲಂ ಯನ್ಮಮ ಕರ್ಮಗಂ ||೨೮||

ತದಸ್ತು ದಿನಮಪ್ಯೇಕಂ ತೈಸ್ಸಮಂ ತ್ವತ್ಪ್ರಸಾದತಃ ।

|| ಸೂತ ಉವಾಚ ||

ಏವಂ ಭವಿಷ್ಯತೀತ್ಯುಕ್ತ್ವಾ ಶಕ್ರಸ್ತ್ರಿಭುವನೇಶ್ವರಃ ||೨೯||

---

ಹರಿಶ್ಚಂದ್ರನು ಹೇಳಿದನು—ದೇವೇಂದ್ರನೇ, ಪ್ರಜೆಗಳ ಸುಗುಣದ ಒತ್ತಾಸೆಯ ಮಹಿಮೆಯಿಂದಲೇ ರಾಜನು ರಾಜ್ಯವನ್ನು ಅನುಭವಿಸುತ್ತಾನೆಂಬುದು ಖಂಡಿತವಾದ ಮಾತು. ಅವರ ಮಹಿಮೆಯಿಂದಲೇ ನಾನು ದೊಡ್ಡ ಯಜ್ಞಗಳಿಂದ ದೇವತೆಗಳನ್ನು ಪೂಜಿಸಿರುವೆನು! ಕೆರೆ, ಕಾಲುವೆ, ತೋಪು ಮುಂತಾದ ಪೂರ್ತ ಕರ್ಮಗಳನ್ನೂ ಮಾಡಿರುವೆನು! ||೨೫-೨೬||

ರಾಜನಿಗೆ ಕಂದಾಯಗಳ ಮೂಲಕ ದ್ರವ್ಯವನ್ನು ಕೊಡತಕ್ಕ ಆ ಪ್ರಜೆಗಳನ್ನು ಬಿಟ್ಟು ಸ್ವರ್ಗದ ಆಸೆಯಿಂದ ಬರಲಾರೆನು. ಆದುದರಿಂದ ದೇವರಾಜನೇ, ದಾನ ಮಾಡಿದ, ಯಜ್ಞಮಾಡಿದ, ಜಪಮಾಡಿದ ಸಾಮಾನ್ಯವಾದ ಪುಣ್ಯಫಲವು ಸ್ವಲ್ಪವಾಗಿ ನನಗಿದ್ದರೂ ಅದೇ ಅವರಿಗೂ ಆಗಲಿ. ||೨೭||

ನನ್ನ ಪುಣ್ಯಫಲವು ಅನೇಕಕಾಲ ಅನುಭವಿಸುವುದಿದ್ದರೆ, ನಿನ್ನ ಅನುಗ್ರಹದಿಂದ ಆ ಪುಣ್ಯಫಲವನ್ನು ಆ ಪ್ರಜೆಗಳೊಡನೆ ಒಂದು ದಿನವಾದರೂ ಅನುಭವಿಸುವೆನು ಎಂದನು. ||೨೮||

ಸೂತನು ಹೇಳಿದನು—ಮೂರು ಲೋಕಕ್ಕೂ ಒಡೆಯನಾದ ದೇವೇಂದ್ರನು ಹಾಗೆಯೇ ಆಗಲಿ, ಎಂದು ಹೇಳಿ, ಸಂತೋಷದಿಂದಿರುವ ಧರ್ಮದೇವನೊಡನೆಯೂ,

ಪ್ರಸನ್ನಚೇತಾ ಧರ್ಮಶ್ಚ ವಿಶ್ವಾಮಿತ್ರಶ್ಚ ಗಾಧಿಜಃ ।
ಗತ್ವಾ ತು ನಗರಂ ಸರ್ವೇ ಚಾತುರ್ವರ್ಣ್ಯ ಸಮಾಕುಲಂ ॥೩೦॥

ಹರಿಶ್ಚಂದ್ರಸ್ಯ ನಿಕಟೇ ಪ್ರೋವಾಚ ವಿಬುಧಾಧಿಪಃ ।
ಆಗಚ್ಛಂತು ಜನಾಃ ಶೀಘ್ರಂ ಸ್ವರ್ಗಲೋಕಂ ಸುದುರ್ಲಭಂ ॥೩೧॥

ಧರ್ಮಪ್ರಸಾದಾತ್ಸಂಪ್ರಾಪ್ತಂ ಸರ್ವೈರ್ಯುಷ್ಮಾಭಿರೇವ ತು ।
ಹರಿಶ್ಚಂದ್ರೋಽಪಿ ತಾನ್ಸರ್ವಾನ್ ಜನಾನ್ನಗರವಾಸಿನಃ ॥೩೨॥

ಪ್ರಾಹ ರಾಜಾ ಧರ್ಮಪರೋ ದಿವ ಮಾರುಹ್ಯತಾಮಿತಿ ।

॥ ಸೂತ ಉವಾಚ ॥

ತದಿಂದ್ರಸ್ಯ ವಚಃ ಶ್ರುತ್ವಾ ಪ್ರೀತಾಸ್ತಸ್ಯ ಚಮೂಪತೇಃ ॥೩೩॥

ಯೇ ಸಂಸಾರೇಷು ನಿರ್ವಿಣ್ಣಾಸ್ತೇ ಧುರಂ ಸ್ವಸುತೇಷು ವೈ ।
ಕೃತ್ವಾ ಪ್ರಹೃಷ್ಟ ಮನಸೋ ದಿವಮಾರುರುಹುರ್ಜನಾಃ ॥೩೪॥

---

ಗಾಧಿಪುತ್ರನಾದ ವಿಶ್ವಾಮಿತ್ರನೊಡನೆಯೂ, ಎಲ್ಲರೂ ಯೋಗಶಕ್ತಿಯಿಂದ ಬ್ರಾಹ್ಮಣಾದಿ ನಾಲ್ಕುವರ್ಣಗಳ ಧರ್ಮಾಚರಣಗಳಿಂದ ತುಂಬಿದ ಕೋಸಲ ರಾಜಧಾನಿಗೆ ಬಂದು, ಹರಿಶ್ಚಂದ್ರನ ಸಮೀಪದಲ್ಲಿ ನಿಂತು, ಹೀಗೆ ಮಾತನಾಡಿದನು. ॥೨೯-೩೦॥

ಧರ್ಮದೇವನ ಅನುಗ್ರಹದಿಂದ ನಿಮ್ಮೆಲ್ಲರಿಂದಲೂ ಸಂಪಾದಿಸಲ್ಪಟ್ಟ ದುರ್ಲಭವಾದ ಸ್ವರ್ಗಲೋಕಕ್ಕೆ ನೀವೆಲ್ಲರೂ ಬನ್ನಿ! ॥೩೧॥

ಹರಿಶ್ಚಂದ್ರನೂ ಕೂಡ ಆ ಸಮಸ್ತ ಪಟ್ಟಣಿಗರನ್ನೂ ಕುರಿತು, ನೀವೆಲ್ಲರೂ ಸ್ವರ್ಗಕ್ಕೇರಿ ಬನ್ನಿರಿ. ಎಂದನು. ॥೩೨॥

ಸೂತನು ಹೇಳಿದನು—ಆ ದೇವೇಂದ್ರನ ಮಾತನ್ನು ಕೇಳಿ ಸಂತೋಷಗೊಂಡ ಆ ರಾಜನ ಪ್ರಜೆಗಳಲ್ಲಿ ಯಾರು ಸಂಸಾರದ ವಿಷಯದಲ್ಲಿ ವೈರಾಗ್ಯವನ್ನು ಹೊಂದಿದ್ದರೋ ಅಂಥವರು ತಮ್ಮ ಮಕ್ಕಳಿಗೆ ಆ ಸಂಸಾರಭಾರವನ್ನು ವಹಿಸಿ ಸಂತೋಷದಿಂದ ಸ್ವರ್ಗಕ್ಕೆ ಹೋದರು. ॥೩೩-೩೪॥

ವಿಮಾನ ವರಮಾರೂಢಾಃ ಸರ್ವೇ ಭಾಸ್ವರ ವಿಗ್ರಹಾಃ ।
ತದಾ ಸಂಭೂತ ಹರ್ಷಾಸ್ತೇ ಹರಿಶ್ಚಂದ್ರಶ್ಚ ಪಾರ್ಥಿವಃ ॥೩೫॥

ರಾಜ್ಯೇಽಭಿಷಿಚ್ಯ ತನಯಂ ರೋಹಿತಾಖ್ಯಂ ಮಹಾಮನಾಃ ।
ಅಯೋಧ್ಯಾಖ್ಯೇ ಪುರೇ ರಮ್ಯೇ ಹೃಷ್ಟ ಪುಷ್ಟ ಜನಾನ್ವಿತೇ ॥೩೬॥

ತನಯಂ ಸುಹೃದಶ್ಚಾಪಿ ಪ್ರತಿಪೂಜ್ಯಾಭಿನಂದ್ಯ ಚ ।
ಪುಣ್ಯೇನ ಲಭ್ಯಾಂ ವಿಪುಲಾಂ ದೇವಾದೀನಾಂ ಸುದುರ್ಲಭಾಂ ॥೩೭॥

ಸಂಪ್ರಾಪ್ಯ ಕೀರ್ತಿಮತುಲಾಂ ವಿಮಾನೇ ಸ ಮಹೀಪತಿಃ ।
ಆಸಾಂಚಕ್ರೇ ಕಾಮಗಮೇ ಕ್ಷುದ್ರಘಂಟಾ ವಿರಾಜಿತೇ ॥೩೮॥

ತತಸ್ತರ್ಹಿ ಸಮಾಲೋಕ್ಯ ಶ್ಲೋಕಮಂತ್ರಂ ತದಾ ಜಗೌ ।
ದೈತ್ಯಾಚಾರ್ಯೋ ಮಹಾಭಾಗಃ ಸರ್ವಶಾಸ್ತ್ರಾರ್ಥತತ್ತ್ವವಿತ್ ॥೩೯॥

---

ಶ್ರೇಷ್ಠವಾದ ವಿಮಾನವನ್ನು ಹತ್ತಿದ ಆ ಸಮಸ್ತಪ್ರಜೆಗಳೂ ಪ್ರಕಾಶಮಾನವಾದ ದೇವಶರೀರವನ್ನು ಪಡೆದು ಸಂತೋಷಪಟ್ಟರು. ರಾಜನಾದ ಹರಿಶ್ಚಂದ್ರನಾದರೋ, ॥೩೫॥

ವಿಸ್ತಾರವಾದ ಮನಸ್ಸುಳ್ಳವನಾಗಿ ತನ್ನ ಮಗನಾದ ರೋಹಿತನನ್ನು ಮನೋಹರವಾದ ಮತ್ತು ಸಂತೋಷಗೊಂಡ ಶ್ರೀಮಂತರಿಂದ ಕೂಡಿದ ಅಯೋಧ್ಯಾಪಟ್ಟಣದಲ್ಲಿ ಕೋಸಲರಾಜ್ಯಾಧಿಪತಿಯಾಗಿ ಪಟ್ಟಾಭಿಷೇಕವನ್ನು ಮಾಡಿ, ಮಗನನ್ನೂ ತನ್ನ ಗೆಳೆಯರನ್ನೂ ಗೌರವಿಸಿ ಶ್ಲಾಘಿಸಿ, ॥೩೬॥

ಪುಣ್ಯದಿಂದ ದೊರೆಯತಕ್ಕ, ದೇವತೆಗಳಿಗೂ ಸಂಪಾದಿಸಲಸಾಧ್ಯವಾದ, ಅಸಮಾನವಾದ, ವಿಸ್ತಾರವಾದ ಯಶಸ್ಸನ್ನು ಪಡೆದು ಆ ಹರಿಶ್ಚಂದ್ರರಾಜನು ಕಿರುಘಂಟೆಗಳಿಂದ ಅಲಂಕರಿಸಿದ ಮನಸ್ಸಿನ ಇಚ್ಛೆಯಂತೆ ನಡೆಯುವ ವಿಮಾನದಲ್ಲಿ ಕುಳಿತುಕೊಂಡನು. ॥೩೭-೩೮॥

ಆಮೇಲೆ ಸಮಸ್ತಶಾಸ್ತ್ರಗಳ ನಿಜಸಿದ್ಧಾಂತವನ್ನು ಬಲ್ಲ ದೈತ್ಯರ ಗುರುವಾದ ಮಹಾಪುಣ್ಯವಂತನಾದ ಶುಕ್ರಾಚಾರ್ಯನು ಇದನ್ನು ನೋಡಿ ಶ್ಲೋಕರೂಪವಾದ ಒಂದು ಮಂತ್ರವನ್ನು ಹೀಗೆ ಗಾನಮಾಡಿದನು. ॥೩೯॥

॥ ಶುಕ್ರ ಉವಾಚ ॥

ಅಹೋ ತಿತಿಕ್ಷಾ ಮಾಹಾತ್ಮ್ಯಂ ಮಹೋದಾನಫಲಂ ಮಹತ್ ।
ಯದಾಗತೋ ಹರಿಶ್ಚಂದ್ರೋ ಮಹೇಂದ್ರಸ್ಯ ಸಲೋಕತಾಂ ॥೪೦॥

॥ ಸೂತ ಉವಾಚ ॥

ಏತತ್ತೇ ಸರ್ವಮಾಖ್ಯಾತಂ ಹರಿಶ್ಚಂದ್ರಸ್ಯ ಚೇಷ್ಟಿತಂ ।
ಯಃ ಶೃಣೋತಿ ಚ ದುಃಖಾರ್ತಃ ಸ ಸುಖಂ ಲಭತೇಽನ್ವಹಂ ॥೪೧॥

ಸ್ವರ್ಗಾರ್ಥೀ ಪ್ರಾಪ್ನುಯಾತ್ಸ್ವರ್ಗಂ
ಸುತಾರ್ಥೀ ಸುತಮಾಪ್ನುಯಾತ್ ।
ಭಾರ್ಯಾರ್ಥೀ ಪ್ರಾಪ್ನುಯಾದ್ಭಾರ್ಯಾಂ
ರಾಜ್ಯಾರ್ಥೀ ರಾಜ್ಯಮಾಪ್ನುಯಾತ್ ॥೪೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಸಪ್ತವಿಂಶೋಽಧ್ಯಾಯಃ

---

ಶುಕ್ರನು ಹೇಳಿದನು—ಸಹನೆಯ ಮಹಿಮೆಯನ್ನೂ, ದಾನಮಾಡಿದುದರ ಫಲವನ್ನೂ ಏನೆಂದು ಹೊಗಳಲಿ ! ಈ ಎರಡರಿಂದಲೇ ಹರಿಶ್ಚಂದ್ರರಾಜನು ದೇವೇಂದ್ರನ ಲೋಕಕ್ಕೆ ಹೋದನು ! ॥೪೦॥

ಸೂತನು ಹೇಳಿದನು—ಹರಿಶ್ಚಂದ್ರನು ಮಾಡಿದುದೆಲ್ಲವನ್ನೂ ನಿಮಗೆ ಹೇಳಿದೆನು. ಇದನ್ನು ದುಃಖಿತರಾದವರು ಕೇಳಿದರೆ, ಪ್ರತಿದಿನವೂ ಸುಖವನ್ನು ಪಡೆವರು. ಸ್ವರ್ಗದಾಸೆಯುಳ್ಳವರು ಸ್ವರ್ಗವನ್ನೂ, ಮಕ್ಕಳಾಸೆಯುಳ್ಳವರು ಒಳ್ಳೆಯ ಮಕ್ಕಳನ್ನೂ, ಹೆಂಡತಿಯಾಸೆಯುಳ್ಳವರು ಒಳ್ಳೆಯ ಹೆಂಡತಿಯನ್ನೂ, ರಾಜ್ಯದಾಸೆಯುಳ್ಳವರು ಉತ್ತಮವಾದ ರಾಜ್ಯವನ್ನೂ ಪಡೆವರು. ॥೪೧-೪೨॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಅಷ್ಟಾವಿಂಶೋಽಧ್ಯಾಯಃ ||

### ಇಪ್ಪತ್ತೆಂಟನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ವಿಚಿತ್ರಮಿದಮಾಖ್ಯಾನಂ ಹರಿಶ್ಚಂದ್ರಸ್ಯ ಕೀರ್ತಿತಂ ।**
**ಶತಾಕ್ಷೀಪಾದಭಕ್ತಸ್ಯ ರಾಜರ್ಷೇರ್ಧಾರ್ಮಿಕಸ್ಯ ಚ ||೧||**

**ಶತಾಕ್ಷೀ ಸಾ ಕುತೋ ಜಾತಾ ದೇವೀ ಭಗವತೀ ಶಿವಾ ।**
**ತತ್ಕಾರಣಂ ವದ ಮುನೇ ಸಾರ್ಥಕಂ ಜನ್ಮ ಮೇ ಕುರು ||೨||**

**ಕೋಹಿ ದೇವ್ಯಾ ಗುಣಾಞ್ಛೃಣ್ವಂ ಸ್ತೃಪ್ತಿಂ ಯಾಸ್ಯತಿ ಶುದ್ಧಧೀಃ ।**
**ಪದೇಪದೇಽಶ್ವಮೇಧಸ್ಯ ಫಲಮಕ್ಷಯ್ಯ ಮಶ್ನುತೇ ||೩||**

---

ಜನಮೇಜಯರಾಜನು ಹೇಳಿದನು—ಧರ್ಮಾತ್ಮನೂ, ರಾಜರ್ಷಿಯೂ, ಶತಾಕ್ಷೀದೇವಿಯ ಪಾದಭಕ್ತನೂ ಆದ ಹರಿಶ್ಚಂದ್ರರಾಜನ ಆಶ್ಚರ್ಯಕರವಾದ ಚರಿತ್ರೆಯನ್ನು ಹೇಳಿಯಾಯಿತು. ||೧||

ಓ ವ್ಯಾಸಮುನಿಯೇ, ಮಂಗಳಕರಳೂ, ಷಡ್ಗುಣೈಶ್ವರ್ಯಸಂಪನ್ನಳೂ ಆದ ದೇವಿಯು ಶತಾಕ್ಷಿಯಾಗಿ ಏತಕ್ಕೆ ಅವತರಿಸಿದಳು? ಆ ಕಾರಣವನ್ನು ಹೇಳಿ ನನ್ನ ಹುಟ್ಟನ್ನು ಸಫಲಗೊಳಿಸು. ದೇವಿಯ ಗುಣವನ್ನು ಕೇಳುತ್ತಿದ್ದರೆ ಯಾವ ಶುದ್ಧಬುದ್ಧಿಯುಳ್ಳವನು ತಾನೇ ತೃಪ್ತಿಯನ್ನು ಹೊಂದಿಯಾನು. ದೇವಿಯ ಮಹಿಮೆಯನ್ನು ಕೇಳುತ್ತ ಕೇಳುತ್ತ ನಾಶರಹಿತವಾದ ಅಶ್ವಮೇಧಯಜ್ಞದ ಫಲವನ್ನು ಹೊಂದುವನು. ಎಂದನು. ||೨-೩||

॥ ವ್ಯಾಸ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಶತಾಕ್ಷೀಸಂಭವಂ ಶುಭಂ ।
ತವಾಽವಾಚ್ಯಂ ನ ಮೇ ಕಿಂಚಿದ್ದೇವೀ ಭಕ್ತಸ್ಯ ವಿದ್ಯತೇ ॥೪॥

ದುರ್ಗಮಾಖ್ಯೋ ಮಹಾದೈತ್ಯಃ ಪೂರ್ವಂ ಪರಮದಾರುಣಃ ।
ಹಿರಣ್ಯಾಕ್ಷಾನ್ವಯೇ ಜಾತೋ ರುರುಪುತ್ರೋ ಮಹಾಬಲಃ ॥೫॥

ದೇವಾನಾಂ ತು ಬಲಂ ವೇದೋ ನಾಶೇ ತಸ್ಯ ಸುರಾ ಅಪಿ ।
ನಂಕ್ಷ್ಯಂತ್ಯೇವ ನ ಸಂದೇಹೋ ವಿಧೇಯಂ ತಾವದೇವ ತತ್ ॥೬॥

ವಿಮೃಶ್ಯೈತತ್ತಪಶ್ಚರ್ಯಾಂ ಗತಃ ಕರ್ತುಂ ಹಿಮಾಲಯೇ ।
ಬ್ರಹ್ಮಾಣಂ ಮನಸಾ ಧ್ಯಾತ್ವಾ ವಾಯುಭಕ್ಷೋ ವ್ಯತಿಷ್ಠತ ॥೭॥

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯನೇ, ಮಂಗಳಕರವಾದ ಶತಾಕ್ಷೀದೇವಿಯ ಉತ್ಪತ್ತಿಯನ್ನು ಹೇಳುವೆನು ಕೇಳು. ದೇವೀಭಕ್ತನಾದ ನಿನಗೆ ನಾನು ಹೇಳದೇ ಇರತಕ್ಕ ವಿಷಯವಾವುದಾದರೂ ಇರುವುದಿಲ್ಲ. ಗೋಪ್ಯವಾದ ವಿಷಯವನ್ನೂ ಹೇಳುವೆನೆಂದು ಭಾವವು. ॥೪॥

ಪೂರ್ವದಲ್ಲಿ ಹಿರಣ್ಯಾಕ್ಷನ ವಂಶದಲ್ಲಿ ಹುಟ್ಟಿದ ರುರುವಿನ ಮಗನೂ, ಮಹಾದುಷ್ಟನೂ, ಮಹಾಭಯಂಕರನೂ ಆದ ದುರ್ಗಮನೆಂಬ ದೈತ್ಯನಿದ್ದನು. ॥೫॥

ಅವನು, ದೇವತೆಗಳಿಗೆ ವೇದವೇ ಬಲವು. ಎಂದರೆ ವೇದವಿದ್ದರೆ ಅದರಲ್ಲಿ ಹೇಳಿರುವ ಶಸ್ತ್ರಾಸ್ತ್ರಗಳಿಂದ ಆ ದೇವತೆಗಳು ನಮ್ಮನ್ನು ಹಿಂಸಿಸುವರು. ಇದೂ ಅಲ್ಲದೆ ವೇದಗಳಲ್ಲಿ ಹೇಳಿರುವ ಮಂತ್ರಗಳಿಂದ ಮುನಿಗಳು ಹೋಮಾದಿಗಳನ್ನು ಮಾಡಿದರೆ, ಆ ಹವಿಸ್ಸನ್ನು ತಿಂದು ದೇವತೆಗಳಿಗೆ ಬಲವುಂಟಾಗುವುದು. ಆದುದರಿಂದ ಆ ವೇದವು ನಾಶವಾದರೆ ದೇವತೆಗಳೂ ನಾಶವಾಗುವರು! ಸಂದೇಹವಿಲ್ಲ. ಆ ಕಾರಣದಿಂದ ದೇವತೆಗಳ ನಾಶಕ್ಕಾಗಿ ವೇದನಾಶವಾಗುವ ಪರ್ಯಂತವಾಗಿ ಪ್ರಯತ್ನ ಮಾಡಬೇಕು. ಈ ವಿಷಯದಲ್ಲಿ ಬೇರೆ ಉಪಾಯಾಂತರವಿಲ್ಲ. ॥೬॥

ಹೀಗೆಂದು ನಿಶ್ಚಯಿಸಿ ಆ ದುರ್ಗಮನು ತಪಸ್ಸನ್ನು ಮಾಡುವುದಕ್ಕಾಗಿ ಹಿಮಾಲಯ ಪರ್ವತಕ್ಕೆ ಹೋಗಿ ಬ್ರಹ್ಮನನ್ನು ಮನದಲ್ಲಿ ಧ್ಯಾನಮಾಡುತ್ತ, ವಾಯುವನ್ನೇ ಆಹಾರಮಾಡಿಕೊಂಡಿದ್ದನು. ॥೭॥

ಸಹಸ್ರವರ್ಷಪರ್ಯಂತಂ ಚಕಾರ ಪರಮಂ ತಪಃ ।
ತೇಜಸಾ ತಸ್ಯ ಲೋಕಾಸ್ತು ಸಂತಪ್ತಾಃ ಸಸುರಾಸುರಾಃ ॥೮॥

ತತಃ ಪ್ರಸನ್ನೋ ಭಗವಾನ್ ಹಂಸಾರೂಢಶ್ಚತುರ್ಮುಖಃ ।
ಯಯೌ ತಸ್ಮೈ ವರಂ ದಾತುಂ ಪ್ರಸನ್ನಮುಖಪಂಕಜಃ ॥೯॥

ಸಮಾಧಿಸ್ಥಂ ನಿಮೀಲಿತಾಕ್ಷಂ ಸ್ಫುಟಮಾಹ ಚತುರ್ಮುಖಃ ।
ವರಂ ವರಯ ಭದ್ರಂ ತೇ ಯಸ್ತೇ ಮನಸಿ ವರ್ತತೇ ॥೧೦॥

---

ವೇದವನ್ನು ಕೊಟ್ಟ ಬ್ರಹ್ಮನನ್ನು ಸಂತೋಷಪಡಿಸಿ, ಅವನಿಂದ ತನ್ನ ಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿ, ಒಂದು ಸಾವಿರ ವರ್ಷದ ವರೆಗೂ ಶ್ರೇಷ್ಠವಾದ ತಪಸ್ಸನ್ನು ಮಾಡಿದನು. ಅವನ ತಪಸ್ಸಿನಿಂದುಂಟಾದ ತೇಜಸ್ಸಿನಿಂದ ಸಮಸ್ತ ಲೋಕಗಳೂ ಸಂತಾಪಗೊಂಡವು. ತಪಸ್ಸನ್ನಾಚರಿಸುವವರ ತಪಸ್ಸಿನ ಉದ್ದೇಶಾನುಗುಣವಾಗಿ ಲೋಕಕ್ಕೆ ತಾಪಶಾಂತಿಗಳುಂಟಾಗುವುವು. ಎಂದರೆ, ಸ್ವಪ್ರಯೋಜನೋದ್ದೇಶದಿಂದ ಮಾಡುವ ತಪಸ್ಸು ಯಾವಾಗಲೂ ಇತರರಿಗೆ ತಾಪವನ್ನುಂಟುಮಾಡುವುದು. ಹೇಗೆಂದರೆ ಪರರ ಹಾನಿಯಿಲ್ಲದೆ ಸ್ವಪ್ರಯೋಜನವುಂಟಾಗಲಾರದೆಂಬುದೇ ಇದರ ತತ್ವವು. ಸ್ವಸ್ವರೂಪಪ್ರಾಪ್ತಿಗಾಗಿ ಮಾಡುವ ತಪಸ್ಸು ನಿಷ್ಕಾಮವಾದುದರಿಂದ ಆ ತಪಸ್ಸೂ, ತೇಜಸ್ಸೂ ಚಂದ್ರಕಿರಣದಂತೆ ಶಾಂತವಾದುದರಿಂದ, ಅದು ಲೋಕಕ್ಕೆ ಬಾಧೆಯನ್ನುಂಟುಮಾಡದೆ, ಲೋಕದಲ್ಲಿ ಸುವೃಷ್ಟಿ, ಜನಸೌಖ್ಯ ಮುಂತಾದ ಪ್ರಯೋಜನವನ್ನೇ ಉಂಟುಮಾಡುವುದು. ಇದೇ ರಾಕ್ಷಸರ ತಪಸ್ಸಿಗೂ ಬ್ರಹ್ಮರ್ಷಿಗಳ ತಪಸ್ಸಿಗೂ ಇರುವ ಮುಖ್ಯ ಭೇದವು. ಲೋಕಕ್ಷೇಮಕರವಾದ ಕಾರ್ಯವನ್ನು ಮಾಡುವುದೇ ಬ್ರಹ್ಮಾದಿದೇವತೆಗಳ ಕರ್ತವ್ಯವಾದುದರಿಂದ ತಪಸ್ಸನ್ನು ಮಾಡುವವರಿಗೆ ವರವನ್ನು ಕೊಡುವುದಕ್ಕಾಗಿ ಆ ದೇವತೆಗಳು ಪ್ರತ್ಯಕ್ಷರಾಗುವರು. ವರದರ್ಪಿತರಾದ ದುಷ್ಟಭಾವದ ಜನರು ತಮ್ಮ ಅಕಾರ್ಯಗಳಿಂದ ಗಳಿಸಿದ ಪಾಪಫಲದಿಂದ ತಾವೇ ನಾಶವಾಗುವರು. ॥೮॥

ಆಮೇಲೆ ಮಹಾತ್ಮನಾದ ಚತುರ್ಮುಖಬ್ರಹ್ಮನು ಹಂಸದ ಮೇಲೆ ಕುಳಿತುಕೊಂಡು ಸಂತೋಷದಿಂದ ಆ ರಾಕ್ಷಸನಿಗೆ ವರವನ್ನು ಕೊಡುವುದಕ್ಕಾಗಿ ಬಂದನು. ॥೯॥

ಕಣ್ಣು ಮುಚ್ಚಿಕೊಂಡು ಸಮಾಧಿ ಎಂಬ ಯೋಗದಲ್ಲಿದ್ದ ದುರ್ಗಮ ದೈತ್ಯನನ್ನು ಕುರಿತು ಬ್ರಹ್ಮನು ಗಟ್ಟಿಯಾಗಿ ಮಾತನಾಡುತ್ತಾ, ಓ ದುರ್ಗಮನೇ, ನಿನ್ನ

ತವಾದ್ಯ ತಪಸಾ ತುಷ್ಟೋ ವರದೇಶೋಽಹಮಾಗತಃ ।
ಶ್ರುತ್ವಾ ಬ್ರಹ್ಮಮುಖಾದ್ವಾಣೀಂ ವ್ಯುತ್ಥಿತಸ್ಸ ಸಮಾಹಿತಃ ॥೧೦॥

ಪೂಜಯಿತ್ವಾ ವರಂ ವವ್ರೇ ವೇದಾನ್ದೇಹಿ ಸುರೇಶ್ವರ ।
ತ್ರಿಷು ಲೋಕೇಷು ಯೇ ಮಂತ್ರಾ ಬ್ರಾಹ್ಮಣೇಷು ಸುರೇಷ್ವಪಿ॥೧೨॥

ವಿದ್ಯಂತೇ ತೇ ತು ಸಾನ್ನಿಧ್ಯೇ ಮಮ ಸಂ ತು ಮಹೇಶ್ವರ ।
ಬಲಂ ಚ ದೇಹಿ ಯೇನ ಸ್ಯಾದ್ದೇವಾನಾಂ ಚ ಪರಾಜಯಃ ॥೧೩॥

ಇತಿ ತಸ್ಯ ವಚಃ ಶ್ರುತ್ವಾ ತಥಾಸ್ತ್ವಿತಿ ವಚೋ ವದನ್ ।
ಜಗಾಮ ಸತ್ಯಲೋಕಂ ತು ಚತುರ್ವೇದೇಶ್ವರಃ ಪರಃ ॥೧೪॥

ತತಃ ಪ್ರಭೃತಿ ವಿಪ್ರೈಸ್ತು ವಿಸ್ಮೃತಾ ವೇದರಾಶಯಃ ।
ಸ್ನಾನಸಂಧ್ಯಾನಿತ್ಯಹೋಮಶ್ರಾದ್ಧಯಜ್ಞಜಪಾದಯಃ ॥೧೫॥

---

ತಪಸ್ಸಿಗೆ ಸಂತೋಷಗೊಂಡು ವರವನ್ನು ಕೊಡುವ ಶಕ್ತಿಯುಳ್ಳ ನಾನು ಬಂದಿರುವೆನು. ನಿನಗೆ ಮಂಗಳವಾಗಲಿ, ನಿನ್ನ ಮನಸ್ಸಿನಲ್ಲಿ ಏನು ವರವನ್ನು ಕೇಳಬೇಕೆಂದಿರುವುದೋ ಅದನ್ನು ಕೇಳು. ಎಂದನು. ॥೧೦॥

ಸಮಾಧಿಯಲ್ಲಿದ್ದ ಆ ರಾಕ್ಷಸನು ಬ್ರಹ್ಮನ ಮಾತನ್ನು ಕೇಳಿ, ಎದ್ದು ಬ್ರಹ್ಮನನ್ನು ಪೂಜಿಸಿ, ವರವನ್ನು ಹೀಗೆ ಕೇಳಿಕೊಂಡನು. ಓ ದೇವತೆಗಳಿಗೆ ಒಡೆಯನಾದ, ಸಮಸ್ತ ಲೋಕಕ್ಕೂ ಪ್ರಭುವಾದ ಬ್ರಹ್ಮನೇ, ಮೂರು ಲೋಕದಲ್ಲಿಯೂ ಇರುವ ಬ್ರಾಹ್ಮಣರಲ್ಲಿಯೂ, ದೇವತೆಗಳಲ್ಲಿಯೂ, ಯಾವ ವೇದಮಂತ್ರಗಳಿವೆಯೋ ಅವೆಲ್ಲವೂ ನನ್ನ ಸ್ವಾಧೀನವಾಗಿ ಸಮೀಪದಲ್ಲಿ ಬಂದಿರಬೇಕು. ಮತ್ತು ದೇವತೆಗಳಿಗೆ ಅಪಜಯವನ್ನುಂಟುಮಾಡುವಂತಹ ಬಲವನ್ನು ನನಗೆ ಕೊಡಬೇಕು. ॥೧೧-೧೨-೧೩॥

ನಾಲ್ಕು ವೇದಗಳಿಗೂ ಒಡೆಯನಾದ, ಶ್ರೇಷ್ಠನಾದ ಆ ಬ್ರಹ್ಮನು ಹೀಗೆ ಹೇಳಿದ ಆ ರಾಕ್ಷಸನ ಮಾತನ್ನು ಕೇಳಿ, ಹಾಗೆಯೇ ಆಗಲೆಂದು ಹೇಳುತ್ತಾ, ತನ್ನ ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ॥೧೪॥

ಅದು ಮೊದಲಾಗಿ ಬ್ರಾಹ್ಮಣರು ವೇದಗಳನ್ನು ಮರೆತರು. ಸ್ನಾನ, ಸಂಧ್ಯಾವಂದನೆ, ಅಗ್ನಿಕಾರ್ಯ, ಪಿತೃಶ್ರಾದ್ಧ, ಯಜ್ಞಗಳು, ಮಂತ್ರದ ಜಪ ಮುಂತಾದ

ವಿಲುಪ್ತಾ ಧರಣೀ ಪೃಷ್ಠೇ ಹಾಹಾಕಾರೋ ಮಹಾನಭೂತ್ ।
ಕಿಮಿದಂ ಕಿಮಿದಂ ಚೇತಿ ವಿಪ್ರಾ ಊಚುಃ ಪರಸ್ಪರಂ ॥೧೬॥

ವೇದಾಭಾವಾತ್ತದಸ್ಮಾಭಿಃ ಕರ್ತವ್ಯಂ ಕಿಮತಃ ಪರಂ ।
ಇತಿ ಭೂಮೌ ಮಹಾನರ್ಥೇ ಜಾತೇ ಪರಮದಾರುಣೇ ॥೧೭॥

ನಿರ್ಜರಾಃ ಸಜರಾ ಜಾತಾಃ ಹವಿರ್ಭಾಗಾದ್ಯಭಾವತಃ ।
ರುರೋಧ ಸ ತದಾ ದೈತ್ಯೋ ನಗರೀಮಮರಾವತೀಂ ॥೧೮॥

ಅಶಕ್ತಾಸ್ತೇನ ತೇ ಯೋದ್ಧುಂ ವಜ್ರದೇಹಾಸುರೇಣ ಚ ।
ಪಲಾಯನಂ ತದಾ ಕೃತ್ವಾ ನಿರ್ಗತಾ ನಿರ್ಜರಾಃ ಕ್ವಚಿತ್ ॥೧೯॥

ನಿಲಯಂ ಗಿರಿದುರ್ಗೇಷು ರತ್ನಸಾನುಗುಹಾಸು ಚ ।
ಸಂಸ್ಥಿತಾಃ ಪರಮಾಂ ಶಕ್ತಿಂ ಧ್ಯಾಯಂತಸ್ತೇ ಪರಾಂಬಿಕಾಂ ॥೨೦॥

---

ವೇದೋಕ್ತಕರ್ಮಗಳೆಲ್ಲವೂ ಭೂಮಿಯಲ್ಲಿ ಆಚರಣೆಯಲ್ಲಿ ಇಲ್ಲದೆ ಹೋಯಿತು! ಕಷ್ಟಕಾಲವು ಬಂತೆಂದು ಎಲ್ಲರೂ ಹಾಹಾಕಾರವನ್ನು ಮಾಡುತ್ತಿದ್ದರು. ॥೧೫॥

ಬ್ರಾಹ್ಮಣರು ವೇದವಿಲ್ಲದೆ ಇಲ್ಲಿಂದ ಮುಂದೆ ನಾವೇನನ್ನು ಮಾಡೋಣ? ಇದೇನು ಹೀಗಾಯ್ತು? ಎಂದು ಒಬ್ಬರಿಗೊಬ್ಬರು ಮಾತನಾಡುತ್ತಿದ್ದರು. ಹೀಗೆ ಭೂಲೋಕದಲ್ಲಿ ಭಯಂಕರವಾದ ದೊಡ್ಡ ಅನರ್ಥವಾಗಲಾಗಿ, ॥೧೬-೧೭॥

ಅತ್ತ ದೇವಲೋಕದಲ್ಲಿ ಮುಪ್ಪಿಲ್ಲದ ದೇವತೆಗಳು ತಮಗೆ ಹವಿರ್ಭಾಗವಿಲ್ಲದುದರಿಂದ ಮುಪ್ಪಿನಿಂದ ಕೂಡಿದರು. ಎಂದರೆ ವೃದ್ಧರಾಗಿ ಶಕ್ತಿಹೀನರಾದರು. ಆಗ ಆ ರಾಕ್ಷಸನು ಅಮರಾವತೀ ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದನು. ದೇವತೆಗಳು, ವಜ್ರದಂತೆ ಗಟ್ಟಿಯಾದ ಶರೀರವುಳ್ಳ ಆ ರಾಕ್ಷಸನೊಡನೆ ಯುದ್ಧವನ್ನು ಮಾಡಲಾರದೆ ಶಕ್ತಿಹೀನರಾಗಿ ಎಲ್ಲಿಗೋ ಓಡಿಹೋದರು. ॥೧೮-೧೯॥

ಓಡಿಹೋದ ಆ ದೇವತೆಗಳು ಗಿರಿದುರ್ಗಗಳಲ್ಲಿಯೂ, ಸುಮೇರುಪರ್ವತದ ಗುಹೆಗಳಲ್ಲಿಯೂ ಅವಿತುಕೊಂಡು ಇದ್ದರೂ ಶ್ರೇಷ್ಠಳಾದ, ಶಕ್ತಿಸ್ವರೂಪಳಾದ ದೇವಿಯನ್ನು ಧ್ಯಾನಮಾಡುತ್ತಾ ಇದ್ದರು. ॥೨೦॥

ಅಗ್ನೌ ಹೋಮಾದ್ಯಭಾವಾತ್ತು ವೃಷ್ಟ್ಯಭಾವೋಽಪ್ಯಭೂನ್ನೃಪ ।
ವೃಷ್ಟೇರಭಾವೇ ಸಂಶುಷ್ಕಂ ನಿರ್ಜಲಂ ಚಾಪಿ ಭೂತಲಂ ॥೨೦॥

ಕೂಪವಾಪೀ ತಡಾಗಾಶ್ಚ ಸರಿತಃ ಶುಷ್ಕತಾಂ ಗತಾಃ ।
ಅನಾವೃಷ್ಟಿರಿಯಂ ರಾಜನ್ನಭೂಚ್ಚ ಶತವಾರ್ಷಿಕೀ ॥೨೧॥

ಮೃತಾಃ ಪ್ರಜಾಶ್ಚ ಬಹುಧಾ ಗೋಮಹಿಷ್ಯಾದಯಸ್ತಥಾ ।
ಗೃಹೇ ಗೃಹೇ ಮನುಷ್ಯಾಣಾಮಭವಚ್ಛವಸಂಗ್ರಹಃ ॥೨೩॥

ಅನರ್ಥೇ ತ್ವೇವಮುದ್ಭೂತೇ ಬ್ರಾಹ್ಮಣಾಃ ಶಾಂತಚೇತಸಃ ।
ಗತ್ವಾ ಹಿಮವತಃ ಪಾರ್ಶ್ವೇ ರಿರಾಧಯಿಷವಃ ಶಿವಾಂ ॥೨೪॥
ಸಮಾಧಿಧ್ಯಾನಪೂಜಾಭಿರ್ದೇವೀಂ ತುಷ್ಟುವುರನ್ವಹಂ ।

---

ಎಲೈ ಜನಮೇಜಯನೇ, ಅಗ್ನಿಯಲ್ಲಿ ಹೋಮಮಾಡದಿದ್ದುದರಿಂದ ಮಳೆಯಾಗಲಿಲ್ಲ. ಮಳೆಯಿಲ್ಲದ್ದರಿಂದ ನೀರಿಲ್ಲದೆ ಭೂಮಿಯೆಲ್ಲ ಒಣಗಿಹೋಯಿತು. "ಅಗ್ನೌ ಪ್ರಾಸ್ತಾಹುತಿಸ್ಸಮ್ಯಗಾದಿತ್ಯ ಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥" ಎಂಬ ಸ್ಮೃತಿವಾಕ್ಯದಂತೆ, ಯಜ್ಞದಲ್ಲಿ ಕೊಟ್ಟ ಆಹುತಿಗಳು ಸೂರ್ಯನಲ್ಲಿ ಹೋಗಿ, ಸೂರ್ಯಕಿರಣದಿಂದ ಮಳೆಯ ಮೇಘಗಳಾಗಿ, ಆ ಮೇಘಗಳಿಂದ ಭೂಮಿಯಲ್ಲಿ ಮಳೆಬಿದ್ದು, ಅದರಿಂದ ಆಹಾರಪದಾರ್ಥಗಳು ಬೆಳೆದು, ಆ ಆಹಾರದಿಂದ ಪ್ರಜೆಗಳು ಜೀವಿಸುವರು. ಆದುದರಿಂದ ಅಗ್ನಿಯಲ್ಲಿ ಹೋಮವಿಲ್ಲದಿದ್ದರೆ ಆಹಾರವಸ್ತುಗಳು ಬೆಳೆಯದೆ ಪ್ರಜಾನಾಶವಾಗುವುದೆಂದು ಭಾವವು. ॥೨೦॥

ಎಲೈ ರಾಜನೇ, ಕೊಳ, ಭಾವಿ, ಕೆರೆ, ನದಿ ಇವುಗಳೂ ಒಣಗಿದುವು. ಒಂದು ನೂರು ವರ್ಷ ಪರ್ಯಂತ ಮಳೆಯಿಲ್ಲದೆ ಹೋಯಿತು. ಹೀಗೆ ದುರ್ಭಿಕ್ಷಕಾಲವು ಬಂದೊದಗಿತು. ॥೨೧॥

ಅನೇಕ ಪ್ರಾಣಿಗಳೂ, ಪ್ರಜೆಗಳೂ ಸತ್ತರು. ಹಸುಗಳೂ, ಎಮ್ಮೆಗಳೂ ಸತ್ತವು. ಪ್ರತಿಯೊಂದು ಮನೆಯಲ್ಲಿಯೂ ಹೆಣಗಳು ಕಾಣುತ್ತಿದ್ದುವು. ॥೨೩॥

ಹೀಗೆ ಅನರ್ಥವು ಸಂಭವಿಸಲು, ಶಾಂತಚಿತ್ತರಾದ ಬ್ರಾಹ್ಮಣರು ದೇವಿಯನ್ನು ಪೂಜೆಮಾಡಬೇಕೆಂದು ಅಪೇಕ್ಷಿಸಿ ಹಿಮವತ್ಪರ್ವತಕ್ಕೆ ಹೋಗಿ ಪ್ರತಿದಿನದಲ್ಲಿಯೂ ಏಕಾಗ್ರಚಿತ್ತವಾದ ಧ್ಯಾನದಿಂದಲೂ, ಪೂಜೆಯಿಂದಲೂ ದೇವಿಯನ್ನು ಸ್ತೋತ್ರಮಾಡಿದರು. ॥೨೪॥

ನಿರಾಹಾರಾಸ್ತದಾಽಸಕ್ತಾಸ್ತಾಮೇವ ಶರಣಂ ಯಯುಃ ॥೨೫॥

ದಯಾಂ ಕುರು ಮಹೇಶಾನಿ ಪಾಮರೇಷು ಜನೇಷು ಹಿ ।
ಸರ್ವಾಪರಾಧಯುಕ್ತೇಷು ನೈತಚ್ಛ್ಲಾಘ್ಯಂ ತವಾಂಬಿಕೇ ॥೨೬॥

ಕೋಪಂ ಸಂಹರ ದೇವೇಶಿ ಸರ್ವಾಂತರ್ಯಾಮಿರೂಪಿಣಿ ।
ತ್ವಯಾ ಯಥಾ ಪ್ರೇರ್ಯತೇಽಯಂ ಕರೋತಿ ಸ ತಥಾ ಜನಃ ॥೨೭॥

ನಾನ್ಯಾ ಗತಿ ರ್ಜನಸ್ಯಾಸ್ಯ ಕಿಂ ಪಶ್ಯಸಿ ಪುನಃ ಪುನಃ ।
ಯಥೇಚ್ಛಸಿ ತಥಾ ಕರ್ತುಂ ಸಮರ್ಥಾಽಸಿ ಮಹೇಶ್ವರಿ ॥೨೮॥

---

ಆಹಾರವನ್ನು ಬಿಟ್ಟು ದೇವಿಯಲ್ಲಿಯೇ ಮನಸ್ಸಿಟ್ಟು ದೇವಿಯನ್ನೇ ಶರಣು ಹೊಂದಿದರು. ||೨೫||

ಓ ಮಹಾತಾಯಿಯೇ, ಅಜ್ಞಾನಿಗಳಾದ, ಅನೇಕ ತಪ್ಪುಗಳುಳ್ಳ ಈ ನಮ್ಮ ಜನರ ಮೇಲೆ ದಯೆಯನ್ನು ತೋರಿಸು. ತಾಯಿಯಾದ ನೀನು ಮಕ್ಕಳಂತಿರುವ ನಮ್ಮಲ್ಲಿ ದಯವಿಲ್ಲದಿರುವುದು ಶ್ಲಾಘ್ಯವಾದುದಲ್ಲ. ||೨೬||

ಪಾಪಮಾಡಿದವರ ಮೇಲೆ ಕೋಪಮಾಡುವುದು ಯುಕ್ತವೆಂದರೆ, ನೀನು ಸಮಸ್ತ ಪ್ರಾಣಿಗಳ ಮನಸ್ಸಿನಲ್ಲಿದ್ದು ಅವರನ್ನು ಹೇಗೆ ಪ್ರೇರಿಸುವೆಯೋ, ಆ ಜನರು ಹಾಗೆ ನಡೆವರು. ಅವರದೇನೂ ತಪ್ಪಿಲ್ಲ. ಆದುದರಿಂದ ಸಮಸ್ತ ದೇವತೆಗಳಿಗೂ ದೇವತೆಯಾದ ನೀನು ಪ್ರಾಣಿಗಳ ಮೇಲೆ ತೋರಿಸುತ್ತಿರುವ ಈ ಕೋಪವನ್ನು ಬಿಡು. ||೨೭||

ಬೇರೆ ದೇವತೆಗಳಾದರೋ ಹೋಮ, ಜಪ ಮುಂತಾದುವುಗಳನ್ನು ಮಾಡಿದರೆ ಫಲವನ್ನು ಕೊಡುವರು. ಈಗ ವೇದವಿಲ್ಲದುದರಿಂದ ಆ ಫಲವೂ ದೊರೆಯುವ ಹಾಗಿಲ್ಲ. ಆದುದರಿಂದ ಬೇರೆ ದೇವತೆಗಳು ನಮ್ಮನ್ನು ಕಾಪಾಡಲಾರರು. ನೀನಾದರೋ, ಮಗುವು ಜ್ಞಾಪಿಸಿಕೊಂಡರೆ ತಾಯಿಯು ಹೇಗೆ ಮಗುವಿನ ಸಮೀಪಕ್ಕೆ ಬರುವಳೋ ಹಾಗೆ ಸ್ಮರಣಮಾತ್ರದಿಂದ ನಮ್ಮಲ್ಲಿ ದಯೆಯನ್ನು ತೋರಿಸುವೆ. ನೀನು ಸರ್ವಶಕ್ತಿಸ್ವರೂಪಳಾದ್ದುದರಿಂದ ನಿನ್ನಿಷ್ಟದಂತೆ ಮಾಡಲೂ ಸಮರ್ಥಳಾಗಿರುವೆ. ನಮ್ಮನ್ನು ಸುಮ್ಮನೆ ನೋಡುತ್ತಿರಬೇಡ. ||೨೮||

ಸಮುದ್ಧರ ಮಹೇಶಾನಿ ಸಂಕಟಾತ್ಪರಮೋತ್ಥಿತಾತ್ ।
ಜೀವನೇನ ವಿನಾಽಸ್ಮಾಕಂ ಕಥಂ ಸ್ಯಾತ್ ಸ್ಥಿತಿರಂಬಿಕೇ ॥೨೯॥

ಪ್ರಸೀದ ತ್ವಂ ಮಹೇಶಾನಿ ಪ್ರಸೀದ ಜಗದಂಬಿಕೇ ।
ಅನಂತ ಕೋಟಿಬ್ರಹ್ಮಾಂಡನಾಯಿಕೇ ತೇ ನಮೋನಮಃ ॥೩೦॥

ನಮಃ ಕೂಟಸ್ಥರೂಪಾಯೈ ಚಿದ್ರೂಪಾಯೈ ನಮೋನಮಃ ।
ನಮೋವೇದಾಂತವೇದ್ಯಾಯೈ ಭುವನೇಶ್ಯೈ ನಮೋನಮಃ ॥೩೧॥

ನೇತಿನೇತೀತಿ ವಾಕ್ಯೈರ್ಯಾ ಬೋಧ್ಯತೇ ಸಕಲಾಗಮೈಃ ।
ತಾಂ ಸರ್ವಕಾರಣಾಂ ದೇವೀಂ ಸರ್ವಭಾವೇನ ಸನ್ನತಾಃ ॥೩೨॥

ಇತಿ ಸಂಪ್ರಾರ್ಥಿತಾ ದೇವೀ ಭುವನೇಶೀ ಮಹೇಶ್ವರೀ ।
ಅನಂತಾಕ್ಷಿಮಯಂ ರೂಪಂ ದರ್ಶಯಾಮಾಸ ಪಾರ್ವತೀ ॥೩೩॥

---

ಓ ತಾಯಿಯೇ, ನೀರಿಲ್ಲದೆ ನಾವು ಹೇಗೆ ಬದುಕಿರಬೇಕು ? ಈಗ ಉಂಟಾಗಿರುವ ದುರ್ಭಿಕ್ಷದ ಪರಮಸಂಕಟದಿಂದ ನಮ್ಮನ್ನು ಕಾಪಾಡು. ॥೨೯॥

ಲೋಕಕ್ಕೆ ತಾಯಿಯಾದ, ಅನೇಕ ಕೋಟಿ ಬ್ರಹ್ಮಾಂಡಗಳನ್ನೂ ನಡೆಸುತ್ತಿರುವ ಮಹೇಶ್ವರಿಯಾದ ನೀನು ಪ್ರಸನ್ನಳಾಗು. ನಿನಗೆ ನಮಸ್ಕಾರವನ್ನು ಮಾಡುವೆವು. ॥೩೦॥

ನೀನು ಅಡಿಗಲ್ಲಿನಂತೆ ನಿರ್ವಿಕಾರಳು ಮತ್ತು ಎಲ್ಲ ವಿಕಾರಗಳ ತೋರಿಕೆಗೂ ಅಧಿಷ್ಠಾನರೂಪಳಾಗಿ ಜ್ಞಾನಸ್ವರೂಪಳು. ವೇದಾಂತವಾಕ್ಯಗಳಿಂದ ನಿನ್ನನ್ನು ತಿಳಿಯಬೇಕು. ಲೋಕಕ್ಕೆಲ್ಲಕ್ಕೂ ಒಡೆಯಳಾಗಿರುವ ನಿನಗೆ ನಮಸ್ಕಾರ ಮಾಡುವೆವು.॥೩೧॥

ಸಮಸ್ತ ವೇದಗಳಿಂದಲೂ " ನೇತಿ ನೇತಿ" ಎಂಬ ಉಪನಿಷತ್ತಿನ ವಾಕ್ಯದಿಂದ ಸರ್ವನಿಷೇಧಪೂರ್ವಕವಾದ ಉಪದೇಶದಿಂದ ಸಕಲ ಪದಾರ್ಥಗಳನ್ನೂ ಆತ್ಮತತ್ತ್ವವಲ್ಲವೆಂದು ನಿಷೇಧಮಾಡುವುದರಿಂದ ತಿಳಿಯತಕ್ಕ, ಸಮಸ್ತಕ್ಕೂ ಕಾರಣರೂಪವಾದ, ಆತ್ಮತತ್ತ್ವಸ್ವರೂಪಳಾದ ದೇವಿಯಾದ ನಿನ್ನನ್ನು ನಮ್ಮ ಸಂಪೂರ್ಣವಾದ ಭಕ್ತಿಭಾವದಿಂದ ನಮಸ್ಕರಿಸುತ್ತೇವೆ. ॥೩೨॥

ಹೀಗೆ ಪ್ರಾರ್ಥಿಸಲ್ಪಟ್ಟ ಭುವನೇಶ್ವರೀದೇವಿಯು ತನ್ನ ಶರೀರದಲ್ಲಿ ಅನೇಕ ಕಣ್ಣುಗಳನ್ನು ಮಾಡಿಕೊಂಡು ತನ್ನ ಶತಾಕ್ಷೀರೂಪವನ್ನು ತೋರಿಸಿದಳು. ॥೩೩॥

ನೀಲಾಂಜನಸಮಪ್ರಖ್ಯಂ ನೀಲಪದ್ಮಾಯತೇಕ್ಷಣಂ ।
ಸುಕರ್ಕಶಸಮೋತ್ತುಂಗ ವೃತ್ತಪೀನಘನಸ್ತನಂ ॥೩೪॥

ಬಾಣಮುಷ್ಟಿಂ ಚ ಕಮಲಂ ಪುಷ್ಪಪಲ್ಲವ ಮೂಲಕಾನ್ ।
ಶಾಕಾದೀನ್ ಫಲಸಂಯುಕ್ತಾನನಂತರಸ ಸಂಯುತಾನ್ ॥೩೫॥

ಕ್ಷುತ್ತೃಡ್ಜರಾಪಹಾನ್ ಹಸ್ತೈರ್ಬಿಭ್ರತೀ ಚ ಮಹಾಧನುಃ ।
ಸರ್ವಸೌಂದರ್ಯಸಾರಂ ತದ್ರೂಪಂ ಲಾವಣ್ಯಶೋಭಿತಂ ॥೩೬॥

ಕೋಟಿಸೂರ್ಯಪ್ರತೀಕಾಶಂ ಕರುಣಾರಸಸಾಗರಂ ।
ದರ್ಶಯಿತ್ವಾ ಜಗದ್ಧಾತ್ರೀ ಸಾನಂದ ನಯನೋದ್ಭವಾಃ ॥೩೭॥

ಮೋಚಯಾಮಾಸ ಲೋಕೇಷು ವಾರಿಧಾರಾಃ ಸಹಸ್ರಶಃ ।
ನವರಾತ್ರಂ ಮಹಾವೃಷ್ಟಿರಭೂನ್ನೇತ್ರೋದ್ಭವೈರ್ಜಲೈಃ ॥೩೮॥

---

ಕಾಡಿಗೆಯಂತೆ ಕಪ್ಪಾದ ಶರೀರಕಾಂತಿಯಿಂದಲೂ, ನೀಲಿಯ ಬಣ್ಣದ ಕಮಲ ದಂತಿರುವ ಕಣ್ಣುಗಳಿಂದಲೂ, ಕಠಿನವಾಗಿಯೂ, ಸಮನಾಗಿಯೂ, ಎತ್ತರವಾಗಿಯೂ, ಗುಂಡಗೆ ದಪ್ಪವಾಗಿರುವ ಸ್ತನಗಳಿಂದ ಕೂಡಿಯೂ, ॥೩೪॥

ಒಂದು ಮುಷ್ಟಿಯಲ್ಲಿ ಬಾಣಗಳನ್ನೂ, ಮತ್ತೊಂದು ಕೈಯಲ್ಲಿ ಕಮಲ ವನ್ನೂ, ಇನ್ನೊಂದು ಕೈಯಲ್ಲಿ ಹೂ ಚಿಗುರು ಕಂದಮೂಲಗಳು ಬಗೆಬಗೆಯ ರಸ ಗಳಿಂದ ಕೂಡಿದ, ॥೩೫॥

ಹಸಿವು, ಬಾಯಾರಿಕೆ, ಮುಪ್ಪು ಇವುಗಳನ್ನು ನಾಶಮಾಡುವ ಹಣ್ಣುಗಳನ್ನೂ, ಮತ್ತೊಂದು ಕೈಯಲ್ಲಿ ದೊಡ್ಡ ಬಿಲ್ಲನ್ನೂ ಧರಿಸಿರುವ, ಅವಯವಗಳ ಅನುರೂಪ್ಯದಿಂದ ಕೂಡಿರುವ ಸೌಂದರ್ಯಸಾರವಾದ ಸೊಗಸಿನಿಂದ ಪ್ರಕಾಶಿಸುತ್ತಿರುವ, ಕೋಟಿಸೂರ್ಯರ ತೇಜಸ್ಸಿನಂತೆ ಪ್ರಕಾಶವುಳ್ಳ, ದಯಾರಸದಿಂದ ತುಂಬಿದ ರೂಪವನ್ನು, ॥೩೬॥

ತೋರಿಸಿ, ಲೋಕಕ್ಕೆ ತಾಯಿಯಾದ ದೇವಿಯು ಆನಂದದಿಂದ ಉಂಟಾದ ಕಣ್ಣೀರಿನ ಮಳೆಯನ್ನು ವಿಶೇಷವಾಗಿ ಪ್ರಪಂಚದ ಮೇಲೆ ಸುರಿಸಿದಳು. ತನ್ನ ಭಕ್ತ ರೆಲ್ಲರೂ ದುಃಖಪಡುತ್ತಿರುವುದನ್ನು ನೋಡಿ ದಯೆಯಿಂದ ತನ್ನ ಕಣ್ಣುಗಳಲ್ಲಿಯೂ ನೀರನ್ನು ಸುರಿಸುತ್ತ, ಶತಾಕ್ಷೀ ಶಾಕಂಭರೀ ರೂಪಳಾದ ಆ ತಾಯಿಯು ಒಂಬತ್ತು ರಾತ್ರಿಗಳ ವರೆಗೆ ದೊಡ್ಡ ಮಳೆಯನ್ನುಂಟುಮಾಡಿದಳು. ॥೩೭-೩೮॥

ದುಃಖಿತಾನ್ವೀಕ್ಷ್ಯ ಸಕಲಾನ್ನೇತ್ರಾಶ್ರೂಣಿ ವಿಮುಂಚತೀ ।
ತರ್ಪಿತಾಸ್ತೇನ ತೇ ಲೋಕಾ ಓಷಧ್ಯಸ್ಸಕಲಾ ಅಪಿ ॥೩೯॥

ನದೀನದಪ್ರವಾಹಾಸ್ತೈರ್ಜಲೈಃ ಸಮಭವನ್ನೃಪ ।
ನಿಲೀಯ ಸಂಸ್ಥಿತಾಃ ಪೂರ್ವಂ ಸುರಾಸ್ತೇ ನಿರ್ಗತಾ ಬಹಿಃ ॥೪೦॥

ಮಿಲಿತ್ವಾ ಸಸುರಾ ವಿಪ್ರಾ ದೇವೀಂ ಸಮಭಿತುಷ್ಟುವುಃ ।
ನಮೋ ವೇದಾಂತವೇದ್ಯೇ ತೇ ನಮೋ ಬ್ರಹ್ಮಸ್ವರೂಪಿಣಿ ॥೪೧॥

ಸ್ವಮಾಯಯಾ ಸರ್ವಜಗದ್ವಿಧಾತ್ರ್ಯೈತೇ ನಮೋನಮಃ ।
ಭಕ್ತ ಕಲ್ಪದ್ರುಮೇ ದೇವಿ ಭಕ್ತಾರ್ಥಂ ದೇಹಧಾರಿಣಿ ॥೪೨॥

ನಿತ್ಯತೃಪ್ತೇ ನಿರುಪಮೇ ಭುವನೇಶ್ವರಿ ತೇ ನಮಃ ।
ಅಸ್ಮಚ್ಛಾಂತ್ಯರ್ಥಮತುಲಂ ಲೋಚನಾನಾಂ ಸಹಸ್ರಕಂ ॥೪೩॥
ತ್ವಯಾ ಯತೋ ಧೃತಂ ದೇವಿ ಶತಾಕ್ಷೀ ತ್ವಂ ತತೋ ಭವ ।

---

ಆ ಮಳೆಯಿಂದ ಸಕಲ ಲೋಕಗಳೂ, ಗಿಡಮರಗಳೂ, ಸಸ್ಯಗಳೂ, ತೃಪ್ತಿಯನ್ನು ಹೊಂದಿದುವು. ಆ ನೀರಿನಿಂದ, ಸಣ್ಣ, ದೊಡ್ಡ ಹೊಳೆಗಳಲ್ಲಿ ಪ್ರವಾಹಗಳುಂಟಾದುವು. ಹಿಂದೆ ಅಡಗಿಕೊಂಡಿದ್ದ ದೇವತೆಗಳು ಹೊರಗೆ ಬಂದರು. ॥೩೯॥

ಆ ದೇವತೆಗಳೂ, ಬ್ರಾಹ್ಮಣರೂ ಕೂಡಿ ದೇವಿಯನ್ನು ಮುಂದೆ ಹೇಳುವಂತೆ ಸ್ತೋತ್ರಮಾಡಿದರು. ವೇದಾಂತದಿಂದ ತಿಳಿಯಲ್ಪಡುವ, ನಿರ್ವಿಕಾರವಾದ, ಬ್ರಹ್ಮಸ್ವರೂಪಳಾದ, ನಿನಗೆ ನಮಸ್ಕಾರವು. ನೀನು ನಿನ್ನ ಮಾಯಾಶಕ್ತಿಯಿಂದ ಸಕಲ ಜಗತ್ತನ್ನೂ ಸೃಷ್ಟಿಸುತ್ತಿರುವೆ. ಆ ನಿನ್ನ ಶಕ್ತಿಗೆ ನಮಸ್ಕಾರವು. ॥೪೧॥

ಭಕ್ತರಿಗೆ ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನು ಕೊಡುವ ದೇವಿಯೇ, ಭಕ್ತರ ಸಂರಕ್ಷಣೆ ಮತ್ತು ನಂಬಿಕೆಗೋಸ್ಕರವಾಗಿ ಶರೀರವನ್ನು ಧರಿಸುವವಳೇ, ಅಸಮಾನಳಾದ, ಲೋಕಕ್ಕೆ ತಾಯಿಯಾದ ನಿನಗೆ ನಮಸ್ಕಾರವು. ॥೪೨॥

ಓ ದೇವಿಯೇ, ನಮಗೆ ಶಾಂತಿಯನ್ನುಂಟುಮಾಡುವುದಕ್ಕಾಗಿ ಅಸಮಾನವಾದ ಅನೇಕ ಕಣ್ಣುಗಳನ್ನು ಧರಿಸಿದುದರಿಂದ ನೀನು ಶತಾಕ್ಷೀ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಳಾಗೆಂದು ಪ್ರಾರ್ಥಿಸುತ್ತೇವೆ. ॥೪೩॥

ಕ್ಷುಧಯಾ ಪೀಡಿತಾ ಮಾತಃ ಸ್ತೋತುಂ ಶಕ್ತಿರ್ನಚಾಸ್ತಿ ನಃ ॥೪೪॥

ಕೃಪಾಂ ಕುರು ಮಹೇಶಾನಿ ವೇದಾನಪ್ಯಾಹರಾಂಬಿಕೇ ।
ಇತಿ ತೇಷಾಂ ವಚಃ ಶ್ರುತ್ವಾ ಶಾಕಾನ್ಸ್ವಕರಸಂಸ್ಥಿತಾನ್ ॥೪೫॥

ಸ್ವಾದೂನಿ ಫಲಮೂಲಾನಿ ಭಕ್ಷಣಾರ್ಥಂ ದದೌ ಶಿವಾ ।
ನಾನಾ ವಿಧಾನಿ ಚಾನ್ನಾನಿ ಪಶುಭೋಜ್ಯಾನಿ ಯಾನಿ ಚ । ॥೪೬॥

ಕಾಮ್ಯಾನಂತ ರಸೈರ್ಯುಕ್ತಾನ್ಯಾನವೀನೋದ್ಭವಂ ದದೌ ।
ಶಾಕಂಭರೀತಿ ನಾಮಾಪಿ ತದ್ದಿನಾತ್ಸಮಭೂನ್ನೃಪ ॥೪೭॥

ತತಃ ಕೋಲಾಹಲೇ ಜಾತೇ ದೂತವಾಕ್ಯೇನ ಬೋಧಿತಃ ।
ಸಸೈನ್ಯಃ ಸಾಯುಧೋ ಯೋದ್ಧುಂ ದುರ್ಗಮಾಖ್ಯೋಽಸುರೋ ಯಯೌ॥

---

ಓ ತಾಯಿಯೇ, ಹೊಟ್ಟೆಯ ಹಸಿವಿನಿಂದ ಪೀಡಿತರಾಗಿರುವ ನಾವು ಸ್ತೋತ್ರ ಮಾಡಲು ಶಕ್ತಿಯಿಲ್ಲದವರಾಗಿದ್ದೇವೆ. ಮಹಾತಾಯಿಯೇ, ನಮ್ಮ ಮೇಲೆ ದಯೆಯನ್ನು ತೋರಿಸು ಮತ್ತು ವೇದವನ್ನೂ ತಂದುಕೊಡು, ॥೪೪॥

ಹೀಗೆ ಸ್ತೋತ್ರಮಾಡಿದ ಅವರ ಮಾತನ್ನು ಕೇಳಿ, ಮಂಗಳಕರಳಾದ ದೇವಿಯು ತನ್ನ ಕೈಯಲ್ಲಿದ್ದ ಕಾಯಿಪಲ್ಯಗಳನ್ನೂ, ಗೆಡ್ಡೆಗೆಣಸುಗಳನ್ನೂ, ಹಣ್ಣುಗಳನ್ನೂ ತಿನ್ನುವುದಕ್ಕಾಗಿ ಅವರಿಗೆ ಕೊಟ್ಟಳು. ॥೪೫॥

ಮನುಷ್ಯರಿಗೆ ಅವರಿಷ್ಟದಂತೆ ಅನೇಕ ರಸಗಳಿಂದ ಕೂಡಿದ ಬಗೆಬಗೆಯ ಆಹಾರಗಳನ್ನೂ, ಪಶುಗಳಿಗೆ ತಕ್ಕ ಆಹಾರಗಳನ್ನೂ, ಮಳೆಯಾದ ಮೇಲೆ ಸಸ್ಯಗಳು ಬೆಳೆದು ಫಲಪ್ರಾಪ್ತಿಯಾಗುವ ಕಾಲಪರ್ಯಂತವಾಗಿ ಸಾಕಾಗುವಷ್ಟು ಆಹಾರವನ್ನು ಕೊಟ್ಟಳು. ॥೪೬॥

ಎಲೈ ಜನಮೇಜಯರಾಯನೇ, ಶಾಕದಿಂದ ಭಕ್ತರನ್ನು ಪೋಷಿಸಿದುದರಿಂದ ಆ ದಿನ ಮೊದಲುಗೊಂಡು ದೇವಿಗೆ "ಶಾಕಂಭರಿ" ಎಂದು ಹೆಸರಾಯಿತು. ॥೪೭॥

ಆಮೇಲೆ ಈ ಗದ್ದಲವುಂಟಾದುದನ್ನು ದೂತರು ಬಂದು ಹೇಳಲು, ದುರ್ಗಮನೆಂಬ ದೈತ್ಯನು ಆಯುಧವನ್ನು ಧರಿಸಿ ಸೇನೆಯೊಡನೆ ಯುದ್ಧಕ್ಕೆ ಬಂದನು. ॥೪೮॥

ಸಹಸ್ರಾಕ್ಷೌಹಿಣೀ ಯುಕ್ತಃ ಶರಾನ್ಮುಂಚಂಸ್ತ್ವರಾನ್ವಿತಃ ।
ರುರೋಧ ದೇವಸೈನ್ಯಂ ತದ್ಯದ್ದೇವ್ಯಗ್ರೇ ಸ್ಥಿತಂ ಪುರಾ ॥೪೯॥

ತಥಾ ವಿಪ್ರಗಣಂ ಚೈವ ರೋಧಯಾಮಾಸ ಸರ್ವತಃ ।
ತತಃ ಕಿಲಕಿಲಾ ಶಬ್ದಃ ಸಮಭೂದ್ದೇವಮಂಡಲೇ ॥೫೦॥

ತ್ರಾಹಿ ತ್ರಾಹೀತಿ ವಾಕ್ಯಾನಿ ಪ್ರೋಚುಃ ಸರ್ವೇ ದ್ವಿಜಾಮರಾಃ ।
ತತಸ್ತೇಜೋಮಯಂ ಚಕ್ರಂ ದೇವಾನಾಂ ಪರಿತಃ ಶಿವಾ ॥೫೧॥

ಚಕಾರ ರಕ್ಷಣಾರ್ಥಾಯ ಸ್ವಯಂ ತಸ್ಮಾದ್ಬಹಿಸ್ಸ್ಥಿತಾ ।
ತತಸ್ಸಮಭವದ್ಯುದ್ಧಂ ದೇವ್ಯಾ ದೈತ್ಯಸ್ಯ ಚೋಭಯೋಃ ॥೫೨॥

ಶರವರ್ಷ ಸಮಾಚ್ಛನ್ನ ಸೂರ್ಯಮಂಡಲಮದ್ಭುತಂ ।
ಪರಸ್ಪರಂ ಶರೋದ್ಧರ್ಷ ಸಮುದ್ಭೂತಾಗ್ನಿ ಸುಪ್ರಭಂ ॥೫೩॥

---

ಒಂದು ಸಾವಿರ ಅಕ್ಷೌಹಿಣೀ ಸೈನ್ಯದಿಂದ ಕೂಡಿ, ಬಾಣಗಳನ್ನು ಬಿಡುತ್ತ ಆತುರವಾಗಿ ಬಂದು ದೇವಿಯ ಮುಂದಿರುವ ದೇವತೆಗಳ ಸೇನೆಯನ್ನು ಆ ದುರ್ಗಮಾಸುರನು ತಡೆದನು. ॥೪೯॥

ಹಾಗೆಯೇ ಬ್ರಾಹ್ಮಣರ ಗುಂಪನ್ನೂ ಕೂಡ ಎಲ್ಲಾ ದಿಕ್ಕುಗಳಲ್ಲಿಯೂ ತಡೆದನು. ಆಮೇಲೆ ದೇವತೆಗಳ ಗುಂಪಿನಲ್ಲಿ ದೊಡ್ಡ ಗದ್ದಲವಾಯಿತು. ॥೫೦॥

ಅಲ್ಲಿದ್ದ ಸಮಸ್ತ ಬ್ರಾಹ್ಮಣರೂ ದೇವತೆಗಳೂ ಕಾಪಾಡು ಕಾಪಾಡು ಎಂದು ಕೂಗಿಕೊಂಡರು. ಆಮೇಲೆ ದೇವಿಯು ಅವರ ರಕ್ಷಣೆಗಾಗಿ ಬೆಳಕಿನ ರೂಪವಾದ ಒಂದು ಚಕ್ರವನ್ನು ಆ ದೇವತೆಗಳ ಮತ್ತು ಬ್ರಾಹ್ಮಣರ ಸುತ್ತಲೂ ನಿರ್ಮಿಸಿ, ತಾನು ಆ ಚಕ್ರದ ಹೊರಗೆ ನಿಂತಳು. ॥೫೧॥

ಆಮೇಲೆ ದೇವಿಗೂ ದೈತ್ಯನಿಗೂ ಯುದ್ಧವು ಮೊದಲಾಯಿತು. ಬಾಣದ ಮಳೆಯಿಂದ ಸೂರ್ಯಮಂಡಲವು ಮುಚ್ಚಿತು. ಬಾಣಗಳ ತಿಕ್ಕಾಟದಿಂದ ಬೆಂಕಿಯು ಹುಟ್ಟಿ ಬೆಳಕುಂಟಾಗುತ್ತಿತ್ತು. ॥೫೨-೫೩॥

ಕಠೋರ ಜ್ಯಾಟಣತ್ಕಾರ ಬಧಿರೀಕೃತ ದಿಕ್ತಟಂ ।
ತತೋ ದೇವೀ ಶರೀರಾತ್ತು ನಿರ್ಗತಾಸ್ತೀವ್ರ ಶಕ್ತಯಃ ।೫೪॥

ಕಾಲಿಕಾ ತಾರಿಣೀ ಬಾಲಾ ತ್ರಿಪುರಾ ಭೈರವೀರ ಮಾ ।
ಬಗಳಾ ಚೈವ ಮಾತಂಗೀ ತಥಾ ತ್ರಿಪುರಸುಂದರೀ ॥೫೫॥

ಕಾಮಾಕ್ಷೀ ತುಲಜಾದೇವೀ ಜಂಭಿನೀ ಮೋಹಿನೀ ತಥಾ ।
ಛಿನ್ನಮಸ್ತಾಗುಹ್ಯಕಾಲೀ ದಶಸಾಹಸ್ರಬಾಹುಕಾ ॥೫೬॥

ದ್ವಾತ್ರಿಂಶಚ್ಛಕ್ತಯಶ್ಚಾನ್ಯಾಶ್ಚತುಷ್ಷಷ್ಟಿಮಿತಾಃ ಪರಾಃ ।
ಅಸಂಖ್ಯಾತಾಸ್ತತೋ ದೇವ್ಯಃ ಸಮುದ್ಭೂತಾಸ್ತು ಸಾಯುಧಾಃ॥೫೭॥

ಮೃದಂಗ ಶಂಖವೀಣಾದಿ ನಾದಿತಂ ಸಂಗರಸ್ಥಲಂ ।
ಶಕ್ತಿಭಿರ್ದೈತ್ಯಸೈನ್ಯೇತು ನಾಶಿತೇಽಕ್ಷೌಹಿಣೀಶತೇ ॥೫೮॥

---

ಕಠಿಣವಾದ ಬಿಲ್ಲಿನ ಶಬ್ದದಿಂದ ದಿಕ್ಕುಗಳೆಲ್ಲ ಕಿವುಡುಗೇಳುತ್ತಿತ್ತು. ಆಮೇಲೆ ದೇವಿಯ ಶರೀರದಿಂದ ಕ್ರೂರವಾದ ಶಕ್ತಿದೇವಿಯರು ಹೊರಹೊಮ್ಮಿದರು. ॥೫೪॥

ಅವರ ಹೆಸರುಗಳು—ಕಾಲಿಕಾ, ತಾರಿಣೀ, ಬಾಲಾ, ತ್ರಿಪುರಾ, ಭೈರವೀ, ರಮಾ, ಬಗಳಾ, ಮಾತಂಗೀ, ತ್ರಿಪುರಸುಂದರೀ, ಕಾಮಾಕ್ಷೀ, ತುಲಜಾದೇವೀ, ಜಂಭಿನೀ, ಮೋಹಿನೀ, ಛಿನ್ನಮಸ್ತಾ, ಹತ್ತುಸಾವಿರತೋಳಿನ ಗುಹ್ಯಕಾಲೀ, ಈ ಹದಿನೈದು ಶಕ್ತಿದೇವಿಯರ ವಿಚಾರವನ್ನು ಮಹಾಕಾಲಸಂಹಿತೆಯಲ್ಲಿ ತಿಳಿಯಬೇಕು. ॥೫೫-೫೬॥

ಇದಲ್ಲದೆ ಮುಖ್ಯರಾದ ಮೂವತ್ತೆರಡು ಮತ್ತು ಅರವತ್ತನಾಲ್ಕು ಶಕ್ತಿದೇವಿಯರೂ, ಆ ಮೇಲೆ ಲೆಕ್ಕವಿಲ್ಲದಷ್ಟು ದೇವಿಯರೂ ಆಯುಧಸಹಿತರಾಗಿ ಹುಟ್ಟಿದರು. ಮೂವತ್ತೆರಡು ಮತ್ತು ಅರವತ್ತುನಾಲ್ಕು ಶಕ್ತಿದೇವಿಯರ ವಿಚಾರವನ್ನು ಪ್ರಪಂಚಸಾರವೆಂಬ ಗ್ರಂಥದಲ್ಲಿ ಭುವನೇಶ್ವರೀಪಟಲದಲ್ಲಿಯೂ, ಶಾರದಾಗ್ರಂಥದ ಭೂತಲಿಪಿಪಟಲದಲ್ಲಿಯೂ, ವಿಸ್ತಾರವಾಗಿ ತಿಳಿಯಬಹುದು. ॥೫೭॥

ಯುದ್ಧರಂಗವು ಮದ್ದಳೆ, ಶಂಖ, ವೀಣೆ ಇವುಗಳ ಧ್ವನಿಯಿಂದ ತುಂಬಿತು. ಶಕ್ತಿದೇವಿಯರಿಂದ ರಾಕ್ಷಸಸೈನ್ಯದಲ್ಲಿ ಒಂದುನೂರು ಅಕ್ಷೌಹಿಣೀ ಸೈನ್ಯವು ನಾಶವಾಯ್ತು. ॥೫೮॥

ಅಗ್ರೇಸರಃ ಸಮುಭವದ್ದುರ್ಗಮೋ ವಾಹಿನೀಪತಿಃ ।
ಶಕ್ತಿಭಿಃ ಸಹ ಯುದ್ಧಂ ಚ ಚಕಾರ ಪ್ರಥಮಂ ರಿಪುಃ ॥೫೯॥

ಮಹದ್ಯುದ್ಧಂ ಸಮುಭವದ್ಯತ್ರಾಸಃಭೂದ್ರಕ್ತವಾಹಿನೀ ।
ಅಕ್ಷೌಹಿಣ್ಯಸ್ತು ತಾಸ್ಸರ್ವಾ ವಿನಷ್ಟಾ ದಶಭಿರ್ದಿನೈಃ ॥೬೦॥

ತತ ಏಕಾದಶೇಪ್ರಾಪ್ತೇ ದಿನೇ ಪರಮದಾರುಣೇ ।
ರಕ್ತಮಾಲ್ಯಾಂಬರಧರೋ ರಕ್ತಗಂಧಾನುಲೇಪನಃ ॥೬೧॥

ಕೃತ್ವೋತ್ಸವಂ ಮಹಾಂತ ತು ಯುದ್ಧಾಯ ರಥಸಂಸ್ಥಿತಃ ।
ಸಂರಂಭೇಣೈವ ಮಹತಾ ಶಕ್ತೀಃ ಸರ್ವಾ ವಿಜಿತ್ಯ ಚ ॥೬೨॥

ಮಹಾದೇವೀ ರಥಾಗ್ರೇ ತು ಸ್ವರಥಂ ಸ ನ್ಯವೇಶಯತ್ ।
ತತೋಽಭವನ್ಮಹದ್ಯುದ್ಧಂ ದೇವ್ಯಾ ದೈತ್ಯಸ್ಯ ಚೋಭಯೋಃ ॥೬೩॥

ಪ್ರಹರದ್ವಯ ಪರ್ಯಂತಂ ಹೃದಯತ್ರಾಸಕಾರಣಂ ।
ತತಃ ಪಂಚದಶಾಽತ್ಯುಗ್ರಬಾಣಾನ್ ದೇವೀ ಮುಮೋಚ ಹ ॥೬೪॥

---

ಶತ್ರುವಾದ ದುರ್ಗಮದೈತ್ಯನು ಸೇನಾಪತಿಯಾಗಿ ಮುಂದುವರಿದು ಮೊದಲು ಶಕ್ತಿದೇವಿಯರೊಡನೆ ಯುದ್ಧವನ್ನು ಮಾಡಿದನು. ॥೫೯॥

ರಕ್ತದ ಹೊಳೆಯು ಹರಿಯುವಂತೆ ದೊಡ್ಡ ಯುದ್ಧವಾಗಿ ಹತ್ತುದಿನದಲ್ಲಿ ಅವನ ಎಲ್ಲ ಅಕ್ಷೌಹಿಣೀ ಸೈನ್ಯವೂ ನಾಶವಾಯಿತು. ॥೬೦॥

ತರುವಾಯ ಭಯಂಕರವಾದ ಹನ್ನೊಂದನೆಯ ದಿನವು ಬರುತ್ತಿರಲು, ದುರ್ಗಮನು ಕೆಂಪುವಸ್ತ್ರವನ್ನುಟ್ಟು, ಕೆಂಪುಗಂಧವನ್ನು ಬಳಿದುಕೊಂಡು, ಕೆಂಪಾದ ಹೂವನ್ನು ಅಲಂಕರಿಸಿಕೊಂಡು ಯುದ್ಧಕ್ಕಾಗಿ ರಥದ ಮೇಲೆ ಕುಳಿತು ದೊಡ್ಡ ಮೆರೆವಣಿಗೆಯಿಂದ ಬಂದು, ಬಹಳ ಸಂಭ್ರಮದಿಂದ ಎಲ್ಲ ಶಕ್ತಿದೇವಿಯರನ್ನೂ ಜಯಿಸಿ, ಮಹಾದೇವಿಯ ರಥದ ಮುಂದೆ ತನ್ನ ರಥವನ್ನು ನಿಲ್ಲಿಸಿದನು ! ॥೬೧-೬೨॥

ಆ ಮೇಲೆ ದೇವಿಗೂ ದೈತ್ಯನಿಗೂ ಎರಡು ಗಳಿಗೆಯವರೆಗೂ ಭಯಂಕರವಾದ ದೊಡ್ಡ ಯುದ್ಧವಾಯಿತು. ॥೬೩॥

ಆ ಬಳಿಕ ದೇವಿಯು ಕ್ರೂರವಾದ ಹದಿನೈದು ಬಾಣಗಳನ್ನು ಬಿಟ್ಟು, ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ, ಒಂದರಿಂದ ಸಾರಥಿಯನ್ನೂ, ಎರಡ

ಚತುರ್ಭಿಶ್ಚತುರೋವಾಹಾನ್ ಬಾಣೇನೈಕೇನ ಸಾರಥಿಂ ।
ದ್ವಾಭ್ಯಾಂ ನೇತ್ರೇ ಭುಜೌ ದ್ವಾಭ್ಯಾಂ ಧ್ವಜಮೇಕೇನ ಪತ್ರಿಣಾ ॥೬೫॥

ಪಂಚಭಿರ್ಹೃದಯಂ ತಸ್ಯ ವಿವ್ಯಾಧ ಜಗದಂಬಿಕಾ ।
ತತೋ ವಮನ್ಸ ರುಧಿರಂ ಮಮಾರ ಪುರ ಈಶಿತುಃ ॥೬೬॥

ತಸ್ಯ ತೇಜಸ್ತು ನಿರ್ಗತ್ಯ ದೇವೀರೂಪೇ ವಿವೇಶ ಹ ।
ಹತೇ ತಸ್ಮಿನ್ಮಹಾವೀರ್ಯೇ ಶಾಂತಮಾಸೀಜ್ಜಗತ್ತ್ರಯಂ ॥೬೭॥

ತತೋ ಬ್ರಹ್ಮಾದಯಃ ಸರ್ವೇ ತುಷ್ಟುವುರ್ಜಗದಂಬಿಕಾಂ ।
ಪುರಸ್ಕೃತ್ಯ ಹರೀಶಾನೌ ಭಕ್ತ್ಯಾ ಗದ್ಗದಯಾ ಗಿರಾ ॥೬೮॥

॥ ದೇವಾ ಊಚುಃ ॥

ಜಗದ್ಭ್ರಮವಿವರ್ತೈಕಕಾರಣೇ ಪರಮೇಶ್ವರಿ ।
ನಮಃ ಶಾಕಂಭರಿ ಶಿವೇ ನಮಸ್ತೇ ಶತಲೋಚನೇ ॥೬೯॥

---

ರಿಂದ ತೋಳುಗಳನ್ನೂ, ಒಂದರಿಂದ ತೇರಿನ ಬಾವುಟವನ್ನೂ, ಐದು ಬಾಣಗಳಿಂದ ಆ ರಾಕ್ಷಸನ ಹೃದಯವನ್ನೂ ಹೊಡೆದಳು. ಆ ಮೇಲೆ ಅವನು ರಕ್ತವನ್ನು ಕಾರುತ್ತ ಆ ದೇವಿಯ ಇದುರಿಗೆ ಸತ್ತುಬಿದ್ದನು. ||೬೪-೬೫-೬೬||

ಅವನ ತೇಜಸ್ಸು ಅವನ ಶರೀರದಿಂದ ಹೊರಟು ದೇವಿಯ ರೂಪದಲ್ಲಿ ಪ್ರವೇಶಿಸಿ ಅಡಗಿತು. ಆ ಮಹಾಪರಾಕ್ರಮಶಾಲಿಯಾದ ರಾಕ್ಷಸನು ಕೊಲ್ಲಲ್ಪಡಲಾಗಿ ಮೂರು ಲೋಕವೂ ಶಾಂತಿಯನ್ನು ಹೊಂದಿತು! ||೬೭||

ಆ ಮೇಲೆ ಹರಿಹರರನ್ನು ಮುಂದುಮಾಡಿಕೊಂಡು ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಭಕ್ತಿಯಿಂದ ಆ ಜಗದಂಬೆಯನ್ನು ಸ್ತೋತ್ರಮಾಡಿದರು. ||೬೮||

ದೇವತೆಗಳು ಹೇಳಿದರು --ಭ್ರಾಂತಿರೂಪಜಗತ್ತಿಗೆ ವಿವರ್ತೋಪಾದಾನಕಾರಣವಾದ ಪರಮೇಶ್ವರಿಯೇ, ಮಂಗಳಕರಳಾದ ಶಾಕಂಭರಿಯೇ, ಶತಾಕ್ಷಿಯೇ, ನಿನಗೆ ನಮಸ್ಕಾರವು. ಇಲ್ಲಿ ತಿಳಿಯಬೇಕಾದ ಅಂಶವೇನೆಂದರೆ, ಹಗ್ಗದಲ್ಲಿ ಹಾವು ಕಂಡಂತೆಯೂ, ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿಯು ಕಂಡಂತೆಯೂ, ಆತ್ಮತತ್ವದಲ್ಲಿ ಜಗತ್ತು ಭ್ರಾಂತಿಯಿಂದ ಕಾಣುತ್ತಿರುವುದು. ಇಲ್ಲಿ ಆತ್ಮತತ್ವವು ಪಾರಮಾರ್ಥಿಕಸತ್ತೆಯುಳ್ಳದ್ದು. ಜಗತ್ತು ವ್ಯಾವಹಾರಿಕಸತ್ತೆಯುಳ್ಳದ್ದು. ಜಗತ್ತಿನ ಉತ್ಪತ್ತಿಗೆ ಆತ್ಮ

ಸರ್ವೋಪನಿಷದುದ್ಘುಷ್ಟೇ ದುರ್ಗಮಾಸುರನಾಶಿನಿ ।
ನಮೋ ಮಾಯೇಶ್ವರಿ ಶಿವೇ ಪಂಚಕೋಶಾಂತರಸ್ಥಿತೇ ॥೭೦॥

ಚೇತಸಾ ನಿರ್ವಿಕಲ್ಪೇನ ಯಾಂ ಧ್ಯಾಯಂತಿ ಮುನೀಶ್ವರಾಃ ।
ಪ್ರಣವಾರ್ಥ ಸ್ವರೂಪಾಂ ತಾಂ ಭಜಾಮೋ ಭುವನೇಶ್ವರೀಂ ॥೭೧॥

ಅನಂತಕೋಟಿಬ್ರಹ್ಮಾಂಡ ಜನನೀಂ ದಿವ್ಯವಿಗ್ರಹಾಂ ।
ಬ್ರಹ್ಮವಿಷ್ಣ್ವಾದಿ ಜನನೀಂ ಸರ್ವಭಾವೈರ್ನತಾ ವಯಂ ॥೭೨॥

---

ತತ್ವವೇ ಕಾರಣವು. ಆದರೆ ಮಡಕೆಗೆ ಮಣ್ಣು ಕಾರಣವಾದಂತೆ ಅಲ್ಲ. ಹಾವಿನ ಕಾಣು ವಿಕೆಯಲ್ಲಿ ಹಗ್ಗದಂತೆ :–ಹಾವು ಕಾಣುವಾಗ ಹಗ್ಗವಿಲ್ಲ. ಹಗ್ಗವು ಕಾಣುವಾಗ ಹಾವಿಲ್ಲ. ನಿಜವಾದುದು ಹಗ್ಗ. ಹಾವು ಭ್ರಾಂತಿಯಿಂದ ಕಾಣುವುದು. ಹಾಗೆಯೇ ನಿಜವಾದ ಆತ್ಮತತ್ವದಲ್ಲಿ ವ್ಯಾವಹಾರಿಕಪ್ರಪಂಚವು ಭ್ರಾಂತಿಯಿಂದ ತೋರುತ್ತಿರುವುದೆಂದೂ, ಆತ್ಮತತ್ವವು ತಿಳಿದಮೇಲೆ, ಜಗತ್ತಿನ ಭ್ರಾಂತಿಯು ನಾಶವಾಗುವುದೆಂದೂ ಸಿದ್ಧಾಂತ ವಿರುವುದು. ಈ ಸಿದ್ಧಾಂತವನ್ನನುಸರಿಸಿ ವ್ಯಾವಹಾರಿಕವಾದ ಜಗತ್ತಿಗೆ ಪಾರಮಾರ್ಥಿ ಕವಾದ ಆತ್ಮತತ್ವವೇ ಅಧಿಷ್ಠಾನವಾಗಿ ಕಾರಣವಾಗಿರುವುದರಿಂದ ಇದನ್ನೇ ವಿವರ್ತೋ ಪಾದಾನವೆನ್ನುವರು. ॥೬೯॥

ಸಮಸ್ತ ಉಪನಿಷತ್ತುಗಳಲ್ಲಿಯೂ ಹೊಗಳಲ್ಪಟ್ಟವಳೇ, ದುರ್ಗಮಾಸುರನನ್ನು ಕೊಂದವಳೇ, ಮಾಯೆಗೆ ಅಧಿಪತಿಯಾದವಳೇ, ಮಂಗಳಕರಳೇ, ಅನ್ನಮಯಾದಿಯಾದ ಐದು ಕೋಶದೊಳಗೆ ತೋರುತ್ತಿರತಕ್ಕವಳೇ, ನಿನಗೆ ನಮಸ್ಕಾರವು. ॥೭೦॥

ವಿಕಲ್ಪಗಳಿಲ್ಲದ ಮನಸ್ಸಿನಿಂದ ಯಾವ ದೇವಿಯನ್ನು ಮುನಿಶ್ರೇಷ್ಠರು ಧ್ಯಾನಿಸುತ್ತಾರೋ ಅಂಥ ಓಂಕಾರದ ಅರ್ಥಸ್ವರೂಪಳಾದ ಭುವನೇಶ್ವರೀ ದೇವಿಯನ್ನು ಪ್ರಾರ್ಥಿಸುತ್ತೇವೆ. ॥೭೧॥

ಅನೇಕ ಬ್ರಹ್ಮಾಂಡಗಳಿಗೂ ಬ್ರಹ್ಮ ವಿಷ್ಣು ಮುಂತಾದ ದೇವತೆಗಳಿಗೂ ತಾಯಿಯಾದ, ಮಂಗಳಕರವಾದ ರೂಪದಿಂದ ಕೂಡಿದ, ದೇವಿಯನ್ನು ಸಂಪೂರ್ಣವಾದ ಭಕ್ತಿಯಿಂದ ನಮಸ್ಕರಿಸುತ್ತೇವೆ. ॥೭೨॥

ಕಃಕುರ್ಯಾತ್ಪಾಮರಾನ್ ದೃಷ್ಟ್ವಾ ರೋದನಂ ಸಕಲೇಶ್ವರಃ ।
ಸದಯಾಂ ಪರಮೇಶಾನೀಂ ಶತಾಕ್ಷೀಂ ಮಾತರಂ ವಿನಾ ॥೭೩॥

॥ ವ್ಯಾಸ ಉವಾಚ ॥

ಇತಿ ಸ್ತುತಾ ಸುರೈರ್ದೇವೀ ಬ್ರಹ್ಮವಿಷ್ಣ್ವಾದಿಭಿರ್ವರೈಃ ।
ಪೂಜಿತಾ ವಿವಿಧೈರ್ದ್ರವ್ಯೈಃ ಸಂತುಷ್ಟಾಽಭೂಚ್ಚ ತತ್ಕ್ಷಣೇ ॥೭೪॥

ಪ್ರಸನ್ನಾ ಸಾ ತದಾ ದೇವೀ ವೇದಾನಾಹೃತ್ಯ ಸಾ ದದೌ ।
ಬ್ರಾಹ್ಮಣೇಭ್ಯೋ ವಿಶೇಷೇಣ ಪ್ರೋವಾಚ ಪಿಕಭಾಷಿಣೀ ॥೭೫॥

ಮಮೇಯಂ ತನುರುತ್ಕೃಷ್ಟಾ ಪಾಲನೀಯಾ ವಿಶೇಷತಃ ।
ಯಯಾ ವಿನಾಽನರ್ಥ ಏಷ ಜಾತೋ ದೃಷ್ಟೋಽಧುನೈವ ಹಿ ೭೬॥

ಪೂಜ್ಯಾಽಹಂ ಸರ್ವದಾ ಸೇವ್ಯಾ ಯುಷ್ಮಾಭಿಃ ಸರ್ವದೈವ ಹಿ ।
ನಾತಃ ಪರತರಂ ಕಿಂ ಚಿತ್ಕಲ್ಯಾಣಾಯೋಪದಿಶ್ಯತೇ ॥೭೭॥

---

ತಾಯಿಯೂ ಕರುಣಾಶಾಲಿಯೂ ಆದ ಶತಾಕ್ಷೀದೇವಿಯನ್ನು ಬಿಟ್ಟು ಅಜ್ಞಾನಿಗಳಾದ ನಮ್ಮನ್ನು ನೋಡಿ ಸಮಸ್ತಪ್ರಪಂಚಕ್ಕೂ ಒಡೆಯನಾದ ಯಾವ ದೇವನು ತಾನೇ ಅಳುವನು. ॥೭೩॥

ಈ ರೀತಿಯಲ್ಲಿ ಬ್ರಹ್ಮವಿಷ್ಣುವೇ ಮೊದಲಾದ ದೇವತೆಗಳಿಂದ, ಬಗೆಬಗೆಯ ದ್ರವ್ಯಗಳಿಂದ ಪೂಜಿಸಿ ಸ್ತೋತ್ರಮಾಡಲ್ಪಟ್ಟ ದೇವಿಯು ಆ ಕ್ಷಣದಲ್ಲಿಯೇ ಸಂತೋಷವನ್ನು ಹೊಂದಿದಳು. ॥೭೪॥

ಕೋಗಿಲೆಯಂತೆ ಮಾತನಾಡುವ ಆ ದೇವಿಯು ವೇದಗಳನ್ನು ತಂದು ಕೊಟ್ಟು, ಬ್ರಾಹ್ಮಣರನ್ನು ಕುರಿತು ಅನುಗ್ರಹಯುಕ್ತವಾದ ಮಾತುಗಳನ್ನು ಆಡಿದಳು. ॥೭೫॥

ನನಗೆ ಈ ವೇದರೂಪವಾದ, ಶ್ರೇಷ್ಠವಾದ ಶರೀರವೊಂದಿರುವುದು. ಇದನ್ನು ನೀವು ಎಚ್ಚರಿಕೆಯಿಂದ ಕಾಪಾಡಬೇಕು. ಇದಿಲ್ಲದಿದ್ದರೆ ಈ ಅನರ್ಥವುಂಟಾದುದನ್ನು ಈಗಲೇ ನೋಡಿರುವಿರಿ. ॥೭೬॥

ವೇದರೂಪಳಾದ ನಾನು ನಿಮಗೆ ಪೂಜ್ಯಳಾಗಿಯೂ, ಯಾವಾಗಲೂ ಸೇವಿಸಲ್ಪಡತಕ್ಕವಳಾಗಿಯೂ, ಇರುವೆನು. ನಿಮ್ಮ ಮಂಗಳಕ್ಕೆ ಇದಕ್ಕಿಂತ ಬೇರೆ ಉಪದೇಶ ಮಾಡತಕ್ಕದ್ದಿರುವುದಿಲ್ಲ. ॥೭೭॥

ಪಠನೀಯಂ ಮನ್ಮೈತದ್ಧಿ ಮಾಹಾತ್ಮ್ಯಂ ಸರ್ವದೋತ್ತಮಂ ।
ತೇನ ತುಷ್ಟಾ ಭವಿಷ್ಯಾಮಿ ಹರಿಷ್ಯಾಮಿ ತಥಾಽಪದಃ ॥೭೮॥

ದುರ್ಗಮಾಸುರಹಂತ್ರೀತ್ವಾದ್ದುರ್ಗೇತಿ ಮಮ ನಾಮ ಯಃ ।
ಗೃಹ್ಣಾತಿ ಚ ಶತಾಕ್ಷೀತಿ ಮಾಯಾಂ ಭಿತ್ತ್ವಾ ವ್ರಜತ್ಯಸೌ ॥೭೯॥

ಕಿಮುಕ್ತೇನಾತ್ರ ಬಹುನಾ ಸಾರಂ ವಕ್ಷ್ಯಾಮಿ ತತ್ತ್ವತಃ ।
ಸಂಸೇವ್ಯಾಽಹಂ ಸದಾ ದೇವಾಃ ಸರ್ವೈರಪಿ ಸುರಾಸುರೈಃ ॥೮೦॥

ಇತ್ಯುಕ್ತ್ವಾಽಂತರ್ಹಿತಾ ದೇವೀ ದೇವಾನಾಂ ಚೈವ ಪಶ್ಯತಾಂ ।
ಸಂತೋಷಂ ಜನಯಂತ್ಯೇವಂ ಸಚ್ಚಿದಾನಂದರೂಪಿಣೀ ॥೮೧॥

ಏತತ್ತೇ ಸರ್ವಮಾಖ್ಯಾತಂ ರಹಸ್ಯಂ ಪರಮಂ ಮಹತ್ ।
ಗೋಪನೀಯಂ ಪ್ರಯತ್ನೇನ ಸರ್ವಕಲ್ಯಾಣಕಾರಕಂ ॥೮೨॥

---

ಉತ್ತಮವಾದ ನನ್ನ ಈ ಮಹಾತ್ಮ್ಯೆಯನ್ನು ನೀವು ಓದಬೇಕು. ಅದರಿಂದ ನಾನು ಸಂತೋಷವನ್ನು ಹೊಂದಿ ನಿಮ್ಮ ಕಷ್ಟಗಳನ್ನೆಲ್ಲವನ್ನೂ ನಾಶಮಾಡುವೆನು. ||೭೮||

ದುರ್ಗಮಾಸುರನನ್ನು ಕೊಂದುದರಿಂದ 'ದುರ್ಗೆ' ಎಂಬುದಾಗಿಯೂ, 'ಶತಾಕ್ಷಿ' ಎಂಬುದಾಗಿಯೂ, ನನ್ನ ಹೆಸರನ್ನು ಯಾರು ಹೇಳುವರೋ, ಅವರು ಅಜ್ಞಾನವನ್ನು ನಾಶಮಾಡಿಕೊಳ್ಳುವರು. ||೭೯||

ಎಲೈ ದೇವತೆಗಳೇ, ವಿಶೇಷವಾಗಿ ಹೇಳುವುದೇನು? ನಿಜವಾದ, ಸಾರವಾದ ಮಾತನ್ನು ಹೇಳುವೆನು. ಸಮಸ್ತ ಸುರಾಸುರರೂ ಯಾವಾಗಲೂ ನನ್ನನ್ನು ಸೇವಿಸುತ್ತಿರಬೇಕು. ||೮೦||

ಹೀಗೆಂದು ಹೇಳಿ, ಸತ್ಯಸ್ವರೂಪಳೂ, ಜ್ಞಾನಸ್ವರೂಪಳೂ, ಆನಂದಸ್ವರೂಪಳೂ ಆದ ದೇವಿಯು, ದೇವತೆಗಳು ನೋಡುತ್ತಿದ್ದ ಹಾಗೆಯೇ ಅವರಿಗೆ ಸಂತೋಷವನ್ನುಂಟುಮಾಡುತ್ತ ಮರೆಯಾದಳು. ||೮೧||

ದೊಡ್ಡದಾದ ಮತ್ತು ಗುಟ್ಟಾದ, ಶ್ರೇಷ್ಠವಾದ ಈ ಮಹಿಮೆಯನ್ನು ನಿನಗೆ ಹೇಳಿರುವೆನು. ಇದು ಸಮಸ್ತ ಮಂಗಳಗಳನ್ನೂ ಉಂಟುಮಾಡತಕ್ಕದ್ದು. ಆದುದರಿಂದ ಇದನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಿಕೊಕೊಂಡಿರಬೇಕು. ||೮೨||

**ಯ ಇದಂ ಶೃಣುಯಾನ್ನಿತ್ಯಮಧ್ಯಾಯಂ ಭಕ್ತಿತತ್ಪರಃ ।**
**ಸರ್ವಾನ್ಕಾಮಾನವಾಪ್ನೋತಿ ದೇವಲೋಕೇ ಮಹೀಯತೇ ॥೮೩॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ**
**ಅಷ್ಟಾವಿಂಶೋಽಧ್ಯಾಯಃ**

---

ಭಕ್ತಿಯಿಂದ ಈ ಅಧ್ಯಾಯವನ್ನು ಪ್ರತಿದಿನವೂ ಯಾರು ಕೇಳುವರೋ, ಅವರು ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ದೇವಲೋಕದಲ್ಲಿ ವಾಸಮಾಡುವರು. ॥೮೩॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಏಕೋನತ್ರಿಂಶೋಽಧ್ಯಾಯಃ ॥

### ಇಪ್ಪತ್ತೊಂಬತ್ತನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತ್ಯೇವಂ ಸೂರ್ಯವಂಶಾನಾಂ ರಾಜ್ಞಾಂ ಚರಿತಮುತ್ತಮಂ ।**
**ಸೋಮವಂಶೋದ್ಭವಾನಾಂಚ ವರ್ಣನೀಯಂ ಮಯಾ ಕಿಯತ್ ॥೧॥**

**ಪರಾಶಕ್ತಿಪ್ರಸಾದೇನ ಮಹತ್ವಂ ಪ್ರತಿಪೇದಿರೇ ।**
**ರಾಜನ್ ಸುನಿಶ್ಚಿತಂ ವಿದ್ಧಿ ಪರಾಶಕ್ತಿಪ್ರಸಾದತಃ ॥೨॥**

**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಪರಾಶಕ್ತ್ಯಂಶಸಂಭವಂ ॥೩॥**

---

ವ್ಯಾಸಮಹರ್ಷಿಯು ಜನಮೇಜಯರಾಜನ ಅಭಿಪ್ರಾಯಾನುಸಾರವಾಗಿ ಸೂರ್ಯವಂಶದ ರಾಜನಾದ ಹರಿಶ್ಚಂದ್ರನ ಕಥೆಯನ್ನು ಹೇಳಿ, ಚಂದ್ರವಂಶದ ರಾಜರ ವಿಚಾರವನ್ನು ತಿಳಿಯಬೇಕೆಂಬ ಅವನ ಮನದಾಸೆಯನ್ನು ಕಂಡು ಅವನ ಮನಸ್ಸನ್ನು ದೇವಿಯ ಕಥೆಯ ಕಡೆಗೆ ತಿರುಗುವಂತೆ ಮಾಡಿ ಚಂದ್ರವಂಶದ ರಾಜರ ಚರಿತ್ರೆಯನ್ನು ನಾನು ಎಷ್ಟೆಂದು ವರ್ಣಿಸಲಿ ಎಂದು ಹೇಳುವರು. ॥೧॥

ಎಲೈ ಜನಮೇಜಯನೇ, ಆ ಸೂರ್ಯಚಂದ್ರವಂಶದ ರಾಜರೆಲ್ಲರೂ ಮಹಾ ಮಹಿಮಳಾದ ಆ ಶ್ರೀದೇವಿಯ ಅನುಗ್ರಹದಿಂದ ಮಹತ್ವವನ್ನು ಪಡೆದರೆಂಬುದು ನಿಜವೆಂದು ತಿಳಿ. ಲೋಕದಲ್ಲಿ ಯಾವ ಯಾವ ವಸ್ತುಗಳು ಕಾಂತಿಯುಕ್ತವಾಗಿಯೂ ಮಹಿಮೆಯುಳ್ಳದ್ದಾಗಿ ಅನೇಕ ಸದ್ಗುಣಗಳಿಂದ ಕೂಡಿ ಫಲದಾಯಕವಾಗಿಯೂ ಇರು

ಏತೇ ಚಾನ್ಯೇ ಚ ರಾಜಾನಃ ಪರಾಶಕ್ತೇರುಪಾಸಕಾಃ ।
ಸಂಸಾರತರುಮೂಲಸ್ಯ ಕುಠಾರಾ ಅಭವನ್ನೃಪ ॥೪॥

ತಸ್ಮಾತ್ಸರ್ವಪ್ರಯತ್ನೇನ ಸಂಸೇವ್ಯಾ ಭುವನೇಶ್ವರೀ ।
ಪಲಾಲಮಿವ ಧಾನ್ಯಾರ್ಥೀ ತ್ಯಜೇದನ್ಯಮಶೇಷತಃ ॥೫॥

ಆಮಥ್ಯವೇದದುಗ್ಧಾಬ್ಧಿಂ ಪ್ರಾಪ್ತಂ ರತ್ನಂ ಮಯಾ ನೃಪ ।
ಪರಾಶಕ್ತಿಪದಾಂಭೋಜಂ ಕೃತಕೃತ್ಯೋಽಸ್ಮ್ಯಹಂ ತತಃ ॥೬॥

---

ವುವೋ ಅವುಗಳೆಲ್ಲವೂ ಆ ಪರಾಶಕ್ತಿಯ ಅಂಶದಿಂದುಂಟಾದುವೆಂಬುದಾಗಿ ತಿಳಿಯಬೇಕು. ||೨-೩||

ಪರಾಶಕ್ತಿಯನ್ನು ಭಜಿಸುವ ಈ ರಾಜರೆಲ್ಲರೂ ಮತ್ತು ಇತರರೂ ಸಂಸಾರವೆಂಬ ಮರದ ಬೇರಿಗೆ ಕೊಡಲಿಯಾದರು. ಎಂದರೆ ಜನನಮರಣವೆಂಬ ಸಂಸಾರದುಃಖವನ್ನು ನಾಶಮಾಡಿ ಕೊಂಡರೆಂದು ಅಭಿಪ್ರಾಯವು. ||೪||

ಆದುದರಿಂದ ಧಾನ್ಯವನ್ನಪೇಕ್ಷಿಸುವವನು ಹೊಟ್ಟನ್ನು ಬಿಡುವಂತೆ, ದೇವಿಯ ಉಪಾಸಕನು ಇತರ ದೇವತೆಗಳನ್ನು ಬಿಟ್ಟು, ಸರ್ವಪ್ರಯತ್ನದಿಂದಲೂ ಶ್ರೀ ಭುವನೇಶ್ವರೀದೇವಿಯನ್ನೇ ಭಕ್ತಿಯಿಂದ ಸೇವಿಸಬೇಕು. ಇದಕ್ಕೆ "ಪಲಾಲಮಿವಧಾನ್ಯಾರ್ಥೀ ತ್ಯಜೇದ್ಗ್ರಂಥಮಶೇಷತಃ" ಎಂಬ ಶ್ರುತಿಯೇ ಪ್ರಮಾಣವಾಗಿರುವುದು. ||೫||

ಎಲೈ ರಾಜನೇ, ವೇದವೆಂಬ ಕ್ಷೀರಸಮುದ್ರವನ್ನು ಕಡೆದು, ಪರಾಶಕ್ತಿಯ ಪಾದಕಮಲವೆಂಬ ರತ್ನವನ್ನು ನಾನು ಪಡೆದಿರುವೆನು. ಆದುದರಿಂದಲೇ ನಾನು ಕೃತಾರ್ಥನಾಗಿರುವೆನು. ಎಂದರೆ ನಾನು ಹುಟ್ಟಿದುದು ಸಾರ್ಥಕವಾಯಿತು. ಬೃಹದಾರಣ್ಯಕೋಪನಿಷತ್ತಿನಲ್ಲಿ ಗಾರ್ಗಿಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯಮಹರ್ಷಿಯು "ಗಾರ್ಗಿ ಮಾತಿಪ್ರಾಕ್ಷೀರ್ಮಾತೇ ಮೂರ್ಧಾ ವ್ಯಪಪ್ತತ್ ಅನತಿಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ" ಎಂದರೆ ಎಲೈ ಗಾರ್ಗಿಯೇ ನೀನು ದೇವತಾ ವಿಷಯವನ್ನು ಪ್ರಶ್ನೆಮಾಡುತ್ತ, ಒಂದುಲೋಕದಲ್ಲೊಂದು ಓತಪ್ರೋತವಾಗಿರುವುದೆಂದು, ನೀರು, ವಾಯು ಮೊದಲುಮಾಡಿಕೊಂಡು ಬ್ರಹ್ಮಲೋಕಪರ್ಯಂತವಾಗಿ ಪ್ರಶ್ನೆಗೆ ಉತ್ತರವನ್ನು ಪಡೆದಿರುವೆ. ಇಲ್ಲಿಂದ ಮುಂದೆಯೂ ನೀನು ಪ್ರಶ್ನೆ ಮಾಡುತ್ತ ಹೋದರೆ ಅದು ಅತಿಪ್ರಶ್ನೆಯಾಗುವುದು. ದೇವತಾ ವಿಷಯದಲ್ಲಿ ಅತಿಪ್ರಶ್ನೆಮಾಡುವವರ ತಲೆಯು ಬಿದ್ದುಹೋಗುವುದು. ಆದುದರಿಂದ ಇಲ್ಲಿಂದ ಮುಂದೆ ನೀನು ಪ್ರಶ್ನೆಮಾಡಬೇಡ

**ಪಂಚಬ್ರಹ್ಮಾಸನಾರೂಢಾ ನಾಽಸ್ತ್ಯನ್ಯಾ ಕಾಽಪಿದೇವತಾ ।**
**ತತ ಏವ ಮಹಾ ದೇವ್ಯಾ ಪಂಚಬ್ರಹ್ರಹ್ಮಾಸನಂ ಕೃತಂ ॥೭॥**

**ಪಂಚಭ್ಯಸ್ತ್ವಧಿಕಂ ವಸ್ತು ವೇದೇಽವ್ಯಕ್ತಮಿತೀರ್ಯತೇ ।**
**ಯಸ್ಮಿನ್ನೋತಂಚ ಪ್ರೋತಂ ಚ ಸೈವ ಶ್ರೀಭುವನೇಶ್ವರೀ ॥೮॥**

---

ದೇವತಾವಿಷಯದಲ್ಲಿ ನಂಬಿಕೆಯೇ ಮುಖ್ಯವೆಂದು ಹೇಳಿದುದನ್ನು ಕೇಳಿ ಗಾರ್ಗಿಯು ಪ್ರಶ್ನೆಯನ್ನು ಮಾಡದೆ ಯಾಜ್ಞವಲ್ಕ್ಯರ ಮಾತನ್ನೇ ನಂಬಿದಳೆಂದು ಹೇಳಿದೆ. ಆದುದರಿಂದ ದೇವತಾ ವಿಷಯದಲ್ಲಿ ನಂಬಿಕೆಯೂ ಭಕ್ತಿಭಾವವೂ ಮುಖ್ಯವೆಂದು ಹೇಳಿದಹಾಗಾಯಿತು. ॥೬॥

ಶ್ರೀ ಮಹಾದೇವಿಯು ಹೊರತಾಗಿ, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಇವರು ಮಂಚದ ಕಾಲುಗಳು. ಸದಾಶಿವನು ಮೇಲಿನ ಹಲಿಗೆಯು. ಈ ಪಂಚಬ್ರಹ್ಮರನ್ನೇ ಮಂಚವಾಗಿ ಮಾಡಿಕೊಂಡು ಅದರ ಮೇಲೆ ಕುಳಿತಿರುವ ದೇವತೆಯು ಮತ್ತಾವ ದೇವತೆಯೂ ಅಲ್ಲವು. ಆದುದರಿಂದಲೇ ಮೂಢರಿಗೂ ಕೂಡ ತನ್ನ ಮಹಿಮೆಯು ಗೊತ್ತಾಗಲೆಂದು ಮಹಾದೇವಿಯು ಪಂಚಬ್ರಹ್ಮಾಸನವನ್ನು ಮಾಡಿಕೊಂಡಿರುವಳು. ॥೭॥

ಭುವನೇಶ್ವರೀ ತಂತ್ರಶಾಸ್ತ್ರದಲ್ಲಿಯೂ, ಬ್ರಹ್ಮಾಂಡಪುರಾಣದಲ್ಲಿರುವ ಲಲಿತೋಪಾಖ್ಯಾನದಲ್ಲಿಯೂ, ದೇವಿಯೇ ಸರ್ವೋತ್ಕೃಷ್ಟಳೆಂಬುದಕ್ಕೆ "ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ । ಏತೇಪಂಚಮಹಾಪ್ರೇತಾಃ ಪಾದಮೂಲೇ ವ್ಯವಸ್ಥಿತಾಃ ॥" ಎಂದೂ, ಲಲಿತಾಸಹಸ್ರನಾಮದಲ್ಲಿ "ಪಂಚಪ್ರೇತಮಂಚಾಧಿಶಾಯಿನೀ" ಎಂದೂ ಹೇಳಿರುವುದು.

ಬ್ರಹ್ಮಾದಿಪಂಚದೇವತೆಗಳು ಭೂಮ್ಯಾದಿಪಂಚಭೂತಗಳಿಗೆ ಅಧಿಪತಿಗಳು. ಈ ಪಂಚಮಹಾಭೂತಗಳ ಉತ್ಪತ್ತಿಯು ಅವ್ಯಾಕೃತವೆಂಬ ಶಬ್ದದಿಂದ ಪ್ರಸಿದ್ಧವಾದ, ಗುಣಗಳ ಸಾಮ್ಯಾವಸ್ಥೆಯಿಂದಿರುವ ಮಾಯೋಪಾಧಿಕವಾದ, ಪರಬ್ರಹ್ಮತತ್ವದಿಂದುಂಟಾಗಿರುವುದು. ಆ ತತ್ವವನ್ನೇ ಗಾರ್ಗಿಬ್ರಾಹ್ಮಣದಲ್ಲಿ "ಯಸ್ಮಿನ್ನಿದಂ ಸರ್ವ ಜಗತ್ ಸೂತ್ರೇ ಮಣಿಗಣಾ ಇವೋತಂ ಪ್ರೋತಂ ಚ" ಎಂದು ಹೇಳಿರುವುದು. ಆದುದರಿಂದ ಆ ಮಾಯೋಪಾಧಿಕವಾದ ಪರಬ್ರಹ್ಮತತ್ವವೇ ಶ್ರೀ ಭುವನೇಶ್ವರೀದೇವಿಯು. ಪಂಚಬ್ರಹ್ಮರಿಗಿಂತಲೂ ಅಧಿಕವಾದ ವಸ್ತುವೆಂದು ವೇದದಲ್ಲಿ ಹೇಳಿರುವುದು. ॥೮॥

ತಾಮವಿಜ್ಞಾಯ ರಾಜೇಂದ್ರ ನೈವ ಮುಕ್ತೋ ಭವೇನ್ನರಃ ।
ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ॥೯॥

ತದಾ ಶಿವಾಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ।
ಅತ ಏವ ಶ್ರುತೌ ಪ್ರಾಹುಃ ಶ್ವೇತಾಶ್ವತರಶಾಖಿನಃ ॥೧೦॥

ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ।
ತಸ್ಮಾತ್ಸರ್ವಪ್ರಯತ್ನೇನ ಜನ್ಮಸಾಫಲ್ಯಹೇತವೇ ॥೧೧॥

ಲಜ್ಜಯಾ ವಾ ಭಯೇನಾಪಿ ಭಕ್ತ್ಯಾ ವಾ ಪ್ರೇಮಯುಕ್ತಯಾ ।
ಸರ್ವಸಂಗಂ ಪರಿತ್ಯಜ್ಯ ಮನೋ ಹೃದಿ ನಿರುಧ್ಯ ಚ ॥೧೨॥

---

ಎಲೈ ರಾಜನೇ, ಆ ಭುವನೇಶ್ವರೀದೇವಿಯನ್ನು ತಿಳಿಯದೆ ಮನುಷ್ಯನು ಮೋಕ್ಷವನ್ನು ಹೊಂದಲಾರನು. ಯಾವಾಗ ಮನುಷ್ಯನು ಆಕಾಶವನ್ನು ಕಷ್ಣಾಜಿನ ದಂತೆ ಸುತ್ತಿ ಹಿಡಿದುಕೊಳ್ಳುವನೋ ಆಗ ಭುವನೇಶ್ವರಿಯನ್ನು ತಿಳಿಯದಿದ್ದರೂ ಮೋಕ್ಷವನ್ನು ಹೊಂದುವನು. ಎಂದರೆ ಆಕಾಶವನ್ನು ಹಾಗೆ ಸುತ್ತುವುದಕ್ಕೂ ಆಗು ವುದಿಲ್ಲ. ಶ್ರೀಭುವನೇಶ್ವರಿಯ ಅನುಗ್ರಹವಿಲ್ಲದೆ ಸಂಸಾರದುಃಖದ ನಾಶವೆಂಬ ಮೋಕ್ಷವೂ ಆಗುವುದಿಲ್ಲ ವೆಂದು ಮುಖ್ಯಾಭಿಪ್ರಾಯವು. ॥೯॥

ಆದುದರಿಂದಲೇ ಶ್ವೇತಾಶ್ವತರೋಪನಿಷತ್ತಿನಲ್ಲಿ ಧ್ಯಾನಯೋಗವನ್ನು ಅಭ್ಯಾಸ ಮಾಡುತ್ತಿರುವವರು ಆಧ್ಯಾತ್ಮಿಕವಾದ ತಮ್ಮ ಗುಣಗಳ ಪ್ರಭಾವದಲ್ಲಿಯೇ ಗೋಪ್ಯ ವಾಗಿರುವ ಸ್ವಪ್ರಕಾಶವೂ ಎಲ್ಲಕ್ಕೂ ಆತ್ಮರೂಪವೂ ಆಗಿರುವ ಶಕ್ತಿಯನ್ನು ತಿಳಿದರು. ಎಂದು ಹೇಳಿರುವುದು. ಆದುದರಿಂದ ಮಾನವರು ತಮ್ಮ ಹುಟ್ಟು ಸಫಲವಾಗುವುದ ಕ್ಕಾಗಿ ಸರ್ವಪ್ರಯತ್ನದಿಂದಲೂ ಕೆಲಸಮಾಡಿಯಾದರೂ, ॥೧೦-೧೧॥

ಅಧರ್ಮಕಾರ್ಯದಲ್ಲಿ ನಾಚಿಕೆಯಿಂದಲಾದರೂ, ಅಧರ್ಮಾಚರಣೆಯಲ್ಲಿ ಹೆದರಿಕೆ ಯಿಂದಲಾದರೂ, ಪ್ರೀತಿಯಿಂದ ಕೂಡಿದ ಭಕ್ತಿಯಿಂದಲಾದರೂ, ಸಮಸ್ತ ವ್ಯವಹಾ ರದಲ್ಲೂ ಅಹಂಕಾರವನ್ನೂ ಬಿಟ್ಟು, ಮನಸ್ಸನ್ನು ಹೃದಯಾಕಾಶದಲ್ಲಿ ನಿಲ್ಲಿಸಿ, ಆ ಭುವನೇಶ್ವರೀದೇವಿಯನ್ನೇ ಧ್ಯಾನಿಸುತ್ತಾ, ಆ ದೇವಿಯೇ ತಮ್ಮ ಸರ್ವಾಭೀಷ್ಟ ಸ್ವರೂಪಳೆಂದು ತಿಳಿಯುತ್ತಾ ಇರಬೇಕೆಂದು ವೇದಾಂತವು ಸಾರುತ್ತಿರುವುದು. ॥೧೨॥

ತನ್ನಿಷ್ಠಸ್ತತ್ಪರೋ ಭೂಯಾದಿತಿ ವೇದಾಂತ ಡಿಂಡಿಮಃ ।
ಯೇನಕೇನ ಮಿಷೇಣಾಪಿ ಸ್ವಯಂ ತಿಷ್ಠನ್ವ್ರಜನ್ನಪಿ ॥೧೩॥

ಕೀರ್ತಯೇತ್ಸತತಂದೇವೀಂ ಸ ವೈ ಮುಚ್ಯೇತ ಬಂಧನಾತ್ ।
ತಸ್ಮಾತ್ಸರ್ವಪ್ರಯತ್ನೇನ ಭಜ ರಾಜನ್ಮಹೇಶ್ವರೀಂ ॥೧೪॥

ವಿರಾಡ್ರೂಪಾಂ ಸೂತ್ರರೂಪಾಂ ತಥಾಂತರ್ಯಾಮಿ ರೂಪಿಣೀಂ ।
ಸೋಪಾನಕ್ರಮತಃ ಪೂರ್ವಂ ತತಶ್ಶುದ್ಧೇ ತು ಚೇತಸಿ ॥೧೫॥

ಸಚ್ಚಿದಾನಂದ ಲಕ್ಷ್ಯಾರ್ಥರೂಪಾಂ ತಾಂ ಬ್ರಹ್ಮರೂಪಿಣೀಂ ।
ಆರಾಧಯ ಪರಾಂಶಕ್ತಿಂ ಪ್ರಪಂಚೋಲ್ಲಾಸವರ್ಜಿತಾಂ ॥೧೬॥

ತಸ್ಯಾಂ ಚಿತ್ತಲಯೋ ಯಸ್ಸ ತಸ್ಯಾ ಆರಾಧನಂ ಸ್ಮೃತಂ ।
ರಾಜನ್ರಾಜ್ಞಾಂ ಪರಾಶಕ್ತಿ ಭಕ್ತಾನಾಂ ಚರಿತಂ ಮಯಾ ॥೧೭॥

---

ಯಾವ ಮನುಷ್ಯನಾದರೂ ತಾನು ನಿಂತಿದ್ದರೂ ನಡೆಯುತ್ತಿದ್ದರೂ ಯಾವುದಾದರೊಂದು ನೆಪದಿಂದ ಯಾವಾಗಲೂ ದೇವಿಯ ನಾಮವನ್ನು ಉಚ್ಚರಿಸುತ್ತಿರಬೇಕು. ಹಾಗೆ ಮಾಡಿದರೆ ಅವನಿಗೆ ಈ ಸಂಸಾರ ಬಂಧದಿಂದ ಬಿಡುಗಡೆಯಾಗುವುದು. ಆದುದರಿಂದ ಎಲೈ ಜನಮೇಜಯರಾಜನೇ, ನೀನು ನಿನ್ನ ಸಕಲ ಪ್ರಯತ್ನಗಳಿಂದಲೂ ಆ ಮಹೇಶ್ವರಿಯನ್ನು ಧ್ಯಾನಮಾಡುತ್ತಿರು. ॥೧೩-೧೪॥

ಆ ಧ್ಯಾನವು ಒಂದೊಂದು ಮೆಟ್ಟಲಾಗಿ ಹತ್ತುವಂತಿರಬೇಕು. ಹೇಗೆಂದರೆ— ಮೊದಲು ವಿರಾಡ್ರೂಪಾಂ ಎಂದರೆ ಸಮಷ್ಟಿಸ್ಥೂಲ ಶರೀರಾಭಿಮಾನಿನಿಯಾಗಿರುವ ಪ್ರಪಂಚಸ್ವರೂಪಳಾದ ದೇವಿಯನ್ನೂ, ಆಮೇಲೆ 'ಸೂತ್ರರೂಪಾಂ' ಎಂದರೆ ಸಮಷ್ಟಿಲಿಂಗ ಶರೀರಾಭಿಮಾನಿನಿಯಾದ ದೇವಿಯನ್ನೂ, ಅನಂತರದಲ್ಲಿ ಅಂತರ್ಯಾಮಿ ರೂಪಿಣೀಂ ಎಂದರೆ ಮಾಯಾಸಹಿತವಾದ, ಪರಬ್ರಹ್ಮರೂಪಳಾದ ದೇವಿಯನ್ನೂ, ಧ್ಯಾನಮಾಡಿ ಚಿತ್ತಶುದ್ಧಿಯಾಗುತ್ತಲೂ, ನಿರ್ಗುಣಬ್ರಹ್ಮಸ್ವರೂಪಿಣಿಯಾದ ಸತ್ಯಜ್ಞಾನಾನಂದರೂಪದಿಂದ ಇರುವ ಪ್ರಪಂಚದ ಆವಿರ್ಭಾವನ ಮುಂತಾದ ವಿಕಾರವಿಲ್ಲದ ಸ್ವರೂಪಾನಂದರೂಪಳಾದ ಪರಾಶಕ್ತಿಯನ್ನು ಧ್ಯಾನಮಾಡುತ್ತಿರು. ॥೧೫-೧೬॥

ಹೀಗೆ ಮನಸ್ಸು ದೇವಿಯ ಸ್ವರೂಪಾನುಸಂಧಾನದಲ್ಲಿ ಲಯವಾದರೆ ಅದೇ ದೇವಿಯ ಪೂಜೆಯಾಗುವುದು. ಭಕ್ತರೂ, ಧಾರ್ಮಿಕರೂ, ಗೌರವಶಾಲಿಗಳೂ ಆದ

ಧಾರ್ಮಿಕಾಣಾಂ ಸೂರ್ಯಸೋಮವಂಶಜಾನಾಂ ಮನಸ್ವಿನಾಂ ।
ಪಾವನಂ ಕೀರ್ತಿದಂ ಧರ್ಮಬುದ್ಧಿದಂ ಸದ್ಗತಿಪ್ರದಂ ॥೧೮॥

ಕಥಿತಂ ಪುಣ್ಯದಂ ಪಶ್ಚಾತ್ಕಿಮನ್ಯಚ್ಛ್ರೋತುಮಿಚ್ಛಸಿ ।

॥ ಜನಮೇಜಯ ಉವಾಚ ॥

ಗೌರೀಲಕ್ಷ್ಮೀಸರಸ್ವತ್ಯೋ ದತ್ತಾಃ ಪೂರ್ವಂ ಪರಾಂಬಯಾ ॥೧೯॥

ಹರಾಯ ಹರಯೇ ತದ್ವನ್ನಾಭಿಪದ್ಮೋದ್ಭವಾಯ ಚ ।
ತುಷಾರಾದ್ರೇಶ್ಚ ದಕ್ಷಸ್ಯ ಗೌರೀ ಕನ್ಯೇತಿ ವಿಶ್ರುತಂ ॥೨೦॥

ಕ್ಷೀರೋದಧೇಶ್ಚ ಕನ್ಯೇತಿ ಮಹಾಲಕ್ಷ್ಮೀತಿ ವಿಶ್ರುತಂ ।
ಮೂಲದೇವ್ಯುದ್ಭವಾನಾಂ ಚ ಕಥಂ ಕನ್ಯಾತ್ವಮನ್ಯಯೋಃ ॥೨೧॥

ಅಸಂಭಾವ್ಯಮಿದಂ ಭಾತಿ ಸಂಶಯೋಽತ್ರ ಮಹಾಮುನೇ ।
ಛಿಂಧಿ ಜ್ಞಾನಾಸಿನಾ ತಂ ತ್ವಂ ಸಂಶಯಚ್ಛೇದತತ್ಪರ ॥೨೨॥

---

ಸೂರ್ಯಚಂದ್ರವಂಶದ ರಾಜರ ಪರಿಶುದ್ಧವಾದ ಕೀರ್ತಿಯನ್ನೂ, ಧರ್ಮಬುದ್ಧಿಯನ್ನೂ ಸ್ವರ್ಗಫಲವನ್ನೂ ಪುಣ್ಯವನ್ನೂ ಕೊಡುವ ಚರಿತ್ರೆಯನ್ನು ಹೇಳಿದೆನು. ನೀನು ಮತ್ತೇನನ್ನು ಕೇಳಬೇಕೆಂದಿರುವೆ? ॥೧೭-೧೮॥

ಜನಮೇಜಯನು ಹೇಳಿದನು—ಗೌರೀ, ಲಕ್ಷ್ಮೀ, ಸರಸ್ವತಿಯರನ್ನು ಹರ, ಹರಿ, ಬ್ರಹ್ಮರಿಗೆ ಮಣಿದ್ವೀಪದಲ್ಲಿದ್ದ ದೇವಿಯು ಕೊಟ್ಟಳೆಂದು (ಮೂರನೆಯ ಸ್ಕಂಧದ ಆರನೆಯ ಅಧ್ಯಾಯದಲ್ಲಿ) ಹೇಳಿದೆ. ಲೋಕದಲ್ಲಿ, ಗೌರೀದೇವಿಯು ಹಿಮವಂತನ, ದಕ್ಷನ ಪುತ್ರಿ ಎಂದೂ, ಲಕ್ಷ್ಮೀದೇವಿಯು ಕ್ಷೀರಸಮುದ್ರಜಾತೆಯೆಂದೂ ಪ್ರಸಿದ್ಧವಾಗಿರುವುದು. ॥೧೯-೨೦॥

ಮೂಲದೇವಿಯಿಂದ ಹುಟ್ಟಿದವರು ಮತ್ತೊಬ್ಬರ ಮಕ್ಕಳಾದುದು ಹೇಗೆ? ಇದು ಅಸಂಬದ್ಧವಾಗಿರುವಂತೆ ತೋರುತ್ತಿರುವುದು. ಓ ವ್ಯಾಸಮುನಿಯೇ, ನನಗುಂಟಾದ ಈ ಸಂದೇಹವನ್ನು ನಿವಾರಿಸಲು ಶಕ್ತನಾದ ನೀನು ಜ್ಞಾನವೆಂಬ ಕತ್ತಿಯಿಂದ ನನ್ನ ಈ ಸಂಶಯವನ್ನು ಕತ್ತರಿಸು. ॥೨೧-೨೨॥

॥ ವ್ಯಾಸ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ರಹಸ್ಯಂ ಪರಮದ್ಭುತಂ ।
ದೇವೀ ಭಕ್ತಸ್ಯ ತೇ ಕಿಂಚಿದವಾಚ್ಯಂ ನ ಹಿ ವಿದ್ಯತೇ ॥೨೩॥

ದೇವೀತ್ರಯಂ ಯದಾ ದೇವತ್ರಯಾಯಾದಾತ್ಪರಾಂಬಿಕಾ ।
ತದಾ ಪ್ರಭೃತಿ ತೇ ದೇವಾಃ ಸೃಷ್ಟಿಕಾರ್ಯಾಣಿ ಚಕ್ರಿರೇ ॥೨೪॥

ಕಸ್ಮಿಂಶ್ಚಿತ್ಸಮಯೇ ರಾಜನ್ದೈತ್ಯಾ ಹಾಲಾಹಲಾಭಿಧಾಃ ।
ಮಹಾಪರಾಕ್ರಮಾ ಜಾತಾಸ್ತ್ರೈಲೋಕ್ಯಂ ತೈರ್ಜಿತಂ ಕ್ಷಣಾತ್ ॥೨೫॥

ಬ್ರಹ್ಮಣೋ ವರದಾನೇನ ದರ್ಪಿತಾ ರಜತಾಚಲಂ ।
ರುರುಧುರ್ನಿಜಸೇನಾಭಿಸ್ತಥಾ ವೈಕುಂಠಮೇವ ಚ ॥೨೬॥

ಕಾಮಾರಿಃ ಕೈಟಭಾರಿಶ್ಚ ಯುದ್ಧೋದ್ಯೋಗಂ ಪ್ರಚಕ್ರತುಃ ।
ಷಷ್ಟಿವರ್ಷ ಸಹಸ್ರಾಣಾಮಭೂದ್ಯುದ್ಧಂ ಮಹೋತ್ಕಟಂ ॥೨೭॥

---

ವ್ಯಾಸರು ಹೇಳಿದರು—ಎಲೈ ರಾಜನೇ, ಗುಟ್ಟಾದ ಮತ್ತು ಆಶ್ಚರ್ಯಕರವಾದ ಈ ವಿಷಯವನ್ನೂ ಹೇಳುವೆನು. ದೇವಿಯಭಕ್ತನಾದ ನಿನಗೆ ಹೇಳದೆ ಇರತಕ್ಕದ್ದು ಯಾವುದೂ ಇರುವುದಿಲ್ಲ. ॥೨೩॥

ಗೌರೀ ಲಕ್ಷ್ಮೀ ಸರಸ್ವತಿಯರನ್ನು ರುದ್ರ ವಿಷ್ಣು ಬ್ರಹ್ಮರಿಗೆ ಮಣಿದ್ವೀಪಾಧಿವಾಸೆಯಾದ ಪರಾಂಬಿಕೆಯು ಕೊಟ್ಟ ಮೇಲೆ ಆ ಮೂವರು ದೇವತೆಗಳೂ ಪ್ರಪಂಚದ ಸೃಷ್ಟಿ ಸ್ಥಿತಿ ಪ್ರಲಯಕಾರ್ಯಗಳನ್ನು ಮಾಡತೊಡಗಿದರು. ॥೨೪॥

ಎಲೈ ರಾಜನೇ, ಒಂದಾನೊಂದು ಸಮಯದಲ್ಲಿ ಹೆಸರಿಗೆ ತಕ್ಕಹಾಗೆ ವಿಷದಂತೆ ಸಹಿಸಲಸಾಧ್ಯವಾದ ಹಾಲಾಹಲರೆಂಬ ರಾಕ್ಷಸರು ಮಹಾಪರಾಕ್ರಮಶಾಲಿಗಳಾಗಿ ಮೂರು ಲೋಕಗಳನ್ನೂ ಅತ್ಯಲ್ಪಕಾಲದಲ್ಲಿಯೇ ಜಯಿಸಿದರು. ॥೨೫॥

ಆ ರಾಕ್ಷಸರು ಬ್ರಹ್ಮನ ವರದಿಂದ ಕೊಬ್ಬಿದವರಾಗಿ ಸೈನ್ಯದೊಡನೆ ಹೋಗಿ ಈಶ್ವರನ ಆವಾಸಸ್ಥಾನವಾದ ಕೈಲಾಸಪರ್ವತವನ್ನೂ, ವಿಷ್ಣುವಿಗೆ ನೆಲೆವೀಡಾದ ವೈಕುಂಠವನ್ನೂ ಮುತ್ತಿದರು. ॥೨೬॥

ಕಾಮನ ಶತ್ರುವಾದ ಈಶ್ವರನೂ, ಕೈಟಭನ ಶತ್ರುವಾದ ನಾರಾಯಣನೂ, ಯುದ್ಧವನ್ನು ಮಾಡಿದರು. ಅರವತ್ತುಸಾವಿರ ವರ್ಷಗಳವರೆಗೆ ಭಯಂಕರವಾದ ಆ ಯುದ್ಧವಾಯಿತು. ॥೨೭॥

ಹಾಹಾಕಾರೋ ಮಹಾನಾಸೀ ದ್ದೇವದಾನವಸೇನಯೋಃ ।
ಮಹಶ್ರಾಃಥ ಪ್ರಯತ್ನೇನ ತಾಭ್ಯಾಂ ತೇ ದಾನವಾ ಹತಾಃ ॥೨೮॥

ಸ್ವಸ್ವಸ್ಥಾನೇಷು ಗತ್ವಾ ತಾವಭಿಮಾನಂ ಚ ಚಕ್ರತುಃ ।
ಸ್ವಶಕ್ತ್ಯೈರ್ನಿರ್ಕಟೇ ರಾಜನ್ಯದ್ವಶಾದೇವ ತೇ ಹತಾಃ ॥೨೯॥

ಅಭಿಮಾನಂ ತಯೋರ್ಜ್ಞಾತ್ವಾ ಛಲಹಾಸ್ಯಂ ಚ ಚಕ್ರತುಃ ।
ಮಹಾಲಕ್ಷ್ಮೀ ಚ ಗೌರೀಚ ಹಾಸ್ಯಂ ದೃಷ್ಟ್ವಾ ತಯೋಸ್ತು ತೌ॥೩೦॥

ದೇವಾವತೀವ ಸಂಕ್ರುದ್ಧೌ ಮೋಹಿತಾವಾದಿಮಾಯಯಾ ।
ದುರುತ್ತರಂ ಚ ದದತುರವಮಾನಪುರಸ್ಸರಂ ॥೩೧॥

---

ದೇವದಾನವ ಸೇನೆಗಳಲ್ಲಿ ಸಹಿಸಲಾರದ ಕಷ್ಟಗಳಿಂದ ದುಃಖಧ್ವನಿಯು ಕೇಳಬಂದಿತು. ಬಹಳ ಪ್ರಯತ್ನ ಮಾಡಿದುದರಿಂದ ಆ ಹರಿಹರರಿಬ್ಬರಿಂದಲೂ ಆ ರಾಕ್ಷಸರು ಹತರಾದರು. ||೨೮||

ಯಾವ ಆದಿಶಕ್ತಿಯ ಅಂಶಭೂತರಾದ ಗೌರೀ, ಲಕ್ಷ್ಮೀ ಎಂಬ ಶಕ್ತಿದೇವಿಯರ ಮಹಿಮೆಯಿಂದಲೇ, ಆ ರಾಕ್ಷಸರು ನಾಶವಾದರೂ, ಶಿವ, ವಿಷ್ಣು ಗಳಿಬ್ಬರೂ ತಮ್ಮ ತಮ್ಮ ವಾಸಸ್ಥಾನವಾದ ಕೈಲಾಸ ವೈಕುಂಠಗಳಿಗೆ ಹೋಗಿ ತಮ್ಮ ಶಕ್ತಿದೇವಿಯರಿರಿಂಗೆ ನಾವೇ ಆ ರಾಕ್ಷಸರನ್ನು ಕೊಂದೆವೆಂದು ತಮ್ಮ ಪರಾಕ್ರಮವನ್ನು ಹೊಗಳಿಕೊಂಡರು. ||೨೯||

ಮಹಾಲಕ್ಷ್ಮಿಯೂ ಗೌರಿಯೂ ಕೂಡ ಶಿವ ವಿಷ್ಣುಗಳ ಹೊಗಳಿಕೆಗಳನ್ನು, ಸ್ವಾಭಿಮಾನದ ಮೂಲಕವಾದುದೆಂಬುದನ್ನೂ ತಿಳಿದು ಕಪಟವಾಗಿ ನಕ್ಕರು. ಆ ಮೇಲೆ ಹರಹರಿಗಳಿಬ್ಬರೂ ಅವರ ಹಾಸ್ಯವನ್ನು ನೋಡಿ, ||೩೦||

ಆದಿಮಾಯೆಯಿಂದ ಮೋಹಿತರಾಗಿ ದೇವಾಂಶರಾದ ಆ ಹರಿಹರರಿಬ್ಬರೂ ಬಹಳವಾಗಿ ಕೋಪಗೊಂಡು, ಅವಮಾನಕರವಾದ ಎಂದರೆ, " ನಾವು ಗೆದ್ದರೂ ನಮ್ಮ ಪರಾಕ್ರಮವನ್ನು ಅಭಿನಂದಿಸದೆ ನಮ್ಮನ್ನು ಕಪಟ ಹಾಸ್ಯದಿಂದ ಅಲ್ಲಗಳೆದು ತಿರಸ್ಕರಿಸುತ್ತಿರುವ ನೀವು ಶುದ್ಧ ಮೂರ್ಖರು ! " ಎಂದು ಮುಂತಾಗಿ ಕೆಟ್ಟ ಮಾತುಗಳನ್ನೂ ಆಡಿದರು ! ||೩೧||

ತತಸ್ತೇ ದೇವತೇ ತಸ್ಮಿನ್ಕ್ಷಣೇ ತ್ಯಕ್ತ್ವಾ ತು ತೌ ಪುನಃ ।
ಅಂತರ್ಹಿತೇ ಚಾಽಭವತಾಂ ಹಾಹಾಕಾರ ಸ್ತದಾ ಹ್ಯಭೂತ್ ॥೩೨॥

ನಿಸ್ತೇಜಸ್ಕೌ ಚ ನಿಶ್ಶಕ್ತೀ ವಿಕ್ಷಿಪ್ತೌ ಚ ವಿಚೇತನೌ ।
ಅವಮಾನಾತ್ತಯೋಃ ಶಕ್ತ್ಯೋರ್ಜಾತೌ ಹರಿಹರೌ ತದಾ ॥೩೩॥

ಬ್ರಹ್ಮಾ ಚಿಂತಾತುರೋ ಜಾತಃ ಕಿಮೇತತ್ಸಮುಪಸ್ಥಿತಂ ।
ಪ್ರಧಾನೌ ದೇವತಾ ಮಧ್ಯೇ ಕಥಂ ಕಾರ್ಯಾಕ್ಷಮಾವಮೂ ॥೩೪॥

ಅಕಾಂಡೇ ಕಿಂ ನಿಮಿತ್ತೇನ ಸಂಕಟಂ ಸಮುಪಸ್ಥಿತಂ ।
ಪ್ರಲಯೋ ಭವಿತಾ ಕಿಂ ವಾ ಜಗತೋಽಸ್ಯ ನಿರಾಗಸಃ ॥೩೫॥

---

ಆ ಮೇಲೆ ಆ ಮಹಾಲಕ್ಷ್ಮೀ ಗೌರಿಯರಿಬ್ಬರೂ ಅವರ ಅಹಂಕಾರಭಾವವನ್ನು ನಿವಾರಿಸಲು ಆಕ್ಷಣದಲ್ಲಿಯೇ ಹರಿಹರರನ್ನು ಬಿಟ್ಟು ಅದೃಶ್ಯರಾದರು. ಆಗ ಲೋಕ ದಲ್ಲೆಲ್ಲಾ ಹಾಹಾಕಾರ ಉಂಟಾಯಿತು. ॥೩೨॥

ಮಣಿದ್ವೀಪದಲ್ಲಿ ಭಗವತಿಯು ಹೇಳಿದ್ದ " ಈ ಶಕ್ತಿದೇವಿಯರನ್ನು ನೀವು ಮರ್ಯಾದೆಯಿಂದ ಕಾಣಬೇಕು. ಯಾವಾಗಲೂ ಅವಮಾನ ಮಾಡಕೂಡದು.'' ಎಂಬ ದೇವಿಯ ಬುದ್ಧಿವಾದದ ಮಾತನ್ನು ಮರೆತು, ಅವಮಾನ ಮಾಡಿದುದರಿಂದ ಆ ಹರಿಹರರಿಬ್ಬರೂ ತೇಜೋಹೀನರಾಗಿಯೂ, ಶಕ್ತಿಯಿಲ್ಲದವರಾಗಿಯೂ, ಬುದ್ಧಿಶ ಕ್ತಿಯೂ ಇಲ್ಲದೆ ಭ್ರಮೆಯುಳ್ಳವರಾಗಿಯೂ, ಪ್ರಾಣಶಕ್ತಿಯಿಲ್ಲದವರಾಗಿಯೂ ಪರಿಣಮಿಸಿದರು ! ॥೩೩॥

ಆದರೆ ಬ್ರಹ್ಮನು ಮಾತ್ರ 'ದೇವತೆಗಳಲ್ಲಿ ಮುಖ್ಯರಾದ ಈ ಹರಿಹರರು ಹೇಗೆ ಶಕ್ತಿಹೀನರಾದರು ? ಇದೇನು ಬಂದಿತು ?' ಎಂದು ಆಲೋಚಿಸ ತೊಡಗಿ ದನು. ॥೩೪॥

ಈ ಅನಿರೀಕ್ಷಿತವಾದ ಕಾಲದಲ್ಲಿ ಯಾವ ಕಾರಣದಿಂದ ಈ ಕಷ್ಟವು ಪ್ರಾಪ್ತ ವಾಯಿತು ? ನಿರಪರಾಧಿಯಾದ ಈ ಜಗತ್ತಿಗೆ ಎಂದರೆ ಸರ್ವಪ್ರಾಣಿಗಳಿಗೂ ಅವರ ವರ ಕರ್ಮಗಳು ಇನ್ನೂ ಕ್ಷಯವನ್ನು ಪಡೆಯದೇ ಇರುವಾಗಲೂ, ಪ್ರಲಯಕಾಲ ವೇನಾದರೂ ಬಂದಿತೇ ? ॥೩೫॥

ನಿಮಿತ್ತಂ ನೈವ ಜಾನೇಽಹಂ ಕಥಂಕಾರ್ಯಾ ಪ್ರತಿಕ್ರಿಯಾ ।
ಇತಿ ಚಿಂತಾತುರೋಽತ್ಯರ್ಥಂ ದಧ್ಯೌ ಮೀಲಿತ ಲೋಚನಃ ॥೩೬॥

ಪರಾಶಕ್ತಿಪ್ರಕೋಪಾತ್ತು ಜಾತಮೇತದಿತಿ ಸ್ಮ ಹ ।
ಜಾನಂಸ್ತದಾ ಸಾವಧಾನಃ ಪದ್ಮಜೋಽಭೂನ್ನೃಪೋತ್ತಮ ॥೩೭॥

ತತಸ್ತಯೋಶ್ಚ ಯತ್ಕಾರ್ಯಂ ಸ್ವಯಮೇವಾಕರೋತ್ತದಾ ।
ಸ್ವಶಕ್ತೇಶ್ಚ ಪ್ರಭಾವೇನ ಕಿಯತ್ಕಾಲಂ ತಪೋನಿಧಿಃ ॥೩೮॥

ತತಸ್ತಯೋಸ್ತು ಸ್ವಸ್ತ್ಯರ್ಥಂ ಮನ್ವಾದೀನ್ಸ್ವಸುತಾನಥ ।
ಆಹ್ವಯಾಮಾಸ ಧರ್ಮಾತ್ಮಾ ಸನಕಾದೀಂಶ್ಚ ಸತ್ವರಃ ॥೩೯॥

---

ಇದಕ್ಕೆ ಕಾರಣವೇನೆಂಬುದನ್ನೇ ನಾನೂ ತಿಳಿಯೆನು ! ಹೀಗಿರುವಲ್ಲಿ ಇದಕ್ಕೆ ಪ್ರತಿಕ್ರಿಯೆ ಎಂದರೆ, ಈ ಕಷ್ಟದ ಕಾರಣವನ್ನು ತಿಳಿಯದೆ ಇದರ ಪರಿಹಾರೋಪಾಯವನ್ನು, ಹೇಗೆ ಮಾಡಲಿ? ಎಂದು ಚಿಂತಿಸುತ್ತಾ ಕಣ್ಣನ್ನು ಮುಚ್ಚಿಕೊಂಡು ಕಾರಣಜ್ಞಾನಕ್ಕೋಸ್ಕರವಾಗಿ ಧ್ಯಾನದೃಷ್ಟಿಯಿಂದ ತಿಳಿಯಲು ಪ್ರಯತ್ನ ಮಾಡಿದನು. ॥೩೬॥

ಓ ಜನಮೇಜಯರಾಜನೇ, ಹರಿಹರರು ಪರಾಶಕ್ತಿದೇವಿಯ ವಿಷಯದಲ್ಲಿ ತೋರಿಸಿದ ತಿರಸ್ಕಾರಭಾವದಿಂದ ಉಂಟಾದ ಕೋಪದಿಂದ ಹೀಗೆ ಆಯಿತೆಂದು ಏಕಾಗ್ರ ಮನಸ್ಸಿನಿಂದ ಯೋಚಿಸಿ ತಿಳಿದು, ಬ್ರಹ್ಮನು ಈಗ ಒಂದು ಉಪಾಯವನ್ನು ಮಾಡ ಬೇಕೆಂದು ನಂಬಿದನು. ॥೩೭॥

ಆಮೇಲೆ ಹರಿಹರರಿಬ್ಬರೂ ಕಾರ್ಯಸಮರ್ಥರಾಗುವ ವರೆಗೂ ತಪಸ್ವಿಯಾದ ಬ್ರಹ್ಮನು ತನ್ನ ಸಹಧರ್ಮಿಣಿಯೂ ಶಕ್ತಿದೇವಿಯ ಅಂಶಭೂತಳೂ ಆದ ಸರಸ್ವತಿಯ ಮಹಿಮೆಯಿಂದ ಪಾಲನ ಮತ್ತು ಸಂಹಾರರೂಪವಾದ ಹರಿ, ಹರರ ಕಾರ್ಯವನ್ನೂ ತಾನೇ ನಿರ್ವಾಹ ಮಾಡುತ್ತಿದ್ದನು. ॥೩೮॥

ಆಮೇಲೆ ಆ ಹರಿ, ಹರ ಇಬ್ಬರಿಗೂ ಮಂಗಳವಾಗಬೇಕೆಂಬುದಾಗಿ ಆಲೋಚಿಸಿ ಧರ್ಮಾತ್ಮನಾದ ಬ್ರಹ್ಮನು ಆತುರವಾಗಿ ತನ್ನ ಮಾನಸಪುತ್ರರಾದ ಸನಕರನೇ ಮೊದಲಾದ ಜ್ಞಾನಸಂಪನ್ನರಾದ ಪುತ್ರರನ್ನೂ ಮನ್ವಾದಿ ನವಪ್ರಜೇಶರನ್ನೂ ಕರೆಯಿಸಿದನು. ॥೩೯॥

**ಉವಾಚ ವಚನಂ ತೇಭ್ಯಃ ಸನ್ನತೇಭ್ಯಸ್ತಪೋನಿಧಿಃ ।**
**ಕಾರ್ಯಾಸಕ್ತೋಽಹಮಧುನಾ ತಪಃ ಕರ್ತುಂ ನ ಚ ಕ್ಷಮಃ ॥೪೦॥**

**ಪರಾಶಕ್ತೇಸ್ತು ತೋಷಾರ್ಥಂ ಜಗದ್ಭಾರಯುತೋಽಸ್ಮ್ಯಹಂ ।**
**ಶಿವವಿಷ್ಣೂ ಚ ನಿಕ್ಷಿಪ್ತೌ ಪರಾಶಕ್ತಿಪ್ರಕೋಪತಃ ॥೪೧॥**

**ತಸ್ಮಾತ್ತಾಂ ಪರಮಾಂ ಶಕ್ತಿಂ ಯೂಯಂ ಸಂತೋಷಯಂತ್ವಥ ।**
**ಅತ್ಯದ್ಭುತಂ ತಪಃ ಕೃತ್ವಾ ಭಕ್ತ್ಯಾ ಪರಮಯಾ ಯುತಾಃ ॥೪೨॥**

**ಯಥಾ ತೌ ಪೂರ್ವವೃತ್ತೌ ಚ ಸ್ಯಾತಾಂ ಶಕ್ತಿಯುತಾವಪಿ ।**
**ತಥಾ ಕುರುತ ಮತ್ಪುತ್ರಾ ಯಶೋವೃದ್ಧಿರ್ಭವೇದ್ಧಿ ವಾಂ ॥೪೩॥**

---

ಅವರೆಲ್ಲರೂ ಬರುತ್ತಲೂ ತಪೋನಿಧಿಯಾದ ಬ್ರಹ್ಮನು, ನಮಸ್ಕರಿಸಿದ ಅವರನ್ನು ಕುರಿತು, ನಾನು ಈಗ ತಪಸ್ಸನ್ನು ಮಾಡಲಾರೆನು. ಏಕೆಂದರೆ ಹರಿಹರರು ಮಾಡುತ್ತಿದ್ದ ಕಾರ್ಯಭಾರವೂ ನನ್ನ ಮೇಲಿರುವುದರಿಂದ ಆ ಕಾರ್ಯಾಸಕ್ತನಾಗಿರುವೆನು. ||೪೦||

ಪರಾಶಕ್ತಿಯನ್ನು ಸಂತೋಷಪಡಿಸುವುದಕ್ಕಾಗಿ ನಾನು ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರ್ಯವನ್ನು ಮಾಡುವ ಭಾರವನ್ನೂ ವಹಿಸಿರುವೆನು. ಶಿವ ವಿಷ್ಣುಗಳಿಬ್ಬರೂ ಪರಾಶಕ್ತಿದೇವಿಯ ಕೋಪದಿಂದ ಬುದ್ಧಿಭ್ರಾಂತಿಯನ್ನು ಹೊಂದಿರುವರು! ||೪೧||

ಆದುದರಿಂದ ನೀವು ಉತ್ತಮವಾದ ಭಕ್ತಿಯಿಂದ ಕೂಡಿದವರಾಗಿ ಅದ್ಭುತವಾದ ತಪಸ್ಸನ್ನು ಮಾಡಿ ಆ ಪರಾಶಕ್ತಿದೇವಿಯನ್ನು ಸಂತೋಷಪಡಿಸಿ ಆಕೆಯು ಹರಿಹರರ ವಿಷಯದಲ್ಲೂ ಅನುಗ್ರಹವುಳ್ಳವಳಾಗುವಂತೆ ಮಾಡಿರಿ. ||೪೨||

ಎಲೈ ಮಕ್ಕಳೇ, ಈಪ್ರಕಾರದಲ್ಲಿ ದೇವಿಯನ್ನು ಆರಾಧಿಸಿ ಆ ಹರಿಹರರಿಬ್ಬರೂ ಮೊದಲಿನಂತೆ ಶಕ್ತಿಯುಕ್ತರಾಗಿ ತಮ್ಮ ಕೆಲಸವನ್ನು ತಾವು ಮಾಡಿಕೊಂಡಿರುವಂತೆ ಶಕ್ತಿಯುಳ್ಳವರಾಗುವ ಹಾಗೆ ಮಾಡಿರಿ! ಇದರಿಂದ ಖಂಡಿತವಾಗಿಯೂ ನಿಮಗೂ ಕೀರ್ತಿಯು ಬರುವುದು. ||೪೩||

**ಕುಲೇ ಯಸ್ಯ ಭವೇಜ್ಜನ್ಮ ತಯೋಶ್ಶಕ್ತ್ಯೋಸ್ತು ತತ್ಕುಲಂ ।**
**ಪಾವಯೇಜ್ಜಗತೀಂ ಸರ್ವಾಂ ಕೃತಕೃತ್ಯಂ ಸ್ವಯಂ ಭವೇತ್ ॥೪೪॥**

॥ ವ್ಯಾಸ ಉವಾಚ ॥

**ಪಿತಾಮಹ ವಚಃ ಶ್ರುತ್ವಾ ಗತಾಃ ಸರ್ವೇ ವನಾಂತರೇ ।**
**ರಿರಾಧಯಿಷವಃ ಸರ್ವೇ ದಕ್ಷಾದ್ಯಾ ವಿಮಲಾಂತರಾಃ ॥೪೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ**
**ಏಕೋನವಿಂಶೋಽಧ್ಯಾಯಃ.**

---

ಆ ಇಬ್ಬರು ಶಕ್ತಿದೇವಿಯರು ಯಾರ ವಂಶದಲ್ಲಿ ಹುಟ್ಟುವರೋ ಅವರ ವಂಶವು ಈ ಲೋಕವನ್ನು ಪರಿಶುದ್ಧಿಮಾಡುವುದು. ಮತ್ತು ಆ ವಂಶವೂ ಕೃತಾರ್ಥವಾಗುವುದು. ಎಂದನು. ॥೪೪॥

ಬ್ರಹ್ಮನ ಈ ಅಪ್ಪಣೆಯ ಮಾತನ್ನು ಕೇಳಿದ ಮೇಲೆ ದಕ್ಷನೇ ಮೊದಲಾದ ಬ್ರಹ್ಮಮಾನಸಪುತ್ರರೆಲ್ಲರೂ ಪರಿಶುದ್ಧವಾದ ಮನಸ್ಸಿನಿಂದ ಕೂಡಿ ದೇವಿಯನ್ನು ತಪಸ್ಸಿನಿಂದ ಪೂಜಿಸಿ ಒಲಿಸಿಕೊಳ್ಳುವುದಕ್ಕಾಗಿ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ಹೀಗೆ ಪ್ರವೃತ್ತಿ ನಿವೃತ್ತಿ ಎಂಬ ಎರಡು ಬಗೆಯ ಧರ್ಮಗಳ ಆಚರಣೆ ಪ್ರಚಾರಣೆಗಳನ್ನು ಲೋಕಹಿತಕ್ಕಾಗಿ ನೆರವೇರಿಸುವುದರಲ್ಲಿ ನಿಯುಕ್ತರಾಗಿ ಆಸಕ್ತರಾದ ಆ ಬ್ರಹ್ಮಮಾನಸಪುತ್ರರು ಮುಂದೆ ತಕ್ಕ ಕಾರ್ಯಕ್ರಮವನ್ನು ಕೈಗೊಳ್ಳಲು ಆದರವುಳ್ಳವರಾದರು. ॥೪೫॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ತ್ರಿಂಶೋಽಧ್ಯಾಯಃ ||

### ಮೂವತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತತಸ್ತೇ ತು ವನೋದ್ದೇಶೇ ಹಿಮಾಚಲತಟಾಶ್ರಯಾಃ ।**
**ಮಾಯಾಬೀಜಜಪಾಸಕ್ತಾಃ ತಪಶ್ಚೇರುಸ್ಸಮಾಹಿತಾಃ ||೧||**

**ಧ್ಯಾಯತಾಂ ಪರಮಾಂಶಕ್ತಿಂ ಲಕ್ಷವರ್ಷಾಣ್ಯಭೂನ್ನೃಪ ।**
**ತತಃ ಪ್ರಸನ್ನಾ ದೇವೀ ಸಾ ಪ್ರತ್ಯಕ್ಷಂ ದರ್ಶನಂ ದದೌ ||೨||**

**ಪಾಶಾಂಕುಶವರಾಭೀತಿ ಚತುರ್ಬಾಹುಸ್ತ್ರಿಲೋಚನಾ ।**
**ಕರುಣಾರಸಸಂಪೂರ್ಣಾ ಸಚ್ಚಿದಾನಂದರೂಪಿಣೀ ||೩||**

---

ಆಮೇಲೆ ಆ ಬ್ರಹ್ಮಮಾನಸಪುತ್ರರಾದ ಸನಕಾದಿಗಳು ಹಿಮಾಲಯಪರ್ವತದ ತಪ್ಪಲಿನ ವನದಲ್ಲಿ ಆಶ್ರಮವನ್ನು ಮಾಡಿಕೊಂಡು, ಮಾಯಾಬೀಜಮಂತ್ರವನ್ನು ಜಪಿಸುತ್ತಾ ಏಕಾಗ್ರಚಿತ್ತದಿಂದ ದೇವಿಯನ್ನು ಕುರಿತು ತಪಸ್ಸನ್ನು ಮಾಡುತ್ತಿದ್ದರು. ||೧||

ಎಲೈ ಜನಮೇಜಯರಾಜನೇ, ಹೀಗೆ ಅವರು ದೇವಿಯನ್ನು ಧ್ಯಾನಮಾಡುತ್ತಿರಲು ಒಂದು ಲಕ್ಷ ವರ್ಷಗಳು ಕಳೆದುವು. ಆಮೇಲೆ ತಪಸ್ಸುಮಾಡುತ್ತಿದ್ದ ಆ ಬ್ರಹ್ಮಮಾನಸಪುತ್ರರಿಗೆ ಪ್ರಸನ್ನಳಾದ ದೇವಿಯು ಪ್ರತ್ಯಕ್ಷಳಾಗಿ ಕಾಣಿಸಿಕೊಂಡಳು. ||೨||

ನಿತ್ಯಸ್ವರೂಪಳೂ, ಜ್ಞಾನಸ್ವರೂಪಳೂ, ಆನಂದಸ್ವರೂಪಳೂ ಆದ ದೇವಿಯು ಭಕ್ತರ ಮೇಲೆ ಕರುಣೆಯಿಂದ ಕೂಡಿದವಳಾಗಿ ಅಭೀತಿ ಮತ್ತು ವರದ ಹಸ್ತಗಳಂ

ದೃಷ್ಟ್ವಾ ತಾಂ ಸರ್ವಜನನೀಂ ತುಷ್ಟುವುರ್ಮುನಯೋಽಮಲಾಃ ।
ನಮಸ್ತೇ ವಿಶ್ವರೂಪಾಯೈ ವೈಶ್ವಾನರ ಸುಮೂರ್ತಯೇ ॥೪॥

ನಮಸ್ತೈಜಸರೂಪಾಯೈ ಸೂತ್ರಾತ್ಮವಪುಷೇ ನಮಃ ।
ಯಸ್ಮಿನ್ ಸರ್ವೇ ಲಿಂಗ ದೇಹಾ ಓತಪ್ರೋತಾ ವ್ಯವಸ್ಥಿತಾಃ ॥೫॥

ನಮಃ ಪ್ರಾಜ್ಞಸ್ವರೂಪಾಯೈ ನಮೋಽವ್ಯಾಕೃತ ಮೂರ್ತಯೇ ।
ನಮಃ ಪ್ರತ್ಯಕ್ಸ್ವರೂಪಾಯೈ ನಮಸ್ತೇ ಬ್ರಹ್ಮಮೂರ್ತಯೇ ॥೬॥

---

ದಲೂ, ಪಾಶ, ಅಂಕುಶವೆಂಬ ಎರಡು ಆಯುಧಗಳನ್ನು ಹಿಡಿದ ಕೈಗಳಿಂದಲೂ ಕೂಡಿ ನಾಲ್ಕು ತೋಳುಗಳು, ಮೂರು ಕಣ್ಣುಗಳುಳ್ಳ ಸಾಕಾರವಾದ ರೂಪಿನಿಂದ ಆ ಭಕ್ತರಿಗೆ ಕಾಣಿಸಿಕೊಂಡಳು. ॥೩॥

ಆ ಪರಿಶುದ್ಧವಾದ ಮನಸ್ಸುಳ್ಳ ಬ್ರಹ್ಮಮಾನಸಪುತ್ರರಾದ ಋಷಿಗಳು ಸಮಸ್ತ ಲೋಕಕ್ಕೂ ತಾಯಿಯಾದ ಆ ಭುವನೇಶ್ವರೀದೇವಿಯನ್ನು ಕಂಡು, ಮುಂದೆ ಹೇಳುವಂತೆ ಸ್ತೋತ್ರಮಾಡಿದರು. ಹೇಗೆಂದರೆ, ವಿಶ್ವ ಎಂದರೆ ಪ್ರಪಂಚದಲ್ಲಿ ಬೇರೆ ಬೇರೆಯಾದ ಪ್ರಾಣಿಗಳ ಸ್ಥೂಲಶರೀರದಲ್ಲಿ ಅಭಿಮಾನದಿಂದ ಕೂಡಿರುವ ಮತ್ತು ವೈಶ್ವಾನರ ಎಂದರೆ, ಒಟ್ಟು ಪ್ರಪಂಚದಲ್ಲಿರುವ ಸ್ಥೂಲದೇಹಗಳೆಲ್ಲವೂ ಸೇರಿ ವಿರಾಟ್ಪುರುಷನೆಂಬ ಹೆಸರನ್ನು ಹೊಂದಿದ ಸಮಷ್ಟಿಸ್ಥೂಲದೇಹಾಭಿಮಾನಿನಿಯಾದ, ತೈಜಸ ಎಂದರೆ ಸ್ವಪ್ನಾವಸ್ಥೆಯಲ್ಲಿ ಗೋಚರವಾಗುವ ಬೇರೆ ಬೇರೆಯಾದ, ಲಿಂಗದೇಹಾಭಿಮಾನಿನಿಯಾದ ಮತ್ತು ಸೂತ್ರಾತ್ಮ ಎಂದರೆ, ಅದೇ ಸ್ವಪ್ನಾವಸ್ಥೆಯಲ್ಲಿ ಸಮಷ್ಟಿಲಿಂಗ ದೇಹಾಭಿಮಾನಿನಿಯಾದ ಓ ದೇವಿಯೇ, ನಿನಗೆ ನಮಸ್ಕಾರವು. ॥೪॥

ಯಾವ ಸೂತ್ರಾತ್ಮನಲ್ಲಿ ಎಲ್ಲ ಲಿಂಗದೇಹಗಳೂ ಸಂಬಂಧಿಸಿಕೊಂಡಿರುವುವೋ, ಆ ಸೂತ್ರಾತ್ಮನೇ ಸ್ವಪ್ನಾವಸ್ಥಾಭಿಮಾನಿಯಾದ ಭುವನೇಶ್ವರೀ ತತ್ವವು. ॥೫॥

ಪ್ರಾಜ್ಞ ಎಂದರೆ ಸುಷುಪ್ತ್ಯಭಿಮಾನಿ, ವ್ಯಷ್ಟಿ ಎಂದರೆ ಬೇರೆ ಬೇರೆಯಾದ ಕಾರಣ ದೇಹಾಭಿಮಾನಿಯೂ ಮತ್ತು ಅವ್ಯಾಕೃತ ಎಂದರೆ ಸಮಷ್ಟಿಕಾರಣ ದೇಹಾಭಿಮಾನಿನಿಯೂ, ಆದ ದೇವಿಗೆ ನಮಸ್ಕಾರವು. ಮತ್ತು ಪ್ರತ್ಯಕ್ಸ್ವರೂಪವೆಂದರೆ ಜೀವನಿಗೆ ಆಧಾರವಾದ, ಕೂಟಸ್ಥವಾದ ಬ್ರಹ್ಮಚೈತನ್ಯವು, ಬ್ರಹ್ಮಮೂರ್ತಯೇ ಎಂದರೆ ಸಮಸ್ತಕ್ಕೂ ಜೀವರು, ಜಗತ್ತು, ವ್ಯವಹಾರಗಳೆಲ್ಲಕ್ಕೂ ಅಧಿಷ್ಠಾನರೂಪವಾದ ಆಧಾರಭೂತವಾದ, ನಿರ್ವಿಕಾರವಾದ ಚೈತನ್ಯಕ್ಕೆ ನಮಸ್ಕಾರವು. ಸರ್ವ

ನಮಸ್ತೇ ಸರ್ವರೂಪಾಯೈ ಸರ್ವಲಕ್ಷ್ಯಾತ್ಮಮೂರ್ತಯೇ ।
ಇತಿ ಸ್ತುತ್ವಾ ಜಗದ್ಧಾತ್ರೀಂ ಭಕ್ತಿಗದ್ಗದಯಾ ಗಿರಾ ॥೭॥

ಪ್ರಣೇಮುಶ್ಚರಣಾಂಭೋಜಂ ದಕ್ಷಾದ್ಯಾ ಮುನಯೋಽಮಲಾಃ ।
ತತಃ ಪ್ರಸನ್ನಾ ಸಾ ದೇವೀ ಪ್ರೋವಾಚ ಪಿಕಭಾಷಿಣೀ ॥೮॥

ವರಂ ಬ್ರೂತ ಮಹಾಭಾಗಾ ವರದಾಽಹಂ ಸದಾ ಮತಾ ।
ತಸ್ಯಾಸ್ತು ವಚನಂ ಶ್ರುತ್ವಾ ಹರವಿಷ್ಣ್ವೋಸ್ತನೋಃ ಶಮಂ ॥೯॥

ತಯೋಸ್ತಚ್ಛಕ್ತಿಲಾಭಂ ಚ ವವ್ರಿರೇ ನೃಪಸತ್ತಮ ।
ದಕ್ಷೋಽಥ ಪುನರಪ್ಯಾಹ ಜನ್ಮ ದೇವಿ ಕುಲೇ ಮಮ ॥೧೦॥

---

ಪ್ರಪಂಚ ಎಂದರೆ ಈ ಸಮಸ್ತವಾದ ಜನನಮರಣರೂಪವಾದ ಪ್ರಪಂಚಕ್ಕೂ ಗುರಿಯಾದ, ಅಧಿಷ್ಠಾನವಾಗಿ ಆತ್ಮಸ್ವರೂಪವಾದ, ಉಪಲಕ್ಷ್ಯವಾಗಿ ಜ್ಞಾಪ್ಯವಾದ, ಮಾಯೋಪಹಿತಬ್ರಹ್ಮರೂಪವಾದ ದೇವೀಚೈತನ್ಯಕ್ಕೆ ನಮಸ್ಕಾರವು. ||೬||

ಪರಿಶುದ್ಧರಾದ ದಕ್ಷನೇ ಮೊದಲಾದ ಆ ಮುನಿಗಳು ಭಕ್ತಿಯಿಂದ ಉಂಟಾದ ದೇವಿಯ ದರ್ಶನದ ಆನಂದದಿಂದ ಕುತ್ತಿಗೆಯ ನರಗಳು ಬಿಗಿದು, ಸರಿಯಾಗಿ ಮಾತುಗಳು ಹೊರಡದಿದ್ದರೂ, ಲೋಕಕ್ಕೆ ತಾಯಿಯಾದ ಭುವನೇಶ್ವರೀದೇವಿಯನ್ನು ಹಿಂದೆ ಹೇಳಿದಂತೆ ಸ್ತೋತ್ರಮಾಡಿ, ಆ ದೇವಿಯು ಪಾದಪದ್ಮಗಳಿಗೆ ನಮಸ್ಕಾರ ಮಾಡಿದರು. ||೭||

ಎಲೈ ಮಹಾಪುಣ್ಯವಂತರಾದ ಮುನಿಗಳೇ, ನಾನು ಯಾವಾಗಲೂ ಇಷ್ಟಾರ್ಥಗಳನ್ನು ಕೊಡತಕ್ಕವಳು. ನಿಮಗೆ ಬೇಕಾದ ವರಗಳನ್ನು ಕೇಳಿಕೊಳ್ಳಿರಿ. ಎಂದು ಹೇಳಿದಳು. ||೮||

ಓ ಜನಮೇಜಯರಾಜನೇ, ಆ ದೇವಿಯ ಮಾತನ್ನು ಕೇಳಿ, ಆ ಮುನಿಗಳು ಲೋಕಹಿತಕ್ಕೋಸ್ಕರವಾಗಿ ಹರಿಹರರ ಶರೀರಕ್ಕೆ ಶಾಂತಿಯನ್ನೂ ಮತ್ತು ಅವರಿಗೆ ಲಕ್ಷ್ಮೀ ಗೌರೀ ರೂಪವಾದ ಶಕ್ತಿದೇವಿಯರ ಲಾಭವನ್ನೂ ವರವಾಗಿ ಕೇಳಿದರು. ||೯||

ದಕ್ಷನು ಮತ್ತೆ ಹೇಳಿದನು, ಓ ಭುವನೇಶ್ವರಿಯೇ, ನನ್ನ ವಂಶದಲ್ಲಿ ನೀನು ಅವತರಿಸುವಂತೆಯೂ ಆಗಬೇಕು. ಹಾಗಾದರೆ ಆದರಿಂದ ನಾನೂ ಕೃತಾರ್ಥನಾಗು

ಭವೇತ್ತ್ವಾಂಬ ಯೇನಾಹಂ ಕೃತಕೃತ್ಯೋ ಭವೇ ಇತಿ ।
ಜಪಂ ಧ್ಯಾನಂ ತಥಾ ಪೂಜಾಂ ಸ್ಥಾನಾನಿ ವಿವಿಧಾನಿ ಚ ॥೧೧॥

ವದ ಮೇ ಪರಮೇಶಾನಿ ಸ್ವಮುಖೇನೈವ ಕೇವಲಂ ।

॥ ದೇವ್ಯುವಾಚ ॥

ಮಚ್ಛಕ್ತ್ಯೋರವಮಾನಾಚ್ಚ ಜಾತಾವಸ್ಥಾ ತಯೋರ್ದ್ವಯೋಃ॥೧೨॥

ನೈತಾದೃಶಃ ಪ್ರಕರ್ತವ್ಯೋ ಮೇಽಪರಾಧಃ ಕದಾಚನ ।
ಅಧುನಾ ಮತ್ಕೃಪಾಲೇಶಾಚ್ಛರೀರೇ ಸ್ವಸ್ಥತಾ ತಯೋಃ ॥೧೩॥

ಭವಿಷ್ಯತಿ ಚ ತೇ ಶಕ್ತೀ ತ್ವದ್ಗೃಹೇ ಕ್ಷೀರ ಸಾಗರೇ ।
ಜನಿಷ್ಯತಸ್ತತಸ್ತಾಭ್ಯಾಂ ಪ್ರಾಪ್ಸ್ಯತಃ ಪ್ರೇರಿತೇ ಮಯಾ ॥೧೪॥

ಮಾಯಾ ಬೀಜಂ ಹಿ ಮಂತ್ರೋ ಮೇ ಮುಖ್ಯಃ ಪ್ರಿಯಕರಃ ಸದಾ ।
ಧ್ಯಾನಂ ವಿರಾಟ್ಸ್ವರೂಪಂ ಮೇಽಥವಾ ತ್ವತ್ಪರತಃ ಸ್ಥಿತಂ ॥೧೫॥

---

ವೆನು. ಇದಲ್ಲದೆ, ನಿನ್ನ ಪೂಜೆ, ಧ್ಯಾನ, ಜಪ, ವಾಸಸ್ಥಾನ ಇವುಗಳನ್ನೆಲ್ಲಾ ನೀನೇ ಸಾಕ್ಷಾತ್ತಾಗಿ ನನಗೆ ಹೇಳಬೇಕು. ಎಂದು ಪ್ರಾರ್ಥಿಸಿದನು. ॥೧೦-೧೧॥

ದೇವಿಯು ಹೇಳಿದಳು, ಓ ಮುನಿಗಳೇ, ಹರಿಹರರಿಬ್ಬರೂ ನನ್ನ ಸಂಬಂಧವಾದ ಅಂಶಭೂತರಾದ ಲಕ್ಷ್ಮೀ, ಗೌರೀ ಎಂಬ ಶಕ್ತಿದೇವಿಯರಿಗೆ ಅವಮಾನಮಾಡಿದುದರಿಂದ ಅವರಿಬ್ಬರಿಗೂ ಈ ಅವಸ್ಥೆಯುಂಟಾಯಿತು. ಇಂಥ ತಪ್ಪನ್ನು ಯಾವಾಗಲೂ ಯಾರೂ ನನಗೆ ಮಾಡಬಾರದು. ಈಗ ನನ್ನ ದಯೆಯಿಂದ ಅವರಿಬ್ಬರೂ ಶರೀರದಲ್ಲಿ ಆರೋಗ್ಯವನ್ನು ಎಂದರೆ ಬುದ್ಧಿಶಕ್ತಿಯನ್ನೂ ಶರೀರಶಕ್ತಿಯನ್ನೂ ಹೊಂದಿರುವರು. ॥೧೨-೧೩॥

ಒಬ್ಬ ಶಕ್ತಿದೇವಿಯಾದ ಗೌರೀದೇವಿಯು ದಕ್ಷನಾದ ನಿನ್ನ ಮನೆಯಲ್ಲಿಯೂ, ಮತ್ತೊಬ್ಬ ಶಕ್ತಿದೇವಿಯಾದ ಲಕ್ಷ್ಮೀದೇವಿಯು ಕ್ಷೀರಸಮುದ್ರದಲ್ಲಿಯೂ ಹುಟ್ಟುವರು. ಆಮೇಲೆ ಅವರು ನನ್ನಿಂದ ಪ್ರೇರಿಸಲ್ಪಟ್ಟವರಾಗಿ ಆ ಹರಿಹರರಿಬ್ಬರನ್ನೂ ಹೊಂದುವರು। ॥೧೪॥

ಮಾಯಾಬೀಜವೇ ನನ್ನ ಮಂತ್ರವು. ಅದೇ ಮುಖ್ಯವೂ ನನಗಿಷ್ಟವಾದುದಾಗಿಯೂ ಇರುವುದು. ಅದೇ ಭುವನೇಶ್ವರೀಮಂತ್ರವು. ನನ್ನ ವಿರಾಟ್ಸ್ವರೂಪವನ್ನೇ ಧ್ಯಾನಮಾಡಬೇಕು. ಅಥವಾ ನಿಮ್ಮದುರಿಗೆ ಗೋಚರವಾಗಿರುವ ಪಾಶಾಂಕು

ಸಚ್ಚಿದಾನಂದರೂಪಂ ವಾ ಸ್ಥಾನಂ ಸರ್ವಂ ಜಗನ್ಮಮ ।
ಯುಷ್ಮಾಭಿಃ ಸರ್ವದಾ ಚಾಹಂ ಪೂಜ್ಯಾ ಧ್ಯೇಯಾ ಚ ಸರ್ವದಾ॥೧೬॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾಽಂತರ್ದಧೇ ದೇವೀ ಮಣಿದ್ವೀಪಾಧಿವಾಸಿನೀ ।
ದಕ್ಷಾದ್ಯಾ ಮುನಯಸ್ಸರ್ವೇ ಬ್ರಹ್ಮಾಣಂ ಪುನರಾಯಯುಃ ॥೧೭॥

ಬ್ರಹ್ಮಣೇ ಸರ್ವವೃತ್ತಾಂತಂ ಕಥಯಾಮಾಸುರಾದರಾತ್ ।
ಹರೋ ಹರಿಶ್ಚ ಸ್ವಸ್ಥೌ ತೌ ಸ್ವಸ್ವಕಾರ್ಯೇ ಕ್ಷಮೌ ನೃಪ ॥೧೮॥

ಜಾತೌ ಪರಾಂಬ(ಬಾ)ಕೃಪಯಾ ಗರ್ವೇಣ ರಹಿತೌ ತದಾ ।
ಕದಾಚಿದಥ ಕಾಲೇ ತು ಮಹಃ ಶಾಕ್ತ್ರಮವಾತರತ್ ॥೧೯॥
ದಕ್ಷಗೇಹೇ ಮಹಾರಾಜ ತ್ರೈಲೋಕ್ಯೇಽಪ್ಯುತ್ಸವೋಽಭವತ್ ।

---

ಶವರಾಭಯಹಸ್ತ ತ್ರಿಣೇತ್ರಗಳಿಂದ ಕೂಡಿದ ಈ ರೂಪವನ್ನಾದರೂ ಧ್ಯಾನಮಾಡ ಬಹುದು. ॥೧೫॥

ಅಥವಾ ನಿರ್ವಿಕಾರವಾದ ಸಚ್ಚಿದಾನಂದರೂಪವನ್ನಾದರೂ ಧ್ಯಾನಮಾಡ ಬಹುದು. ನಾನು ಸರ್ವಾತ್ಮಕಳಾಗಿರುವುದರಿಂದ ನನ್ನ ವಾಸಸ್ಥಾನವು ಈ ಸಮಸ್ತ ಜಗತ್ತೇ ಆಗಿರುವುದು. ನೀವೆಲ್ಲರೂ ನನ್ನನ್ನು ಯಾವಾಗಲೂ ಪೂಜಿಸುತ್ತಲೂ ಧ್ಯಾನಮಾಡುತ್ತಲೂ ಇರಬೇಕು. ॥೧೬॥

ವ್ಯಾಸನು ಹೇಳಿದನು— ಮಣಿದ್ವೀಪಾಧಿವಾಸಿನಿಯಾದ ಆ ಶ್ರೀಭುವನೇಶ್ವರೀ ದೇವಿಯು ಹೀಗೆ ಹೇಳಿ ಮರೆಯಾದಳು. ದಕ್ಷನೇ ಮೊದಲಾದ ಮುನಿಗಳು ಮತ್ತೆ ಬ್ರಹ್ಮನ ಸಮೀಪಕ್ಕೆ ಬಂದರು. ॥೧೭॥

ಆ ಮುನಿಗಳು ಪ್ರೀತಿಯಿಂದ ಬ್ರಹ್ಮನಿಗೆ ನಡೆದ ಎಲ್ಲ ವರ್ತಮಾನವನ್ನೂ ಆದರದೊಡನೆ ಹೇಳಿದರು. ಆ ಪರಮೇಶ್ವರಿಯ ದಯೆಯಿಂದ ಹರಿಹರರಿಬ್ಬರೂ ಗರ್ವವಿಲ್ಲದವರಾಗಿ ತಮ್ಮ ತಮ್ಮ ಕೆಲಸವನ್ನು ಮಾಡಲು ಶಕ್ತರಾದರು. ॥೧೮॥

ಎಲೈ ಜನಮೇಜಯರಾಜನೇ, ಕೆಲವು ಕಾಲದ ಮೇಲೆ ಪರಾಶಕ್ತಿಯ ತೇಜಸ್ಸು, ದಕ್ಷನ ಮನೆಯಲ್ಲಿ ಸತೀರೂಪದಿಂದ ಅವತಾರಮಾಡಲಾಯಿತು. ಆಗ ಮೂರು ಲೋಕದಲ್ಲಿಯೂ ಸಂತೋಷಕರವಾದ ಉತ್ಸವಗಳಾದುವು. ॥೧೯॥

ದೇವಾಃ ಪ್ರಮುದಿತಾಸ್ಸರ್ವೇ ಪುಷ್ಪವೃಷ್ಟಿಂ ಚ ಚಕ್ರಿರೇ ॥೨೦॥

ನೇದುರ್ದುಂದುಭಯಃ ಸ್ವರ್ಗೇ ಕರಕೋಣಾಹತಾ ನೃಪ ।
ಮನಾಂಸ್ಯಾಸನ್ಪ್ರಸನ್ನಾನಿ ಸಾಧೂನಾಮಮಲಾತ್ಮನಾಂ ॥೨೧॥

ಸರಿತೋ ಮಾರ್ಗವಾಹಿನ್ಯಃ ಸುಪ್ರಭೋಽಭೂದ್ದಿವಾಕರಃ ।
ಮಂಗಳಾಯಾಂ ತು ಜಾತಾಯಾಂ ಜಾತಂ ಸರ್ವತ್ರ ಮಂಗಳಂ॥೨೨॥

ತಸ್ಯಾ ನಾಮ ಸತೀಂ ಚಕ್ರೇ ಸತ್ಯತ್ವಾತ್ಪರ ಸಂವಿದಃ ।
ದದೌ ಪುನಃ ಶಿವಾಯಾಥ ತಸ್ಯ ಶಕ್ತಿಸ್ತು ಯಾಽಭವತ್ ॥೨೩॥

---

ಮತ್ತು ದೇವತೆಗಳೆಲ್ಲರೂ ಸಂತೋಷದಿಂದ ಹೂಮಳೆಯನ್ನು ಸುರಿಸಿದರು. ಸ್ವರ್ಗಲೋಕದಲ್ಲಿ ನಗಾರಿಯನ್ನು ಬಡಿಯುವುದಕ್ಕೆ ಕೋಲನ್ನು ತರುವುದು ಸಾವಕಾಶವಾಗುವುದೆಂದು ತಿಳಿದು, ಆತುರದಿಂದ ಕೈಗಳಿಂದಲೇ ನಗಾರಿಯನ್ನು ಬಡಿದ ಶಬ್ದವು ಕೇಳಿ ಬಂದಿತು ! ॥೨೦॥

ಪರಿಶುದ್ಧವಾದ ಬುದ್ಧಿಯುಳ್ಳ ಸಜ್ಜನರ ಮನಸ್ಸು ನಿರ್ಮಲವಾಗಿದ್ದಿತು. ನದಿಗಳು ಎಲ್ಲೆ ಮೀರದೆ ತಮ್ಮ ತಮ್ಮ ಪಾತ್ರಗಳಲ್ಲಿ ಹರಿಯುತ್ತಿದ್ದುವು. ಸೂರ್ಯನು ಕಾಂತಿಯುಕ್ತನಾಗಿದ್ದನು. ಜನನಮರಣರೂಪವಾದ ಸಂಸಾರ ದುಃಖವನ್ನು ನಾಶ ಮಾಡುವುದರಿಂದ ಮಂಗಳೆಯೆಂದು ಪ್ರಸಿದ್ಧಳಾದ ಭಕ್ತರ ಕೋರಿಕೆಯಂತೆ ಐಹಿಕ, ಆಮುಷ್ಮಿಕ, ಅಭ್ಯುದಯ ಮತ್ತು ಕಡೆಗೆ ಮೋಕ್ಷವನ್ನೂ ಕೊಟ್ಟು ಶ್ರೇಯಸ್ಸನ್ನುಂಟುಮಾಡುವ, ದೇವಿಯ ಜನನದಿಂದ ಲೋಕಗಳಲ್ಲೆಲ್ಲ ಮಂಗಳವುಂಟಾಯಿತು. ಹೀಗೆ ಶುಭಶಕುನಗಳಾದುವು ! ॥೨೧-೨೨॥

ಶ್ರೇಷ್ಠವಾದ ಜ್ಞಾನಸ್ವರೂಪವುಳ್ಳ ಸತ್ಯವಸ್ತುವಾದ ಪರಚೈತನ್ಯವೇ ದಕ್ಷನ ಮನೆಯಲ್ಲಿ ಅವತಾರಮಾಡಿದುದರಿಂದಲೂ, ಆ ದೇವಿಗೆ ಸತೀದೇವಿಯೆಂದೇ ನಾಮಕರಣಮಾಡಿದರು. ಮತ್ತು ಆ ಸತೀದೇವಿಯು ಹಿಂದೆ ಶಿವನಿಗೆ ಶಕ್ತಿಸ್ವರೂಪಳಾಗಿ ಸಹಧರ್ಮಿಣಿಯಾಗಿ ಇದ್ದುದರಿಂದ ಪುನಃ ಆ ದೇವಿಯನ್ನು ಶಿವನಿಗೇ ಕೊಟ್ಟು ಮದುವೆಯನ್ನು ಮಾಡಿದರು. ॥೨೩॥

**ಸಾ ಪುನರ್ಜ್ವಲನೇ ದಗ್ಧಾ ದೈವಯೋಗಾನ್ಮನೋರ್ನೃಪ ।**

॥ ಜನಮೇಜಯ ಉವಾಚ ॥

**ಅನರ್ಥಕರಮೇತತ್ತೇ ಶ್ರಾವಿತಂ ವಚನಂ ಮುನೇ ॥೨೪॥**

**ಏತಾದೃಶಂ ಮಹದ್ವಸ್ತು ಕಥಂ ದಗ್ಧಂ ಹುತಾಶನೇ ।**
**ಯನ್ನಾಮಸ್ಮರಣಾ ನ್ನೃಣಾಂ ಸಂಸಾರಾಗ್ನಿಭಯಂ ನ ಹಿ ॥೨೫॥**

**ಕೇನ ಕರ್ಮವಿಪಾಕೇನ ಮುನೋರ್ದಗ್ಧಂ ತದೇವ ಹಿ ।**

॥ ವ್ಯಾಸ ಉವಾಚ ॥

**ಶೃಣು ರಾಜನ್ ಪುರಾವೃತ್ತಂ ಸತೀದಾಹಸ್ಯ ಕಾರಣಂ ॥೨೬॥**

**ಕದಾಚಿದಥ ದುರ್ವಾಸಾ ಗತೋ ಜಾಂಬೂನದೇಶ್ವರೀಂ ।**
**ದದರ್ಶ ದೇವೀಂ ತತ್ರಾ ಸೌ ಮಾಯಾಬೀಜಂ ಜಜಾಪ ಸಃ ॥೨೭॥**

---

ಜನಮೇಜಯನು ಹೇಳಿದನು—ಓ ವ್ಯಾಸಮುನಿಯೇ, ನೀನು ಅನರ್ಥಕರವಾದ (ಅಸಂಬದ್ಧವಾದ) ಮಾತನ್ನು ನನಗೆ ಹೇಳಿದೆ! ಹೇಗೆಂದರೆ, ಯಾವ ದೇವಿಯ ಹೆಸರನ್ನು ಜ್ಞಾಪಿಸಿಕೊಂಡ ಮಾತ್ರದಿಂದಲೇ ಹುಟ್ಟು, ಸಾವುಗಳಿಂದ ಕೂಡಿದ ಈ ಸಂಸಾರವೆಂಬ ಬೆಂಕಿಯ ಭಯವಿಲ್ಲವೋ, ಅಂಥ ಮಹಾಮಹಿಮೆಯಿಂದ ಕೂಡಿದ ದಕ್ಷಪ್ರಜಾಪತಿಯ ಮಗಳಾಗಿ ಅವತರಿಸಿದ ಪರಾಶಕ್ತಿಯ ಅಂಶರೂಪವಾದ ವಸ್ತುವು ಬೆಂಕಿಯಲ್ಲಿ ಹೇಗೆ ಸುಟ್ಟುಹೋಯಿತು? ಹಾಗೆ ಸುಟ್ಟುಹೋದುದು ಆ ದಕ್ಷಬ್ರಹ್ಮನ ಎಂತಹ ಘೋರಕರ್ಮದ ಫಲವು? ಅದನ್ನು ನನಗೆ ವಿವರಿಸಿ ಹೇಳು. ಎಂದು ಕೇಳಿದನು. ॥೨೪-೨೫॥

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ, ಸತೀದೇವಿಯ ಶರೀರವು ದಕ್ಷನ ಯಜ್ಞದ ಅಗ್ನಿಕುಂಡದಲ್ಲಿ ಸುಟ್ಟುಹೋಗುವುದಕ್ಕೆ ಕಾರಣವಾದ ಹಿಂದೆ ನಡೆದ ಸಂಗತಿಯೊಂದನ್ನು ಹೇಳುವೆನು ಕೇಳು. ಒಂದಾನೊಂದು ದಿನ ದೂರ್ವಾಸನೆಂಬ ಮುನಿಯು ಜಂಬೂದ್ವೀಪದಲ್ಲಿರುವ, ನೇರಳೆ ಹಣ್ಣಿನ ರಸವೇ ನದಿಯಾಗಿ ಹರಿದುದರಿಂದ ಜಂಬೂನದಿಯೆಂದು ಪ್ರಸಿದ್ಧವಾದ, ಚಿನ್ನದ ರೇಕುಗಳು ದೊರೆಯುವ, ನದಿಯ ದಡದಲ್ಲಿರುವ ಜಾಂಬೂನದೇಶ್ವರಿ ಎಂದು ಪ್ರಸಿದ್ಧವಾದ ದೇವಿಯವಿಗ್ರಹವನ್ನು ನೋಡಿ ಅಲ್ಲಿ ಮಾಯಾಬೀಜಮಂತ್ರವನ್ನು ಜಪದೊಡನೆ ಅರ್ಥದ ಧ್ಯಾನವನ್ನು ಮಾಡಿದನು. ॥೨೬-೨೭॥

ತತಃ ಪ್ರಸನ್ನಾ ದೇವೇಶೀ ನಿಜಕಂಠಗತಾಂ ಸ್ರಜಂ ।
ಭ್ರಮದ್ಭ್ರಮರ ಸಂಸಕ್ತಾಂ ಮಕರಂದಮದಾಕುಲಾಂ ॥೨೮॥

ದದೌ ಪ್ರಸಾದ ಭೂತಾಂ ತಾಂ ಜಗ್ರಾಹ ಶಿರಸಾ ಮುನಿಃ ।
ತತೋ ನಿರ್ಗತ್ಯ ತರಸಾ ವ್ಯೋಮಮಾರ್ಗೇಣ ತಾಪಸಃ ॥೨೯॥

ಆಜಗಾಮ ಸ ಯತ್ರಾಸ್ತೇ ದಕ್ಷಃ ಸಾಕ್ಷಾತ್ಸತೀಪಿತಾ ।
ಸಂದರ್ಶನಾರ್ಥಮಂಬಾಯಾ ನನಾಮ ಚ ಸತೀಪದೇ ॥೩೦॥

ಪೃಷ್ಟೋ ದಕ್ಷೇಣ ಸ ಮುನಿಃ ಮಾಲಾ ಕಸ್ಯಾಸ್ತ್ಯಲೌಕಿಕೀ ।
ಕಥಂ ಲಬ್ಧಾ ತ್ವಯಾ ನಾಥ ದುರ್ಲಭಾ ಭುವಿ ಮಾನವೈಃ ॥೩೧॥

ತಚ್ಛ್ರುತ್ವಾ ವಚನಂ ತಸ್ಯ ಪ್ರೋವಾಚಾಶ್ರುಯುತೇ ಕ್ಷಣಃ ।
ದೇವ್ಯಾಃ ಪ್ರಸಾದಮತುಲಂ ಪ್ರೇಮ ಗದ್ಗದಿತಾಂತರಃ ॥೩೨॥

---

ಆಮೇಲೆ ಆ ದೇವಿಯು ಸಂತೋಷಗೊಂಡು ಹೂವಿನ ರಸದಿಂದ ಮದಿಸಿದ ಹಾರಾಡುತ್ತಿರುವ ದುಂಬಿಗಳಿಂದ ಕೂಡಿರುವ ತನ್ನ ಕುತ್ತಿಗೆಯಲ್ಲಿದ್ದ ಹೂಮಾಲೆಯನ್ನು ಮುನಿಗೆ ಪ್ರಸಾದವಾಗಿ ಕೊಟ್ಟಳು. ಆ ಮುನಿಯು ಅದನ್ನು ನಮಸ್ಕರಿಸಿ ತೆಗೆದುಕೊಂಡು ತನ್ನ ತಲೆಯಮೇಲಿಟ್ಟುಕೊಂಡನು. ॥೨೮॥

ಆ ಮೇಲೆ ಆ ಮುನಿಯು ಅಲ್ಲಿಂದ ಬೇಗನೆ ಹೊರಟು ಆಕಾಶಮಾರ್ಗದಲ್ಲಿ ಬರುತ್ತಾ ಸತೀದೇವಿಯ ತಂದೆಯಾದ ದಕ್ಷನು ಎಲ್ಲಿದ್ದನೋ ಅಲ್ಲಿಗೆ, ಆ ಸತೀ ದೇವಿಯನ್ನು ದರ್ಶನಮಾಡಬೇಕೆಂದು ಬಂದು, ಆ ಜಗನ್ಮಾತೆಯ ಪಾದಕ್ಕೆ ನಮಸ್ಕಾರಮಾಡಿದನು. ॥೨೯-೩೦॥

ದಕ್ಷನು ಆ ದೂರ್ವಾಸಮುನಿಯನ್ನು ಕುರಿತು "ಸ್ವಾಮಿ, ಈ ದಿವ್ಯವಾದ ಮಾಲೆಯು ಯಾರದು? ಇದು ಈ ಭೂಲೋಕಕ್ಕೆ ಸಂಬಂಧಪಟ್ಟುದಾಗಿಲ್ಲ! ಭೂಮಿಯಲ್ಲಿರುವ ಮನುಜರು ಇದನ್ನು ಪಡೆಯಲಾರರು. ನೀವು ಹೇಗೆ ಇದನ್ನು ಸಂಪಾದಿಸಿದಿರಿ?" ಎಂದು ಕೇಳಿದನು. ॥೩೧॥

ಆ ಮಾತನ್ನು ಕೇಳಿ ಆ ಮುನಿಯು ಭಕ್ತಿಯ ಆವೇಶದಿಂದ ಕಣ್ಣಿನಲ್ಲಿ ಸಂತೋಷದ ಕಣ್ಣೀರನ್ನು ತುಂಬಿಕೊಂಡು, ದೇವಿಯ ಅಸಮಾನವಾದ ಅನುಗ್ರಹದಿಂದ ಈ ಮಾಲೆಯು ತನಗೆ ಸಿಕ್ಕಿತೆಂದನು. ॥೩೨॥

ಪ್ರಾರ್ಥಯಾಮಾಸ ತಾಂ ಮಾಲಾಂ ತಂ ಮುನಿಂ ಸ ಸತೀಪಿತಾ ।
ಅದೇಯಂ ಶಕ್ತಿಭಕ್ತಾಯ ನಾಸ್ತಿ ತ್ರೈಲೋಕ್ಯಮಂಡಲೇ ॥೩೩॥

ಇತಿ ಬುದ್ಧ್ವಾ ತು ತಾಂ ಮಾಲಾಂ ಮನವೇ ಸ ಸಮರ್ಪಯತ್ ।
ಗೃಹೀತಾ ಶಿರಸಾ ಮಾಲಾ ಮನುನಾ ನಿಜಮಂದಿರೇ ॥೩೪॥

ಸ್ಥಾಪಿತಾ ಶಯನಂ ಯತ್ರ ದಂಪತ್ಯೋರತಿಸುಂದರಂ ।
ಪಶುಕರ್ಮರತೋ ರಾತ್ರೌ ಮಾಲಾಗಂಧೇನ ಮೋದಿತಃ ॥೩೫॥

ಅಭವತ್ಸ ಮಹೀಪಾಲ ತೇನ ಪಾಪೇನ ಶಂಕರೇ ।
ಶಿವೇ ದ್ವೇಷಮತಿರ್ಜಾತೋ ದೇವ್ಯಾಂ ಸತ್ಯಾಂ ತಥಾ ನೃಪ ॥೩೬॥

---

ಆ ಸತೀದೇವಿಯ ತಂದೆಯಾದ ದಕ್ಷನು ಆ ಸರವನ್ನು ತನಗೆ ಕೊಡೆಂದು ಆ ದೂರ್ವಾಸಮುನಿಯನ್ನು ಪ್ರಾರ್ಥಿಸಿ ಕೇಳಿದನು. ಶಕ್ತಿದೇವಿಯ ಭಕ್ತನಿಗೆ ಕೊಡದಿರತಕ್ಕ ವಸ್ತುವು ಮೂರು ಲೋಕಗಳಲ್ಲಿ ಯಾವುದೂ ಇರುವುದಿಲ್ಲವೆಂದು ಆ ದುರ್ವಾಸಮುನಿಯು ತಿಳಿದು ಆ ಮಾಲೆಯನ್ನು ದಕ್ಷನಿಗೆ ಕೊಟ್ಟನು. ||೩೩||

ದಕ್ಷನು ಆ ಮಾಲೆಯನ್ನು ಭಕ್ತಿಯಿಂದ ಸ್ವೀಕರಿಸಿ ತಲೆಯ ಮೇಲಿಟ್ಟುಕೊಂಡು ತಂದು, ತನ್ನ ಮನೆಯಲ್ಲಿ ದಂಪತಿಗಳು ಮಲಗುವ ಸುಂದರವಾದ ಹಾಸಿಗೆಯಿದ್ದ ಶಯನಾಗಾರದಲ್ಲಿ ಇಟ್ಟನು. ಮತ್ತು ಆ ಮಾಲೆಯ ಸುವಾಸನೆಯಿಂದ ಸಂತೋಷ ಹೊಂದಿ ರಾತ್ರಿಯಲ್ಲಿ ತನ್ನ ಸ್ತ್ರೀಯೊಡನೆ ಕ್ರೀಡಾಸಕ್ತನಾಗಿರುತ್ತಿದ್ದನು. ಈ ಕರ್ಮವು ಪಶುಗಳಿಗೂ ಸಮಾನವಾದುದರಿಂದ ಕೀಳಾದುದೂ ಅಪವಿತ್ರವೂ ಆಗಿದೆ. ಆದುದ ರಿಂದ, ||೩೪-೩೫||

ಎಲೈ ರಾಜನೇ, ಆ ಭಗವತಿಯ ಮಾಲೆಗೆ ಹೀಗೆ ಅಪಮಾನ ಮಾಡಿದ ಪಾಪದಿಂದ, ಲೋಕಕ್ಕೆ ಸುಖವನ್ನುಂಟುಮಾಡುವ ಈಶ್ವರನಲ್ಲಿಯೂ, ಸತೀದೇವಿಯ ಲ್ಲಿಯೂ, ಆ ದಕ್ಷಬ್ರಹ್ಮನು ದ್ವೇಷಬುದ್ಧಿಯನ್ನು ಹೊಂದಿದನು. (ದೇವೀಸಂಬಂಧ ವಾದ ಪದಾರ್ಥಗಳನ್ನು ಅಜ್ಞಾನದಿಂದಲಾದರೂ ಕಡೆಗಣಿಸಬಾರದೆಂದೂ, ಅಪವಿತ್ರ ಸ್ಥಳದಲ್ಲಿಡುವುದೇ ಮೊದಲಾದ ರೀತಿಯಿಂದ ದೂಷಿಸಬಾರದೆಂದೂ ಇದರಿಂದ ತಿಳಿಯಬೇಕು.) ||೩೬||

ರಾಜಂ ಸ್ತೇನಾಪರಾಧೇನ ತಜ್ಜನ್ಯೋ ದೇಹ ಏವ ಚ ।
ಸತ್ಯಾ ಯೋಗಾಗ್ನಿನಾ ದಗ್ಧೋ ಸತೀಧರ್ಮ ದಿದೃಕ್ಷಯಾ ॥೩೭॥

ಪುನಶ್ಚ ಹಿಮವತ್ಪೃಷ್ಠೇ ಪ್ರಾದುರಾಸೀತ್ತು ತನ್ಮಹಃ ।

॥ ಜನಮೇಜಯ ಉವಾಚ ॥

ದಹ್ಯಮಾನೇ ಸತೀ ದೇಹೇ ಜಾತೇ ಕಿಮಕರೋಚ್ಛಿವಃ ॥೩೮॥

ಪ್ರಾಣಾಧಿಕಾ ಸತೀ ತಸ್ಯ ತದ್ವಿಯೋಗೇನ ಕಾತರಃ ।

॥ ವ್ಯಾಸ ಉವಾಚ ॥

ತತಃ ಪರಂ ತು ಯಜ್ಜಾತಂ ಮಯಾ ವಕ್ತುಂ ನ ಶಕ್ಯತೇ ॥೩೯॥

ತ್ರೈಲೋಕ್ಯಪ್ರಲಯೋ ಜಾತಃ ಶಿವಕೋಪಾಗ್ನಿನಾ ನೃಪ ।
ವೀರಭದ್ರಃ ಸಮುತ್ಪನ್ನೋ ಭದ್ರಕಾಲೀ ಗಣಾನ್ವಿತಃ ॥೪೦॥

---

ಈ ಬಗೆಯ ಶಿವದ್ವೇಷರೂಪವಾದ ತಪ್ಪಿನಿಂದ ಕೂಡಿದ ದಕ್ಷನಿಂದ ಜನಿಸಿದ್ದ ಶರೀರವನ್ನು ಸತೀದೇವಿಯು, ಪತಿನಿಂದೆಯನ್ನು ಕೇಳಿದ ಪತಿವ್ರತೆಯರು ಇಂಥ ವ್ರತವನ್ನೇ ಮಾಡಬೇಕೆಂದು ಲೋಕಕ್ಕೆ ತೋರಿಸುವುದಕ್ಕಾಗಿ, ಯೋಗಾಗ್ನಿಯಿಂದ ಕೂಡಿ ಯಾಗಾಗ್ನಿಯಲ್ಲಿ ಸುಟ್ಟಳು. ॥೩೭॥

ಮತ್ತೆ ಆ ಸತೀದೇವಿಯು ತೇಜಸ್ಸು ಹಿಮವತ್ಪರ್ವತದಲ್ಲಿ ಹಿಮವಂತನ ಮಗಳಾಗಿ ಅವತಾರ ಮಾಡಿತು.

ಜನಮೇಜಯನು ಹೇಳಿದನು---ಪ್ರಾಣಕ್ಕಿಂತಲೂ ವಿಶೇಷಪ್ರೀತಿಗೆ ಪಾತ್ರಳಾದ ಆ ಸತೀದೇವಿಯು ಶರೀರವು ಸುಟ್ಟುಹೋಗುತ್ತಿರಲು, ಆ ದೇವಿಯ ಅಗಲಿಕೆಯಿಂದ ದುಃಖವನ್ನು ಹೊಂದಿದ ಶಿವನು ಏನನ್ನು ಮಾಡಿದನೆಂದು ಜನಮೇಜಯನು ಪ್ರಶ್ನೆಮಾಡಿದನು. ॥೩೮॥

ವ್ಯಾಸಮುನಿಯು ಹೇಳಿದನು—ಆ ಮೇಲೆ ನಡೆದ ಕಾರ್ಯವನ್ನು ವರ್ಣಿಸಲು ನನಗೆ ಶಕ್ತಿಯಿಲ್ಲ. ಎಲೈ ರಾಜನೇ, ಶಿವನ ಕೋಪವೆಂಬ ಬೆಂಕಿಯಿಂದ ಮೂರು ಲೋಕವೂ ನಾಶವಾಯಿತು. ಭದ್ರಕಾಳಿಯಿಂದಲೂ, ಶಿವಗಣಗಳಿಂದಲೂ ಕೂಡಿದ ವೀರಭದ್ರನು ಹುಟ್ಟಿದನು. ॥೩೯-೪೦॥

ತ್ರೈಲೋಕ್ಯ ನಾಶನೋದ್ಯುಕ್ತೋ ವೀರಭದ್ರೋ ಯದಾಽಭವತ್ ।
ಬ್ರಹ್ಮಾದಯಸ್ತದಾ ದೇವಾಃ ಶಂಕರಂ ಶರಣಂ ಯಯುಃ ॥೪೧॥

ಜಾತೇ ಸರ್ವಸ್ವ ನಾಶೇಽಪಿ ಕರುಣಾನಿಧಿರೀಶ್ವರಃ ।
ಅಭಯಂ ದತ್ತವಾಂಸ್ತೇಭ್ಯೋ ಬಸ್ತವಕ್ತ್ರೇಣ ತಂ ಮನುಂ ॥೪೨॥

ಅಜೀವಯನ್ಮಹಾತ್ಮಾಽಸೌ ತತಃ ಖಿನ್ನೋ ಮಹೇಶ್ವರಃ ।
ಯಜ್ಞವಾಟ ಮುಪಾಗಮ್ಯ ರುರೋದ ಭೃಶದುಃಖಿತಃ ॥೪೩॥

ಅಪಶ್ಯತ್ತಾಂ ಸತೀಂ ವಹ್ನೌ ದಹ್ಯಮಾನಾಂ ತು ಚಿತ್ಕಲಾಂ ।
ಸ್ಕಂಧೇಽಪ್ಯಾರೋಪಯಾಮಾಸ ಹಾ ಸತೀತಿ ವದನ್ಮುಹುಃ ॥೪೪॥

ಬಭ್ರಾಮ ಭ್ರಾಂತಚಿತ್ತಸ್ಸನ್ನಾನಾದೇಶೇಷು ಶಂಕರಃ ।
ತದಾ ಬ್ರಹ್ಮಾದಯೋ ದೇವಾಶ್ಚಿಂತಾ ಮಾಪುರನುತ್ತಮಾಂ ॥೪೫॥

---

ಹೀಗೆ ಅವತರಿಸಿದ ವೀರಭದ್ರನು ಮೂರು ಲೋಕವನ್ನೂ ನಾಶಮಾಡಲು ಪ್ರಾರಂಭಿಸಿದಾಗ ಬ್ರಹ್ಮಾದಿದೇವತೆಗಳು ಸುಖಕರನಾದ ಈಶ್ವರನನ್ನು ಶರಣು ಹೊಂದಿದರು. ॥೪೧॥

ತನ್ನ ಸರ್ವಸ್ವವೂ ಆದ ಶಕ್ತಿರೂಪಳಾದ ಸತೀದೇವಿಯ ದೇಹವು ನಾಶವಾದರೂ, ಈಶ್ವರನು ಮಹಾತ್ಮನೂ, ದಯಾನಿಧಿಯೂ ಆದುದರಿಂದ ಆ ಬ್ರಹ್ಮಾದಿ ದೇವತೆಗಳಿಗೆ ಅಭಯವನ್ನು ಕೊಟ್ಟು ಆಡಿನ ತಲೆಯಿಂದ ಆ ದಕ್ಷಬ್ರಹ್ಮನನ್ನು ಪುನಃ ಬದುಕಿಸಿದನು. ಆಮೇಲೆ ಈಶ್ವರನು ಸತೀವಿಯೋಗದಿಂದ ದುಃಖವನ್ನು ಹೊಂದಿ ಆ ದಕ್ಷನು ಯಜ್ಞಮಾಡಿದ ಯಾಗಶಾಲೆಯ ಸ್ಥಳಕ್ಕೆ ಬಂದು ದುಃಖದ ಆವೇಗವನ್ನು ತಗ್ಗಿಸಿಕೊಳ್ಳಲು ಬಹಳವಾಗಿ ಅತ್ತನು. ॥೪೨-೪೩॥

ಮತ್ತು ಜ್ಞಾನಕಳಾರೂಪಳಾದ ಆ ಸತಿಯ ಶರೀರವು ಅಗ್ನಿಯಲ್ಲಿ ಸುಡುತ್ತಿರುವುದನ್ನು ನೋಡಿ ಬಾರಿಬಾರಿಗೂ, ಅಯ್ಯೋ, ಸತೀದೇವಿಯೇ, ಎಂದು ಹೇಳುತ್ತಾ ಆ ಶರೀರವನ್ನು ತನ್ನ ಹೆಗಲ ಮೇಲೆ ಇಟ್ಟುಕೊಂಡನು. ॥೪೪॥

ಹೀಗೆ ಶಿವನು ದುಃಖಭಾರದಿಂದ ಬುದ್ಧಿಭ್ರಮೆಯನ್ನು ಹೊಂದಿ ಸತಿಯ ಶರೀರವನ್ನು ಹೆಗಲಮೇಲಿಟ್ಟುಕೊಂಡೇ ನಾನಾ ದೇಶಗಳಲ್ಲಿ ತಿರುಗುತ್ತಿದ್ದನು. ಆಗ ಬ್ರಹ್ಮಾದಿ ದೇವತೆಗಳು ಅತಿಯಾದ ದುಃಖಕ್ಕೊಳಗಾದರು. ॥೪೫॥

ವಿಷ್ಣುಸ್ತು ತ್ವರಯಾ ತತ್ರ ಧನುರುದ್ಯಮ್ಯ ಮಾರ್ಗಣೈಃ ।
ಚಿಚ್ಛೇದಾವಯವಾನ್ಸತ್ಯಾಸ್ತತ್ತತ್ಸ್ಥಾನೇಷು ತೇಽಪತನ್ ॥೪೬॥

ತತ್ತತ್ಸ್ಥಾನೇಷು ತತ್ರಾಸೀನ್ನಾನಾ ಮೂರ್ತಿಧರೋ ಹರಃ ।
ಉವಾಚ ಚ ತತೋ ದೇವಾನ್ಸ್ಥಾನೇಷ್ವೇತೇಷು ಯೇ ಶಿವಾಂ ॥೪೭॥

ಭಜಂತಿ ಪರಯಾ ಭಕ್ತ್ಯಾ ತೇಷಾಂ ಕಿಂಚಿನ್ನ ದುರ್ಲಭಂ ।
ನಿತ್ಯಂ ಸನ್ನಿಹಿತಾ ಯತ್ರ ನಿಜಾಂಗೇಷು ಪರಾಂಬಿಕಾ ॥೪೮॥

ಸ್ಥಾನೇಷ್ವೇತೇಷು ಯೇ ಮರ್ತ್ಯಾಃ ಪುರಶ್ಚರಣ ಕರ್ಮಿಣಃ ॥
ತೇಷಾಂ ಮಂತ್ರಾಃ ಪ್ರಸಿಧ್ಯಂತಿ ಮಾಯಾಬೀಜಂ ವಿಶೇಷತಃ ॥೪೯॥

---

ಆ ಸಂದರ್ಭದಲ್ಲಿ ವಿಷ್ಣುವು ಆತುರದಿಂದ ಧನುಸ್ಸನ್ನು ತೆಗೆದುಕೊಂಡು ಬಾಣಗಳನ್ನು ಪ್ರಯೋಗಿಸಿ, ಆ ಶಿವನ ಹೆಗಲಮೇಲಿದ್ದ ಸತಿಯ ಶರೀರವನ್ನು ಕತ್ತರಿಸಲು ಆ ಅವಯವಗಳು ನಾನಾವಿಧವಾದ ಸ್ಥಳಗಳಲ್ಲಿ ಬಿದ್ದುವು. ॥೪೬॥

ಆ ಸತಿಯ ಅವಯವಗಳು ಬಿದ್ದೆಡೆಗಳಲ್ಲಿ ಶಿವನೂ ಬಗೆಬಗೆಯ ಮೂರ್ತಿಯ ರೂಪದಿಂದ ನೆಲಸಿದನು. ಅವೇ ಪವಿತ್ರಗಳಾದ ಶಿವಶಕ್ತಿಯ ಕ್ಷೇತ್ರಗಳಾದುವು.

ಆ ಮೇಲೆ ದೇವತೆಗಳನ್ನು ಕುರಿತು " ಈ ಸ್ಥಳಗಳಲ್ಲಿ ಯಾರು ಸಂಪೂರ್ಣವಾದ ಭಕ್ತಿಯಿಂದ ದೇವಿಯನ್ನು ಸೇವಿಸುತ್ತಾರೆಯೋ, ಅವರಿಗೆ ದೊರೆಯದ ಇತರ ತಕ್ಕ ಪ್ರಯೋಜನವು ಯಾವುದೂ ಇರುವುದಿಲ್ಲ. (ಎಂದರೆ, ಶಿವಶಕ್ತಿಯು ನೆಲಸಿದ ಸ್ಥಳಗಳಲ್ಲಿ ದೇವಿಯ ಜಪಾದಿಗಳನ್ನು ಮಾಡಿದರೆ ಅವರಿಗೆ ಸಕಲ ಇಷ್ಟಾರ್ಥಗಳೂ ದೊರೆಯುವುವೆಂದು ಅಭಿಪ್ರಾಯವು.) ಎಂದು ಅನುಗ್ರಹವನ್ನು ಮಾಡಿ ಶಿವನು ಹೇಳಿದನು. ॥೪೭॥

ಹೀಗೆ ಆ ಕ್ಷೇತ್ರಗಳಲ್ಲಿ ನೆಲಸಿದ ಬೇರೆ ಬೇರೆ ಮೂರ್ತಿರೂಪವಾದ ಸತೀದೇವಿಯ ಅವಯವಗಳಲ್ಲಿ ಪರಾಶಕ್ತಿದೇವಿಯು ಯಾವಾಗಲೂ ಸನ್ನಿಹಿತಳಾಗಿ ಇರುವುದರಿಂದ, ಈ ಪ್ರದೇಶಗಳಲ್ಲಿ ಯಾವ ಮನುಜರು ಮಂತ್ರ ಜಪಗಳನ್ನು ಮಾಡುವರೋ ಅವರಿಗೆ ಮಂತ್ರಸಿದ್ಧಿಯು ಜಾಗ್ರತೆಯಾಗಿ ಉಂಟಾಗುವುದು. ಅದರಲ್ಲಿಯೂ ಮಾಯಾಬೀಜವಾದ ಹ್ರೀಂಕಾರ ಮಂತ್ರದ ಜಪವು ವಿಶೇಷ ಫಲದಾಯಕವಾಗುವುದು. ॥೪೮-೪೯॥

ಇತ್ಯುಕ್ತ್ವಾ ಶಂಕರಸ್ತೇಷು ಸ್ಥಾನೇಷು ವಿರಹಾತುರಃ ।
ಕಾಲಂ ನಿನ್ಯೇ ನೃಪಶ್ರೇಷ್ಠ ಜಪಧ್ಯಾನ ಸಮಾಧಿಭಿಃ ॥೫೦॥

॥ ಜನಮೇಜಯ ಉವಾಚ ॥

ಕಾನಿ ಸ್ಥಾನಾನಿ ತಾನಿ ಸ್ಯುಃ ಸಿದ್ಧಪೀಠಾನಿ ಚಾನಘ ।
ಕತಿ ಸಂಖ್ಯಾನಿ ನಾಮಾನಿ ಕಾನಿ ತೇಷಾಂ ಚ ಮೇ ವದ ॥೫೧॥

ತತ್ರ ಸ್ಥಿತಾನಾಂ ದೇವೀನಾಂ ನಾಮಾನಿ ಚ ಕೃಪಾಕರ ।
ಕೃತಾರ್ಥೋಽಹಂ ಭವೇ ಯೇನ ತದ್ವದಾಶು ಮಹಾಮುನೇ ॥೫೨॥

॥ ವ್ಯಾಸ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ದೇವೀ ಪೀಠಾನಿ ಸಾಂಪ್ರತಂ ।
ಯೇಷಾಂ ಶ್ರವಣಮಾತ್ರೇಣ ಪಾಪಹೀನೋ ಭವೇನ್ನರಃ ॥೫೩॥

ಯೇಷು ಯೇಷು ಚ ಪೀಠೇಷೂಪಾಸ್ಯೇಯಂ ಸಿದ್ಧಿಕಾಂಕ್ಷಿಭಿಃ ।
ಭೂತಿ ಕಾಮ್ಯೈರಭಿಧ್ಯೇಯಾ ತಾನಿ ವಕ್ಷ್ಯಾಮಿ ತತ್ತ್ವತಃ ॥೫೪॥

---

ಹೀಗೆಂದು ಹೇಳಿ ಈಶ್ವರನು ಆ ಸ್ಥಳಗಳಲ್ಲಿ ಸತಿಯ ವಿರಹದಿಂದ ಉಂಟಾದ ದುಃಖದಿಂದ ಕೂಡಿದವನಾಗಿದ್ದರೂ, ಜಪ, ಧ್ಯಾನ, ಸಮಾಧಿ ಎಂಬ ಯೋಗಾಂಗಗಳನ್ನು ಆಚರಿಸುತ್ತಾ ಕಾಲವನ್ನು ಕಳೆಯುತ್ತಿದ್ದನು. ॥೫೦॥

ಜನಮೇಜಯನು ಹೇಳಿದನು—ಪಾಪರಹಿತನಾದ ಓ ವ್ಯಾಸಮುನಿಯೇ, ಸಿದ್ಧಪೀಠಗಳಾದ ಆ ಸ್ಥಳಗಳಾವುವು? ಅಂತಹವು ಎಷ್ಟು ಸ್ಥಳಗಳಿರುವುವು? ಅವುಗಳ ಹೆಸರುಗಳನ್ನು ನನಗೆ ಹೇಳು. ॥೫೧॥

ದಯಾಶಾಲಿಯಾದ ಓ ಮಹಾಮುನಿಯೇ, ಆ ಸ್ಥಳಗಳಲ್ಲಿದಲ್ಲಿರುವ ದೇವಿಯರ ಹೆಸರುಗಳನ್ನೂ ಬೇಗನೆ ಹೇಳು. ಅದರಿಂದ ನಾನು ಧನ್ಯನಾಗುತ್ತೇನೆ. ಎಂದನು.

ವ್ಯಾಸನು ಹೇಳಿದನು—ಎಲೈ ರಾಜನೇ, ಕೇಳು, ಈಗ ದೇವಿಯ ಪೀಠಸ್ಥಾನಗಳನ್ನು ಹೇಳುವೆನು. ಇವುಗಳನ್ನು ಕೇಳಿದ ಮಾತ್ರದಿಂದ ಮನುಷ್ಯನು ಪಾಪಗಳನ್ನು ಕಳೆದುಕೊಳ್ಳುವನು. ॥೫೩॥

ಮಂತ್ರಸಿದ್ಧಿಯನ್ನಪೇಕ್ಷಿಸುವವರೂ, ಸಂಪತ್ತನ್ನಪೇಕ್ಷಿಸುವವರೂ ಯಾವ ಯಾವ ಪೀಠಗಳಲ್ಲಿ ಉಪಾಸನೆಯನ್ನೂ, ಧ್ಯಾನಾದಿಗಳನ್ನೂ ಮಾಡಬೇಕೋ ಅವುಗಳನ್ನು ನಿಜವಾದ ರೀತಿಯಲ್ಲಿ ವಿವರಿಸುವೆನು. ॥೫೪॥

ವಾರಾಣಸ್ಯಾಂ ವಿಶಾಲಾಕ್ಷೀ ಗೌರೀಮುಖ ನಿವಾಸಿನೀ ।
ಕ್ಷೇತ್ರೇ ವೈ ನೈಮಿಶಾರಣ್ಯೇ ಪ್ರೋಕ್ತಾ ಸಾ ಲಿಂಗಧಾರಿಣೀ ॥೫೫॥

ಪ್ರಯಾಗೇ ಲಲಿತಾ ಪ್ರೋಕ್ತಾ ಕಾಮುಕೀ ಗಂಧಮಾದನೇ ।
ಮಾನಸೇ ಕುಮುದಾ ಪ್ರೋಕ್ತಾ ದಕ್ಷಿಣೇಚೋತ್ತರೇ ತಥಾ ॥೫೬॥

ವಿಶ್ವಕಾಮಾ ಭಗವತೀ ವಿಶ್ವಕಾಮಪ್ರಪೂರಿಣೀ ।
ಗೋಮಂತೇ ಗೋಮತೀದೇವೀ ಮಂದರೇ ಕಾಮಚಾರಿಣೀ ॥೫೭॥

ಮದೋತ್ಕಟಾ ಚೈತ್ರರಥೇ ಜಯಂತೀ ಹಸ್ತಿನಾಪುರೇ ।
ಗೌರೀ ಪ್ರೋಕ್ತಾ ಕಾನ್ಯಕುಬ್ಜೇ ರಂಭಾ ತು ಮಲಯಾಚಲೇ ॥೫೮॥

ಏಕಾಮ್ರಪೀಠೇ ಸಂಪ್ರೋಕ್ತಾ ದೇವೀ ಸಾ ಕೀರ್ತಿಮತ್ಯಪಿ ।
ವಿಶ್ವೇ ವಿಶ್ವೇಶ್ವರೀಂ ಪ್ರಾಹುಃ ಪುರುಹೂತಾಂ ಚ ಪುಷ್ಕರೇ ॥೫೯॥

---

ಗೌರೀದೇವಿಯ ಅಂದರೆ ಸತೀದೇವಿಯ ಮುಖವು ವಾರಾಣಸಿಯಲ್ಲಿ ಬಿದ್ದುದರಿಂದ, ಆ ಕಾಶೀಕ್ಷೇತ್ರವು ಮುಖರೂಪವಾದ ಭಗವತಿಯ ಮುಖ್ಯವಾದ ಪೀಠವಾಯಿತು. ಅಲ್ಲಿ ನೆಲಸಿದ ದೇವಿಗೆ ವಿಶಾಲಾಕ್ಷಿ ಎಂದು ಹೆಸರು. ನೈಮಿಶಾರಣ್ಯವೆಂಬ ಕ್ಷೇತ್ರದಲ್ಲಿರುವ ದೇವಿಗೆ ಲಿಂಗಧಾರಿಣೀ ಎಂದು ಹೆಸರು. ॥೫೫॥

ಪ್ರಯಾಗದಲ್ಲಿ ಲಲಿತೇ, ಗಂಧಮಾದನಪರ್ವತದಲ್ಲಿ ಕಾಮುಕೀ, ದಕ್ಷಿಣ ಮಾನಸ ಸರೋವರದಲ್ಲಿ ಕುಮುದೇ, ಉತ್ತರಮಾನಸ ಸರೋವರದಲ್ಲಿ ಲೋಕದ ಜನರ ಇಷ್ಟಾರ್ಥಗಳನ್ನು ಕೊಡುವ ವಿಶ್ವಕಾಮಾದೇವೀ, ॥೫೬॥

ಗೋಮಂತಪರ್ವತದಲ್ಲಿ ಗೋಮತೀದೇವೀ, ಮಂದರಪರ್ವತದಲ್ಲಿ ಕಾಮಚಾರಿಣೀ, ಚೈತ್ರರಥವೆಂಬ ವನದಲ್ಲಿ ಮದೋತ್ಕಟಾದೇವೀ, ಹಸ್ತಿನಾಪುರದಲ್ಲಿ ಜಯಂತೀದೇವೀ, ಕಾನ್ಯಕುಬ್ಜವೆಂಬ ಪಟ್ಟಣದಲ್ಲಿ ಗೌರೀದೇವೀ, ಮಲಯಪರ್ವತದಲ್ಲಿ ರಂಭಾದೇವೀ, ॥೫೭-೫೮॥

ಏಕಾಮ್ರಪೀಠದಲ್ಲಿ ಕೀರ್ತಿಮತೀದೇವೀ, ವಿಶ್ವವೆಂಬ ಕ್ಷೇತ್ರದಲ್ಲಿ ವಿಶ್ವೇಶ್ವರೀದೇವೀ, ಪುಷ್ಕರಕ್ಷೇತ್ರದಲ್ಲಿ ಪುರುಹೂತಾದೇವೀ, ॥೫೯॥

ಕೇದಾರಪೀಠೇ ಸಂಪ್ರೋಕ್ತಾ ದೇವೀ ಸನ್ಮಾರ್ಗದಾಯಿನೀ ।
ಮಂದಾ ಹಿಮವತಃ ಪೃಷ್ಠೇ ಗೋಕರ್ಣೇ ಭದ್ರಕರ್ಣಿಕಾ ॥೬೦॥

ಸ್ಥಾನೇಶ್ವರೀ ಭವಾನೀ ತು ಬಿಲ್ವಕೇ ಬಿಲ್ವಪತ್ರಿಕಾ ।
ಶ್ರೀಶೈಲೇ ಮಾಧವೀ ಪ್ರೋಕ್ತಾ ಭದ್ರಾ ಭದ್ರೇಶ್ವರೇ ತಥಾ ॥೬೧॥

ವರಾಹಶೈಲೇ ತು ಜಯಾ ಕಮಲಾ ಕಮಲಾಲಯೇ ।
ರುದ್ರಾಣೀ ರುದ್ರಕೋಟ್ಯಾಂ ತು ಕಾಲೀ ಕಾಲಂಜರೇ ತಥಾ ॥೬೨॥

ಶಾಲಗ್ರಾಮೇ ಮಹಾದೇವೀ ಶಿವಲಿಂಗೇ ಜಲಪ್ರಿಯಾ ।
ಮಹಾಲಿಂಗೇ ತು ಕಪಿಲಾ ಮಾಕೋಟೇ ಮುಕುಟೇಶ್ವರೀ ॥೬೩॥

ಮಾಯಾಪುರ್ಯಾಂ ಕುಮಾರೀ ಸ್ಯಾತ್ಸಂತಾನೇ ಲಲಿತಾಂಬಿಕಾ ।
ಗಯಾಯಾಂ ಮಂಗಳಾ ಪ್ರೋಕ್ತಾ ವಿಮಲಾ ಪುರುಷೋತ್ತಮೇ॥೬೪॥

---

ಕೇದಾರಪೀಠದಲ್ಲಿ ಸನ್ಮಾರ್ಗದಾಯಿನೀದೇವೀ, ಹಿಮವತ್ಪರ್ವತದ ತಪ್ಪಲಿನಲ್ಲಿ ಮಂದಾದೇವೀ, ಗೋಕರ್ಣಕ್ಷೇತ್ರದಲ್ಲಿ ಭದ್ರಕರ್ಣಿಕಾದೇವೀ, ॥೬೦॥

ಸ್ಥಾನೇಶ್ವರವೆಂಬಕ್ಷೇತ್ರದಲ್ಲಿ ಭವಾನೀದೇವೀ, ಬಿಲ್ವಕ್ಷೇತ್ರದಲ್ಲಿ ಬಿಲ್ವಪತ್ರಿಕಾದೇವೀ, ಶ್ರೀಶೈಲಪರ್ವತದಲ್ಲಿ ಮಾಧವೀದೇವೀ, ಭದ್ರೇಶ್ವರಕ್ಷೇತ್ರದಲ್ಲಿ ಭದ್ರಾದೇವೀ, ॥೬೧॥

ವರಹಪರ್ವತದಲ್ಲಿ ಜಯಾದೇವೀ, ಕಮಲಾಲಯವೆಂಬ ಕ್ಷೇತ್ರದಲ್ಲಿ ಕಮಲಾದೇವೀ, ರುದ್ರಕೋಟಿ ಎಂಬ ಕ್ಷೇತ್ರದಲ್ಲಿ ರುದ್ರಾಣೀ, ಕಾಲಂಜರ ಕ್ಷೇತ್ರದಲ್ಲಿ ಕಾಲಿಕಾದೇವೀ, ॥೬೨॥

ಶಾಲಗ್ರಾಮವೆಂಬ ಕ್ಷೇತ್ರದಲ್ಲಿ ಮಹಾದೇವೀ, ಶಿವಲಿಂಗ ಕ್ಷೇತ್ರದಲ್ಲಿ ಜಲಪ್ರಿಯಾದೇವೀ, ಮಹಾಲಿಂಗ ಕ್ಷೇತ್ರದಲ್ಲಿ ಕಪಿಲಾದೇವೀ, ಮಾಕೋಟ ಕ್ಷೇತ್ರದಲ್ಲಿ ಮುಕುಟೇಶ್ವರೀದೇವೀ, ॥೬೩॥

ಮಾಯಾಪುರಿಯಲ್ಲಿ ಕುಮಾರೀದೇವೀ, ಸಂತಾನ ಕ್ಷೇತ್ರದಲ್ಲಿ ಲಲಿತಾಂಬಾ, ಗಯಾಕ್ಷೇತ್ರದಲ್ಲಿ ಮಂಗಳಾದೇವೀ, ಪುರುಷೋತ್ತಮಕ್ಷೇತ್ರದಲ್ಲಿ ವಿಮಲಾದೇವೀ, ॥೬೪॥

**ಉತ್ಪಲಾಕ್ಷೀ ಸಹಸ್ರಾಕ್ಷೇ ಹಿರಣ್ಯಾಕ್ಷೇ ಮಹೋತ್ಪಲಾ ।**
**ವಿಪಾಶಾಯಾ ಮನೋಘಾಕ್ಷೀ ಪಾಟಲಾ ಪುಂಡ್ರವರ್ಧನೇ ॥೬೫॥**

**ನಾರಾಯಣೀ ಸುಪಾರ್ಶ್ವೇ ತು ತ್ರಿಕೂಟೇ ರುದ್ರಸುಂದರೀ ।**
**ವಿಪುಲೇ ವಿಪುಲಾದೇವೀ ಕಲ್ಯಾಣೀ ಮಲಯಾಚಲೇ ॥೬೬॥**

**ಸಹ್ಯಾದ್ರಾವೇಕವೀರಾ ತು ಹರಿಶ್ಚಂದ್ರೇ ತು ಚಂದ್ರಿಕಾ ।**
**ರಮಣಾ ರಾಮ ತೀರ್ಥೇತು ಯಮುನಾಯಾಂ ಮೃಗಾವತೀ ॥೬೭॥**

**ಕೋಟವೀ ಕೋಟ ತೀರ್ಥೇ ತು ಸುಗಂಧಾ ಮಾಧವೇ ವನೇ ।**
**ಗೋದಾವರ್ಯಾಂ ತ್ರಿಸಂಧ್ಯಾ ತು ಗಂಗಾದ್ವಾರೇ ರತಿಪ್ರಿಯಾ ॥೬೮॥**

**ಶಿವಕುಂಡೇ ಶುಭಾನಂದಾ ನಂದಿನೀ ದೇವಿಕಾತಟೇ ।**
**ರುಕ್ಮಿಣೀ ದ್ವಾರವತ್ಯಾಂ ತು ರಾಧಾ ವೃಂದಾವನೇ ವನೇ ॥೬೯॥**

---

ಸಹಸ್ರಾಕ್ಷವೆಂಬಕ್ಷೇತ್ರದಲ್ಲಿ ಉತ್ಪಲಾಕ್ಷೀ, ಹಿರಣ್ಯಾಕ್ಷಕ್ಷೇತ್ರದಲ್ಲಿ ಮಹೋತ್ಪಲಾದೇವೀ, ವಿಪಾಶಾಕ್ಷೇತ್ರದಲ್ಲಿ ಅಮೋಘಾಕ್ಷೀದೇವೀ, ಪುಂಡ್ರವರ್ಧನ ಕ್ಷೇತ್ರದಲ್ಲಿ ಪಾಟಲಾದೇವೀ, ॥೬೫॥

ಸುಪಾರ್ಶ್ವ ಕ್ಷೇತ್ರದಲ್ಲಿ ನಾರಾಯಣೀ, ತ್ರಿಕೂಟ ಪರ್ವತದಲ್ಲಿರುದ್ರಸುಂದರೀ, ವಿಪುಲಕ್ಷೇತ್ರದಲ್ಲಿ ವಿಪುಲಾದೇವೀ, ಮಲಯಪರ್ವತದಲ್ಲಿ ಕಲ್ಯಾಣೀದೇವೀ, ॥೬೬॥

ಸಹ್ಯಪರ್ವತದಲ್ಲಿ ಏಕವೀರಾದೇವೀ, ಹರಿಶ್ಚಂದ್ರಕ್ಷೇತ್ರದಲ್ಲಿ ಚಂದ್ರಿಕಾದೇವೀ, ರಾಮತೀರ್ಥದಲ್ಲಿ ರಮಣಾದೇವೀ, ಯಮುನಾ ನದಿಯ ದಡದಲ್ಲಿ ಮೃಗಾವತೀದೇವೀ, ॥೬೭॥

ಕೋಟವೆಂಬ ತೀರ್ಥದಲ್ಲಿ ಕೋಟವೀದೇವಿಯೂ, ಮಾಧವವೆಂಬ ವನದಲ್ಲಿ ಸುಗಂಧಾದೇವಿಯೂ, ಗೋದಾವರೀ ನದಿಯ ದಡದಲ್ಲಿ ತ್ರಿಸಂಧ್ಯಾದೇವಿಯೂ, ಗಂಗಾದ್ವಾರವೆಂಬ ಕ್ಷೇತ್ರದಲ್ಲಿ ರತಿಪ್ರಿಯಾದೇವಿಯೂ, ॥೬೮॥

ಶಿವಕುಂಡವೆಂಬ ಕ್ಷೇತ್ರದಲ್ಲಿ ಶುಭಾನಂದಾದೇವಿಯೂ, ದೇವಿಕಾನದಿಯ (ಸರಯೂ) ದಡದಲ್ಲಿ ನಂದಿನೀದೇವಿಯೂ, ದ್ವಾರವತೀಪಟ್ಟಣದಲ್ಲಿ ರುಕ್ಮಿಣೀ ದೇವಿಯೂ, ವೃಂದಾವನವೆಂಬ ವನದಲ್ಲಿ ರಾಧಾದೇವಿಯೂ, ॥೬೯॥

**ದೇವಕೀ ಮಥುರಾಯಾಂ ತು ಪಾತಾಳೇ ಪರಮೇಶ್ವರೀ ।**
**ಚಿತ್ರಕೂಟೇ ತಥಾ ಸೀತಾ ವಿಂಧ್ಯೇ ವಿಂಧ್ಯಾಧಿವಾಸಿನೀ ॥೭೦॥**

**ಕರವೀರೇ ಮಹಾಲಕ್ಷ್ಮೀರುಮಾದೇವೀ ವಿನಾಯಕೇ ।**
**ಆರೋಗ್ಯಾ ವೈದ್ಯನಾಥೇ ತು ಮಹಾಕಾಲೇ ಮಹೇಶ್ವರೀ ॥೭೧॥**

**ಅಭಯೇತ್ಯುಷ್ಣತೀರ್ಥೇಷು ನಿತಂಬಾ ವಿಂಧ್ಯಪರ್ವತೇ ।**
**ಮಾಂಡವ್ಯೇ ಮಾಂಡವೀನಾಮ ಸ್ವಾಹಾ ಮಾಹೇಶ್ವರೀ ಪುರೇ ॥೭೨॥**

**ಛಗಲಂಡೇ ಪ್ರಚಂಡಾ ತು ಚಂಡಿಕಾಽಮರಕಂಟಕೇ ।**
**ಸೋಮೇಶ್ವರೇ ವರಾರೋಹಾ ಪ್ರಭಾಸೇ ಪುಷ್ಕರಾವತೀ ॥೭೩॥**

**ದೇವಮಾತಾ ಸರಸ್ವತ್ಯಾಂ ಪಾರಾವಾರಾ ತಟೇ ಸ್ಮೃತಾ ।**
**ಮಹಾಲಯೇ ಮಹಾಭಾಗಾ ಪಯೋಷ್ಣ್ಯಾಂ ಪಿಂಗಳೇಶ್ವರೀ ॥೭೪॥**

---

ಮಥುರಾಪಟ್ಟಣದಲ್ಲಿ ದೇವಕೀದೇವಿಯೂ, ಪಾತಾಲಕ್ಷೇತ್ರದಲ್ಲಿ ಪರಮೇಶ್ವರೀದೇವಿಯೂ ಚಿತ್ರಕೂಟಪರ್ವತದಲ್ಲಿ ಸೀತಾದೇವಿಯೂ, ವಿಂಧ್ಯಪರ್ವತದಲ್ಲಿ ವಿಂಧ್ಯವಾಸಿನೀದೇವಿಯೂ, ॥೭೦॥

ಕರವೀರಪುರ (ಕೊಲ್ಲಾಪುರ)ದಲ್ಲಿ ಮಹಾಲಕ್ಷ್ಮೀದೇವಿಯೂ, ವಿನಾಯಕವೆಂಬ ಕ್ಷೇತ್ರದಲ್ಲಿ ರು(ಉ)ಮಾದೇವಿಯೂ, ವೈದ್ಯನಾಥಕ್ಷೇತ್ರದಲ್ಲಿ ಆರೋಗ್ಯಾದೇವಿಯೂ, ಮಹಾಕಾಲವೆಂಬ ಕ್ಷೇತ್ರದಲ್ಲಿ ಮಹೇಶ್ವರೀದೇವಿಯೂ, ॥೭೧॥

ಉಷ್ಣತೀರ್ಥಕ್ಷೇತ್ರದಲ್ಲಿ ಅಭಯಾದೇವಿಯೂ, ವಿಂಧ್ಯಪರ್ವತದಲ್ಲಿ ನಿತಂಬಾದೇವಿಯೂ, ಮಾಂಡವ್ಯಕ್ಷೇತ್ರದಲ್ಲಿ ಮಾಂಡವೀದೇವಿಯೂ, ಮಾಹೇಶ್ವರಪುರದಲ್ಲಿ ಸ್ವಾಹಾದೇವಿಯೂ, ॥೭೨॥

ಛಗಲಂಡವೆಂಬ ಕ್ಷೇತ್ರದಲ್ಲಿ ಪ್ರಚಂಡಾದೇವಿಯೂ, ಅಮರಕಂಟಕಕ್ಷೇತ್ರದಲ್ಲಿ ಚಂಡಿಕಾದೇವಿಯೂ, ಸೋಮೇಶ್ವರಕ್ಷೇತ್ರದಲ್ಲಿ ವರಾರೋಹಾದೇವಿಯೂ, ಪ್ರಭಾಸಕ್ಷೇತ್ರದಲ್ಲಿ ಪುಷ್ಕರಾವತೀದೇವಿಯೂ, ॥೭೩॥

ಸರಸ್ವತೀನದಿಯ ತೀರದಲ್ಲಿ ದೇವಮಾತಾದೇವಿಯೂ, ಸಮುದ್ರತೀರದಲ್ಲಿ ಪಾರಾವಾರಾದೇವಿಯೂ, ಮಹಾಲಯಕ್ಷೇತ್ರದಲ್ಲಿ ಮಹಾಭಾಗಾದೇವಿಯೂ ಪಯೋಷ್ಣೀನದಿಯ ದಡದಲ್ಲಿ ಪಿಂಗಳೇಶ್ವರೀ ದೇವಿಯೂ, ॥೭೪॥

ಸಿಂಹಿಕಾ ಕೃತಶೌಚೇ ತು ಕಾರ್ತಿಕೇ ತ್ವತಿಶಾಂಕರೀ ।
ಉತ್ಪಲಾವರ್ತಕೇ ಲೋಲಾ ಸುಭದ್ರಾ ಶೋಣಸಂಗಮೇ ॥೭೫॥

ಮಾತಾ ಸಿದ್ಧವನೇ ಲಕ್ಷ್ಮೀರನಂಗಾ ಭರತಾಶ್ರಮೇ ।
ಜಾಲಂಧರೇ ವಿಶ್ವಮುಖೀ ತಾರಾ ಕಿಷ್ಕಿಂಧಪರ್ವತೇ ॥೭೬॥

ದೇವದಾರುವನೇ ಪುಷ್ಟಿರ್ಮೇಧಾ ಕಾಶ್ಮೀರ ಮಂಡಲೇ ।
ಭೀಮಾದೇವೀ ಹಿಮಾದ್ರೌತು ತುಷ್ಟಿರ್ವಿಶ್ವೇಶ್ವರೀ(ರೇ) ತಥಾ ॥೭೭॥

ಕಪಾಲ ಮೋಚನೇ ಶುದ್ಧಿರ್ಮಾತಾ ಕಾಯಾವರೋಹಣೇ ।
ಶಂಖೋದ್ಧಾರೇ ಧರಾನಾಮ ಧೃತಿಃ ಪಿಂಡಾರಕೇ ತಥಾ ॥೭೮॥

ಕಲಾ ತು ಚಂದ್ರಭಾಗಾಯಾಂ ಅಚ್ಛೋದೇ ಶಿವಧಾರಿಣೀ ।
ವೇಣಾಯಾ ಮಮೃತಾನಾಮ ಬದರ್ಯಾಮುರ್ವಶೀ ತಥಾ ॥೭೯॥

---

ಕೃತಶೌಚವೆಂಬ ಕ್ಷೇತ್ರದಲ್ಲಿ ಸಿಂಹಿಕಾದೇವಿಯೂ, ಕಾರ್ತಿಕಕ್ಷೇತ್ರದಲ್ಲಿ ಅತಿಶಾಂಕರೀದೇವಿಯೂ, ಉತ್ಪಲಾವರ್ತಕ್ಷೇತ್ರದಲ್ಲಿ ಲೋಲಾದೇವಿಯೂ, ಶೋಣಾ ನದಿಯ ಸಂಗಮದಲ್ಲಿ ಸುಭದ್ರಾದೇವಿಯೂ, ॥೭೫॥

ಸಿದ್ಧವನದಲ್ಲಿ ಮಾತಾದೇವಿಯೂ, ಭರತಾಶ್ರಮದಲ್ಲಿ ಅನಂಗಲಕ್ಷ್ಮೀ ದೇವಿಯೂ, ಜಲಂಧರಕ್ಷೇತ್ರದಲ್ಲಿ ವಿಶ್ವಮುಖೀದೇವಿಯೂ, ಕಿಷ್ಕಿಂಧಪರ್ವತದಲ್ಲಿ ತಾರಾದೇವಿಯೂ, ॥೭೬॥

ದೇವದಾರುವನದಲ್ಲಿ ಪುಷ್ಟಿದೇವಿಯೂ, ಕಾಶ್ಮೀರದೇಶದಲ್ಲಿ ಮೇಧಾ ದೇವಿಯೂ, ಹಿಮವತ್ಪರ್ವತದಲ್ಲಿ ಭೀಮಾದೇವಿಯೂ, ವಿಶ್ವೇಶ್ವರಕ್ಷೇತ್ರದಲ್ಲಿ ತುಷ್ಟಿದೇವಿಯೂ, ॥೭೭॥

ಕಪಾಲಮೋಚನಕ್ಷೇತ್ರದಲ್ಲಿ ಶುದ್ಧಿದೇವಿಯೂ, ಕಾಯಾವರೋಹಣಕ್ಷೇತ್ರ ದಲ್ಲಿ ಶುದ್ಧಿರೂಪಳಾದ ಮಾತೃದೇವಿಯೂ, ಶಂಖೋದ್ಧಾರಕ್ಷೇತ್ರದಲ್ಲಿ ಧರಾ ದೇವಿಯೂ, ಪಿಂಡಾರಕಕ್ಷೇತ್ರದಲ್ಲಿ ಧೃತಿದೇವಿಯೂ, ॥೭೮॥

ಚಂದ್ರಭಾಗಾ ನದಿಯ ದಡದಲ್ಲಿ ಕಲಾದೇವಿಯೂ, ಅಚ್ಛೋದವೆಂಬ ಸರೋವರದ ಸಮೀಪದಲ್ಲಿ ಶಿವಧಾರಿಣೀದೇವಿಯೂ, ವೇಣಾನದಿಯ ದಡದಲ್ಲಿ ಅಮೃತಾದೇವಿಯೂ, ಬದರೀವನದಲ್ಲಿ ಉರ್ವಶೀದೇವಿಯೂ, ॥೭೯॥

ಔಷಧಿಶ್ಚೋತ್ತರ ಕುರೌ ಕುಶದ್ವೀಪೇ ಕುಶೋದಕಾ ।
ಮನ್ಮಥಾ ಹೇಮಕೂಟೇ ತು ಕುಮುದೇ ಸತ್ಯವಾದಿನೀ ॥೮೦॥

ಆಶ್ವತ್ಥೇ ವಂದನೀಯಾ ತು ನಿಧಿರ್ವೈಶ್ರವಣಾಲಯೇ ।
ಗಾಯತ್ರೀ ವೇದವದನೇ ಪಾರ್ವತೀ ಶಿವಸನ್ನಿಧೌ ॥೮೧॥

ದೇವಲೋಕೇ ತಥೇಂದ್ರಾಣೀ ಬ್ರಹ್ಮಾಸ್ಯೇಷು ಸರಸ್ವತೀ ।
ಸೂರ್ಯಬಿಂಬೇ ಪ್ರಭಾನಾಮ ಮಾತೄಣಾಂ ವೈಷ್ಣವೀ ಮತಾ ॥೮೨॥

ಅರುಂಧತೀ ಸತೀನಾಂ ತು ರಾಮಾಸು ಚ ತಿಲೋತ್ತಮಾ ।
ಚಿತ್ತೇ ಬ್ರಹ್ಮಕಲಾ ನಾಮ ಶಕ್ತಿಃ ಸರ್ವಶರೀರಿಣಾಂ ॥೮೩॥

ಇಮಾನ್ಯಷ್ಟ ಶತಾನಿ ಸ್ಯುಃ ಪೀಠಾನಿ ಜನಮೇಜಯ ।
ತತ್ಸಂಖ್ಯಾಕಾಸ್ತದೀಶಾನ್ಯೋ ದೇವ್ಯಶ್ಚ ಪರಿಕೀರ್ತಿತಾಃ ॥೮೪॥

---

ಉತ್ತರ ಕುರುದೇಶದಲ್ಲಿ ಔಷಧೀದೇವಿಯೂ, ಕುಶದ್ವೀಪದಲ್ಲಿ ಕುಶೋದಕಾ ದೇವಿಯೂ, ಹೇಮಕೂಟಪರ್ವತದಲ್ಲಿ ಮನ್ಮಥಾದೇವಿಯೂ, ಕುಮುದಕ್ಷೇತ್ರದಲ್ಲಿ ಸತ್ಯವಾದಿನೀದೇವಿಯೂ, ॥೮೦॥

ಅಶ್ವತ್ಥಕ್ಷೇತ್ರದಲ್ಲಿ ವಂದನೀಯಾದೇವಿಯೂ, ಕುಬೇರನ ಮನೆಯಲ್ಲಿ ನಿಧಿ ದೇವಿಯೂ, ವೇದದಮುಖದಲ್ಲಿ ಗಾಯತ್ರೀದೇವಿಯೂ, (ವೇದದ ಬಾಯಿ ಎಂದರೆ ವೇದವನ್ನು ಹೇಳುವವರ ಬಾಯಿ) ಶಿವನಸಮೀಪದಲ್ಲಿ ಪಾರ್ವತೀದೇವಿಯೂ, ॥೮೧॥

ದೇವಲೋಕದಲ್ಲಿ ಇಂದ್ರಾಣೀ, ಬ್ರಹ್ಮನ ನಾಲ್ಕುಮುಖಗಳಲ್ಲಿ ಸರಸ್ವತೀದೇವೀ, ಸೂರ್ಯಮಂಡಲದಲ್ಲಿ ಪ್ರಭಾದೇವೀ, ಸಪ್ತಮಾತೃಕೆಯರಲ್ಲಿ ವೈಷ್ಣವೀದೇವೀ, ॥೮೨॥

ಪತಿವ್ರತಾಸ್ತ್ರೀಯರಲ್ಲಿ ಅರುಂಧತೀದೇವೀ, ಸುಂದರಸ್ತ್ರೀಯರಲ್ಲಿ ತಿಲೋತ್ತಮಾ ದೇವಿಯೂ, ಪೂಜ್ಯರಾಗಿರುವರು. ಇಲ್ಲಿಯವರೆಗೆ ೧೦೮ ನಾಮಗಳ ಸಮಾಪ್ತಿಯಾಯಿತು. ಇದುವರೆಗೆ ಹೇಳಿದ ದೇವತೆಗಳ ಮುಖ್ಯ ರೂಪವನ್ನು ಚಿತ್ತೇಬ್ರಹ್ಮಕಲಾ ಇತ್ಯಾದಿಯಾಗಿ ಎಂದರೆ, ಮನಸ್ಸಿನಲ್ಲಿ ಬ್ರಹ್ಮಕಲಾ ಎಂಬ ಹೆಸರಿನ ದೇವಿಯೂ, ಅಲ್ಲದೆ ಸಮಸ್ತ ಶರೀರವುಳ್ಳ ಪ್ರಾಣಿಗಳಿಗೂ ಯಾವ ಒಂದು ಶಕ್ತಿ ಇರುವುದೋ, ಅದೇ ಇದುವರೆಗೆ ಹೇಳಿದ ಸಕಲ ದೇವತಾ ಸ್ವರೂಪವೆಂದು ತಿಳಿಯಬೇಕು. ॥೮೩॥

ಓ ಜನಮೇಜಯನೇ, ಸತೀದೇವಿಯ ಅಂಗಗಳಾದ ಪೀಠಗಳನ್ನೂ, ಆ ಪೀಠಾಧಿಪತಿಗಳನ್ನೂ ಹೇಳುವ ಸಂದರ್ಭದಲ್ಲಿ ಭೂಮಿಯಲ್ಲಿ ಪ್ರಸಿದ್ಧವಾದ ಪೀಠ

ಸತೀ ದೇವ್ಯಂಗ ಭೂತಾನಿ ಪೀಠಾನಿ ಕಥಿತಾನಿ ಚ ।
ಅನ್ಯಾನ್ಯಪಿ ಪ್ರಸಂಗೇನ ಯಾನಿ ಮುಖ್ಯಾನಿ ಭೂತಲೇ ॥೮೫॥

ಯಃ ಸ್ಮರೇ ಚ್ಛೃಣುಯಾದ್ವಾಽಪಿ ನಾಮಾಷ್ಟಶತಮುತ್ತಮಂ ।
ಸರ್ವಪಾಪವಿನಿರ್ಮುಕ್ತೋ ದೇವೀಲೋಕಂ ಪರಂ ವ್ರಜೇತ್ ॥೮೬॥

ಏತೇಷು ಸರ್ವಪೀಠೇಷು ಗಚ್ಛೇದ್ಯಾತ್ರಾ ವಿಧಾನತಃ ।
ಸಂತರ್ಪಯೇಚ್ಚ ಪಿತ್ರಾದೀನ್ ಶ್ರಾದ್ಧಾದೀನಿ ವಿಧಾಯ ಚ ॥೮೭॥

ಕುರ್ಯಾಚ್ಚ ಮಹತೀಂ ಪೂಜಾಂ ಭಗವತ್ಯಾ ವಿಧಾನತಃ ।
ಕ್ಷಮಾಪಯೇಜ್ಜಗದ್ಧಾತ್ರೀಂ ಜಗದಂಬಾಂ ಮುಹುರ್ಮುಹುಃ ॥೮೮॥

ಕೃತಕೃತ್ಯಂ ಸ್ವಮಾತ್ಮಾನಂ ಜಾನೀಯಾ ಜ್ಜನಮೇಜಯ ।
ಭಕ್ಷ್ಯಭೋಜ್ಯಾದಿಭಿಃ ಸರ್ವಾನ್ ಬ್ರಾಹ್ಮಣಾನ್ ಭೋಜಯೇತ್ತತಃ ॥೮೯॥
ಸುವಾಸಿನೀಃ ಕುಮಾರೀಶ್ಚ ಬಟುಕಾದೀಂ ಸ್ತಥಾ ನೃಪ ।

---

ಗಳನ್ನೂ ಹೇಳಿರುವೆನು. ಒಟ್ಟು ೧೦೮ ಪೀಠಗಳು, ಅಷ್ಟೇ ದೇವಿಯರೂ, ಇವನ್ನೆಲ್ಲವನ್ನೂ ಹೇಳಿಯಾಯಿತು. ||೮೪-೮೫||

ಈ ಉತ್ತಮವಾದ ೧೦೮ ನಾಮಗಳನ್ನು ಯಾರು ಸ್ಮರಿಸುತ್ತಾರೋ ಅಥವಾ ಕೇಳುತ್ತಾರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶ್ರೇಷ್ಠವಾದ ದೇವಿಯ ಲೋಕಕ್ಕೆ (ಮಣಿದ್ವೀಪ) ಹೋಗುವರು. ||೮೬||

ಪುರಾಣಧರ್ಮಶಾಸ್ತ್ರಗಳಲ್ಲಿ ಹೇಳಿರುವಂತೆ. ಯಾತ್ರಾವಿಧಿಯನ್ನನುಸರಿಸಿ ಈ ಸಮಸ್ತ ಕ್ಷೇತ್ರ, ತೀರ್ಥಗಳ ಪೀಠಗಳಿಗೂ ಹೋಗಿ ಅಲ್ಲಿ ಶ್ರಾದ್ಧಾದಿಗಳನ್ನು ಮಾಡಿ ಪಿತೃಗಳನ್ನು ತೃಪ್ತಿಪಡಿಸಬೇಕು, ಮತ್ತು ವಿಧಿಯನ್ನು ಅನುಸರಿಸಿ ದೇವಿಗೆ ಉತ್ತಮವಾದ ಪೂಜೆಯನ್ನು ಮಾಡಿ ಲೋಕಕ್ಕೆ ತಾಯಿಯಾದ ಆ ಜಗದಂಬೆಯನ್ನು ಮತ್ತೆ ಮತ್ತೆ ಜ್ಞಾತಾಜ್ಞಾತಗಳಾದ ಅಪರಾಧಗಳ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು. ||೮೭-೮೮||

ಜನಮೇಜಯನೇ, ಆಮೇಲೆ ಭಕ್ಷ್ಯಭೋಜ್ಯಾದಿಗಳಿಂದ ಸಮಸ್ತ ಬ್ರಾಹ್ಮಣರು, ಸುಮಂಗಲಿಯರು, ಕನ್ಯೆಯರು, ಬ್ರಹ್ಮಚಾರಿಗಳು ಇವರೇ ಮೊದಲಾದ ಎಲ್ಲರಿಗೂ ಭೋಜನವನ್ನು ಮಾಡಿಸಬೇಕು. ಯಾತ್ರಿಕರು ಹೀಗೆ ಮಾಡುವುದರಿಂದ

ತಸ್ಮಿನ್ ಕ್ಷೇತ್ರೇ ಸ್ಥಿತಾ ಯೇ ತು ಚಾಂಡಾಲಾದ್ಯಾ ಅಪಿ ಪ್ರಭೋ ॥೯೦॥

ದೇವೀರೂಪಾಃ ಸ್ಮೃತಾಃ ಸರ್ವೇ ಪೂಜನೀಯಾಸ್ತತೋ ಹಿ ತೇ ।
ಪ್ರತಿಗ್ರಹಾದಿಕಂ ಸರ್ವಂ ತೇಷು ಕ್ಷೇತ್ರೇಷು ವರ್ಜಯೇತ್ ॥೯೧॥

ಯಥಾಶಕ್ತಿ ಪುರಶ್ಚರ್ಯಾಂ ಕುರ್ಯಾನ್ಮಂತ್ರಸ್ಯ ಸತ್ತಮಃ ।
ಮಾಯಾಬೀಜೇನ ದೇವೇಶೀಂ ತತ್ರತ್ಯಪೀಠಾಧಿವಾಸಿನೀಂ ॥೯೨॥

ಪೂಜಯೇದನಿಶಂ ರಾಜನ್ಪುರಶ್ಚರಣಕೃದ್ಭವೇತ್ ।
ವಿತ್ತಶಾಠ್ಯಂ ನ ಕುರ್ವೀತ ದೇವೀಭಕ್ತಿಪರೋ ನರಃ ॥೯೩॥

ಯ ಏವಂ ಕುರುತೇ ಯಾತ್ರಾಂ ಶ್ರೀದೇವ್ಯಾಃ ಪ್ರೀತಮಾನಸಃ ।
ಸಹಸ್ರಕಲ್ಪಪರ್ಯಂತಂ ಬ್ರಹ್ಮಲೋಕೇ ಮಹತ್ತರೇ ॥೯೪॥

---

ತಾವು ಕೃತಕೃತ್ಯರಾದೆವೆಂದು ಭಾವಿಸುತ್ತಿರಬೇಕು. ಏಕೆಂದರೆ ಅವರ ಭಾವನೆಗೆ ಅನುರೂಪವಾಗಿ ಸಿದ್ಧಿಯಾಗುವುದು. ॥೮೯॥

ರಾಜನೇ, ಆ ದೇವೀಕ್ಷೇತ್ರದಲ್ಲಿರುವ ಚಾಂಡಾಲಾದಿಗಳೂ ಕೂಡ ದೇವೀ ರೂಪರೆಂದೇ ಹೇಳಿರುವುದರಿಂದ ಅವರೂ ಕೂಡ ಪೂಜಾಯೋಗ್ಯರೆಂಬುದರಲ್ಲಿ ಸಂದೇಹಪಡಬಾರದು. ॥೯೦॥

ಆ ಕ್ಷೇತ್ರಗಳಲ್ಲಿ ಇತರರು ಕೊಡಬಹುದಾದ ದಾನಗಳನ್ನು ಯಾತ್ರೆಗೆ ಹೋದವರು ತೆಗೆದುಕೊಳ್ಳಬಾರದು. ಮತ್ತು ತಮ್ಮ ಶಕ್ತಿಗೆ ಅನುಸಾರವಾಗಿ ಮಾಯಾ ಬೀಜಮಂತ್ರದ ಜಪವನ್ನೂ ಮಾಡಬೇಕು. ಇದಲ್ಲದೆ ಆಯಾ ಪೀಠಾಧಿವಾಸಿನಿಯಾದ ಭಗವತಿಯನ್ನು ಯಾವಾಗಲೂ ವಿಶೇಷವಾಗಿ ಪೂಜೆಮಾಡುತ್ತಾ ಜಪವನ್ನು ಮಾಡುತ್ತಿರಬೇಕು. ॥೯೧-೯೨॥

ದೇವಿಯಲ್ಲಿ ಭಕ್ತಿಯುಳ್ಳ ಮನುಜನು ಕೃಪಣತೆಯನ್ನು ಮಾಡಬಾರದು. ಸಂತೋಷವಾದ ಮನಸ್ಸಿನಿಂದ ಶ್ರೀದೇವಿಯ ಕ್ಷೇತ್ರಯಾತ್ರೆಯನ್ನು ಮಾಡಿದವರ ಪಿತೃಗಳು ಸಾವಿರ ಕಲ್ಪಗಳು ಕಳೆಯುವವರೆಗೂ ಬ್ರಹ್ಮಲೋಕದಲ್ಲಿ ವಾಸಮಾಡುವರು! ಮತ್ತು ಆ ಭಕ್ತನು ಕಡೆಗೆ ಸಾಲೋಕ್ಯಮುಕ್ತಿಯನ್ನೂ ಎಂದರೆ ದೇವಿಯ ಪಟ್ಟಣವಾದ ಮಣಿದ್ವೀಪದಲ್ಲಿ ವಾಸವನ್ನು ಪಡೆಯುವನು. ಕೊನೆಗೆ ಜ್ಞಾನವನ್ನು ಹೊಂದಿ

ವಸಂತಿ ಪಿತರಸ್ತಸ್ಯ ಸೋಽಪಿ ದೇವೀಪುರೇ ತಥಾ ।
ಅಂತೇ ಲಬ್ಧ್ವಾ ಪರಂ ಜ್ಞಾನಂ ಭವೇನ್ಮುಕ್ತೋ ಭವಾಂಬುಧೇಃ॥೯೬॥

ನಾಮಾಷ್ಟಶತ ಜಾಪೇನ ಬಹವಃ ಸಿದ್ಧತಾಂ ಗತಾಃ ।
ಯತ್ರೈತಲ್ಲಿಖಿತಂ ಸಾಕ್ಷಾತ್ಪುಸ್ತಕೇ ವಾಽಪಿ ತಿಷ್ಠತಿ ॥೯೬॥

ಗ್ರಹಮಾರೀ ಭಯಾದೀನಿ ತತ್ರ ನೈವ ಭವಂತಿ ಹಿ ।
ಸೌಭಾಗ್ಯಂ ವರ್ಧತೇ ನಿತ್ಯಂ ಯಥಾ ಪರ್ವಣಿ ವಾರಿಧಿಃ ॥೯೭॥

ನ ತಸ್ಯ ದುರ್ಲಭಃ ಕಿಂಚಿನ್ನಾಮಾಷ್ಟಶತ ಜಾಪಿನಃ ।
ಕೃತಕೃತ್ಯೋ ಭವೇನ್ನೂನಂ ದೇವೀಭಕ್ತಿಪರಾಯಣಃ ॥೯೮॥

ನಮಂತಿ ದೇವತಾಸ್ತಂ ವೈ ದೇವೀರೂಪೋ ಹಿ ಸ ಸ್ಮೃತಃ ।
ಸರ್ವಥಾ ಪೂಜ್ಯತೇ ದೇವ್ಯೈಃ ಕಿಂ ಪುನರ್ಮನುಜೋತ್ತಮೈಃ ॥೯೯॥

---

ಸಂಸಾರಸಮುದ್ರವನ್ನು ದಾಟುವನು. ಎಂದರೆ ನಿಶ್ರೇಯಸವೆಂಬ ಶಾಶ್ವತವಾದ ಸಾಯುಜ್ಯರೂಪವಾದ ಮೋಕ್ಷವನ್ನೂ ಪಡೆಯುವನು. ಎಂದು ತಾತ್ಪರ್ಯವು. ||೯೩-೯೪-೯೫||

ಈ ನೂರೆಂಟು ನಾಮಗಳನ್ನು ಅರ್ಥಜ್ಞಾನದೊಡನೆ ಜಪಿಸಿ ಅನೇಕರು ಸಿದ್ಧಿಯನ್ನು ಹೊಂದಿರುವರು. ಈ ನಾಮಗಳನ್ನು ಬರೆದಿರುವ ಪುಸ್ತಕವೆಲ್ಲಿರುವುದೋ ಅಲ್ಲಿ ದುಷ್ಟಗ್ರಹಗಳ ಭಯವಾಗಲಿ, ಮಾರಿಕಾದಿ ಉಪದ್ರವಗಳ ಭಯವಾಗಲಿ ಉಂಟಾಗಿ ಇರುವುದಿಲ್ಲ. ಪೂರ್ಣಿಮೆಯದಿನ ಸಮುದ್ರವು ಉಕ್ಕುವಂತೆ ಈ ಪುಸ್ತಕವಿದ್ದ ಕಡೆ ಯಾವಾಗಲೂ ಸಂಪತ್ತು ಅಭಿವೃದ್ಧಿಯಾಗುತ್ತಿರುವುದು. ||೯೬-೯೭||

ಈ ನೂರೆಂಟು ನಾಮಗಳನ್ನು ಜಪಮಾಡುವವನಿಗೆ ದುರ್ಲಭವಾದುದಾವುದೂ ಇಲ್ಲ. ದೇವಿಯ ಭಕ್ತನಾದವನು ನಿಜವಾಗಿಯೂ ಧನ್ಯನಾಗುವನು. ||೯೮||

ದೇವಿಯ ಭಕ್ತನು ದೇವೀರೂಪನೇ ಆದುದರಿಂದ ದೇವತೆಗಳೂ ಅವನಿಗೆ ನಮಸ್ಕಾರವನ್ನು ಎಂದರೆ ಗೌರವವನ್ನು ಮಾಡುವರು. ದೇವತೆಗಳೇ ಪೂಜಿಸುವಾಗ ಮನುಷ್ಯರ ವಿಷಯವನ್ನು ಹೇಳಬೇಕಾದುದೇನು ? ||೯೯||

ಶ್ರಾದ್ಧಕಾಲೇ ಪಠೇದೇತನ್ನಾಮಾಷ್ಟಶತಮುತ್ತಮಂ ।
ತೃಪ್ತಾಸ್ತತ್ಪಿತರಸ್ಸರ್ವೇ ಪ್ರಯಾಂತಿ ಪರಮಾಂ ಗತಿಂ ॥೧೦೦॥

ಇಮಾನಿ ಮುಕ್ತಿಕ್ಷೇತ್ರಾಣಿ ಸಾಕ್ಷಾತ್ಸಂವಿನ್ಮಯಾನಿ ಚ ।
ಸಿದ್ಧಪೀಠಾನಿ ರಾಜೇಂದ್ರ ಸಂಶ್ರಯೇನ್ಮತಿಮಾನ್ನರಃ ॥೧೦೧॥

ಪೃಷ್ಟಂ ಯತ್ತತ್ತ್ವಯಾ ರಾಜನ್ನುಕ್ತಂ ಸರ್ವಂ ಮಹೇಶಿತುಃ ।
ರಹಸ್ಯಾತಿರಹಸ್ಯಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ॥೧೦೨॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ತ್ರಿಂಶೋಽಧ್ಯಾಯಃ

---

ಶ್ರಾದ್ಧಕಾಲದಲ್ಲಿ ಈ ನಾಮಾಷ್ಟೋತ್ತರವನ್ನು ಹೇಳಿದರೆ ಅವರ ಪಿತೃಗಳು ತೃಪ್ತಿಯನ್ನು ಹೊಂದಿ ಉತ್ತಮ ಗತಿಯನ್ನು ಪಡೆಯುವರು. ||೧೦೦||

ಓ ರಾಜನೇ, ಬುದ್ಧಿವಂತನಾದವನು ಜ್ಞಾನಸ್ವರೂಪವಾದ ಈ ಮುಕ್ತಿಕ್ಷೇತ್ರಗಳನ್ನೂ ಸಿದ್ಧರು ಆಶ್ರಯಿಸಿರುವ, ಸಿದ್ಧಿಯನ್ನುಂಟುಮಾಡುವ ಪೀಠಗಳನ್ನೂ ಆಶ್ರಯಿಸಬೇಕು. ||೧೦೧||

ಎಲೈ ರಾಜನೇ, ನೀನು ಕೇಳಿದ ಶ್ರೀದೇವಿಯ ಅತಿಗೋಪ್ಯವಾದ ಮಹಿಮೆಯೆಲ್ಲವನ್ನೂ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಾಶಿಸುವೆ? ಎಂದು ವ್ಯಾಸ ಮಹರ್ಷಿಯು ಹೇಳಿದನು. ||೧೦೨||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### || ಏಕತ್ರಿಂಶೋಽಧ್ಯಾಯಃ ||

### ಮೂವತ್ತೊಂದನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಧರಾಧರಾಧೀಶಮೌಲಾ ವಾ ವಿರಾಸೀತ್ಪರಂ ಮಹಃ ।**
**ಯದುಕ್ತಂ ಭವತಾ ಪೂರ್ವಂ ವಿಸ್ತರಾತ್ತದಸ್ವ ಮೇ ||೧||**

**ಕೋ ವಿರಜ್ಯೇತ ಮತಿಮಾನ್ಪಿಬಞ್ಛಕ್ತಿ ಕಥಾಮೃತಂ ।**
**ಸುಧಾಂ ತು ಪಿಬತಾಂ ಮೃತ್ಯುಃ ಸ ನೈತಚ್ಛೃಣ್ವತೋ ಭವೇತ್ ||೨||**

|| ವ್ಯಾಸ ಉವಾಚ ||

**ಧನ್ಯೋಽಸಿ ಕೃತಕೃತ್ಯೋಽಸಿ ಶಿಕ್ಷಿತೋಽಸಿ ಮಹಾತ್ಮಭಿಃ ।**
**ಭಾಗ್ಯವಾನ ಸಿ ಯದ್ದೇವ್ಯಾಂ ನಿರ್ವ್ಯಾಜಾ ಭಕ್ತಿರಸ್ತಿ ತೇ ||೩||**

---

ಜನಮೇಜಯನು ಹೇಳಿದನು— ಓ ವ್ಯಾಸಮುನಿಯೇ, ಆ ಶ್ರೇಷ್ಠವಾದ ದೇವಿಯ ತೇಜಸ್ಸು ಹಿಮವತ್ಪರ್ವತ ಶಿಖರದಲ್ಲಿ ಉದ್ಭವಿಸಿತೆಂದು ಹಿಂದೆ ಹೇಳಿದೆಯಷ್ಟೆ, ಆದರ ಕಥೆಯನ್ನೇ ವಿವರಗಳೊಡನೆ ವಿಸ್ತಾರವಾಗಿ ನನಗೆ ಹೇಳು. ||೧||

ಶಕ್ತಿದೇವಿಯ ಕಥೆಯೆಂಬ ಅಮೃತವನ್ನು ಪಾನಮಾಡುವ ಯಾವ ಬುದ್ಧಿವಂತನು ಅದನ್ನು ಸಾಕೆಂದು ಹೇಳಿ ಬಿಟ್ಟಾನು? ಅಮೃತಪಾನವನ್ನು ಮಾಡುವ ದೇವತೆಗಳಿಗೆ ಸಹ ಕಡೆಗೆ ಮರಣವು ಬರುವುದು. ಅದೂ ಈ ದೇವಿಯ ಕಥೆಯನ್ನು ಕೇಳತಕ್ಕವರಿಗೆ ಬರುವುದಿಲ್ಲವು! ||೨||

ವ್ಯಾಸಮುನಿಯು ಹೇಳಿದನು—ಎಲೈ ರಾಜನೇ, ದೇವಿಯಲ್ಲಿ ನಿನಗೆ ಕೃತ್ರಿಮಕಾರಣವಿಲ್ಲದೆ ಸ್ವಾಭಾವಿಕವಾದ ಭಕ್ತಿಯುಂಟಾಗಿರುವುದು. ಆದುದರಿಂದ

ಶೃಣು ರಾಜನ್ ಪುರಾವೃತ್ತಂ ಸತೀದೇಹೇಽಗ್ನಿ ಭರ್ಜಿತೇ ।
ಭ್ರಾಂತಃ ಶಿವಸ್ತು ಬಭ್ರಾಮ ಕ್ವಚಿದ್ದೇಶೇ ಸ್ಥಿರೋಽಭವತ್ ॥೪॥

ಪ್ರಪಂಚಭಾಗ ರಹಿತಃ ಸಮಾಧಿಗತ ಮಾನಸಃ ।
ಧ್ಯಾಯನ್ ದೇವೀ ಸ್ವರೂಪಂತು ಕಾಲಂ ನಿನ್ಯೇ ಸ ಆತ್ಮವಾನ್ ॥೫॥

ಸೌಭಾಗ್ಯ ರಹಿತಂ ಜಾತಂ ತ್ರೈಲೋಕ್ಯಂ ಸ ಚರಾಚರಂ ।
ಶಕ್ತಿಹೀನಂ ಜಗತ್ಸರ್ವಂ ಸಾಬ್ಧಿ ದ್ವೀಪಂ ಸಪರ್ವತಂ ॥೬॥

ಆನಂದಃ ಶುಷ್ಕತಾಂ ಯಾತಃ ಸರ್ವೇಷಾಂ ಹೃದಯಾಂತರೇ ।
ಉದಾಸೀನಾಃ ಸರ್ವಲೋಕಾಶ್ಚಿಂತಾ ಜರ್ಜರ ಚೇತಸಃ ॥೭॥

---

ನೀನು ಮಹಾತ್ಮರಿಂದ ಶಿಕ್ಷಿಸಲ್ಪಟ್ಟವನಾಗಿಯೂ, ಭಾಗ್ಯವಂತನಾಗಿಯೂ ಕೃತಾರ್ಥನಾಗಿಯೂ ಪುಣ್ಯವಂತನಾಗಿಯೂ ಇರುವೆ ! ॥೩॥

ರಾಜನೇ, ಹಿಂದೆ ನಡೆದ ಒಂದು ಸಂಗತಿಯನ್ನು ಹೇಳುವೆನು ಕೇಳು. ಸತಿಯ ಶರೀರವು ಅಗ್ನಿಯಲ್ಲಿ ಸುಟ್ಟುಹೋಗುತ್ತಲು, ಶಿವನು ಬುದ್ಧಿಭ್ರಮೆಯನ್ನು ಹೊಂದಿ ಎಲ್ಲ ದೇಶಗಳಲ್ಲೂ ಅಲೆಯುತ್ತಿದ್ದನು. ಕೊನೆಗೆ ಒಂದು ಪ್ರದೇಶದಲ್ಲಿ ನೆಲಸಿದನು. ॥೪॥

ಆತ್ಮಸ್ವರೂಪವನ್ನು ಬಲ್ಲ ಶಿವನು ತನ್ನ ಮನಸ್ಸನ್ನು ಸಮಾಧಿ ಎಂಬ ಯೋಗಾಂಗದಲ್ಲಿ ನೆಲೆಗೊಳಿಸಿ, ಪ್ರಪಂಚವ್ಯವಹಾರವನ್ನೆಲ್ಲವನ್ನೂ ಬಿಟ್ಟು, ದೇವಿಯ ಸ್ವರೂಪವನ್ನು ಧ್ಯಾನಮಾಡುತ್ತಾ ಕಾಲವನ್ನು ಕಳೆಯುತ್ತಿದ್ದನು. ॥೫॥

ಲೋಕಕ್ಕೆ ತಾಯಿಯೂ ರಕ್ಷಕಳೂ ಆದ ಶಕ್ತಿದೇವಿಯು ಇಲ್ಲದಿದ್ದುದರಿಂದ ಸಮುದ್ರಗಳು, ದ್ವೀಪಗಳು, ಪರ್ವತಗಳು ಇವುಗಳಿಂದ ಕೂಡಿದ ಮೂರು ಲೋಕವೂ ಶಕ್ತಿಯಿಲ್ಲದೆ ಅನಾಯಕವಾಗಿ ಐಶ್ವರ್ಯವಿಲ್ಲದುದಾಗಿಯೂ ಪರಿಣಮಿಸಿತು. ॥೬॥

ಸಮಸ್ತ ಪ್ರಾಣಿಗಳ ಮನಸ್ಸಿನಲ್ಲಿಯೂ ಸಂತೋಷವೆಂಬ ರಸವು ಒಣಗಿತು. ಸಮಸ್ತ ಜನರೂ ಆತಂಕದ ಆಲೋಚನೆಯಿಂದ ದುರ್ಬಲವಾದ ಮನಸ್ಸುಳ್ಳವರಾಗಿ ಉತ್ಸಾಹವಿಲ್ಲದೆ ಯಾವ ಕಾರ್ಯವನ್ನೂ ಮಾಡದೆ ಸುಮ್ಮನಿದ್ದರು ! ॥೭॥

ಸದಾ ದುಃಖೋದಧೌ ಮಗ್ನಾ ರೋಗ್ರಸ್ತಾಸ್ತದಾಽಭವನ್ ।
ಗ್ರಹಾಣಾಂ ದೇವತಾನಾಂ ಚ ವೈಪರೀತ್ಯೇನ ವರ್ತನಂ ॥೮॥

ಆಧಿ ಭೂತಾಧಿ ದೈವಾನಾಂ ಸತ್ಯಭಾವಾ ನ್ನೃಪಾಭವನ್ ।
ಅಥಾಸ್ಮಿನ್ನೇವ ಕಾಲೇ ತು ತಾರಕಾಖ್ಯೋ ಮಹಾಸುರಃ ॥೯॥

ಬ್ರಹ್ಮದತ್ತವರೋ ದೈತ್ಯೋಽಭವತ್ತ್ರೈಲೋಕ್ಯನಾಯಕಃ ।
ಶಿವೌರಸಸ್ತು ಯಃ ಪುತ್ರಃ ಸ ತೇ ಹಂತಾ ಭವಿಷ್ಯತಿ ॥೧೦॥

ಇತಿ ಕಲ್ಪಿತ ಮೃತ್ಯುಸ್ಸದೇವದೇವೈ ರ್ಮಹಾಸುರಃ ।
ಶಿವೌರಸ ಸುತಾ ಭಾವಾ ಜ್ಜಗರ್ಜ ಚ ನನಂದ ಚ ॥೧೧॥

---

ಆಗ ಜನರು ಯಾವಾಗಲೂ ದುಃಖವೆಂಬ ಸಮುದ್ರದಲ್ಲಿ ಮುಳುಗಿದವರಾಗಿ ರೋಗಿಗಳಾಗಿದ್ದರು. ಸೂರ್ಯಾದಿಗ್ರಹಗಳೂ, ದೇವತೆಗಳೂ ಕೂಡ ತಾವು ಸ್ವಾಭಾವಿಕವಾಗಿ ಮಾಡಬೇಕಾಗಿದ್ದ ಕಾರ್ಯಕ್ಕೆ ವಿರುದ್ಧವಾಗಿರುವ ನಡೆವಳಿಯುಳ್ಳವರಾಗಿದ್ದರು! ವ್ಯವಸ್ಥೆಯನ್ನೂ ಕ್ರಮವನ್ನೂ ಕಾಪಾಡುವ ಶಕ್ತಿಯು ಇಲ್ಲದುದರ ಫಲವಿದು. ॥೮॥

ಓ ರಾಜನೇ, ಪೃಥಿವ್ಯಾದಿ ಪಂಚಭೂತಗಳೂ ಅಗ್ನಿವಾಯ್ವಾದಿ ದೇವತೆಗಳೂ ಸತ್ಯವಾದುವುಗಳು, ಎಂದು ವ್ಯಾವಹಾರಿಕಪ್ರಪಂಚದ ವಿಷಯದಲ್ಲಿ ಸತ್ಯತ್ವಭಾವನೆಯುಂಟಾಯಿತು. ಅಲ್ಲದೆ ವ್ಯವಹಾರಾತಿರಿಕ್ತವಾದ ತ್ರಿಕಾಲಾಬಾಧ್ಯವಾದ ವಸ್ತು ಸ್ವರೂಪವು ಯಾರಿಗೂ ತಿಳಿಯಲಿಲ್ಲವೆಂದು ಭಾವವು.

ಆ ಮೇಲೆ ಈ ಸಮಯದಲ್ಲಿಯೇ ತಾರಕನೆಂಬ ಒಬ್ಬ ದೊಡ್ಡ ರಾಕ್ಷಸನು ಬ್ರಹ್ಮನ ವರದ ಬಲದಿಂದ ಮೂರು ಲೋಕಗಳನ್ನೂ ಜಯಿಸಿ ಎಲ್ಲಕ್ಕೂ ಒಡೆಯನಾದನು. ಏಕೆಂದರೆ ಶಿವನ ಔರಸಪುತ್ರನೇ ನಿನ್ನನ್ನು ಕೊಲ್ಲುವನೆಂದೂ ಬ್ರಹ್ಮನು ಅವನಿಗೆ ವರವನ್ನು ಕೊಟ್ಟು ಹೇಳಿದ್ದನು. ॥೯-೧೦॥

ಹೀಗೆ ಬ್ರಹ್ಮನಿಂದ ಕ್ಲ್ರಪ್ತಪಡಿಸಲ್ಪಟ್ಟ ಮೃತ್ಯುವುಳ್ಳ ಆ ತಾರಕನು ಶಿವನಿಗೆ ಔರಸಪುತ್ರನು, ಎಂದರೆ ಅಗ್ನಿಸಾಕ್ಷಿಯಾಗಿ ವಿವಾಹಮಾಡಿಕೊಂಡ ಹೆಂಡಿತಿಯಲ್ಲಿ ಹುಟ್ಟಿದ ಮಗನು, ಇಲ್ಲದುದರಿಂದ ಮತ್ತು ತನಗೆ ಬೇರೆಯಾರಿಂದಲೂ ಮರಣವಿಲ್ಲವೆಂದೂ ನಂಬಿ ಸಂತೋಷದಿಂದ ಗರ್ಜನೆ ಮಾಡುತ್ತಿದ್ದನು. ॥೧೧॥

ತೇನ ಚೋಪದ್ರುತಾಸ್ಸರ್ವೇ ಸ್ವಸ್ಥಾನಾತ್ಪ್ರಚ್ಯುತಾಃ ಸುರಾಃ ।
ಶಿವೌರಸಸುತಾಭಾವಾಚ್ಚಿಂತಾ ಮಾಪುರ್ದುರತ್ಯಯಾಂ ॥೧೨॥

ನಾಂಗನಾ ಶಂಕರಸ್ಯಾಸ್ತಿ ಕಥಂ ತತ್ಸುತಸಂಭವಃ ।
ಅಸ್ಮಾಕಂ ಭಾಗ್ಯಹೀನಾನಾಂ ಕಥಂ ಕಾರ್ಯಂ ಭವಿಷ್ಯತಿ ॥೧೩॥

ಇತಿ ಚಿಂತಾತುರಾ ಸ್ಸರ್ವೇ ಜಗ್ಮುರ್ವೈಕುಂಠಮಂಡಲೇ ।
ಶಶಂಸುರ್ಹರಿ ಮೇಕಾಂತೇ ಸ ಚೋಪಾಯಂ ಜಗಾದ ಹ ॥೧೪॥

ಕುತಶ್ಚಿಂತಾತುರಾಃ ಸರ್ವೇ ಕಾಮಕಲ್ಪದ್ರುಮಾ ಶಿವಾ ।
ಜಾಗರ್ತಿ ಭುವನೇಶಾನೀ ಮಣಿದ್ವೀಪಾಧಿವಾಸಿನೀ ॥೧೫॥

ಅಸ್ಮಾಕಮನಯಾ ದೇವ ತದುಪೇಕ್ಷಾಽಸ್ತಿ ನಾನ್ಯಥಾ ।
ಶಿಕ್ಷೈವೇಯಂ ಜಗನ್ಮಾತ್ರಾ ಕೃತಾಽಸ್ಮಚ್ಛಿಕ್ಷಣಾಯ ಚ ॥೧೬॥

---

ಆ ತಾರಕನ ಉಪದ್ರವದಿಂದ ತಮ್ಮ ತಮ್ಮ ಸ್ಥಾನಗಳನ್ನು ಕಳೆದುಕೊಂಡ ದೇವತೆಗಳು ಶಿವನ ಔರಸಪುತ್ರನಿಲ್ಲದುದರಿಂದ ಪರಿಹರಿಸಲಿಕ್ಕಾಗದ ಚಿಂತೆಯನ್ನು ಹೊಂದಿದರು. ॥೧೨॥

ಶಿವನಿಗೆ ಹೆಂಡಿತಿಯೇ ಇಲ್ಲವು. ಅವನಿಗೆ ಮಗನು ಹೇಗೆ ಹುಟ್ಟಬೇಕು? ಪುಣ್ಯಹೀನರಾದ ನಮ್ಮ ಕೆಲಸವು ಹೇಗೆ ಕೈಗೂಡುವುದು ? ॥೧೩॥

ಹೀಗೆಂದು ಚಿಂತಿಸುತ್ತ ಸಮಸ್ತ ದೇವತೆಗಳೂ ವೈಕುಂಠಲೋಕಕ್ಕೆ ಹೋಗಿ ವಿಷ್ಣುವನ್ನು ಭಕ್ತಿಯಿಂದ ಹೊಗಳಿದರು. ಆಗ ಆ ವಿಷ್ಣುವು ಅವರಿಗೆ ಗುಟ್ಟಾಗಿ ಒಂದು ಉಪಾಯವನ್ನು ತಿಳಿಸಿದನು. ॥೧೪॥

ನೀವೆಲ್ಲರೂ ಚಿಂತಿಸುತ್ತಿರುವುದೇಕೆ? ಲೋಕಕ್ಕೆಲ್ಲಕ್ಕೂ ಒಡೆಯಳೂ ಮಂಗಳ ಕರಳೂ ಆದ, ಮಣಿದ್ವೀಪಾಧಿವಾಸಿನಿಯಾದ ದೇವಿಯು ಎಲ್ಲ ಭಕ್ತರ ಇಷ್ಟಾರ್ಥಗ ಳನ್ನೂ ಕೊಡುವುದರಲ್ಲಿ ಕಲ್ಪವೃಕ್ಷದಂತೆ ಔದಾರ್ಯ ಉಳ್ಳವಳಾಗಿ ಯಾವಾಗಲೂ ಎಚ್ಚರದಿಂದಿರುವಳು. ॥೧೫॥

ನಮ್ಮ ತಪ್ಪಿನಿಂದಲೇ ಆ ದೇವಿಯು ನಮ್ಮನ್ನು ಅಸಡ್ಡೆಮಾಡಿರುವಳು. ಈ ಉಪೇಕ್ಷೆಯು ನಮ್ಮನ್ನು ನಾಶಮಾಡುವುದಕ್ಕಲ್ಲ. ಲೋಕಕ್ಕೆ ತಾಯಿಯಾದ ಆ

ಲಾಲನೇ ತಾಡನೇ ಮಾತು ರ್ನಾಕಾರುಣ್ಯಂ ಯಥಾರ್ಭಕೇ ।
ತದ್ವದೇವ ಜಗನ್ಮಾತು ರ್ನಿಯಂತ್ರ್ಯಾ ಗುಣದೋಷಯೋಃ ॥೧೬॥

ಅಪರಾಧೋ ಭವತ್ಯೇವ ತನಯಸ್ಯ ಪದೇಪದೇ ।
ಕೋಽಪರಃ ಸಹತೇ ಲೋಕೇ ಕೇವಲಂ ಮಾತರಂ ವಿನಾ ॥೧೮॥

ತಸ್ಮಾದ್ಯೂಯಂ ಪರಾಂಬಾಂ ತಾಂ ಶರಣಂ ಯಾತ ಮಾ ಚಿರಂ ।
ನಿರ್ವ್ಯಾಜಯಾ ಚಿತ್ತವೃತ್ತ್ಯಾ ಸಾ ವಃ ಕಾರ್ಯಂ ವಿಧಾಸ್ಯತಿ ॥೧೯॥

ಇತ್ಯಾದಿಶ್ಯ ಸುರಾನ್ಸರ್ವಾನ್ಮಹಾವಿಷ್ಣುಃ ಸ್ವಜಾಯಯಾ ।
ಸಂಯುತೋ ನಿರ್ಜಗಾಮಾಶು ದೇವೈಸ್ಸಹ ಸುರಾಧಿಪಃ ॥೨೦॥

---

ದೇವಿಯು ಇಂಥ ತಪ್ಪನ್ನು ಮಾಡಬಾರದೆಂಬುದನ್ನು ನಮಗೆ ಕಲಿಸುವುದಕ್ಕಾಗಿಯೇ ಹಾಗೆ ಮಾಡಿರುವಳು ! ॥೧೬॥

ಮಗುವನ್ನು ತಾಯಿಯು ಮುದ್ದಿಸುವುದಾಗಲಿ, ದಂಡಿಸುವುದಾಗಲಿ, ಆ ಮಗುವಿನ ಮೇಲೆ ಪ್ರೀತಿಯಿಲ್ಲದಿರುವುದರಿಂದ ಎಂದು ಹೇಗೆ ಹೇಳಲಾಗುವುದಿಲ್ಲವೋ ಹಾಗೆಯೇ, ಲೋಕಕ್ಕೇ ತಾಯಿಯೂ, ಗುಣದೋಷಗಳನ್ನು ತಿಳಿಸಿ ಅಪ್ಪಣೆಮಾಡ ತಕ್ಕವಳೂ ಆದ ಆ ದೇವಿಗೆ ಕರುಣವಿಲ್ಲವೆಂದು ಹೇಳಲಾಗುವುದಿಲ್ಲ. ॥೧೭॥

ಮಗುವು ಮತ್ತೆ ಮತ್ತೆ ತಪ್ಪನ್ನು ಮಾಡುತ್ತಲೇ ಇರುವುದು. ಆದರೂ ಆ ತಪ್ಪುಗಳನ್ನು ತಾಯಿಯಾದವಳೊಬ್ಬಳು ಹೊರತಾಗಿ ಲೋಕದಲ್ಲಿ ಮತ್ತೊಬ್ಬರು ಸಹಿಸಿ ಕ್ಷಮಿಸುವರೇ ? ॥೧೮॥

ಆದುದರಿಂದ ನೀವು ಸಾವಕಾಶಮಾಡದೆ ಯಾವ ನೆಪವೂ ಇಲ್ಲದ ಭಕ್ತಿಯಿಂದ ಕೂಡಿದ ಒಂದೇ ಮನಸ್ಸಿನಿಂದ ಆ ಶ್ರೇಷ್ಠಳಾದ ಜಗದಂಬೆಯನ್ನು ಶರಣು ಹೊಂದಿರಿ. ಆ ದೇವಿಯು ನಿಮ್ಮ ಕೆಲಸವನ್ನು ಮಾಡಿಕೊಡುವಳು. ॥೧೯॥

ದೇವತೆಗಳಿಗೆ ಒಡೆಯನಾದ ಮಹಾವಿಷ್ಣುವು ದೇವತೆಗಳಿಗೆಲ್ಲರಿಗೂ ಹೀಗೆ ಅಪ್ಪಣೆಮಾಡಿ ತಾನೂ ತನ್ನ ಹೆಂಡತಿಯಾದ ಲಕ್ಷ್ಮಿಯೊಡನೆ ದೇವಿಯ ಪೂಜೆಗೋಸ್ಕರ ಬೇಗನೆ ಹೊರಟನು. ॥೨೦॥

ಆಜಗಾಮ ಮಹಾಶೈಲಂ ಹಿಮವಂತಂ ನಗಾಧಿಪಂ ।
ಅಭವಂಶ್ಚ ಸುರಾಃ ಸರ್ವೇ ಪುರಶ್ಚರಣ ಕರ್ಮಿಣಃ ॥೨೧॥

ಕೇ ಚಿತ್ಸಮಾಧಿನಿಷ್ಣಾತಾಃ ಕೇಚಿನ್ನಾಮ ಪರಾಯಣಾಃ ।
ಕೇಚಿತ್ಸೂಕ್ತಪರಾಃ ಕೇಚಿನ್ನಾಮ ಪಾರಾಯಣೋತ್ಸುಕಾಃ ॥೨೩॥

ಮಂತ್ರಪಾರಾಯಣಪರಾಃ ಕೇಚಿತ್ಕೃಚ್ಛ್ರಾದಿ ಕಾರಿಣಃ ।
ಅಂತರ್ಯಾಗಪರಾಃ ಕೇಚಿತ್ ಕೇಚಿನ್ನ್ಯಾಸಪರಾಯಣಾಃ ॥೨೪॥

---

ಸಮುಸ್ತ ದೇವತೆಗಳೂ ಹಿಮವತ್ಪರ್ವತಕ್ಕೆ ಬಂದು ದೇವಿಯ ಮಂತ್ರದ ಜಪವನ್ನು ಮಾಡುತ್ತಿದ್ದರು. ॥೨೧॥

ಓ ರಾಜನೇ, ಆ ದೇವಿಯ ಯಜ್ಞವಿಧಿಯನ್ನು ಬಲ್ಲವರು, ಮೂರನೆಯ ಸ್ಕಂಧದಲ್ಲಿ ಹೇಳಿದಂತೆ ಅಂಬಾ ಪ್ರೀತ್ಯರ್ಥವಾಗಿ ಜ್ಯೋತಿಷ್ಟೋಮಾದಿ ಯಜ್ಞಗಳನ್ನೂ, ಅಂಬಾಯಜ್ಞವನ್ನೂ ಮಾಡಿದರು. ಕೆಲವು ದೇವತೆಗಳು ಮುಂದೆ ಹಿಮವಂತನಿಗೆ ಪಾರ್ವತಿಯು ಹೇಳುವ ತೃತೀಯಾದಿ ವ್ರತಗಳನ್ನೂ ಮಾಡಿದರು. ॥೨೨॥

ಕೆಲವರು ಸಮಾಧಿಯೆಂಬ ಯೋಗಾಂಗಾನುಷ್ಠಾನದಲ್ಲಿ ಕುಶಲರಾಗಿದ್ದುದರಿಂದ ಅದರ ಸಾಧನೆಯಲ್ಲಿ ಆಸಕ್ತರಾದರು. ಕೆಲವರು ದೇವೀನಾಮವನ್ನು ಜಪಿಸುತ್ತಿದ್ದರು. ಕೆಲವರು "ಅಹಂರುದ್ರೇಭಿಃ" ಇತ್ಯಾದಿಯಾದ ದೇವೀಸೂಕ್ತವನ್ನು ಜಪಿಸುತ್ತಿದ್ದರು. ಕೆಲವರು ತಂತ್ರರಾಜ ಮುಂತಾದ ತಂತ್ರಶಾಸ್ತ್ರಗಳಲ್ಲಿ ಹೇಳಿರುವಂತೆ ಪ್ರತಿದಿನವೂ ಗೊತ್ತಾದ ಕಾಲದಲ್ಲಿ ದೇವೀಮಹಿಮೆ ಮುಂತಾದುವನ್ನು ಪಾರಾಯಣ ಮಾಡುತ್ತಿದ್ದರು. ॥೨೩॥

ಮಂತ್ರಪಾರಾಯಣವೆಂದರೆ ಭುವನೇಶ್ವರೀಪಾರಿಜಾತವೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದ "ಮಾಯಾ ಕುಂಡಲಿನೀ ಕ್ರಿಯಾ ಮಧುಮತೀ ಶುದ್ಧಾ ಚ ಕಾಲೀ ಕಲಾ ಮಾತಂಗೀ ವಿಜಯಾ ಜಯಾ ಭಗವತೀ ದೇವೀ ಶಿವಾ ಶಾಂಭವೀ ।" ಎಂಬ ಶ್ಲೋಕದಲ್ಲಿ ಹೇಳಿರುವಂತೆ ಮಂತ್ರಜಪದಲ್ಲಿ ಆಸಕ್ತರಾದರು. ಕೆಲವರು ಕೃಚ್ಛ್ರ, ಚಾಂದ್ರಾಯಣವೆಂಬ ವ್ರತಗಳನ್ನು ಮಾಡುತ್ತಿದ್ದರು. ಕೆಲವರು ಅಂತರ್ಯಾಗವೆಂದರೆ ಪ್ರಪಂಚಸಾರವೆಂಬ ಗ್ರಂಥದಲ್ಲಿ ವಿವರಿಸಿರುವಂತೆ ಪ್ರಪಂಚಯಾಗ ಮತ್ತು ಪ್ರಾಣಾಗ್ನಿಹೋತ್ರ ಇವುಗಳ ಆಚರಣೆಯಲ್ಲಿ ಆಸಕ್ತರಾದರು. ಮತ್ತೆ ಕೆಲವರು ಮಂತ್ರಗಳನ್ನುಚ್ಚರಿಸಿ ತಮ್ಮ ಹೃದಯಾದಿ ಅವಯವಗಳನ್ನು ಮುಟ್ಟಿಕೊಂಡು ದೇವಿಯನ್ನು ಧ್ಯಾನಿಸುತ್ತಿದ್ದರು. ॥೨೪॥

ಹೃಲ್ಲೇಖಯಾ ಪರಾಶಕ್ತೇಃ ಪೂಜಾಂ ಚಕ್ರುರತಂದ್ರಿತಾಃ ।
ಇತ್ಯೇವಂ ಬಹುವರ್ಷಾಣಿ ಕಾಲೋಽಗಾಜ್ಜನಮೇಜಯ ॥೨೫॥

ಅಕಸ್ಮಾಚ್ಚೈತ್ರಮಾಸೀಯ ನವಮ್ಯಾಂ ಚ ಭೃಗೋರ್ದಿನೇ ।
ಪ್ರಾದುರ್ಬಭೂವ ಪುರತಸ್ತನ್ಮಹಃ ಶ್ರುತಿಚೋದಿತಂ ॥೨೬॥

ಚತುರ್ದಿಕ್ಷು ಚತುರ್ವೇದೈರ್ಮೂರ್ತಿಮದ್ಭಿರಭಿಷ್ಟುತಂ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸುಶೀತಲಂ ॥೨೭॥

ವಿದ್ಯುತ್ಕೋಟಿಸಮಾನಾಭಮರುಣಂ ತತ್ಪರಂ ಮಹಃ ।
ನೈವ ಚೋರ್ಧ್ವಂ ನ ತಿರ್ಯಕ್ಚ ನ ಮಧ್ಯೇ ಪರಿ ಜಗ್ರಭತ್ ॥೨೮॥

---

ಓ ಜನಮೇಜಯರಾಜನೇ, ಇನ್ನೂ ಕೆಲವರು ಹೃಲ್ಲೇಖಾ ಎಂದರೆ ಮಾಯಾ ಬೀಜವಾದ ಭುವನೇಶ್ವರೀಮಂತ್ರವು. ಈ ಮಂತ್ರದಿಂದ ಭುವನೇಶ್ವರೀ ಪೂಜೆಯನ್ನು ಉದಾಸೀನಮಾಡದೆ ಆದರದೊಡನೆ ಮಾಡಿದರು. ಹೀಗೆಅನೇಕ ವರ್ಷಗಳು ಕಳೆದುವು. ॥೨೫॥

ಅಕಸ್ಮಾತ್ತಾಗಿ ಒಂದಾನೊಂದು ಚೈತ್ರ ಶುಕ್ಲ ನವಮಿ ಶುಕ್ರವಾರದ ದಿನ " ಸತಸ್ಮಿನ್ನೇವಾಕಾಶೇಸ್ತ್ರಿಯಮಾಜಗಾಮ । ಬಹುಶೋಭಮಾನಾಮುಮಾಂ ಹೈಮವತೀಂ " ಇತ್ಯಾದಿ ವೇದದಲ್ಲಿ ಹೇಳಿರುವಂತೆ ರೂಪರೇಖೆಗಳುಳ್ಳ ಆ ಶಕ್ತಿದೇವಿಯ ತೇಜಸ್ಸು ಈ ಸಮಸ್ತ ದೇವತೆಗಳ ಇದುರಿಗೂ ಗೋಚರವಾಯಿತು. ॥೨೬॥

ಆ ತೇಜಸ್ವಿಯಾದ ವ್ಯಕ್ತಿಯು ನಾಲ್ಕು ದಿಕ್ಕುಗಳಲ್ಲಿಯೂ ಆಕಾರವನ್ನು ಧರಿಸಿದ ನಾಲ್ಕು ವೇದಗಳಿಂದ ಹೊಗಳಿಸಿಕೊಳ್ಳುತ್ತಾ, ಕೋಟಿಸೂರ್ಯರ ತೇಜಸ್ಸಿಗೆ ಸಮಾನವಾದ ಕಾಂತಿಯಿಂದಲೂ, ಕೋಟಿಚಂದ್ರರಿಗೆ ಸಮಾನವಾದ ತಂಪಿನಿಂದಲೂ ಕೂಡಿದುದಾಗಿದ್ದಿತು. ॥೨೭॥

ಮತ್ತು ಆ ಮೂರ್ತಿಯು ಕೋಟಿ ಮಿಂಚುಗಳಿಗೆ ಸಮಾನವಾದ ಪ್ರಕಾಶದಿಂದಲೂ, ಅನುಗ್ರಹಾರ್ಥವಾಗಿ ರಜೋಗುಣವನ್ನು ಹೊಂದಿದ್ದುದರಿಂದ ಕೆಂಪಾದ ಬಣ್ಣದಿಂದಲೂ, ಕೂಡಿದ್ದಾಗಿ, " ನೈವಚೋರ್ಧ್ವಂ " ಇತ್ಯಾದಿ ವೇದಮಂತ್ರದಲ್ಲಿ ಹೇಳುವಂತೆ ಮೂರು ಸ್ಥಾನಗಳಲ್ಲಿಯೂ ಅಳತೆಗೆ ಸಿಕ್ಕದೆ ಮೀರಿ ಇರುವ, ವಿಶೇಷ ಮಹಿಮೆಯಿಂದ ಕೂಡಿದ್ದಿತು. ॥೨೮॥

ಆದ್ಯಂತರಹಿತಂ ತತ್ತು ನ ಹಸ್ತಾದ್ಯಂಗಸಂಯುತಂ ।
ನ ಚ ಸ್ತ್ರೀರೂಪಮಥವಾ ನ ಪುಂ ರೂಪಮಥೋಭಯಂ ॥೨೯॥

ದೀಪ್ತ್ಯಾಪಿಧಾನಂ ನೇತ್ರಾಣಾಂ ತೇಷಾಮಾಸೀನ್ಮಹೀಪತೇ ।
ಪುನಶ್ಚ ಧೈರ್ಯಮಾಲಂಬ್ಯ ಯಾವತ್ತೇ ದದೃಶುಃ ಸುರಾಃ ॥೩೦॥

ತಾವತ್ತದೇವ ಸ್ತ್ರೀರೂಪೇಣಾಭಾದ್ದಿವ್ಯಂ ಮನೋಹರಂ ।
ಅತೀವ ರಮಣೀಯಾಂಗೀಂ ಕುಮಾರೀಂ ನವಯೌವನಾಂ ॥೩೧॥

ಉದ್ಯತ್ಪೀನ ಕುಚದ್ವಂದ್ವ ನಿಂದಿತಾಂಭೋಜಕುಟ್ಮಲಾಂ ।
ರಣತ್ಕಿಂಕಿಣಿಕಾ ಜಾಲ ಸಿಂಜನ್ಮಂಜೀರಮೇಖಲಾಂ ॥೩೨॥

ಕನಕಾಂಗದಕೇಯೂರ ಗ್ರೈವೇಯ ಕವಿಭೂಷಿತಾಂ ।
ಅನರ್ಘ್ಯಮಣಿಸಂಭಿನ್ನ ಗಲಬಂಧವಿರಾಜಿತಾಂ ॥೩೩॥

---

ಅಲ್ಲದೆ ಆ ಶಕ್ತಿದೇವತೆಯು ಆದಿಯೂ ಅಂತ್ಯವೂ ಇಲ್ಲದ, ಕೈ ಮುಂತಾದ ಅವಯವಗಳಿಲ್ಲದ, ಸ್ತ್ರೀಯೂ, ಪುರುಷನೂ, ನಪುಂಸಕನೂ ಅಲ್ಲದ ಎಂದರೆ ಲಿಂಗ ಭೇದವನ್ನೂ ಮಿಾರಿರುವ, ವಿಶೇಷಸ್ವಭಾವದಿಂದ ಕೂಡಿದ್ದಿತು ! ॥೨೯॥

ಓ ಜನಮೇಜಯರಾಜನೇ, ಇಂತಹ ಆ ಶಕ್ತಿದೇವಿಯ ತೇಜಸ್ಸಿನ ಪ್ರಕಾಶ ದಿಂದ ದೇವತೆಗಳ ಕಣ್ಣುಗಳು ಮುಚ್ಚಿಕೊಂಡವು. ಆ ದೇವತೆಗಳು ಮತ್ತೆ ಧೈರ್ಯ ದಿಂದ ಪ್ರಯತ್ನಪೂರ್ವಕವಾಗಿ ಕಣ್ಣು ತೆರೆದು ನೋಡುವಲ್ಲಿ, ॥೩೦॥

ಅಷ್ಟರಲ್ಲಿಯೇ ಆ ದಿವ್ಯವಾದ ತೇಜಸ್ಸು ಮನೋಹರವಾದ ಅವಯವಗಳೂ, ಹೊಸದಾದ ಪ್ರಾಯವೂ ಉಳ್ಳ ಚಿಕ್ಕವಯಸ್ಸಿನ ಹೆಣ್ಣಿನ ರೂಪವಾಗಿ ಪ್ರಕಾಶಿಸಿತು. ॥೩೧॥

ಆ ಸ್ತ್ರೀರೂಪವು ಆಗತಾನೇ ವ್ಯಕ್ತವಾಗಿ ಕಾಣುತ್ತಿರುವ ಕುಚಗಳಿಂದ ಕಮಲದ ಮೊಗ್ಗನ್ನು ತಿರಸ್ಕರಿಸುತ್ತಲೂ, ಧ್ವನಿಮಾಡುತ್ತಿರುವ ಗೆಜ್ಜೆಗಳಿಂದ ಕೂಡಿದ ಒಡ್ಯಾಣ ಮತ್ತು ಕಾಲುಕಡಗಗಳುಳ್ಳದ್ದಾಗಿಯೂ, ವಿರಾಜಿಸುತ್ತಿತ್ತು. ॥೩೨॥

ಮತ್ತು ಆ ದೇವಿಯು ಚಿನ್ನದ ಬಾಹುಪುರಿ, ಭುಜಕೀರ್ತಿ, ಕಂಠಾಭರಣ, ಬೆಲೆಯಾದ ರತ್ನಗಳನ್ನು ಕೆತ್ತಿದ ಹಾರ ಇವುಗಳಿಂದ ಪ್ರಕಾಶಿಸುತ್ತಿದ್ದಳು. ॥೩೩॥

ತನುಕೇತಕಸಂರಾಜನ್ನೀಲಭ್ರಮರ ಕುಂತಲಾಂ ।
ನಿತಂಬಬಿಂಬಸುಭಗಾಂ ರೋಮರಾಜೀವಿರಾಜಿತಾಂ ॥೩೪॥

ಕರ್ಪೂರ ಶಕಲೋನ್ಮಿಶ್ರ ತಾಂಬೂಲಪೂರಿತಾನನಾಂ ।
ಕನತ್ಕನಕ ತಾಟಂಕ ವಿಟಂಕ ವದನಾಂಬುಜಾಂ ॥೩೫॥

ಅಷ್ಟಮೀ ಚಂದ್ರ ಬಿಂಬಾಭ ಲಲಾಟಾಮಾಯತಭ್ರುವಂ ।
ರಕ್ತಾರವಿಂದ ನಯನಾ ಮುನ್ನಸಾಂ ಮಧುರಾಧರಾಂ ॥೩೬॥

ಕುಂದಕುಟ್ಮಲದಂತಾಗ್ರಾಂ ಮುಕ್ತಾಹಾರ ವಿರಾಜಿತಾಂ ।
ರತ್ನಸಂಭಿನ್ನಮುಕುಟಾಂ ಚಂದ್ರರೇಖಾವತಂಸಿನೀಂ ॥೩೭॥

---

ಅಲ್ಲದೆ ಆ ತಾಯಿಯು ತನುಕೇತಕವೆಂದರೆ ಸೂಕ್ಷ್ಮವಾದ ಕೇತಕಪತ್ರ ರಚನೆಯುಳ್ಳ ಕರ್ಣ ಮತ್ತು ಕಪೋಲಗಳ ನಡುವೆ ದುಂಬಿಯಂತೆ ಕಪ್ಪಾದ ಕೂದಲುಗಳಿಂದ ಪ್ರಕಾಶಿಸುತ್ತಿದ್ದಳು. ಮತ್ತು ಕಟಿಪಶ್ಚಾದ್ಭಾಗಗಳಿಂದ ಮನೋಹರಳಾಗಿದ್ದಳು. ನಾಭಿಯಿಂದ ಹೃದಯಪ್ರದೇಶದ ವರೆಗೂ ಸೂಕ್ಷ್ಮವಾಗಿ ಪ್ರಕಾಶಿಸುತ್ತಿರುವ ರೋಮರಾಜಿಗಳಿಂದ ಕೂಡಿದ್ದಳು. ॥೩೪॥

ಮತ್ತು ಆ ದೇವಿಯು ಪಚ್ಚಕರ್ಪೂರದ ಸಣ್ಣ ಚೂರುಗಳಿಂದ ಕೂಡಿದ ತಾಂಬೂಲವನ್ನು ಬಾಯಿಯಲ್ಲಿ ತುಂಬಿ ಸವಿಯುತ್ತಿದ್ದಳು. ತಳತಳಿಸುತ್ತಿರುವ ಓಲೆಗಳಿಂದ ಸುಂದರವಾದ ಮುಖಕಮಲವುಳ್ಳವಳಾಗಿ ಪ್ರಕಾಶಿಸುತ್ತಿದ್ದಳು. ॥೩೫॥

ಅಷ್ಟಮಿಯ ಚಂದ್ರನಿಗೆ ಸಮಾನವಾದ ಹಣೆಯೂ, ವಿಸ್ತಾರವಾದ ಹುಬ್ಬುಗಳೂ, ಕೆಂದಾವರೆಯ ಎಸಳಿನಂತೆ ಕಣ್ಣುಗಳೂ, ಎತ್ತರವಾದ ಮೂಗೂ, ಮನೋಹರವಾದ ತುಟಿಗಳೂ ಉಳ್ಳವಳಾಗಿ ಆಕೆಯು ಪ್ರಕಾಶಿಸುತ್ತಿದ್ದಳು. ॥೩೬॥

ಅಲ್ಲದೆ ಆಕೆಯು ಮೊಲ್ಲೆಯ ಮೊಗ್ಗಿನಂತೆ ಹಲ್ಲುಗಳುಳ್ಳವಳಾಗಿ ಮುತ್ತಿನ ಹಾರದಿಂದ ಶೋಭಿಸುತ್ತಾ, ರತ್ನಗಳನ್ನು ಕೆತ್ತಿದ ಕಿರೀಟವುಳ್ಳವಳಾಗಿ ಚಂದ್ರರೇಖೆಯನ್ನು ಶಿರೋಭೂಷಣವಾಗಿ ಧರಿಸಿದ್ದಳು. ॥೩೭॥

ಮಲ್ಲಿಕಾ ಮಾಲತೀಮಾಲಾ ಕೇಶಪಾಶೀವಿರಾಜಿತಾಂ ।
ಕಾಶ್ಮೀರಬಿಂದು ನಿಟಿಲಾಂ ನೇತ್ರತ್ರಯ ವಿಲಾಸಿನೀಂ ॥೩೮॥

ಪಾಶಾಂಕುಶವರಾಭೀತಿ ಚತುರ್ಬಾಹುಂ ತ್ರಿಲೋಚನಾಂ ।
ರಕ್ತವಸ್ತ್ರಪರೀಧಾನಾಂ ದಾಡಿಮೀಕುಸುಮಪ್ರಭಾಂ ॥೩೯॥

ಸರ್ವಶೃಂಗಾರವೇಷಾಢ್ಯಾಂ ಸರ್ವದೇವ ನಮಸ್ಕೃತಾಂ ।
ಸರ್ವಾಶಾ ಪೂರಕಾಂ ಸರ್ವಮಾತರಂ ಸರ್ವಮೋಹಿನೀಂ ॥೪೦॥

ಪ್ರಸಾದ ಸುಮುಖೀ ಮಂಬಾಂ ಮಂದಸ್ಮಿತ ಮುಖಾಂಬುಜಾಂ ।
ಅವ್ಯಾಜ ಕರುಣಾಮೂರ್ತಿಂ ದದೃಶುಃ ಪುರತಃ ಸುರಾಃ ॥೪೧॥

---

ಮತ್ತು ಆ ಜಗನ್ಮಾತೆಯು ಮಲ್ಲಿಗೆ, ಇರುವಂತಿಗೆ ಮುಂತಾದ ಹೂಮಾಲೆಯಿಂದ ಕೂಡಿದ ಉದ್ದವಾದ ತಲೆಯ ಕೂದಲುಗಳಿಂದ ಪ್ರಕಾಶಿಸುತ್ತಿರುವ ರೂಪವುಳ್ಳವಳಾಗಿದ್ದಳು. ॥೩೮॥

ಆ ದೇವಿಯು ಪಾಶಾಯುಧ, ಅಂಕುಶಗಳಿಂದಲೂ, ವರದ, ಅಭಯಮುದ್ರೆಗಳಿಂದಲೂ ಕೂಡಿರುವ ಹಸ್ತಗಳುಳ್ಳ, ನಾಲ್ಕು ತೋಳುಗಳಿಂದಲೂ, ಸುಂದರವಾದ ಮೂರು ಕಣ್ಣುಗಳಿಂದಲೂ ಕೂಡಿ, ಕೆಂಪಾದ ಪಟ್ಟೆಯ ವಸ್ತ್ರವನ್ನುಟ್ಟು ದಾಳಿಂಬೆಯ ಹೂವಿನ ಕಾಂತಿಯಂತೆ ಶೋಭಿಸುತ್ತಿರುವವಳಾಗಿದ್ದಳು. ॥೩೯॥

ಹೀಗೆ ಸಮಸ್ತ ಅಲಂಕಾರಗಳನ್ನೂ ಸಂಪೂರ್ಣವಾಗಿ ಮಾಡಿಕೊಂಡಿರುವ, ಸಕಲ ದೇವತೆಗಳೂ ನಮಸ್ಕರಿಸುತ್ತಿರಲು ಆ ಸಮಸ್ತರ ಇಷ್ಟಾರ್ಥಗಳನ್ನೂ ಕೊಡುತ್ತಿರುವ, ಸಮಸ್ತ ಲೋಕಕ್ಕೂ ತಾಯಿಯಾಗಿ ಎಲ್ಲರನ್ನೂ ಮೋಹಗೊಳಿಸುತ್ತಿರುವ ಆ ಜಗದಂಬೆಯನ್ನು ದೇವತೆಗಳು ಕಂಡರು! ॥೪೦॥

ಅಲ್ಲದೆ ಅನುಗ್ರಹ ಮಾಡಬೇಕೆಂಬ ಮನಸ್ಸಿನಿಂದ ಕೂಡಿ, ಮುಗುಳ್ನಗೆಯನ್ನು ನಗುತ್ತ, ಯಾವ ಕಾರಣವೂ ಇಲ್ಲದೆ ಸರ್ವರಲ್ಲಿಯೂ ದಯೆಯನ್ನು ಬೀರುತ್ತಿರುವ ಆ ತಾಯಿಯ ಸುಂದರವಾದ ಮೂರ್ತಿಯನ್ನು ದೇವತೆಗಳು ತಮ್ಮೆದುರಿಗೆ ಸಾಕ್ಷಾತ್ತಾಗಿ ನೋಡಿದರು! ॥೪೧॥

ದೃಷ್ಟ್ವಾ ತಾಂ ಕರುಣಾಮೂರ್ತಿಂ ಪ್ರಣೇಮುಃ ಸಕಲಾಃ ಸುರಾಃ ।
ವಕ್ತುಂ ನಾಶಕ್ನುವನ್ಕಿಂಚಿದ್ಬಾಷ್ಪಸಂರುದ್ಧ ನಿಸ್ಸ್ವನಾಃ ॥೪೨॥

ಕಥಂ ಚಿತ್ಸ್ಥೈರ್ಯ ಮಾಲಂಬ್ಯ ಭಕ್ತ್ಯಾ ಚಾನತಕಂಧರಾಃ ।
ಪ್ರೇಮಾಶ್ರು ಪೂರ್ಣನಯನಾ ಸ್ತುಷ್ಟುವು ರ್ಜಗದಂಬಿಕಾಂ ॥೪೩॥

॥ ದೇವಾ ಊಚುಃ ॥

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮತಾಂ ॥೪೪॥

ತಾಮಗ್ನಿವರ್ಣಾಂ ತಪಸಾ ಜ್ವಲಂತೀಂ
ವೈರೋಚನೀಂ ಕರ್ಮಫಲೇಷುಜುಷ್ಟಾಂ ।

---

ಆಗ ಆ ಸಮಸ್ತ ದೇವತೆಗಳೂ, ದಯಾಮೂರ್ತಿಯಾದ ಆ ದೇವಿಯನ್ನು ನೋಡಿ ನಮಸ್ಕರಿಸಿದರು. ಅಲ್ಲದೆ ಹೆಚ್ಚಾದ ಸಂತೋಷದಿಂದುಂಟಾದ ಕಣ್ಣೀರು ಉಕ್ಕಿ ಕುತ್ತಿಗೆಯು ತಡೆದು ನಿಂತುದರಿಂದ ಸ್ವಲ್ಪಹೊತ್ತಿನವರೆಗೆ ಒಂದು ಮಾತನ್ನಾಡಲೂ ಶಕ್ತರಾಗಲಿಲ್ಲ! ॥೪೨॥

ಆ ದೇವತೆಗಳು ಹೇಗೋ ಮನಸ್ಸನ್ನು ಸ್ಥಿರಮಾಡಿಕೊಂಡು ಭಕ್ತಿಯಿಂದ ಕುತ್ತಿಗೆಯನ್ನು ಬಗ್ಗಿಸಿ ಪ್ರೀತಿಯಿಂದ ಕಣ್ಣಿನಲ್ಲಿ ನೀರು ತುಂಬಿಕೊಂಡಿರಲು, ಲೋಕಕ್ಕೆ ತಾಯಿಯಾದ ಆ ದೇವಿಯನ್ನು ಸ್ತೋತ್ರಮಾಡಿದರು. ॥೪೩॥

ಇದೊಂದು ವೇದಮಂತ್ರದ ಅರ್ಥಾನುವಾದವು. ಓ ತಾಯಿಯೇ, ನಾವು ಮಂಗಳಕರಳಾದ ನಿನಗೆ ಯಾವಾಗಲೂ ನಮಸ್ಕಾರಮಾಡುವೆವು. ದೇವ್ಯೈ ಎಂದರೆ ಪ್ರಕಾಶಸ್ವರೂಪಳೂ, ಸ್ಫುರಣಸ್ವರೂಪಳೂ, ಜ್ಞಾನಸ್ವರೂಪಳೂ ಆದ, ದೇವತೆಗಳಲ್ಲಿ ದೊಡ್ಡವನಾದ ಮಹಾದೇವನ ಸಹಧರ್ಮಿಣಿಯೂ ಆದ, ಪ್ರಕೃತ್ಯೈ ಎಂದರೆ ಗುಣಗಳ ಸಾಮ್ಯಾವಸ್ಥೆಯಲ್ಲಿರುವ ಮಾಯೋಪಾಧಿಯಾದ ಪರಬ್ರಹ್ಮಸ್ವರೂಪಳೂ ಆದ, ಎಂದರೆ ಅಭಿನ್ನನಿಮಿತ್ತೋಪಾದಾನಕಾರಣರೂಪಳಾದ, (ಬ್ರಹ್ಮಸೂತ್ರ ೧–೪–೨೩ ನೋಡಿ) ಭದ್ರಾಯೈ, ಎಂದರೆ, ಸಮಸ್ತ ಮಂಗಳಕರಗಳಾದ ಗುಣಗಳಿಂದ ತುಂಬಿದವಳೂ ಆಗಿರುವ ನಿನಗೆ ಭಕ್ತಿಯಿಂದ ನಮಸ್ಕರಿಸುತ್ತಿರುವೆವು. ॥೪೪॥

ಇದೂ ಋಗ್ವೇದದಖಿಲಮಂತ್ರವು. ಅಗ್ನಿಗೆ ಸಮಾನವಾದ ರೂಪವೂ, ಕಾಂತಿಯೂ ಉಳ್ಳ, ತಪಸಾ, ಎಂದರೆ ಜ್ಞಾನ, ಅದರಿಂದ ಪ್ರಕಾಶಮಾನಳಾದ,

**ದುರ್ಗಾಂ ದೇವೀಂ ಶರಣಮಹಂ ಪ್ರಪದ್ಯೇ**
**ಸುತರಸಿ ತರಸೇ ನಮಃ ॥೪೫॥**

**ದೇವೀಂ ವಾಚ ಮಜನಯಂತ ದೇವಾಸ್ತಾಂ**
**ವಿಶ್ವರೂಪಾಃ ಪಶವೋ ವದಂತಿ ।**
**ಸಾ ನೋ ಮಂದ್ರೇಷಮೂರ್ಜಂ ದುಹಾನಾ**
**ಧೇನುರ್ವಾಗಸ್ಮಾನುಪಸುಷ್ಟುತೈತು ॥೪೬॥**

---

ವಿಶೇಷ ರೀತಿಯಿಂದ ಹೊಳೆಯುತ್ತಿರುವ, ತಾವು ಮಾಡಿದ ಕರ್ಮಗಳ ಫಲಪ್ರಾಪ್ತಿಗಾಗಿ ಬ್ರಾಹ್ಮಣಾದಿಗಳಿಂದ ಸೇವಿಸಲ್ಪಡುವ, ದುರ್ಗಾಂ ಎಂದರೆ ಅಷ್ಟಾಂಗಯೋಗರೂಪವಾದ ಸಾಧನಾಭ್ಯಾಸದಿಂದುಂಟಾದ ಜ್ಞಾನದಿಂದ ಪಡೆಯತಕ್ಕವಳಾದ, ಸುತರಸಿ ದಾಟಲು ಯೋಗ್ಯವಾದ ಸಂಸಾರದಲ್ಲಿ, ತರಸೇ ದಾಟುವುದಕ್ಕೋಸ್ಕರ ನಮಸ್ಕಾರ ಮಾಡುತ್ತೇವೆ. ಅಥವಾ ಅಗ್ನಿಶಬ್ದದಿಂದ ಅಗ್ನಿಬೀಜವಾದ ರಕಾರವೂ, ತಪಶ್ಶಬ್ದದಿಂದ ಮಾಯಾವಾಚಕವಾದ ಈಕಾರವೂ, ವಿರೋಚನನೆಂದರೆ ಸೂರ್ಯನು, ಸೂರ್ಯಬೀಜವಾದ ಹಕಾರವೂ, ಸೂರ್ಯನು ಪರಮೇಶ್ವರನಾದುದರಿಂದ ಬಿಂದುವೂ ಗ್ರಹಣವಾಗಿ ಮಾಯಾಬೀಜಸ್ವರೂಪಿಯಾದ ದುರ್ಗಾದೇವಿಯನ್ನು ನಮಸ್ಕಾರ ಮಾಡುತ್ತೇವೆಂದೂ ಮಂತ್ರಶಾಸ್ತ್ರದ ದೃಷ್ಟಿಯಿಂದ ವಿವರಿಸಲಾಗಿದೆ. ಅಲ್ಲದೆ ಮಾಧವಾಚಾರ್ಯರು ಅಗ್ನಿಗೆ ಸಮಾನವಾದ ವರ್ಣದಿಂದ ಶೋಭಿಸುತ್ತಾ ತನ್ನ ಸಂತಾಪದಿಂದ ನಮ್ಮ ಶತ್ರುಗಳನ್ನು ಸುಡುತ್ತಿರುವ, ವಿರೋಚನನೆಂದರೆ ಸ್ವಪ್ರಕಾಶವುಳ್ಳ ಪರಮಾತ್ಮನು, ಅವನಿಂದ ನೋಡಲ್ಪಟ್ಟವಳಾದ, ಕರ್ಮಫಲಗಳಿಗಾಗಿ ಉಪಾಸಕರಿಂದ ಸೇವಿಸಲ್ಪಡುವ ಸಂಸಾರವನ್ನು ಸುಖವಾಗಿ ದಾಟಲು ಕಾರಣಳಾದ ಮತ್ತು ಸಂಸಾರಸಮುದ್ರವನ್ನು ದಾಟಿಸುವವಳಾದ ದುರ್ಗಾದೇವಿಗೆ ನಮಸ್ಕಾರಮಾಡುತ್ತೇವೆ. ಎಂದೂ ಅರ್ಥಮಾಡಿರುತ್ತಾರೆ. ಪಂಚೋಪನಿಷತ್ತಿನ ೭೪, ೭೫ ಪುಟಗಳನ್ನೂ ನೋಡಬಹುದು. ॥೪೫॥

ದೇವಾಃ ಪ್ರಾಣಗಳು, ದೇವೀಂ ಪ್ರಕಾಶಮಾನವಾದ ವೈಖರೀರೂಪವಾದ ಮಾತನ್ನು ಉತ್ಪತ್ತಿಮಾಡಿದರು. ಆ ಅನೇಕರೂಪವಾದ ವಾಕ್ಕುಗಳನ್ನು ಪಶುರೂಪರಾದ ನಾವು ನಮ್ಮ ವ್ಯವಹಾರದಲ್ಲಿ ಉಪಯೋಗಮಾಡುತ್ತೇವೆ. ಸರ್ವ ವ್ಯವಹಾರಕ್ಕೂ ಉಪಯುಕ್ತವಾದ ಕಾಮಧೇನುವಂತಿರುವ, ದೊಡ್ಡತನವನ್ನೂ ಗೌರವವನ್ನೂ ಕೊಡುವುದರಿಂದ ಮುದವನ್ನುಂಟುಮಾಡುವ ಅನ್ನವನ್ನೂ, ಬಲವನ್ನೂ ಕೊಡತಕ್ಕ

**ಕಾಲರಾತ್ರೀಂ ಬ್ರಹ್ಮಸ್ತುತಾಂ ವೈಷ್ಣವೀಂ ಸ್ಕಂದಮಾತರಂ ।**
**ಸರಸ್ವತೀಮದಿತಿಂ ದಕ್ಷದುಹಿತರಂ ನಮಾಮಃ ಪಾವನಾಂ ಶಿವಾಂ ॥೪೭॥**

**ಮಹಾಲಕ್ಷ್ಮ್ಯೈ ಚ ವಿದ್ಮಹೇ ಸರ್ವಶಕ್ತ್ಯೈ ಚ ಧೀಮಹಿ ।**
**ತನ್ನೋ ದೇವೀ ಪ್ರಚೋದಯಾತ್ ॥೪೮॥**

**ನಮೋ ವಿರಾಟ್‌ಸ್ವರೂಪಿಣ್ಯೈ ನಮಃ ಸೂತ್ರಾತ್ಮಮೂರ್ತಯೇ ।**
**ನಮೋಽವ್ಯಾಕೃತರೂಪಿಣ್ಯೈ ನಮಃ ಶ್ರೀಬ್ರಹ್ಮಮೂರ್ತಯೇ ॥೪೯॥**

**ಯದಜ್ಞಾನಾಜ್ಜಗದ್ಭಾತಿ ರಜ್ಜುಸರ್ಪಸ್ರಗಾದಿವತ್ ।**
**ಯಜ್ಜ್ಞಾನಾಲ್ಲಯಮಾಪ್ನೋತಿ ನುಮಸ್ತಾಂ ಭುವನೇಶ್ವರೀಂ ॥೫೦॥**

---

ವಾಗ್ರೂಪವಾದ ದೇವಿಯು ನಮ್ಮಿಂದ ಸ್ತೋತ್ರಮಾಡಲ್ಪಟ್ಟವಳಾಗಿ ನಮ್ಮನ್ನು ಸೇರಲಿ. ಇದೂ ಋಗ್ವೇದದ ಖಿಲಮಂತ್ರವು. ॥೪೬॥

ಇದು ಅಥರ್ವಶೀರ್ಷೋಪನಿಷತ್ತಿನ ಮಂತ್ರವು. ಸರ್ವವನ್ನೂ ನಾಶಮಾಡುವ ಕಾಲಕ್ಕೂ ರಾತ್ರಿಯಂತೆ ನಾಶಕರಳಾದ ಮಧುಕೈಟಭರ ಸಂಹಾರಸಮಯದಲ್ಲಿ ಬ್ರಹ್ಮನಿಂದ ಸ್ತೋತ್ರಮಾಡಲ್ಪಟ್ಟ ಅಥವಾ ಬ್ರಹ್ಮವೆಂದರೆ ವೇದ, ಇದರಿಂದ ಸ್ತೋತ್ರಮಾಡಲ್ಪಟ್ಟ, ವಿಷ್ಣುಶಕ್ತಿಯಾದ ಸರಸ್ವತೀರೂಪಳಾದ, ದೇವತೆಗಳ ತಾಯಿಯೂ, ದಕ್ಷನ ಪುತ್ರಿಯೂ ಆದ, ಪರಿಶುದ್ಧಳೂ, ಮಂಗಳಸ್ವರೂಪಳೂ ಆದ ಈ ರೀತಿಯಾಗಿ ನಾನಾರೂಪಧರಳಾದ ಭುವನೇಶ್ವರೀದೇವಿಯನ್ನು ನಮಸ್ಕಾರ ಮಾಡುತ್ತೇವೆ. ॥೪೭॥

ಇದು ಅಥರ್ವಶೀರ್ಷೋಪನಿಷತ್ತಿನ ದೇವಿಯ ಗಾಯತ್ರೀಮಂತ್ರವು. ಸರ್ವ ಶಕ್ತಿಸ್ವರೂಪಳಾದ ಮಹಾಲಕ್ಷ್ಮಿಯನ್ನು ಧ್ಯಾನಮಾಡುತ್ತೇವೆ. ಆ ದೇವಿಯು ನಮ್ಮ ಬುದ್ಧಿಯನ್ನು ಪ್ರೇರಿಸಲಿ. ॥೪೮॥

ವಿರಾಟ್, ಸೂತ್ರಾತ್ಮ, ಅಂತರ್ಯಾಮಿ, ಬ್ರಹ್ಮಜ್ಞಾನ ಎಂಬ ನಾಲ್ಕು ಪಾದ ಗಳುಳ್ಳ ಬ್ರಹ್ಮಸ್ವರೂಪಳಾದ ದೇವಿಗೆ ನಮಸ್ಕಾರವು. ಮೇಲಿನ ಅ. ೩೦. ಶ್ಲೋಕ ೪-೭ ಗಳನ್ನು ನೋಡಬೇಕು. ॥೪೯॥

ಹಗ್ಗವನ್ನು ತಿಳಿಯದೆ ಹಾವೆಂದು ಭ್ರಮಿಸುವಂತೆ ಯಾವ ಆತ್ಮವಸ್ತುವು ತಿಳಿಯದಿರುವುದರಿಂದ ಈ ಜಗತ್ತು ಗೋಚರವಾಗುತ್ತಿರುವುದೋ, ಯಾವ ಆತ್ಮ

**ಸಮಸ್ತತ್ಪದ ಲಕ್ಷ್ಯಾರ್ಥಾಂ ಚಿದೇಕರಸರೂಪಿಣೀಂ ।**
**ಅಖಂಡಾನಂದ ರೂಪಾಂ ತಾಂ ವೇದತಾತ್ಪರ್ಯ ಭೂಮಿಕಾಂ ॥೫೧॥**

**ಪಂಚಕೋಶಾತಿರಿಕ್ತಾಂ ತಾಂ ಅವಸ್ಥಾತ್ರಯಸಾಕ್ಷಿಣೀಂ ।**
**ಪುನ ಸ್ತ್ವಂ ಪದ ಲಕ್ಷ್ಯಾರ್ಥಾಂ ಪ್ರತ್ಯಗಾತ್ಮಸ್ವರೂಪಿಣೀಂ ॥೫೨॥**

**ನಮಃ ಪ್ರಣವರೂಪಾಯೈ ನಮೋ ಹ್ರೀಂಕಾರಮೂರ್ತಯೇ ।**
**ನಾನಾ ಮಂತ್ರಾತ್ಮಿಕಾಯೈ ತೇ ಕರುಣಾಯೈ ನಮೋನಮಃ ॥೫೩॥**

**ಇತಿ ಸ್ತುತಾ ತದಾ ದೇವೈಃ ಮಣಿದ್ವೀಪಾಧಿವಾಸಿನೀ ।**
**ಪ್ರಾಹ ವಾಚಾ ಮಧುರಯಾ ಮತ್ತಕೋಕಿಲ ನಿಸ್ವನಾ ॥೫೪॥**

---

ವಸ್ತುವಿನ ಜ್ಞಾನದಿಂದ ಈ ಜಗತ್ತಿನ ಭ್ರಾಂತಿಯು ನಾಶವಾಗುವುದೋ, ಅಂಥ ಭುವನೇಶ್ವರೀದೇವಿಗೆ ನಮಸ್ಕಾರಮಾಡುತ್ತೇವೆ. ॥೫೦॥

ತತ್ ಎಂಬ ಪದದ ಜಹದಜಹಲ್ಲಕ್ಷಣಾವೃತ್ತಿಯಿಂದ ತಿಳಿಯುವ ಅರ್ಥ ಸ್ವರೂಪಳೂ, ಜ್ಞಾನಸ್ವರೂಪಳೂ, ಸಂಪೂರ್ಣವಾದ ಆನಂದರೂಪಳೂ, ವೇದದ ತಾತ್ಪರ್ಯಜ್ಞಾನದ ಅವಲಂಬನದಿಂದ ತಿಳಿಯಲ್ಪಡತಕ್ಕವಳೂ ಆದ ಭುವನೇಶ್ವರಿಯನ್ನು ನಮಸ್ಕಾರಮಾಡುತ್ತೇವೆ. ॥೫೧॥

ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಐದು ಕೋಶಗಳಿಗಿಂತಲೂ ಬೇರೆಯಾಗಿ ಅಂತರವೂ ಸೂಕ್ಷ್ಮವೂ ಆದ, ಜಾಗ್ರತ್ಸ್ವಪ್ನಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೂ ಸಾಕ್ಷಿರೂಪಳಾದ, ತ್ವಂ ಪದದ ಜಹದಜಹಲಕ್ಷಣಾರ್ಥಸ್ವರೂಪಳಾದ ಸಮಸ್ತ ಶರೀರಗಳೊಳಗಿರುವ ಆತ್ಮರ ಸ್ವರೂಪಳೂ, ಓಂಕಾರ, ಹ್ರೀಂಕಾರರೂಪಳೂ, ನಾನಾವಿಧವಾದ ಮಂತ್ರಸ್ವರೂಪಳೂ, ದಯಾಮೂರ್ತಿಯೂ ಆದ ದೇವಿಗೆ ನಮಸ್ಕಾರವು. ॥೫೨-೫೩॥

ಈ ರೀತಿಯಾಗಿ ದೇವತೆಗಳು ಸ್ತೋತ್ರಮಾಡಿದ ಮೇಲೆ ಮಣಿದ್ವೀಪವಾಸಿನಿಯಾದ ಭುವನೇಶ್ವರಿಯು ಮದಿಸಿದ ಕೋಗಿಲೆಯಂತೆ ಧ್ವನಿಮಾಡುತ್ತಾ ಇಂಪಾದ ಮಾತನ್ನಾಡಿದಳು. ॥೫೪॥

ವದಂತು ವಿಬುಧಾಃ ಕಾರ್ಯಂ ಯದರ್ಥಮಿಹ ಸಂಗತಾಃ ।
ವರದಾಽಹಂ ಸದಾ ಭಕ್ತಕಾಮುಕಲ್ಪದ್ರುಮಾಽಸ್ಮಿ ಚ ॥೫೫॥

ತಿಷ್ಠಂತ್ಯಾಂ ಮಯಿ ಕಾ ಚಿಂತಾ ಯುಷ್ಮಾಕಂ ಭಕ್ತಿಶಾಲಿನಾಂ ।
ಸಮುದ್ಧರಾಮಿ ಮದ್ಭಕ್ತ್ಯಾ ದುಃಖಸಂಸಾರ ಸಾಗರಾತ್ ॥೫೬॥

ಇತಿಪ್ರತಿಜ್ಞಾಂ ಮೇ ಸತ್ಯಾಂ ಜಾನೀಥ ವಿಬುಧೋತ್ತಮಾಃ ।
ಇತಿ ಪ್ರೇಮಾಕುಲಾಂ ವಾಣೀಂ ಶ್ರುತ್ವಾ ಸಂತುಷ್ಟಮಾನಸಾಃ ॥೫೭॥

ನಿರ್ಭಯಾ ನಿರ್ಜರಾ ರಾಜನ್ನೂಚುಃ ದುಃಖಂ ಸ್ವಕೀಯಕಂ ।

॥ ದೇವಾ ಊಚುಃ ॥

ನಾಽಜ್ಞಾತಂ ಕಿಂಚಿದಪ್ಯತ್ರ ಭವತ್ಯಾಽಸ್ತಿ ಜಗತ್ತ್ರಯೇ ॥೫೮॥

ಸರ್ವಜ್ಞಯಾ ಸರ್ವಸಾಕ್ಷಿರೂಪಿಣ್ಯಾ ಪರಮೇಶ್ವರಿ ।
ತಾರಕೇಣಾ ಸುರೇಂದ್ರೇಣ ಪೀಡಿತಾಃ ಸ್ಮೋ ದಿವಾ ನಿಶಂ ॥೫೯॥

---

ಎಲೈ ದೇವತೆಗಳೇ, ಯಾವ ಪ್ರಯೋಜನಕ್ಕೋಸ್ಕರವಾಗಿ ನೀವು ಇಲ್ಲಿ ಸೇರಿರುವಿರಿ? ನಿಮಗೆ ಆಗಬೇಕಾದ ಕಾರ್ಯವನ್ನು ಹೇಳಿರಿ. ನಾನು ಭಕ್ತರ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷಸ್ವರೂಪಳಾಗಿ ವರವನ್ನು ಕೊಡುವವಳಾಗಿರುತ್ತೇನೆ. ॥೫೫॥

ನಾನಿರುವಲ್ಲಿ ಭಕ್ತರಾದ ನಿಮಗೆ ಚಿಂತೆಯೇತಕ್ಕೆ? ಜನನಮರಣರೂಪವಾದ ಸಂಸಾರವೆಂಬ ಸಾಗರದ ದೆಸೆಯಿಂದ ಭಕ್ತರಾದ ನಿಮ್ಮನ್ನೆತ್ತಿ ಕಾಪಾಡುತ್ತೇನೆ. ॥೫೬॥

ಓ ದೇವಶ್ರೇಷ್ಠರೇ, ಇದೇ ನನ್ನ ಸತ್ಯವಾದ ಪ್ರತಿಜ್ಞೆಯೆಂದು ತಿಳಿಯಿರಿ. ಎಂದು ಹೇಳಿದ ದೇವಿಯ ಪ್ರೀತಿಯ ಮಾತನ್ನು ಕೇಳಿ ದೇವತೆಗಳು ಸಂತೋಷವನ್ನು ಹೊಂದಿ ಭಯವನ್ನು ಬಿಟ್ಟು ತಮ್ಮ ದುಃಖವನ್ನು ಹೇಳಿಕೊಂಡರು. ॥೫೭॥

ದೇವತೆಗಳು ಹೇಳಿದರು — ಓ ದೇವಿಯೇ, ನೀನು ಸಮಸ್ತವನ್ನೂ ತಿಳಿದವಳು. ಎಲ್ಲವನ್ನೂ ಸಾಕ್ಷಿಸ್ವರೂಪದಿಂದ ನೋಡತಕ್ಕವಳು. ಆದುದರಿಂದ ಮೂರು ಲೋಕಗಳಲ್ಲಿಯೂ ನಿನಗೆ ತಿಳಿಯದ ವಿಷಯವಿಲ್ಲವು. ನಾವು ಹಗಲೂ ರಾತ್ರಿಯೂ ಕೂಡ ತಾರಕಾಸುರನಿಂದ ಬಾಧೆಯನ್ನು ಹೊಂದುತ್ತಿರುವೆವು. ॥೫೮-೫೯॥

**ಶಿವಾಂಗಜಾದ್ವಧಸ್ತಸ್ಯ ನಿರ್ಮಿತೋ ಬ್ರಹ್ಮಣಾ ಶಿವೇ ।**
**ಶಿವಾಂಗನಾ ತು ನೈವಾಸ್ತಿ ಜಾನಾಸಿ ತ್ವಂ ಮಹೇಶ್ವರಿ ॥೬೦॥**

**ಸರ್ವಜ್ಞಾ ಪುರತಃ ಕಿಂ ವಾ ವಕ್ತವ್ಯಂ ಪಾಮರೈರ್ಜನೈಃ ।**
**ಏತದುದ್ದೇಶತಃ ಪ್ರೋಕ್ತಮಪರಂ ತರ್ಕಯಾಂಬಿಕೇ ॥೬೧॥**

**ಸರ್ವದಾ ಚರಣಾಂಭೋಜೇ ಭಕ್ತಿಸ್ಸ್ಯಾತ್ತ್ವವ ನಿಶ್ಚಲಾ ।**
**ಪ್ರಾರ್ಥನೀಯಮಿದಂ ಮುಖ್ಯಮಪರಂ ದೇಹಹೇತವೇ ॥೬೨॥**

**ಇತಿ ತೇಷಾಂ ವಚಃ ಶ್ರುತ್ವಾ ಪ್ರೋವಾಚ ಪರಮೇಶ್ವರೀ ।**
**ಮಮ ಶಕ್ತಿಸ್ತು ಯಾ ಗೌರೀ ಭವಿಷ್ಯತಿ ಹಿಮಾಲಯೇ ॥೬೩॥**
**ಶಿವಾಯ ಸಾ ಪ್ರದೇಯಾ ಸ್ಯಾತ್ಸಾ ವಃ ಕಾರ್ಯಂ ವಿಧಾಸ್ಯತಿ ।**

---

ಓ ಮಂಗಳಕರಳೇ, ಆ ತಾರಕನನ್ನು ಶಿವನ ಪುತ್ರನು ಮಾತ್ರ ಕೊಲ್ಲುವನೆಂದು ಬ್ರಹ್ಮನು ಗೊತ್ತುಮಾಡಿ ವರವನ್ನು ಕೊಟ್ಟಿರುವನು. ಶಿವನ ಹೆಂಡಿತಿಯಾದ ಸತೀದೇವಿಯು ಇಲ್ಲದಿರುವುದನ್ನು ನೀನು ತಿಳಿದೇ ಇರುವೆ. ॥೬೦॥

ಎಲ್ಲವನ್ನೂ ತಿಳಿದವಳಾದ ನಿನ್ನ ಮುಂದೆ ಅಜ್ಞಾನಿಗಳಾದ ನಾವು ಏನನ್ನು ಹೇಳಿಕೊಂಡೇವು ? ಮುಖ್ಯವಾಗಿರುವ ತಾರಕನಬಾಧೆಯನ್ನು ಹೇಳಿಕೊಂಡಿರುವೆವು. ನಮಗೆ ಇನ್ನಾವ ದುಃಖವಿರುವುದೆಂಬುದನ್ನು ಎಲ್ಲವನ್ನೂ ಬಲ್ಲ ತಾಯಾದ ನೀನೇ ಊಹಿಸಿ ತಿಳಿಯಬೇಕು. ॥೬೧॥

ಇಷ್ಟೇ ಅಲ್ಲದೆ, ಓ ತಾಯಿಯೇ, ಯಾವಾಗಲೂ ನಿನ್ನ ಪಾದಪದ್ಮದಲ್ಲಿ ಚಲಿಸದೆ ಇರತಕ್ಕ ಭಕ್ತಿಯು ನಮಗೆ ಉಂಟಾಗಬೇಕೆಂಬುದು ಮುಖ್ಯವಾದ ಪ್ರಾರ್ಥನೆಯು. ಮಿಕ್ಕ ಪ್ರಾರ್ಥನೆಗಳೆಲ್ಲವೂ ದೇಹಾಭಿಮಾನ ನಿಮಿತ್ತವಾದುವುಗಳು. ಆದುದರಿಂದ ಅಮುಖ್ಯಗಳಾಗಿವೆ ಎಂದು ಭಾವವು. ॥೬೨॥

ಹೀಗೆಂದು ಹೇಳಿದ ದೇವತೆಗಳ ಮಾತನ್ನು ಕೇಳಿ, ಭುವನೇಶ್ವರೀದೇವಿಯು ಹೇಳಿದಳು. ನನ್ನ ಶಕ್ತಿಸ್ವರೂಪಳಾದ ಗೌರೀದೇವಿಯು ಹಿಮಾಲಯದಲ್ಲಿ ಹುಟ್ಟುವಳು. ಅವಳನ್ನು ಶಿವನಿಗೆ ಕೊಟ್ಟು ವಿವಾಹಮಾಡಿದರೆ ಅವಳು ತನ್ನಲ್ಲಿ ಹುಟ್ಟುವ ಮಗನಿಂದ ತಾರಕಾಸುರನನ್ನು ಕೊಲ್ಲುವ ಕಾರ್ಯವನ್ನು ಮಾಡಿಸುವಳು. ॥೬೩॥

ಭಕ್ತಿರ್ಮಚ್ಚರಣಾಂಭೋಜೇ ಭೂಯಾದ್ಯುಷ್ಮಾಕಮಾದರಾತ್ ॥೬೪॥

ಹಿಮಾಲಯೋ ಹಿ ಮನಸಾ ಮಾಮುಪಾಸ್ತೇಽತಿ ಭಕ್ತಿತಃ ।
ತತಸ್ತಸ್ಯ ಗೃಹೇ ಜನ್ಮ ಮಮ ಪ್ರಿಯಕರಂ ಮತಂ ॥೬೫॥

॥ ವ್ಯಾಸ ಉವಾಚ ॥

ಹಿಮಾಲಯೋಽಪಿ ತಚ್ಛ್ರುತ್ವಾಽತ್ಯನುಗ್ರಹಕರಂ ವಚಃ ।
ಬಾಷ್ಪೈಃ ಸಂರುದ್ಧ ಕಂಠಾಕ್ಷೋ ಮಹಾರಾಜ್ಞೀಂ ವಚೋಽಬ್ರವೀತ್॥೬೬॥

ಮಹತ್ತರಂ ತಂ ಕುರುಷೇ ಯಸ್ಯಾನುಗ್ರಹ ಮಿಚ್ಛಸಿ ।
ನೋಚೇತ್ಕ್ವಾಹಂ ಜಡಃ ಸ್ಥಾಣುಃ ಕ್ವ ತ್ವಂ ಸಚ್ಚಿತ್ಸ್ವರೂಪಿಣೀ ॥೬೭॥

ಅಸಂಭಾವ್ಯಂ ಜನ್ಮಶತೈಸ್ತ್ವತ್ಪಿತೃತ್ವಂ ಮಮಾನಘೇ ।
ಅಶ್ವಮೇಧಾದಿ ಪುಣ್ಯೈರ್ವಾ ಪುಣ್ಯೈರ್ವಾ ತತ್ಸಮಾಧಿ ಜೈಃ ॥೬೮॥

---

ನಿಮಗೆ ನನ್ನ ಪಾದಕಮಲದಲ್ಲಿ ಆದರಪೂರ್ವಕವಾದ ಭಕ್ತಿಯು ಯಾವಾಗಲೂ ಉಂಟಾಗಿರಲಿ. ಹಿಮವಂತನೂ ಮನಸ್ಸಿನಲ್ಲಿ ವಿಶೇಷವಾದ ಭಕ್ತಿಯಿಂದ ನನ್ನನ್ನು ಸೇವಿಸುತ್ತಿರುವನು. ಆದುದರಿಂದ ಅವನ ಮನೆಯಲ್ಲಿ ಹುಟ್ಟುವುದು ನನಗೂ ಇಷ್ಟವಾದುದಾಗಿದೆ. ||೬೪-೬೫||

ವ್ಯಾಸನು ಹೇಳಿದನು— ಹಿಮವಂತನು ಭುವನೇಶ್ವರೀದೇವಿಯ ಅನುಗ್ರಹ ರೂಪವಾದ ಆ ಮಾತನ್ನು ಕೇಳಿ, ಭಕ್ತಿಯಿಂದುಂಟಾದ ಆನಂದಬಾಷ್ಪವು ಕಣ್ಣಿನಲ್ಲಿಯೂ ಕುತ್ತಿಗೆಯಲ್ಲಿಯೂ ತುಂಬಿಕೊಂಡು ಬಿಗಿಯುತ್ತಿರಲು ಭುವನೇಶ್ವರಿಯನ್ನು ಕುರಿತು ಮಾತನಾಡಿದನು. ||೬೬||

ಓ ಜಗದಂಬೆಯೇ, ಯಾರಿಗೆ ನೀನು ಅನುಗ್ರಹಮಾಡಲು ಬಯಸುವೆಯೋ ಅವರನ್ನು ಮೇಲಕ್ಕೆತ್ತಿ ಗೌರವದ ಪದವಿಯನ್ನು ಪಡೆಯಿಸಿ ಅತ್ಯಂತ ಶ್ರೇಷ್ಠರನ್ನಾಗಿ ಮಾಡುವೆ. ಇದಕ್ಕೆ ಶ್ರುತಿಪ್ರಮಾಣವು ದೇವೀಸೂಕ್ತದಲ್ಲಿ " ಯಂ ಕಾಮಯೇ ತಂ ತಮುಗ್ರಮಹಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ " ಎಂದಿರುವುದು. ಹಾಗಲ್ಲದೆ ಹೋದರೆ ಮನಸ್ಸಿಗೂ, ಮಾತಿಗೂ ಸಿಲುಕದ ಸಚ್ಚಿದಾನಂದ ರೂಪವುಳ್ಳ ನೀನೆಲ್ಲಿ ? ಸ್ವತಂತ್ರವಾದ ಚಲನಶಕ್ತಿಯಿಲ್ಲದೆ ಜಡನಾದ ನಾನೆಲ್ಲಿ ?||೬೭||

ನಿರ್ದುಷ್ಟಳಾದ ಓ ದೇವಿಯೇ ! ಅನೇಕ ಜನ್ಮಗಳಲ್ಲಿ ಮಾಡಿದ ಅಶ್ವಮೇಧಾದಿಯಜ್ಞಗಳ ಪುಣ್ಯದಿಂದಲಾಗಲಿ, ಏಕಾಗ್ರಚಿತ್ತದಿಂದ ಧ್ಯಾನಮಾಡಿದ ಪುಣ್ಯ

**ಅದ್ಯ ಪ್ರಪಂಚೇ ಕೀರ್ತಿಃ ಸ್ಯಾಜ್ಜಗನ್ಮಾತಾ ಸುತಾಽಭವತ್ ।**
**ಅಹೋ ಹಿಮಾಲಯಸ್ಯಾಸ್ಯ ಧನ್ಯೋಽಸೌ ಭಾಗ್ಯವಾನಿತಿ ॥೪೯॥**

**ಯಸ್ಯಾಸ್ತು ಜಠರೇ ಸಂತಿ ಬ್ರಹ್ಮಾಂಡಾನಾಂ ಚ ಕೋಟಿಯಃ ।**
**ಸೈವ ಯಸ್ಯ ಸುತಾ ಜಾತಾ ಕೋ ವಾ ಸ್ಯಾತ್ತತ್ಸಮೋ ಭುವಿ ॥೭೦॥**

**ನ ಜಾನೇಽಸ್ಮತ್ಪಿತೄಣಾಂ ಕಿಂ ಸ್ಥಾನಂ ಸ್ಯಾನ್ನಿರ್ಮಿತಂ ಪರಂ ।**
**ಏತಾದೃಶಾನಾಂ ವಾಸಾಯ ಯೇಷಾಂ ವಂಶೇಽಸ್ತಿ ಮಾದೃಶಃ ॥೭೧॥**

**ಇದಂ ಯಥಾ ಚ ದತ್ತಂ ಮೇ ಕೃಪಯಾ ಪ್ರೇಮಪೂರ್ಣಯಾ ।**
**ಸರ್ವವೇದಾಂತ ಸಿದ್ಧಂ ಚ ತ್ವದ್ರೂಪಂ ಬ್ರೂಹಿ ಮೇ ತಥಾ ॥೭೨॥**

---

ದಿಂದಲಾಗಲಿ ನಿನಗೆ ತಂದೆಯಾಗುವಷ್ಟು ಪುಣ್ಯವು ಬರುವುದೆಂದು ಊಹಿಸುವುದಕ್ಕೂ ಸಾಧ್ಯವಿಲ್ಲದಿರುವಾಗ ಈ ಪುಣ್ಯಕ್ಕೆ ನಿನ್ನ ಅನುಗ್ರಹವೇ ಕಾರಣವಾಗಿರುವುದೇ ಹೊರತು ನನ್ನ ಯೋಗ್ಯತೆಯಲ್ಲವು! ||೬೮||

ಈ ಹಿಮಾಲಯನಿಗೆ ಜಗದಂಬೆಯು ಮಗಳಾದಳು! ಎಂಬ ನನ್ನ ಯಶಸ್ಸು ಇಲ್ಲಿಂದ ಮುಂದೆ ಪ್ರಪಂಚದಲ್ಲಿ ಹರಡುವುದು. ಇವನೇ ಪುಣ್ಯವಂತನು, ಕೃತಾರ್ಥನು, ಎಂದು ಜನರೆಲ್ಲರೂ ಗೌರವಿಸುವ ಹಾಗಾಯಿತು! ಇದು ಆಶ್ಚರ್ಯವೇ ಸರಿ. ||೬೯||

ಯಾವ ಜಗದಂಬೆಯು ಜಠರದಲ್ಲಿ ಅನೇಕ ಬ್ರಹ್ಮಾಂಡಗಳು ಇರುವುವೋ ಅಂತಹ ದೇವಿಯೇ ಯಾವನಿಗೆ ಮಗಳಾದಳೋ, ಆತನಿಗೆ ಸಮಾನವಾದವನು ಭೂಮಿಯಲ್ಲಿ ಯಾವನಿರುವನು? ||೭೦||

ಯಾರ ವಂಶದಲ್ಲಿ ನನ್ನಂತಹ ಭಾಗ್ಯವಂತನಿರುವನೋ ಅಂಥವನ ಪಿತೃಗಳ ವಾಸಕ್ಕೋಸ್ಕರ ಬ್ರಹ್ಮಲೋಕಕ್ಕಿಂತಲೂ ಉತ್ತಮವಾದ ಯಾವ ಸ್ಥಾನವು ನಿರ್ಮಿತವಾಗಿರುವುದೋ ನನಗೆ ತಿಳಿಯದು. ||೭೧||

ಓ ದೇವಿಯೇ, ನನ್ನ ಮೇಲೆ ದಯಮಾಡಿ ಪ್ರೀತಿಯಿಂದ ನಿನಗೆ ತಂದೆಯಾಗುವ ವರವನ್ನು ಹೇಗೆ ನನಗೆ ಕೊಟ್ಟಿರುವೆಯೋ, ಹಾಗೆಯೇ ಸಮಸ್ತ ವೇದಾಂತಗಳಿಂದ ನಿಶ್ಚಯಿಸಲ್ಪಟ್ಟ ನಿನ್ನ ಸ್ವರೂಪವನ್ನೂ ನನಗೆ ಚನ್ನಾಗಿ ಗೊತ್ತಾಗುವಂತೆ ತಿಳಿಸು. ||೭೨||

ಯೋಗಂ ಚ ಭಕ್ತಿಸಹಿತಂ ಜ್ಞಾನಂ ಚ ಶ್ರುತಿಸಮ್ಮತಂ ।
ವದಸ್ವ ಪರಮೇಶಾನಿ ತ್ವಮೇವಾಹಂ ಯತೋ ಭವೇಃ ॥೭೩॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಪ್ರಸನ್ನಮುಖಪಂಕಜಾ ।
ವಕ್ತುಮಾರಭತಾಂಬಾ ಸಾ ರಹಸ್ಯಂ ಶ್ರುತಿಗೂಹಿತಂ ॥೭೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಏಕತ್ರಿಂಶೋಽಧ್ಯಾಯಃ.

---

ಓ ಭುವನೇಶ್ವರೀ ದೇವಿಯೇ, ನಿನ್ನಲ್ಲಿ ಭಕ್ತಿಯಿಂದ ಕೂಡಿದ ಯೋಗ ಮಾರ್ಗವನ್ನೂ, ವೇದಕ್ಕೆ ಸಮ್ಮತವಾದ ಜ್ಞಾನಮಾರ್ಗವನ್ನೂ ನನಗೆ ಉಪದೇಶ ಮಾಡು. ಆದರಿಂದ ಜ್ಞಾನ, ಜ್ಞೇಯ, ಜ್ಞಾತೃ, ಎಂಬ ತ್ರಿಪುಟಿಯು ಅಳಿದು ಹೋಗಿರಲು ನಾನೂ ನೀನಾಗಿಯೇ ಹೋಗುವೆನು. ಎಂದರೆ ನನಗೂ ನಿನಗೂ ಇರುವ ಅಭೇದದ ಸಾಕ್ಷಾತ್ಕಾರವು ನನಗೆ ಉಂಟಾಗುವುದು. ॥೭೩॥

ಹೀಗೆಂದು ಹೇಳಿದ ಹಿಮವಂತನ ಮಾತನ್ನು ಕೇಳಿ ಸಂತೋಷಗೊಂಡ ಮುಖಕಮಲವುಳ್ಳ ಜಗದಂಬೆಯಾದ ಭುವನೇಶ್ವರೀದೇವಿಯು ವೇದದಲ್ಲಿ ಅಡಗಿರುವ ಗುಟ್ಟಾದ ವಿಷಯವನ್ನು ಹೇಳುವುದಕ್ಕೆ ಪ್ರಾರಂಭಿಸಿದಳು. ॥೭೪॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ದ್ವಾತ್ರಿಂಶೋಽಧ್ಯಾಯಃ ॥

### ಮೂವತ್ತೆರಡನೆಯ ಅಧ್ಯಾಯವು

॥ ದೇವೀಗೀತಾ ॥

॥ ದೇವ್ಯುವಾಚ ॥

**ಶೃಣ್ವಂತು ನಿರ್ಜರಾಃ ಸರ್ವೇ ವ್ಯಾಹರಂತ್ಯಾ ವಚೋ ಮಮ ।**
**ಯಸ್ಯ ಶ್ರವಣಮಾತ್ರೇಣ ಮದ್ರೂಪತ್ವಂ ಪ್ರಪದ್ಯತೇ ॥೧॥**

**ಅಹ ಮೇವಾಸ ಪೂರ್ವಂ ತು ನಾನ್ಯತ್ಕಿಂಚಿನ್ನಗಾಧಿಪ ।**
**ತದಾತ್ಮರೂಪಂ ಚಿತ್ಸಂವಿತ್ ಪರಬ್ರಹ್ಮೈಕ ನಾಮಕಂ ॥೨॥**

---

ಈ ಅಧ್ಯಾಯದಲ್ಲಿ ಆದಿಶಕ್ತಿರೂಪಳಾದ ದೇವಿಯು ಪರ್ವತಗಳಲ್ಲಿ ಶ್ರೇಷ್ಠವಾದ ಹಿಮಾಲಯಕ್ಕೆ ಅಭಿಮಾನಿದೇವನನ್ನು ನಿಮಿತ್ತಮಾಡಿ ಎಲ್ಲ ದೇವತೆಗಳನ್ನೂ ನಮ್ಮನ್ನೂ ಕುರಿತು, 'ಶೃಣ್ವಂತು' ಇತ್ಯಾದಿ ಶ್ಲೋಕಗಳಿಂದ ಪರವಸ್ತುವಿನ ತತ್ತ್ವಸ್ವರೂಪವನ್ನು ತಿಳಿಸುವ ಸದುಪದೇಶವನ್ನು ಮಾಡುತ್ತಾಳೆ. ಈ ಭಾಗಕ್ಕೆ ದೇವೀಗೀತಾ ಎಂಬ ಹೆಸರು ಪ್ರಸಿದ್ಧವಾಗಿದೆ. ಭಗವದ್ಗೀತೆಯಂತೆ ಇದೂ ಪುರುಷಾರ್ಥಗಳನ್ನು ಪಡೆಯಲು ಅನುಕೂಲವಾದ ಸಾಧನವಾಗಿದೆ.

ಎಲೈ ದೇವತೆಗಳಿರಾ, ಕೇಳಿರಿ, ಯಾವ ತತ್ವಸ್ವರೂಪದ ವಿವರಣೆಯನ್ನು ಕೇಳುವುದು ಮಾತ್ರದಿಂದ ಮನುಷ್ಯನು ತನ್ನ ವಾಸ್ತವವಾದ ಸ್ವರೂಪವನ್ನು ಅಪರೋಕ್ಷಾನುಭವದಿಂದ ಪುನಃ ಪಡೆದಂತೆ, ಕಂಠಚಾಮೀಕರನ್ಯಾಯವನ್ನು ಅನುಸರಿಸಿ, ಹೊಂದುವನೋ, ಅಂಥ ತತ್ವವನ್ನು ನಿಮಗೋಸ್ಕರ ವಿವರಿಸಿ ಹೇಳುತ್ತೇನೆ. ॥೧॥

ಓ ಪರ್ವತರಾಜನೇ, ಸೃಷ್ಟಿಯ ಪೂರ್ವದಲ್ಲಿ ನಾನು ಸಜಾತೀಯ, ವಿಜಾತೀಯ, ಸ್ವಗತ, ಎಂಬ ಮೂರು ಬಗೆಯ ಭೇದಶೂನ್ಯವಾದ ಶುದ್ಧಾತ್ಮಸ್ವರೂಪಳಾಗಿ

**ಅಪ್ರತರ್ಕ್ಯಮನಿರ್ದೇಶ್ಯಮನೌಪಮ್ಯ ಮನಾಮಯಂ ।**
**ತಸ್ಯ ಕಾಚಿತ್ ಸ್ವತಃ ಸಿದ್ಧಾ ಶಕ್ತಿರ್ಮಾಯೇತಿ ವಿಶ್ರುತಾ ॥೩॥**

**ನ ಸತೀ ಸಾ ನಾಸತೀ ಸಾ ನೋಭಯಾತ್ಮಾ ವಿರೋಧತಃ ।**
**ಏತದ್ವಿಲಕ್ಷಣಾ ಕಾಚಿತ್ ವಸ್ತು ಭೂತಾಽಸ್ತಿ ಸರ್ವದಾ ॥೪॥**

---

ದ್ದನು. ನನಗಿಂತಲೂ ಅತಿರಿಕ್ತವಾದ ಇನ್ನಾವ ವಸ್ತುವೂ ಇರಲಿಲ್ಲ. ಆ ಆತ್ಮಸ್ವರೂಪವೇ 'ಆತ್ಮಾವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್.' 'ಸತ್ಯಂ ಜ್ಞಾನಮನಂತಂಬ್ರಹ್ಮ' ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದ್ಯವಾದ ಜ್ಞಾನಚೈತನ್ಯ ರೂಪವಾದ ಪರತತ್ವವು. ಆ ವಸ್ತುವೇ ಪರಬ್ರಹ್ಮವೆಂಬ ಹೆಸರಿನಿಂದ ಕರೆಯಲ್ಪಡುತ್ತದೆ. ॥೨॥

ಆ ಆತ್ಮಸ್ವರೂಪವು ಅನುಮಾನಾದಿಗಳಿಗೆ ವಿಷಯವಾಗದೇ ಕೇವಲ ಶ್ರುತಿಯಿಂದ ಮಾತ್ರ ತಿಳಿಯಲ್ಪಡುವುದು. ಶ್ರುತಿಯಿಂದಲೂ ಕೂಡ ಜಾತಿ ಗುಣ ಕ್ರಿಯೆಗಳಿಂದ ಇದೇ ಆತ್ಮಸ್ವರೂಪವೆಂದು ನಿರ್ದೇಶಮಾಡಿ ತೋರಿಸುವುದಕ್ಕೆ ಬರುವುದಿಲ್ಲವು. ಅಲ್ಲದೆ ಆತ್ಮಸ್ವರೂಪಕ್ಕೆ ಸಮಾನವಾದದ್ದು ಈ ಜಗತ್ತಿನಲ್ಲಿ ಇನ್ನಾವ ಪದಾರ್ಥವೂ ಇಲ್ಲದಿರುವುದರಿಂದ, ಆತ್ಮತತ್ವವು ಅಸದೃಶವಾಗಿರುವುದು ಮತ್ತು ಆರು ಭಾವ ವಿಕಾರಗಳಿಂದ ಶೂನ್ಯವಾದುದಾಗಿಯೂ ಇರುವುದು. ದೇಹದಿಂದ ಸಹಿತನಾದ ಆತ್ಮನಿಗೆ ಹುಟ್ಟುವುದು ಮುಂತಾದ ಆರು ಭಾವ ವಿಕಾರಗಳ ಸಂಬಂಧವಿರುವುದು. ಈ ಶುದ್ಧಾತ್ಮನಿಗೆ ದೇಹದ ಸಂಬಂಧವಿಲ್ಲದಿರುವುದರಿಂದ ನಿರ್ವಿಕಾರನೆಂದೆನಿಸಿಕೊಳ್ಳುವನು. ಈ ರೀತಿಯಾದ ನಿರ್ಗುಣ ಆತ್ಮಸ್ವರೂಪವು ಈ ವಿಚಿತ್ರವಾದ ಜಗತ್ತಿಗೆ ಕಾರಣವಾಗುವ ಬಗೆ ಹೇಗೆ ಎಂಬ ಸಂಶಯವು ನಮಗೆ ಬರುವುದು. ಅದಕ್ಕೆ ಸಮಾಧಾನವೇನೆಂದರೆ, ಆ ಆತ್ಮಸ್ವರೂಪಕ್ಕೆ ಅನಿರ್ವಚನೀಯವಾದ, ಅನಾದಿಯಾದ ಒಂದು ಶಕ್ತಿಯು ಇರುವುದು. ಅದೇ ಮಾಯೆ ಎಂದು ಶ್ರುತ್ಯಾದಿಗಳಲ್ಲಿ ಹೆಸರನ್ನು ಹೊಂದಿದೆ. ಈ ವಿಚಿತ್ರವಾದ ಶಕ್ತಿಯಿಂದ ನಿರ್ಗುಣನಾದ ಬ್ರಹ್ಮನಿಗೂ ಈ ಜಗತ್ಸ್ರಷ್ಟೃತ್ವವು ಉಪಪನ್ನವಾಗುತ್ತದೆ. ॥೩॥

ಈ ಆತ್ಮನ ಶಕ್ತಿರೂಪವಾದ ಮಾಯೆಯೂ ಆತ್ಮನಂತೆ ಪಾರಮಾರ್ಥಿಕಸತ್ಯಸ್ವರೂಪವು ಎಂದರೆ ತ್ರಿಕಾಲಾಬಾಧ್ಯವಾದುದು ಅಲ್ಲವು. ಏಕೆಂದರೆ ಬ್ರಹ್ಮಜ್ಞಾನದಿಂದ ಇದು ನಷ್ಟವಾಗುತ್ತದೆ. ವ್ಯಾವಹಾರಿಕ ಸತ್ಯಸ್ವರೂಪದಲ್ಲಿ ಕಂಡುಬರುತ್ತಿರು

ಪಾವಕಸ್ಯೋಷ್ಣತೇವೇಯ ಮುಷ್ಣಾಂಶೋರಿವ ದೀಧಿತಿಃ ।
ಚಂದ್ರಸ್ಯ ಚಂದ್ರಿಕೇವೇಯಂ ಮಮೇಯಂ ಸಹಜಾ ಧ್ರುವಾ ॥೫॥

ತಸ್ಯಾಂ ಕರ್ಮಾಣಿ ಜೀವಾನಾಂ ಜೀವಾಃ ಕಾಲಾಶ್ಚ ಸಂಚರೇ ।
ಅಭೇದೇನ ವಿಲೀನಾಃ ಸ್ಯುಃ ಸುಷುಪ್ತೌ ವ್ಯವಹಾರವತ್ ॥೬॥

---

ವುದರಿಂದ ಇದು ವಂಧ್ಯಾಪುತ್ರನಂತೆ ಅಸತ್ಯಸ್ವರೂಪವೂ ಅಲ್ಲ. ಸತ್ಯತ್ವ, ಅಸತ್ಯತ್ವ ಎಂಬ ಎರಡು ಧರ್ಮಗಳೂ ಪರಸ್ಪರವಾಗಿ ವಿರೋಧವಾಗುವುದರಿಂದ ಸತ್ಯಾಸತ್ಯ ಉಭಯಸ್ವರೂಪವನ್ನೂ ಈ ತತ್ವಕ್ಕೆ ಅಂಗೀಕರಿಸುವಂತಿಲ್ಲ. ಆದುದರಿಂದ ಇವೆಲ್ಲವು ಗಳಿಂದಲೂ ವಿಲಕ್ಷಣವಾದ ಒಂದು ಅನಿರ್ವಚನೀಯವಾದ ವ್ಯಾವಹಾರಿಕವಾದ ಆ ಸ್ವರೂಪವನ್ನು ಆ ಮಾಯೆಯು ಹೊಂದಿರುವುದು ಎಂದು ಹೇಳಬೇಕಾಗಿದೆ. "ಇಂದ್ರೋ ಮಾಯಾಭಿಃ ಪುರುರೂಪ ಈಯತೇ " " ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ " " ಮಾಯಾವಾ ಏಷಾ ನಾರಸಿಂಹೀ " ಎಂದು ಮುಂತಾದ ಶ್ರುತಿಗಳಿಂದ ಈ ವಿಷಯವು ಗೊತ್ತಾಗುತ್ತದೆ. ॥೪॥

ಅಗ್ನಿಗೆ ಹೇಗೆ ಉಷ್ಣತೆಯು ಸ್ವಭಾವ ಸಿದ್ಧವಾದುದೋ, ಸೂರ್ಯನಿಗೆ ಪ್ರಕಾಶವು ಹೇಗೆ ಸಹಜಗುಣವೋ, ಚಂದ್ರನಿಗೆ ಯಾವ ರೀತಿಯಲ್ಲಿ ಚಂದ್ರಿಕೆಯು ಸಹಜಸಿದ್ಧವಾದುದೋ, ಹಾಗೆಯೇ ಮಾಯೆಯು ಆತ್ಮಸ್ವರೂಪಕ್ಕೆ ಅವಿನಾಭಾವ ಸಂಬಂಧದಿಂದ ಅಭಿನ್ನವಾಗಿ ವ್ಯವಹಾರದಶೆಯಲ್ಲಿ ಮಾತ್ರ ಸಹಜವಾಗಿರುವಂತೆ ತೋರುತ್ತಿರುತ್ತದೆ. " ಮಾಯಾಚತಮೋರೂಪಾನುಭೂತೇಃ ತದೇತಜ್ಜಡಂ ಮೋಹಾತ್ಮಕಂ ಅನಂತಂ ತುಚ್ಛಮಿದಂ ರೂಪಸ್ಯಾಸ್ಯ ವ್ಯಂಜಿಕಾ ನಿತ್ಯನಿವೃತ್ತಾ ವಿಮೂಢೈರಾತ್ಮೈವದೃಷ್ಟಾ ಅಸ್ಯ ಸತ್ವಮಸತ್ವಂ ಚ ದರ್ಶಯತಿ" ಎಂದು ಶ್ರುತಿಯಲ್ಲಿಯೂ ಹೇಳಿದೆ. ಮತ್ತು ಈ ಮಾಯೆಯು ಮೋಕ್ಷದ ವರೆಗೆ ಇರುವುದು. ಆದುದರಿಂದ ಇದನ್ನು ಧ್ರುವಾ ಎಂದೂ ಔಪಚಾರಿಕವಾಗಿ ಹೇಳಿದೆ. ಶ್ಲೋ. ೧೮ ನ್ನು ನೋಡಿ ॥೫॥

ಈ ರೀತಿಯಾದ ಮಾಯಾಶಕ್ತಿಯಿಂದ ಕೂಡಿದ ದೇವಿಗೆ ಉಚ್ಚ ಮತ್ತು ನೀಚವಾದ ಸ್ವಭಾವ, ಸೌಕರ್ಯ, ಮತ್ತು ಸನ್ನಿವೇಶಗಳಿಂದ ಕೂಡಿರುವ ಜೀವರ ಸೃಷ್ಟಿಯನ್ನು ಮಾಡಿರುವುದರಿಂದ ವೈಷಮ್ಯ, ನೈರ್ಘೃಣ್ಯಗಳನ್ನು ಶಂಕಿಸಬಹುದು. ಆದರೆ ಅವಳು ಅವರವರ ಕರ್ಮಗಳಿಗೆ ಅನುಸರಿಸಿ ಫಲವನ್ನು ಕೊಡುವವಳಾಗುತ್ತಾಳೆ. ಆದುದರಿಂದ ಆ ದೋಷಗಳು ದೇವಿಗೆ ತಗಲುವುದಿಲ್ಲವು. ಅಲ್ಲದೆ ಜೀವಿಗಳ

ಸ್ವಶಕ್ತೇಶ್ಚ ಸಮಾಯೋಗಾದಹಂ ಬೀಜಾತ್ಮತಾಂ ಗತಾ ।
ಸ್ವಾಧಾರಾವರಣಾತ್ತಸ್ಯಾ ದೋಷತ್ವಂ ಚ ಸಮಾಗತಂ ॥೭॥

ಚೈತನ್ಯಸ್ಯ ಸಮಾಯೋಗಾನ್ನಿಮಿತ್ತತ್ವಂ ಚ ಕಥ್ಯತೇ ।
ಪ್ರಪಂಚ ಪರಿಣಾಮಾಚ್ಚ ಸಮವಾಯಿತ್ವಮುಚ್ಯತೇ ॥೮॥

---

ಈ ಬಗೆಯ ಕರ್ಮಗಳು, ಜೀವರು, ಕಾಲವು ಇವೆಲ್ಲವುಗಳೂ ಅನಾದಿಯಾಗಿರುತ್ತವೆ. ಮತ್ತು ಇವು ಸ್ವಪ್ನದಲ್ಲಿ ಕಂಡ ವಸ್ತುಗಳು ತೋರಿ ಮಾಯವಾಗುವಂತೆ, ವ್ಯವಹಾರ ಕಾಲದಲ್ಲಿ ತೋರುತ್ತಿದ್ದು, ಪ್ರಲಯಕಾಲದಲ್ಲಿ ಮಾಯೆಯಲ್ಲಿ ಅಭೇದವನ್ನು ಹೊಂದಿ ವಿಲೀನವಾಗಿರುವುವು. ಎಂದು ದೇವಿಯು ಹೇಳುತ್ತಾಳೆ. ॥೬॥

ನಾನು ನಿರ್ಗುಣಳಾದರೂ ಈ ತೆರನಾದ ಒಂದು ಶಕ್ತಿಯಿಂದ ಮತ್ತು ಜೀವರ ಕರ್ಮ, ಕಾಲಗಳಿಂದಕೂಡಿ ಜಗತ್ತಿಗೆ ಕಾರಣಳಾಗುವೆನು. ನನ್ನಲ್ಲಿರುವ ಶಕ್ತಿರೂಪವಾದ ಈ ಮಾಯೆಯು ಹೇಗೆ ನನ್ನನ್ನು ಆವರಿಸುವುದಿಲ್ಲವೋ, ಆದರಂತೆ ಜೀವಗತ ಮಾಯೆಯೂ ಕೂಡ ಜೀವನನ್ನು ಆವರಿಸುವುದಿಲ್ಲವಾದ ಕಾರಣ, ಎಲ್ಲ ಜೀವಿಗಳೂ ಸದಾಮುಕ್ತರು. ಹಾಗಾದರೆ ಜಗತ್ತಿನ ಸೃಷ್ಟಿಯೇ ಬೇಕಿಲ್ಲವೆಂದು ಕೆಲವರು ಶಂಕಿಸ ಬಹುದು. ಆದರೆ ಮಾಯೆಯು ಎರಡು ರೂಪದಿಂದ ಇರುವುದು. ಬ್ರಹ್ಮನಲ್ಲಿರುವ ಅದು ಮಾಯೆ ಎನಿಸಿಕೊಳ್ಳುವುದು. ಜೀವನಲ್ಲಿ ಇರುವ ಅದರ ಅಂಶರೂಪವು ಅವಿದ್ಯೆ ಎಂದು ಹೆಸರನ್ನು ಪಡೆಯುವುದು. “ಮಾಯಾಚಾವಿದ್ಯಾ ಚ ಸ್ವಯಮೇವಭವತಿ” ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಅವಿದ್ಯೆಯಲ್ಲಿ ಸ್ವಾಶ್ರಯವಾದ ಜೀವರನ್ನು ಮೋಹಗೊಳಿಸುವ ಶಕ್ತಿಯು ಇರುವುದು. ಮಾಯೆಯಲ್ಲಿ ಅದು ಇಲ್ಲವಾದ್ದರಿಂದ ತನ್ನ ಅಧಿಷ್ಠಾನವಾದ ದೇವಿಯನ್ನು ಮೋಹಗೊಳಿಸಿ ಅವರಿಸಲಾರದು. ಆದರೆ ಜೀವರನ್ನು ಅದು ಆವರಿಸಬಲ್ಲುದಾದುದರಿಂದ ಜೀವರಿಗೆ ಬಂಧವು ಸಿದ್ಧವಾಗುವುದು. ಅದಕ್ಕಾಗಿಯೇ ಸೃಷ್ಟಿಯು ಮುಂತಾದ ಈ ಪ್ರಪಂಚವ್ಯವಹಾರವು ಆ ಜೀವರ ಮುಕ್ತಿ ಗೋಸ್ಕರ ನೆರವೇರುತ್ತಿರಬೇಕಾಗಿದೆ ಎಂದು ತಿಳಿಯಬೇಕು. ಶ್ಲೋ. ೧೮ ನೋಡಿ ॥೭॥

ಜಗತ್ತಿನಲ್ಲಿರುವ ಪ್ರತಿಯೊಂದು ಕಾರ್ಯಕ್ಕೂ ಸಮವಾಯಿಕಾರಣ, ನಿಮಿತ್ತ ಕಾರಣಗಳೆರಡೂ ಆವಶ್ಯಕವಾಗಿರುವುದು ಕಂಡುಬರುತ್ತಿದೆ. ಅದರಂತೆಯೇ ಸೃಷ್ಟಿಯ ಪೂರ್ವದಲ್ಲಿ ಪರಬ್ರಹ್ಮ ಚೈತನ್ಯವು ಒಂದೇ ಇರುವುದರಿಂದ ಹೇಗೆ ಕಾರ್ಯೋತ್ಪ ತ್ತಿಯು ಆಗುವುದು ? ಎಂದು ಕೇಳಿದರೆ, ಮಾಯೆಯ ಸಮಾಯೋಗದಿಂದ ಚೈತ

**ಕೇಚಿತ್ತಾಂ ತಪ ಇತ್ಯಾಹುಸ್ತಮಃ ಕೇಚಿಜ್ಜಡಂ ಪರೇ ।**
**ಜ್ಞಾನಂ ಮಾಯಾ ಪ್ರಧಾನಂ ಚ ಪ್ರಕೃತಿಂ ಶಕ್ತಿಮಪ್ಯಜಾಂ ॥೯॥**

**ವಿಮರ್ಶ ಇತಿ ತಾಂ ಪ್ರಾಹುಃ ಶೈವಶಾಸ್ತ್ರವಿಶಾರದಾಃ ।**
**ಅವಿದ್ಯಾ ಮಿತರೇ ಪ್ರಾಹುಃ ವೇದತತ್ತ್ವಾರ್ಥಚಿಂತಕಾಃ ॥೧೦॥**

---

ನ್ಯದ ಪ್ರತಿಬಿಂಬವು ಮಾಯೆಯಲ್ಲಿ ಬೀಳುವುದು. ಪ್ರತಿಬಿಂಬಿತವಾದ ಆ ಚಿದಾಭಾಸವೇ ಜಗತ್ತಿಗೆ ನಿಮಿತ್ತಕಾರಣವಾಗುವುದು. ಮಾಯೆಯು ಪ್ರಪಂಚರೂಪದಿಂದ ಪರಿಣಾಮ ಹೊಂದುವುದಾದ್ದರಿಂದ, ಮಾಯೆಯು ಪರಿಣಾಮ ಕಾರಣವೆಂದು ಹೆಸರನ್ನು ಪಡೆಯುವುದು. ಹೀಗೆ ಈ ಜಗತ್ತಿಗೆ ಮಾಯೆಯು ಉಪಾದಾನ ಕಾರಣವೆಂದೂ, ಮಾಯೆಯಲ್ಲಿ ಪ್ರತಿಬಿಂಬಿತವಾದ ಚಿದಾಭಾಸವು ನಿಮಿತ್ತಕಾರಣವೆಂದೂ, ಅಧಿಷ್ಠಾನಭೂತವಾದ ಶುದ್ಧಬಿಂಬಭೂತ ಚೈತನ್ಯವು ವಿವರ್ತೋಽಪಾದಾನಕಾರಣವೆಂದೂ ಸಿದ್ಧವಾಯಿತು. ॥೮॥

ವೇದಗಳ ಕೆಲವು ಶಾಖೆಯವರು ಈ ಮಾಯೆಗೆ " ತಪಸಾ ಚೀಯತೇ ಬ್ರಹ್ಮ" ಎಂಬ ಮುಂಡಕೋಪನಿಷತ್ತಿನ ಶ್ರುತಿಯಲ್ಲಿ ಹೇಳಿರುವಂತೆ ತಪಸ್ಸೆಂತಲೂ, ಮತ್ತೆ ಕೆಲವರು " ನಾಸದಾಸೀ ನ್ನೋಽಸದಾಸೀತ್ " " ತಮ ಆಸೀತ್ತಮಸಾ ಗೂಢಮಗ್ರೇ " ಎಂಬ ಶ್ರುತಿಯಲ್ಲಿ ನಿರೂಪಿಸಿರುವ ಹಾಗೆ ತಮಸ್ಸೆಂತಲೂ, ಇನ್ನು ಕೆಲವರು " ತದೇತಜ್ಜಡಮಿತಿ " ತಾಪನೀಯ ಶ್ರುತಿಯಲ್ಲಿ ಪ್ರತಿಪಾದಿಸಿರುವಂತೆ ಜಡವೆಂತಲೂ, " ಸ ಐಕ್ಷತ ಲೋಕಾನ್ನು ಸೃಜಾ " ಎಂಬುದರಲ್ಲಿ ಸೂಚಿಸಿರುವಂತೆ ಜ್ಞಾನವೆಂತಲೂ, ಇನ್ನೂ ಇದರಂತೆಯೇ ಅಜಾ, ಮಾಯಾ, ಪ್ರಧಾನ, ಪ್ರಕೃತಿ, ಶಕ್ತಿ, ಪರಾ, ಎಂಬ ಹೆಸರುಗಳೂ ಶ್ವೇತಾಶ್ವತರ ಮುಂತಾದ ಶಾಖೆಯ ಉಪನಿಷತ್ತಿನಲ್ಲಿ ಪ್ರಸಿದ್ಧವಾಗಿರುವುವು. ಇದರಿಂದ ಒಟ್ಟಿನಲ್ಲಿ ಮಾಯಾ ಎಂಬುದು ಎಲ್ಲ ಶ್ರುತಿಗಳಿಂದಲೂ ಸಿದ್ಧವಾಗುವುದು. ॥೯॥

ಶೈವಶಾಸ್ತ್ರದಲ್ಲಿ ಪಂಡಿತರಾದವರು ಈ ಮಾಯೆಯನ್ನು ವಿಮರ್ಶ ಎಂದು ಕರೆಯುತ್ತಿರುವರು. ವೇದಾಂತತತ್ತ್ವವನ್ನು ವಿಚಾರಿಸುವ ಇತರ ವಿದ್ವಾಂಸರು ಇದನ್ನು ಅವಿದ್ಯೆ ಎಂದು ಹೇಳುವರು. ಈ ರೀತಿಯಾಗಿ ಬೇರೆ ಬೇರೆ ವೇದ, ಆಗಮ, ನಿಗಮ ಮುಂತಾದ ಶಾಸ್ತ್ರಗಳಲ್ಲಿ ನಾನಾವಿಧವಾದ ಹೆಸರುಗಳು ಈ ಒಂದೇ ಮಾಯಾಶಕ್ತಿ ತತ್ತ್ವಕ್ಕೆ ಬಂದಿರುವುದು ಕಂಡುಬರುತ್ತಿದೆ. ॥೧೦॥

ಏವಂ ನಾನಾವಿಧಾನಿ ಸ್ಯುಃ ನಾಮಾನಿ ನಿಗಮಾದಿಷು ।
ತಸ್ಯಾ ಜಡತ್ವಂ ದೃಶ್ಯತ್ವಾತ್ ಜ್ಞಾನನಾಶಾತ್ ತತೋಽಸತೀ ॥೧೧॥

ಚೈತನ್ಯಸ್ಯ ನದೃಶ್ಯತ್ವಂ ದೃಶ್ಯತ್ವೇ ಜಡಮೇವ ತತ್ ।
ಸ್ವಪ್ರಕಾಶಂ ಚ ಚೈತನ್ಯಂ ನ ಪರೇಣ ಪ್ರಕಾಶಿತಂ ॥೧೨॥

---

ಮಾಯೆಗೆ ಜಡತ್ವವನ್ನೂ, ಮಿಥ್ಯಾತ್ವವನ್ನೂ ಏಕೆ ಒಪ್ಪಬೇಕು ? ಎಂದು ಕೇಳಿದರೆ, ಇದರಲ್ಲಿ ದೃಶ್ಯತ್ವವಿರುವುದರಿಂದ, ಎಂದರೆ ಘಟಾದಿಪದಾರ್ಥಗಳಂತೆ ಕಣ್ಣಿಗೆ ಕಾಣುವ ಪದಾರ್ಥವಾದ್ದರಿಂದ, ಇದು ಜಡಪದಾರ್ಥವೆಂತಲೂ, ಮತ್ತು ಇದರಲ್ಲಿ ತನ್ನ ಅಧಿಷ್ಠಾನಭೂತನಾದ ಆತ್ಮನ ಜ್ಞಾನದಿಂದ ನಾಶ್ಯತ್ವವು ಇರುವುದರಿಂದ ಇದು ಮಿಥ್ಯಾಪದಾರ್ಥವೆಂತಲೂ, ಹೇಳಿಸಿಕೊಳ್ಳುವುದು. ಎಂಬ ಉತ್ತರವನ್ನು ಹೇಳಬಹುದು. ಈ ಮಾಯಾಶಕ್ತಿಯ ಧರ್ಮಗಳು ಆತ್ಮನಲ್ಲಿ ಇಲ್ಲವು. ಹೇಗೆಂದರೆ, ||೧೧||

ಈ ಘಟಾದಿಗಳು ಕಣ್ಣಿಗೆ ಕಾಣುವ ಪದಾರ್ಥಗಳಾದುದರಿಂದ ಅವು ಜಡವಾದುವುಗಳು, ಎನ್ನಿಸಿಕೊಂಡಿವೆ. ಆತ್ಮನು ಕಣ್ಣಿಗೆ ಕಾಣುವ ಪದಾರ್ಥವಲ್ಲದಿರುವುದರಿಂದ, ಆತ್ಮನಿಗೆ ಜಡತ್ವವಿರುವುದಿಲ್ಲ. ಇಲ್ಲವಾದರೆ ಆತ್ಮನೂ ಕೂಡ ಜಡವಾಗುತ್ತಿದ್ದನು. ಅವನೂ ಕೂಡ ಜಡವಾದ ಪದಾರ್ಥವಾಗಿದ್ದರೆ ಜಗತ್ತಿನಲ್ಲಿ ಪ್ರಕಾಶಕವಾದ ಬೇರೆ ಪದಾರ್ಥವೇ ಇಲ್ಲದೆಹೋಗುವುದರಿಂದ ಜಗತ್ತೆಲ್ಲವೂ ಅಂಧ್ಯವನ್ನು ಹೊಂದುವ ಪ್ರಸಂಗವು ಬರುತ್ತಿದ್ದಿತು. ಆದುದರಿಂದ ಚೈತನ್ಯವು ದೃಶ್ಯವಲ್ಲ ಸ್ವಪ್ರಕಾಶವು ಎಂದರೆ ತನಗೆ ತಾನೇ ತೋರುತ್ತಿರುತ್ತದೆ, ಮತ್ತು ಇತರ ಪ್ರಕಾಶವಸ್ತುವಿನ ಅಪೇಕ್ಷೆಯಿಂದ ತೋರುವುದಲ್ಲವು. ದೀಪದಂತೆ ಚೈತನ್ಯವು ಸ್ವಯಂಪ್ರಕಾಶವಾದುದಾಗಿಯೂ, ಪರಪ್ರಕಾಶಕವಾದುದಾಗಿಯೂ ಇರುವುದು. ಆದುದರಿಂದ ಅಂತಹ ಆತ್ಮವಸ್ತುವು ಇಲ್ಲವೆಂದೂ ಹೇಳಲಾಗುವುದಿಲ್ಲವು. ಈ ವಿಷಯವನ್ನು ಮುಂಡಕೋಪನಿಷತ್ತಿನಲ್ಲಿಯೂ "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ | ತಮೇವ ಭಾಂತ ಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ " ಯೇನ ಸೂರ್ಯಸ್ತಪತಿ ತೇಜಸೇದ್ಧಃ |'' ಎಂಬ ಶ್ರುತಿಯಲ್ಲೂ ಹೇಳಿದೆ. ||೧೨||

**ಅನವಸ್ಥಾದೋಷಸತ್ವಾನ್ನ ಸ್ವೇನಾಪಿ ಪ್ರಕಾಶಿತಂ ।**
**ಕರ್ಮಕರ್ತೃ ವಿರೋಧಃ ಸ್ಯಾತ್ ತಸ್ಮಾತ್ತದ್ದೀಪವತ್ ಸ್ವಯಂ ॥೧೩॥**

**ಪ್ರಕಾಶಮಾನಮನ್ಯೇಷಾಂ ಭಾಸಕಂ ವಿದ್ಧಿ ಪರ್ವತ ।**
**ಅತ ಏವ ಚ ನಿತ್ಯತ್ವಂ ಸಿದ್ಧಂ ಸಂವಿತ್ತನೋರ್ಮಮ ॥೧೪॥**

**ಜಾಗ್ರತ್ಸ್ವಪ್ನಸುಷುಪ್ತ್ಯಾದೌ ದೃಶ್ಯಸ್ಯ ವ್ಯಭಿಚಾರತಃ ।**
**ಸಂವಿದೋ ವ್ಯಭಿಚಾರಶ್ಚ ನಾನುಭೂತೋಽಸ್ತಿ ಕರ್ಹಿಚಿತ್ ॥೧೫॥**

---

ಹಾಗಲ್ಲದೆ ಆತ್ಮನಿಗೂ ಎರಡನೆಯ ವಸ್ತುವಿನಿಂದ ಪ್ರಕಾಶ್ಯತ್ವವನ್ನು ಅಂಗೀಕರಿಸಿದರೆ, ಆ ಎರಡನೇ ವಸ್ತುವಿಗೇ ಪ್ರಕಾಶಕವಾದ ಇನ್ನೊಂದು ವಸ್ತುವಿರಬೇಕು. ಅದಕ್ಕೆ ಮತ್ತೊಂದು, ಈರೀತಿಯಲ್ಲಿ ಅನವಸ್ಥೆಯೆಂಬ ದೋಷವು ಬರುವುದು. ಆದ್ದರಿಂದ ಆತ್ಮನಿಗೆ ಸ್ವಪ್ರಕಾಶತ್ವವನ್ನು ಅಂಗೀಕರಿಸಬೇಕು. ಹಾಗಾದರೆ ದರ್ಶನ ಕರ್ತೃತ್ವವೂ ಕರ್ಮತ್ವವೂ, ಎರಡೂ ಒಂದೇ ಕಡೆಯಲ್ಲಿರುವುದು ಬಾಧಿತವಾದುದರಿಂದ, ಆತ್ಮನು ತನ್ನನ್ನು ತಾನು ಪ್ರಕಾಶಿಸುತ್ತಾನೆ. ಎಂದೂ ಹೇಳುವುದಕ್ಕೆ ಆಗುವುದಿಲ್ಲ, ಎಂದರೆ ದೀಪದಂತೆ ಸ್ವತಃ ಪ್ರಕಾಶರೂಪತ್ವವನ್ನು ಅಂಗೀಕರಿಸಬೇಕು. ಎಂದು ಸಮಾಧಾನವು. ಇದು ಎಲ್ಲರ ಅನುಭವದಲ್ಲೂ ಇದೆ. ಇಲ್ಲದಿದ್ದರೆ ಜಗತ್ತಿಗೆಲ್ಲಕ್ಕೂ ಕುರುಡುತನವು ಬರಬೇಕಾಗುತ್ತದೆ. ಎಂದು ಮೇಲೆ ವಿವರಿಸಿದೆ. ॥೧೩॥

ಆತ್ಮನು ಕೇವಲ ತಾನುಮಾತ್ರ ಪ್ರಕಾಶರೂಪನಲ್ಲ. ಇತರರನ್ನೂ ಪ್ರಕಾಶಿಸುವವನು. ಆದ್ದರಿಂದಲೇ ಎಲೈ ಪರ್ವತರಾಜನೇ, ಜ್ಞಾನಸ್ವರೂಪವಾದ ಜ್ಞಾತೃವಿನ ಶರೀರಕ್ಕೆ ಎಂದರೆ ಸ್ವರೂಪಜ್ಞಾನಕ್ಕೆ ನಿತ್ಯತ್ವವು ಉಪಪನ್ನವಾಗುವುದು. ಏಕೆಂದರೆ,॥೧೪॥

ಪ್ರತಿಯೊಬ್ಬರಿಗೂ ಪ್ರತಿದಿನದಲ್ಲೂ ಸಾಮಾನ್ಯವಾಗಿ ಅನುಭವಕ್ಕೆ ಬರುವ, ಎಚ್ಚರ, ಕನಸು, ನಿದ್ರೆ ಎಂಬ ಮೂರು ಅವಸ್ಥೆಗಳಲ್ಲಿ ಗೋಚರವಾಗುವ ದೃಶ್ಯಗಳಿಗೆ ವ್ಯಭಿಚಾರವು, ಎಂದರೆ ಒಂದು ಅವಸ್ಥೆಯಲ್ಲಿ ತೋರಿದುದು ಇನ್ನೊಂದು ಅವಸ್ಥೆಯಲ್ಲಿ ಗೋಚರವಾಗದಿರುವಿಕೆಯು ಎಲ್ಲರಿಗೂ ಅನುಭವಕ್ಕೆ ಬರುತ್ತಿದೆ. ಆದರೆ ಎಲ್ಲಕ್ಕೂ ದ್ರಷ್ಟೃವಾದ ಜ್ಞಾನಸ್ವರೂಪನಾದ ಆತ್ಮನಿಗಾದರೋ ಈ ಅವಸ್ಥೆಗಳು ಬದಲಾಯಿಸುತ್ತಿದ್ದರೂ ಇರುವಿಕೆಯೇ ಅನುಭವಕ್ಕೆ ಬರುತ್ತಿರುತ್ತದೆ. ಆದುದರಿಂದ ಜ್ಞಾನಸ್ವರೂಪನಾದ ಆತ್ಮನಿಗೆ ನಿತ್ಯತ್ವವನ್ನು ಒಪ್ಪುವುದು ಆವಶ್ಯಕವಾಗಿ ಏರ್ಪಡು

**ಯದಿ ತಸ್ಯಾಪ್ಯನುಭವಸ್ತರ್ಹ್ಯಯಂ ಯೇನ ಸಾಕ್ಷಿಣಾ ।**
**ಅನುಭೂತಃ ಸ ಏವಾತ್ರ ಶಿಷ್ಟಃ ಸಂವಿದ್ವಪುಃ ಪುರಾ ॥೧೬॥**

**ಅತ ಏವ ಚ ನಿತ್ಯತ್ವಂ ಪ್ರೋಕ್ತಂ ಸಚ್ಛಾಸ್ತ್ರಕೋವಿದೈಃ ।**
**ಆನಂದರೂಪತಾ ಚಾಸ್ಯಾಃ ಪರಪ್ರೇಮಾಸ್ಪದತ್ವತಃ ॥೧೭॥**

---

ತ್ತದೆ. ಈ ಅಂಶವನ್ನು ಶ್ರೀ ಶಂಕರಾಚಾರ್ಯರು ರಚಿಸಿರುವ ದಕ್ಷಿಣಾಮೂರ್ತಿಸ್ತೋತ್ರದಲ್ಲಿ ಹೀಗೆ ಹೇಳಿದಾರೆ—

ಬಾಲ್ಯಾದಿಷ್ವಪಿ ಜಾಗ್ರದಾದಿಷು ತಥಾ ಸರ್ವಾಸ್ವವಸ್ಥಾಸ್ವಪಿ
ವ್ಯಾವೃತ್ತಾಸ್ವನುವರ್ತಮಾನ ಮಹಮಿತ್ಯಂತಃ ಸ್ಫುರಂತಂ ಸದಾ ।
ಸ್ವಾತ್ಮಾನಂ ಪ್ರಕಟೀಕರೋತಿ ಭಜತಾಂ ಯೋ ಮುದ್ರಯಾ ಭದ್ರಯಾ
ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥

ಎಂದರೆ, ನಿನ್ನೆ ಮುಂತಾದ ಹಿಂದಿನ ಕಾಲದಲ್ಲಿ ಎಚ್ಚರವನ್ನು ಈಗಿನಂತೆ ಅನುಭವಿಸುತ್ತಿದ್ದ ನಾನು ಮಲಗಿ ಸ್ವಪ್ನವ (ಕನಸ)ನ್ನು ಕಂಡು, ನಿದ್ರೆಯನ್ನೂ ಅನುಭವಿಸಿ, ಈಗಲೂ ಪುನಃ ಆ ನಾನೇ ಎಚ್ಚರವಾಗಿರುವಿಕೆಯನ್ನು ಅನುಭವಿಸುತ್ತಿದೇನೆ. ಎಂಬ ಅನುಭವವು ಎಲ್ಲರಿಗೂ ಇರುತ್ತದೆ. ಆದುದರಿಂದ ಈ ಮೂರು ಅವಸ್ಥೆಗಳಿಗೂ ಹಾಗೆಯೇ ಬಾಲ್ಯ, ಯೌವನ, ಮುಪ್ಪು ಎಂಬ ಮೂರು ಅವಸ್ಥೆಗಳಿಗೂ ಸಾಕ್ಷಿಯಾಗಿರುವ ಆತ್ಮನು ಜ್ಞಾನರೂಪನೂ ನಿತ್ಯನೂ ಆಗಿದಾನೆ. ॥೧೫॥

ಬೌದ್ಧರು "ಯತ್ ಸತ್ ತತ್ ಕ್ಷಣಿಕಂ" ಎಂಬ ನ್ಯಾಯದಿಂದ ಎಲ್ಲ ಪದಾರ್ಥದಂತೆ ಆತ್ಮನೂ ಕೂಡ ಅನಿತ್ಯನೆಂದು ವಾದಿಸುತ್ತಾ ಜ್ಞಾನಾಭಾವವನ್ನು ಅಂಗೀಕರಿಸುವರು. ಅವರ ಮತದಂತೆ ಸಂವಿದ್ರೂಪನಾದ ಆತ್ಮನಿಗೆ ಅನಿತ್ಯತ್ವವನ್ನು (ಅಭಾವವನ್ನು) ಅಂಗೀಕರಿಸಬಹುದೆಂದರೆ ಆ ಸಂವಿದ್ರೂಪದ ಅಭಾವವು ಯಾವ ಸಾಕ್ಷಿಗೆ ಪ್ರತ್ಯಕ್ಷವಾಗುತ್ತದೆಯೋ, ಅದೇ ಸಾಕ್ಷಿಯೇ ಸಂವಿದ್ರೂಪನಾಗಿ ಅವಶಿಷ್ಟನಾಗುವನು. ಆದ್ದರಿಂದ ಜ್ಞಾನಸ್ವರೂಪನಾದ ಆತ್ಮನಿಗೆ ಯಾವಾಗಲೂ ಅನಿತ್ಯತ್ವವನ್ನು ಹೇಳಲು ಸಾಧ್ಯವಿಲ್ಲವು. ಆದುದರಿಂದ ಸಂವಿತ್ ಅಥವಾ ಜ್ಞಾನರೂಪನಾದ ಆತ್ಮನು ಎಲ್ಲ ಅನುಭವಗಳಿಗೂ ಸಾಕ್ಷಿಯಾಗಿರುತ್ತಾ ಪ್ರಕಾಶಕನಾಗಿ ನಿತ್ಯನಾಗಿರುತ್ತಾನೆಂಬುದು ಸಿದ್ಧಾಂತವಾಗಿ ಏರ್ಪಡುತ್ತದೆ. ॥೧೬॥

ಈ ಕಾರಣದಿಂದಲೇ ಸಂವಿದ್ರೂಪನಾದ ಆತ್ಮನಿಗೆ ಹೇಗಾದರೂ ಅನಿತ್ಯತ್ವವನ್ನು ಹೇಳುವದಕ್ಕೆ ಬರುವುದಿಲ್ಲವಾದಕಾರಣ ಸರಿಯಾದ ಯುಕ್ತಿ ಮತ್ತು ಅನು

**ಮಾ ನ ಭೂವಂ ಹಿ ಭೂಯಾಸಮಿತಿ ಪ್ರೇಮಾತ್ಮನಿ ಸ್ಥಿತಂ ।**
**ಸರ್ವಸ್ಯಾನ್ಯಸ್ಯ ಮಿಥ್ಯಾತ್ವಾದಸಂಗತ್ವಂ ಸ್ಫುಟಂ ಮಮ ॥೧೪॥**

ಭವಗಳನ್ನು ಅವಲಂಬಿಸಿರುವ ಸಚ್ಛಾಸ್ತ್ರವನ್ನು ಬಲ್ಲ ಎಲ್ಲ ಪಂಡಿತರೂ ಕೂಡ ಆತ್ಮನಿಗೆ ನಿತ್ಯತ್ವವನ್ನು ಅಂಗೀಕರಿಸಿದಾರೆ. ಅಷ್ಟೇ ಅಲ್ಲದೆ ಎಲ್ಲ ಜನರಿಗೂ ಅತಿಶಯ ವಾಗಿ ಪ್ರೀತ್ಯಾಸ್ಪದವಾದುದರಿಂದ ಸಂವಿದ್ರೂಪನಾದ ಆತ್ಮನಿಗೆ ಆನಂದರೂಪತೆಯೂ ಕೂಡ, ಕೂಡುವದು. ಆತ್ಮನು ಆನಂದರೂಪವಾಗಿಲ್ಲದಿದ್ದರೆ ಅವನನ್ನು ಯಾರೂ ಪ್ರೀತಿಸುತ್ತಿರಲಿಲ್ಲ. ಆದರೆ ಎಲ್ಲಕ್ಕಿಂತಲೂ ಹೆಚ್ಚಾದ ಪ್ರೀತಿಗೆ ಆತ್ಮನು ಪಾತ್ರನಾಗಿರು ವುದು ಎಲ್ಲರ ಅನುಭವದಲ್ಲೂ ಇದೆ. ಆದುದರಿಂದ ಆತ್ಮನು ಆನಂದರೂಪನು ಏಕೆಂದರೆ—॥೧೬॥

ನಾನು ಯಾವಾಗಲೂ ಇರಬೇಕು. ಮತ್ತು ಇಲ್ಲದಿರಬಾರದು ಎಂಬ ಜ್ಞಾನವು ಯಾರಿಗೂ ಬರಕೇ ಇರುವುದಿಲ್ಲವು. ಮತ್ತು ಎಲ್ಲರಿಗೂ ಯಾವಾಗಲೂ ನಾನು ಇರು ವೆನು ಎಂಬ ಜ್ಞಾನವು ಇದ್ದೇ ಇರುವುದರಿಂದ ಇದನ್ನೇ ಪರಮ ಪ್ರೇಮವೆನ್ನುವರು. ಅಲ್ಲದೆ ಎಲ್ಲರಿಗೂ ಬರುತ್ತಿರುವ ಪ್ರತಿಯೊಂದು ಅನುಭವದಲ್ಲೂ ವಿಷಯ, ಇಂದ್ರಿಯ, ಮನಸ್ಸು, ಆತ್ಮ, ಎಂಬ ಈ ನಾಲ್ಕು ವಸ್ತುಗಳಿರುತ್ತವೆ. ಇವುಗಳಲ್ಲಿ ಮೊದಲಿನ ಮೂರು ಬದಲಾಯಿಸುತ್ತಾ ಅನಿತ್ಯವಾಗಿಯೂ ದುಃಖಪರಿಣಾಮಕಾರಿಯಾಗಿಯೂ ಇರುವುದು ಗೊತ್ತಾಗುತ್ತದೆ. ಆತ್ಮನು ಮಾತ್ರ ನಿತ್ಯವಾಗಿ ಎಲ್ಲ ಅನುಭವಗಳಲ್ಲೂ ತೋರುತ್ತಿರುತ್ತಾ ನಿತ್ಯನೂ ಜ್ಞಾನಸ್ವರೂಪನೂ ಆಗಿದಾನೆಂದು ಗೊತ್ತಾಗುತ್ತದೆ. ಮತ್ತು ಸುಖಾನುಭವಗಳಲ್ಲಿನ ಸುಖವು ಮೇಲೆ ಹೇಳಿದ ಮೊದಲಿನ ಮೂರರ ಸ್ವಭಾವವಾಗಿರದೆ, ಪರಿಶೇಷದಿಂದ ಆತ್ಮನ ಸ್ವರೂಪವಾಗಿದೆ ಎಂದೂ ಗೊತ್ತಾಗುವುದ ರಿಂದ ಆತ್ಮನು ಆನಂದರೂಪನು. ದುಃಖಾನುಭವಗಳಲ್ಲಿ ತೋರುವ ದುಃಖವು ಆ ಮೊದಲಿನ ಮೂರಕ್ಕೇ ಸಂಬಂಧಿಸಿರುತ್ತದೆಂಬುದೂ ಪರಿಶೀಲನೆಯಿಂದ ತಿಳಿದು ಬರು ತ್ತದೆ. ಆದುದರಿಂದ ಆತ್ಮನು ಸಚ್ಚಿದಾನಂದರೂಪನಾಗಿರುತ್ತಾನೆ. ಈ ತೆರನಾದ ಪ್ರೇಮವು ಎಲ್ಲ ಪ್ರಾಣಿಗಳಿಗೂ ಆಯಾ ಆತ್ಮವಿಷಯದಲ್ಲಿ ಯಾವಾಗಲೂ ತಪ್ಪದೆ ಇರುವುದರಿಂದ ಜ್ಞಾನಕ್ಕೆ ಆನಂದಸ್ವರೂಪವೂ ಇದ್ದೇ ಇರುವುದು. ಹಗ್ಗದಲ್ಲಿ ಕಾಣುವ ಹಾವಿನಂತೆ, ಸಕಲ ಪ್ರಪಂಚವೂ ಮಾಯಾ ನಿರ್ಮಿತವಾಗಿ ಮಿಥ್ಯಾವಸ್ತು ವಾಗಿ ತೋರುತ್ತಿರುವುದರಿಂದ, ಆತ್ಮನಿಗೂ, ಮಾಯಿಕವಾದ ಪ್ರಪಂಚಕ್ಕೂ, ಆತ್ಮ ಸ್ವರೂಪದ ಅಜ್ಞಾನದಿಂದುಂಟಾಗಿರುವ ನಾನು ನನ್ನದು ಎಂಬ ಅಭಿಮಾನಿಕವಾದ ಸಂಬಂಧವಲ್ಲದೆ ಬೇರೆ ಯಾವತೆರನಾದ ಸಂಬಂಧವೂ ಇರುವುದಿಲ್ಲವು. ಇದರಿಂದ

**ಅಪರಿಚ್ಛಿನ್ನತಾಪ್ಯೇವಂ ಅತ ಏವ ಮತಾ ಮಮ ।**
**ತಚ್ಚ ಜ್ಞಾನಂ ನಾತ್ಮಧರ್ಮೋ ಧರ್ಮತ್ವೇ ಜಡತಾಽತ್ಮನಃ ॥೧೯॥**

**ಜ್ಞಾನಸ್ಯ ಜಡಶೇಷತ್ವಂ ನ ದೃಷ್ಟಂ ನಚ ಸಂಭವಿ ।**
**ಚಿದ್ಧರ್ಮತ್ವಂ ತಥಾ ನಾಸ್ತಿ ಚಿತಶ್ಚಿನ್ನಹಿ ಭಿದ್ಯತೇ ॥೨೦॥**

**ತಸ್ಮಾದಾತ್ಮಾ ಜ್ಞಾನರೂಪಃ ಸುಖರೂಪಶ್ಚ ಸರ್ವದಾ ।**
**ಸತ್ಯಃ ಪೂರ್ಣೋಽಪ್ಯಸಂಗಶ್ಚ ದ್ವೈತಜಾಲವಿವರ್ಜಿತಃ ॥೨೧॥**

---

ಆತ್ಮನಿಗೆ ಅಸಂಗತ್ವವು ಸಿದ್ಧವಾಗಿರುವುದು. ಎಲ್ಲರಲ್ಲೂ ಇರುವ ಈ ಸಚ್ಚಿದಾನಂದ ರೂಪವಾದ ಆತ್ಮಸ್ವರೂಪಳೇನಾನಾಗಿರುವುದರಿಂದ ನನಗೆ ಅಸಂಗತ್ವವು ಸ್ವತಸ್ಸಿದ್ಧ ವಾಗಿದೆ. ॥೧೮॥

ಇದರಂತೆಯೇ ಪರಿಚ್ಛಿನ್ನವಾದ ಪರಿಮಾಣವುಳ್ಳ ಎಲ್ಲ ಸದಾರ್ಥಗಳೂ ಅನಿತ್ಯಗಳಾದುದರಿಂದ ಆತ್ಮನಿಗೆ ಅಪರಿಚ್ಛಿನ್ನತ್ವವೂ ಸಿದ್ಧವಾಗುತ್ತದೆ. ಇಲ್ಲಿ ನೈಯಾ ಯಿಕರು ಜ್ಞಾನವು ಆತ್ಮಧರ್ಮವೇ ಹೊರತು ಆತ್ಮಸ್ವರೂಪವಲ್ಲವೆಂದು ಹೇಳುತ್ತಾರೆ. ಅದರಂತೆ ನಾವೂ ಅಂಗೀಕರಿಸಿದರೆ, ನಾವು ಆತ್ಮನಿಗೆ ಜಡತ್ವವನ್ನೂ ಅಂಗೀಕರಿಸಬೇ ಕಾಗುವುದು. ಏಕೆಂದರೆ, ಜಗತ್ತಿನಲ್ಲಿ ಜ್ಞಾನಾತಿರಿಕ್ತವಾದಂಥ ಎಲ್ಲ ವಸ್ತುವೂ ಕೂಡ ಜಡವೆಂಬುದು ಅನುಭವವ್ಯಹಾರಗಳಿಂದ ಸಿದ್ಧವಾಗಿದೆ. ಆದುದರಿಂದ ಜ್ಞಾನವು ಆತ್ಮನ ಧರ್ಮವಲ್ಲವು. ಮತ್ತೇನೆಂದರೆ ಅದು ಚೈತನ್ಯರೂಪವಾದುದರಿಂದ ಆತ್ಮ ಸ್ವರೂಪವೇ ಆಗಿರುತ್ತದೆ. ॥೧೯॥

ಅಲ್ಲದೆ ಜ್ಞಾನಕ್ಕೆ ಜಡಧರ್ಮತ್ವವು ಎಲ್ಲಿಯೂ ಕಂಡುಬಂದಿಲ್ಲ. ಸಂಭವಿಸುವ ಹಾಗೂ ಇಲ್ಲವು. ಏಕೆಂದರೆ ಆತ್ಮನಿಗೆ ಚೈತನ್ಯರೂಪತ್ವವನ್ನು ಅಂಗೀಕರಿಸಿ ಅದರಲ್ಲಿ ಜ್ಞಾನರೂಪವಸ್ತುವಿದೆ ಎಂದು ಹೇಳಬೇಕಾಗಿದೆ. ಆದರೆ ಎರಡೂ ಚೈತನ್ಯಸ್ವರೂಪ ವಾದರೆ ಧರ್ಮಧರ್ಮಿಭಾವವು ಎಂದರೆ ಭೇದವು ಕೂಡುವ ಬಗೆ ಹೇಗೆ? ಏಕೆಂದರೆ ಎರಡೂ ಚಿದಾತ್ಮಕವಾದ ಆನಂದರೂಪವೇ ಆಗಿರುವುದರಿಂದ ಭೇದವಿಲ್ಲವು. ಈ ಅಂಶವನ್ನು ಸೂತಸಂಹಿತೆಯಲ್ಲಿಯೂ ವಿವರಿಸಿದೆ. ॥೨೦॥

ಆದುದರಿಂದ ಆತ್ಮನು ಜ್ಞಾನಸ್ವರೂಪನೂ, ಸುಖಸ್ವರೂಪನೂ, ಸತ್ಯರೂಪನೂ ಪರಿಪೂರ್ಣನೂ, ಇತರಸಂಗರಹಿತನೂ, ದ್ವೈತಭಾವವಿಲ್ಲದವನೂ ಆಗಿರುತ್ತಾನೆ. ॥೨೧॥

**ಸ ಪುನಃ ಕಾಮಕರ್ಮಾದಿ ಯುಕ್ತಯಾ ಸ್ವೀಯ ಮಾಯಯಾ ।**
**ಪೂರ್ವಾನುಭೂತಸಂಸ್ಕಾರಾತ್ಕಾಲಕರ್ಮವಿಪಾಕತಃ ॥೨೨॥**

**ಅವಿವೇಕಾಚ್ಚ ತತ್ವಸ್ಯ ಸಿಸೃಕ್ಷಾವಾನ್ ಪ್ರಜಾಯತೇ ।**
**ಅಬುದ್ಧಿಪೂರ್ವಃ ಸರ್ಗೋಽಯಂ ಕಥಿತಸ್ತೇ ನಗಾಧಿಪ ॥೨೩॥**

---

ಆ ಮಾಯಾರೂಪಶಕ್ತಿಯಿಂದ ಸಹಿತನಾದ ಪರಮಾತ್ಮನಿಗೆ ಸೃಷ್ಟಿಗಿಂತಲೂ ಮೊದಲು ಇರುವಿಕೆಯನ್ನು ಹೇಳಿ ಈಗ ಜಗತ್ಕಾರಣತ್ವವನ್ನೂ ಹೇಳುವುದಕ್ಕಾಗಿ ಆ ಆತ್ಮನಿಂದ ಚಿಜ್ಜಡಗಳಿಂದ ಕೂಡಿದ ಈ ಜಗತ್ತಿನ ಸೃಷ್ಟಿಯು ಹೇಗೆ ಆಗುತ್ತದೆ ಎಂಬುದನ್ನು ಹೇಳುತ್ತಾರೆ. ಆ ಪರಮಾತ್ಮನು, ಜೀವಿಗಳು ತಮ್ಮ ಪೂರ್ವಜನ್ಮದ ಕರ್ಮವಾಸನೆಗಳಿಂದ ಕೂಡಿದ, ಮಾಯೆಯ ಅಂಶವಾದ, ಕಾಮಕರ್ಮ ಅಥವಾ ಇಚ್ಛಾ ಅದೃಷ್ಟರೂಪವಾದ, ಅವಿದ್ಯೆಯಿಂದ ಸಹಿತರಾಗಿ ಅವರವರ ಪೂರ್ವಜನ್ಮದ ಸಂಸ್ಕಾರಗಳಿಗೆ ಅನುಸಾರವಾಗಿ ಅವರವರು ಮಾಡಿದ್ದ ಕರ್ಮಗಳಿಂದುಂಟಾಗಿರುವ ಪಾಪಪುಣ್ಯಕ್ಕೆ ತಕ್ಕಂತೆ ಚಿಜ್ಜಡ ಗ್ರಂಥಿರೂಪವಾಗಿರುವಂತೆ ಜೀವಿಗಳ ಸೃಷ್ಟಿಯನ್ನೂ, ಅವರ ಕರ್ಮಫಲಗಳಾದ ಸುಖ ದುಃಖಗಳನ್ನು ಆಯಾ ಕಾಲಗಳಲ್ಲಿ ಅನುಭವಿಸಲು ಈ ಪ್ರಪಂಚ ಸನ್ನಿವೇಶಗಳ ಸೃಷ್ಟಿಯನ್ನೂ ಮಾಡುತ್ತಿರುವನು. ॥೨೨॥

ಓ ಪರ್ವತರಾಜನೇ, ಅಲ್ಲದೆ ಚತುರ್ವಿಂಶತಿ ತತ್ವಗಳ ಪೃಥಕ್ಕರಣಕ್ಕಾಗಿಯೂ ಆತ್ಮನು ಸೃಷ್ಟಿಮಾಡಲು ಅಪೇಕ್ಷಿಸುವನು. ಹೇಗೆ ಬೀಜವು ಸಹಕಾರಿಕಾರಣಗಳ ಬಲದಿಂದ ಉಬ್ಬಿ ಅಂಕುರವನ್ನು ಹುಟ್ಟಿಸಲು ಸಮರ್ಥವಾಗುವುದೋ, ಹಾಗೆಯೇ ಕಾಲ, ಕರ್ಮ, ಜೀವರ ಭೋಗಾ ದೃಷ್ಟ ಇವುಗಳ ಸಹಕಾರದಿಂದ ಈ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ನಿದ್ರೆಯನ್ನು ಹೊಂದಿದ್ದ ಪುರುಷನು ಪೂರ್ವಸಂಸ್ಕಾರಬಲದಿಂದ ಜಾಗ್ರದವಸ್ಥೆಯನ್ನು ಹೊಂದುವನು. ಆದರೆ ಅವನು ನಿದ್ರಾವಸ್ಥೆಯಲ್ಲಿ ಬುದ್ಧಿಯು ಕೆಲಸಮಾಡದೆ ಇರುವುದರಿಂದ ಜಾಗ್ರದವಸ್ಥೆಯು ಕಲ್ಪನೆಯನ್ನೂ ಕೂಡ ಮಾಡಿರುವುದಿಲ್ಲವಾದರೂ ಅದನ್ನು ಪಡೆಯುತ್ತಾನೆ. ಅದರಂತೆಯೇ ಆತ್ಮನೂ ಕೂಡ ಪ್ರಳಯರೂಪನಿದ್ರೆಯಿಂದ ಜಗತ್ಸೃಷ್ಟಿರೂಪವಾದ ಜಾಗರಣವನ್ನು ಹೊಂದುತ್ತಾನೆ. ಈ ಜಾಗರಣಾವಸ್ಥೆಯು ಸ್ವಪ್ನೋತ್ತರಭಾವಿಯಾದ ಜಾಗರಣದಂತೆಯೇ ಬುದ್ಧಿಪೂರ್ವಕವಾದದ್ದು ಅಲ್ಲ. ಆದರೆ ಪ್ರಾಣಿಗಳ ಪೂರ್ವಜನ್ಮದ ಕರ್ಮ ಸಂಸ್ಕಾರಗಳಿಗೆ ಅನುಸರಿಸಿ ಆದದ್ದು. ಅದೇ ಅಭಿಪ್ರಾಯದಿಂದಲೇ. "ಅಬುದ್ಧಿಪೂರ್ವಃ ಸರ್ಗೋಽಯಂ" ಎಂದು ಹೇಳಿರುವರು. ॥೨೩॥

ಏತದ್ಧಿ ಯನ್ಮಯಾ ಪ್ರೋಕ್ತಂ ಮಮ ರೂಪಂ ಅಲೌಕಿಕಂ ।
ಅವ್ಯಾಕೃತಂ ತದವ್ಯಕ್ತಂ ಮಾಯಾ ಶಬಲಮಿತ್ಯಪಿ ॥೨೪॥

ಪ್ರೋಚ್ಯತೇ ಸರ್ವಶಾಸ್ತ್ರೇಷು ಸರ್ವಕಾರಣಕಾರಣಂ ।
ತತ್ತ್ವಾನಾಮಾದಿಭೂತಂ ಚ ಸಚ್ಚಿದಾನಂದವಿಗ್ರಹಂ ॥೨೫॥

ಸರ್ವಕರ್ಮಘನೀಭೂತಮಿಚ್ಛಾಜ್ಞಾನಕ್ರಿಯಾಶ್ರಯಂ ।
ಹ್ರೀಂಕಾರಮಂತ್ರವಾಚ್ಯಂ ಚ ತದಾದಿತ್ವಂ ತದುಚ್ಯತೇ ॥೨೬॥

ತಸ್ಮಾದಾಕಾಶ ಉತ್ಪನ್ನಃ ಶಬ್ದತನ್ಮಾತ್ರರೂಪಕಃ ।
ಭವೇತ್ ಸ್ಪರ್ಶಾತ್ಮಕೋ ವಾಯುಃ ತೇಜೋ ರೂಪಾತ್ಮಕಂ ಪುನಃ ॥೨೭॥

---

ಹಿಂದೆ ಹೇಳಿದ ಈ ನನ್ನ ಸ್ವರೂಪವು ಅತಿಶಯಶ್ರೇಷ್ಠವಾದದ್ದು. ವಿಕಾರ ಶೂನ್ಯವಾದಂಥಾದ್ದು. ಅಲೌಕಿಕ, ಅವ್ಯಾಕೃತ, ಅವ್ಯಕ್ತ, ಮಾಯಾಶಬಲ ಎಂಬ ಹೆಸರುಗಳನ್ನು ಪಡೆದಂಥಾದ್ದೂ ಆಗಿರುತ್ತದೆ. ||೨೪||

ಎಲ್ಲ ಶಾಸ್ತ್ರಗಳಲ್ಲಿಯೂ ಈ ಬ್ರಹ್ಮಸ್ವರೂಪವೇ ಎಲ್ಲ ಕಾರ್ಯಗಳಿಗೆ ಕಾರಣ ವಾದದ್ದೆಂತಲೂ ಎಲ್ಲ ತತ್ವಗಳಿಗಿಂತಲೂ ಮೊದಲಿನ ತತ್ವವೆಂತಲೂ ಸತ್ಯ, ಜ್ಞಾನ, ಆನಂದರೂಪವಾದುದೆಂತಲೂ ಕರೆಯಿಸಿಕೊಳ್ಳಲ್ಪಡುತ್ತದೆ. ||೨೫||

ಮತ್ತೆ ನನ್ನ ಈ ಆತ್ಮಸ್ವರೂಪವು ಎಲ್ಲರ ಎಲ್ಲ ಕರ್ಮಗಳ ಘನ ಎಂದರೆ ಸಾಕ್ಷಿ ಭೂತವಾದದ್ದು. ಮತ್ತು ಇಚ್ಛಾಜ್ಞಾನಗಳಿಗೆ ಆಶ್ರಯವಾಗಿರತಕ್ಕದ್ದು. ಮತ್ತು ಇದೇ ಹ್ರೀಂಕಾರ ಮಂತ್ರ ಪ್ರತಿಪಾದ್ಯವಾದುದೂ ಓಂಕಾರವೆಂಬ ಆದಿತತ್ವರೂಪ ವಾದುದೂ ಆಗಿರುತ್ತದೆ. ||೨೬||

ಆದಿಭೂತವಾದ ತತ್ವದಿಂದ ಪಂಚಭೂತತತ್ವಗಳ ಉತ್ಪತ್ತಿಕ್ರಮವನ್ನು ಹೇಳಲು ತೊಡಗುವರು. ಆತ್ಮತತ್ವದಿಂದ ಶಬ್ದತನ್ಮಾತ್ರ ಕಾರಣವಾದ ಆಕಾಶತತ್ವವು ಹುಟ್ಟುವುದು. ಅದರಿಂದ ಸ್ಪರ್ಶತನ್ಮಾತ್ರ ಕಾರಣವಾದ ವಾಯುವು ಉತ್ಪನ್ನ ವಾಗುವುದು. ಅನಂತರ ವಾಯುವಿನಿಂದ (ರೂಪವಿಶಿಷ್ಟವಾದ) ರೂಪ ತನ್ಮಾತ್ರೆ ಯಿಂದ ಕೂಡಿದ ತೇಜಸ್ಸಿನ ಉತ್ಪತ್ತಿಯು ಆಗುವದು. ||೨೭||

ಜಲಂ ರಸಾತ್ಮಕಂ ಪಶ್ಚಾತ್ತತೋ ಗಂಧಾತ್ಮಿಕಾ ಧರಾ ।
ಶಬ್ದೈಕಗುಣ ಆಕಾಶೋ ವಾಯುಃ ಸ್ಪರ್ಶರವಾನ್ವಿತಃ ॥೨೮॥

ಶಬ್ದಸ್ಪರ್ಶರೂಪಗುಣಂ ತೇಜ ಇತ್ಯುಚ್ಯತೇ ಬುಧೈಃ ।
ಶಬ್ದಸ್ಪರ್ಶರೂಪರಸೈರಾಪೋ ವೇದಗುಣಾಃ ಸ್ಮೃತಾಃ ॥೨೯॥

ಶಬ್ದಸ್ಪರ್ಶರೂಪರಸಗಂಧೈಃ ಪಂಚಗುಣಾ ಧರಾ ।
ತೇಭ್ಯೋಽಭವನ್ಮಹತ್ ಸೂತ್ರಂ ಯಲ್ಲಿಂಗಂ ಪರಿಚಕ್ಷತೇ ॥೩೦॥

ಸರ್ವಾತ್ಮಕಂ ತತ್ ಸಂಪ್ರೋಕ್ತಂ ಸೂಕ್ಷ್ಮದೇಹೋಽಯಮಾತ್ಮನಃ
ಅವ್ಯಕ್ತಂ ಕಾರಣೋ ದೇಹಃ ಸ ಚೋಕ್ತಃ ಪೂರ್ವಮೇವ ಹಿ ॥೩೧॥

---

ಅನಂತರ ತೇಜಸ್ತತ್ವದಿಂದ ರಸತನ್ಮಾತ್ರವಿಶಿಷ್ಟವಾದ ಜಲವು ಉತ್ಪನ್ನವಾಗುವುದು. ಅದರಿಂದ ಗಂಧನ್ಮಾತ್ರವಾದ ಪೃಥಿವಿಯು ಉತ್ಪನ್ನವಾಗುವುದು. ಆಕಾಶವು ಶಬ್ದರೂಪವಾದ ಒಂದೇ ಗುಣದಿಂದ ಕೂಡಿದ್ದು. ವಾಯುವು ಸ್ಪರ್ಶ ಮತ್ತು ಶಬ್ದಗಳೆಂಬ ಎರಡು ಗುಣಗಳಿಂದ ಕೂಡಿದ್ದು ಆಗಿರುವುದು. ॥೨೮॥

ತೇಜಸ್ತತ್ವವು ಶಬ್ದ, ಸ್ಪರ್ಶ, ರೂಪವೆಂಬ ಮೂರು ಗುಣಗಳಿಂದ ಕೂಡಿದ್ದು. ಜಲತತ್ವವು ಶಬ್ದ, ಸ್ಪರ್ಶ, ರೂಪ, ರಸ, ಎಂಬ ನಾಲ್ಕು ಗುಣಗಳಿಂದ ಕೂಡಿದ್ದು ಎಂದು ಪಂಡಿತರೆಲ್ಲರೂ ಹೇಳುತ್ತಾರೆ. ॥೨೯॥

ಪೃಥಿವೀತತ್ವವು ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಐದು ಗುಣಗಳಿಂದ ಕೂಡಿದ್ದಾಗಿರುತ್ತದೆ. ಈ ಐದು ಸೂಕ್ಷ್ಮವಾದ ಪಂಚಭೂತಗಳಿಂದ ವ್ಯಾಪಕವಾದ ಸೂತ್ರವು ಅಂದರೆ ಲಿಂಗಶರೀರವು ಮುಂದೆ ಹೇಳುವ ಕ್ರಮದಂತೆ ಉತ್ಪನ್ನವಾಗುತ್ತದೆ. ॥೩೦॥

ಹಿಂದೆ ಹೇಳಿದ ವ್ಯಾಪಕವಾದ ಸೂತ್ರಪದಕ್ಕೆ ನಾವು ವಾಯು ಎಂದು ಅರ್ಥ ಮಾಡಬೇಕು. ಈ ರೀತಿಯಾದ ವಾಯುವು ಪ್ರಾಣಾತ್ಮಕವಾಗಿ ಎಲ್ಲರಲ್ಲಿಯೂ ಇರುತ್ತದೆ. ಇದೇ ಸೂತ್ರವೇ ಆತ್ಮನ ಸೂಕ್ಷ್ಮದೇಹವೆಂದು ಅನ್ನಿಸಿಕೊಳ್ಳುವುದು. ನಾವು ಮೊದಲು ಹೇಳಿದಂತೆ ಇದೇ ಪರಮಾತ್ಮನ ಕಾರಣದೇಹವೂ, ಅವ್ಯಕ್ತವಾದದ್ದೂ ಆಗಿರುತ್ತದೆ. ॥೩೧॥

ಯಸ್ಮಿನ್ ಜಗದ್ಬೀಜರೂಪಂ ಸ್ಥಿತಂ ಲಿಂಗೋದ್ಭವೋ ಯತಃ ।
ತತಃ ಸ್ಥೂಲಾನಿ ಭೂತಾನಿ ಪಂಚೀ ಕರಣಮಾರ್ಗತಃ ॥೩೨॥

ಪಂಚ ಸಂಖ್ಯಾನಿ ಜಾಯಂತೇ ತತ್ಪ್ರಕಾರಸ್ತ್ವಥೋಚ್ಯತೇ।
ಪೂರ್ವೋಕ್ತಾನಿ ಚ ಭೂತಾನಿ ಪ್ರತ್ಯೇಕಂ ವಿಭಜೇದ್ದ್ವಿಧಾ ॥೩೩॥

ಏಕೈಕಂ ಭಾಗಮೇಕಸ್ಯ ಚತುರ್ಧಾ ವಿಭಜೇದಿತಿ ।
ಸ್ವಸ್ವೇತರದ್ವಿತೀಯಾಂಶೈಃ ಯೋಜನಾತ್ಪಂಚ ಪಂಚ ತೇ ॥೩೪॥

ತತ್ಕಾರ್ಯಂ ಚ ವಿರಾಡ್ ದೇಹಃ ಸ್ಥೂಲದೇಹೋಽಯಮಾತ್ಮನಃ ।
ಪಂಚಭೂತಸ್ಥ ಸತ್ವಾಂಶೈಃ ಶ್ರೋತ್ರಾದೀನಾಂ ಸಮುದ್ಭವಃ ॥೩೫॥

---

ಯಾವನಲ್ಲಿ ಜಗತ್ತು ಬೀಜರೂಪದಿಂದ ಇದ್ದಿತೋ ಮತ್ತು ಯಾವನಿಂದ ಲಿಂಗದೇಹದ ಉತ್ಪತ್ತಿಯು ಆಯಿತೋ ಆ ಆತ್ಮನಿಂದಲೇ ಪಂಚೀಕರಣಮಾರ್ಗದಿಂದ ಸ್ಥೂಲವಾದ ಪಂಚಮಹಾಭೂತಗಳ ಉತ್ಪತ್ತಿಯು ಕೂಡ ಆಗುತ್ತದೆ. ॥೩೨॥

ಹಿಂದೆ ನಿರೂಪಿತವಾದ ಪಂಚಭೂತತತ್ವಗಳಲ್ಲಿ ಐದು ಭೂತಗಳ ಅಂಶವು ಇರುವುದರಿಂದ ಪಂಚೀಕರಣದ ಪ್ರಕ್ರಿಯೆಯು ಹೀಗೆ ಏರ್ಪಡುತ್ತದೆ. ಅದರ ಕ್ರಮವು ಹೀಗೆ ಇರುವದು. ಮೊದಲು ಪ್ರತಿಯೊಂದು ಭೂತಪದಾರ್ಥದಲ್ಲಿಯೂ, ಎರಡೆರಡು ವಿಭಾಗವನ್ನು ಮಾಡುವುದು. ಆ ಮೇಲೆ ಪ್ರತಿಯೊಂದು ಭೂತದ ಒಂದೊಂದು ಭಾಗವನ್ನು ನಾಲ್ಕು ನಾಲ್ಕು ಭಾಗಗಳಾಗಿ ವಿಭಾಗಿಸುವುದು. ಈ ರೀತಿಯಲ್ಲಿ ಪ್ರತಿಯೊಂದರಲ್ಲೂ ತನ್ನದೇ ಆದ ಅರ್ಧಭಾಗವು ಇತರ ನಾಲ್ಕು ಭೂತಗಳ ಎಂಟನೇ ಒಂದು ಅಂಶಗಳೂ ಸೇರಿರುತ್ತವೆ. ಹೀಗೆ ಸೇರಿರುವುದಕ್ಕೆ ಪಂಚೀಕರಣವೆಂದು ಹೆಸರು. ಭೂಯೋಽನುಗ್ರಹನ್ಯಾಯದಿಂದ ಆಯಾಭೂತವೆಂದೇ ವ್ಯವಹಾರವು. ॥೩೩-೩೪॥

ಪೂರ್ವೋಕ್ತರೀತಿಯಿಂದ ಪಂಚೀಕೃತವಾದ ಭೂತತತ್ವಗಳಿಂದ ಹುಟ್ಟಿದ ದೇಹಕ್ಕೆ ವಿರಾಟ್ ದೇಹವೆಂತಲೂ, ಪರಮಾತ್ಮನ ಸ್ಥೂಲದೇಹವೆಂತಲೂ, ಹೆಸರು ಇರುವುದು. ಹಿಂದೆ ಹೇಳಿದ ಲಿಂಗದೇಹದಲ್ಲಿರುವ ಇಂದ್ರಿಯಾಂತಃಕರಣಾದಿಗಳು ಪಂಚಭೂತ ತತ್ವಗಳ ಸತ್ವಾಂಶಗಳಿಂದ ಹುಟ್ಟುತ್ತವೆ. ॥೩೫॥

ಜ್ಞಾನೇಂದ್ರಿಯಾಣಾಂ ರಾಜೇಂದ್ರ ಪ್ರತ್ಯೇಕಂ ಮಿಲಿತೈಸ್ತು ತೈಃ ।
ಅಂತಃಕರಣಮೇಕಂ ಸ್ಯಾದ್ವೃತ್ತಿಭೇದಾಚ್ಚತುರ್ವಿಧಂ ॥೩೬॥

ಯದಾ ತು ಸಂಕಲ್ಪವಿಕಲ್ಪಕೃತ್ಯಂ
ತದಾ ಭವೇತ್ತನ್ಮನ ಇತ್ಯಭಿಖ್ಯಂ ।
ಸ್ಯಾದ್ಬುದ್ಧಿಸಂಜ್ಞಂ ಚ ಯದಾ ಪ್ರವೇತ್ತಿ
ಸುನಿಶ್ಚಿತಂ ಸಂಶಯಹೀನರೂಪಂ ॥೩೭॥

ಅನುಸಂಧಾನರೂಪಂ ತಚ್ಚಿತ್ತಂ ಚ ಪರಿಕೀರ್ತಿತಂ ।
ಅಹಂಕೃತ್ಯಾತ್ಮವೃತ್ತ್ಯಾ ತು ತದಹಂಕಾರತಾಂ ಗತಂ ॥೩೮॥

---

ಓ ಪರ್ವತರಾಜನೇ, ಜ್ಞಾನೇಂದ್ರಿಯಾಣಾಂ ಎಂಬುದು ಹಿಂದಿನ ಶ್ಲೋಕಕ್ಕೆ ಅನ್ವಯಿಸುವುದು. ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್ ಎಂಬಿವುಗಳ ಉತ್ಪತ್ತಿಯು ಭೂತಗಳ ಪ್ರತ್ಯೇಕವಾದ ಸತ್ವಾಂಶದಿಂದ ಆಗುತ್ತದೆಂದು ಅರ್ಥವು. ಐದು ಭೂತತತ್ವಗಳ ಸತ್ವಾಂಶಗಳು ಕೂಡಿದ ಸಮಷ್ಟಿಯಿಂದ ಅಂತಃಕರಣದ ಉತ್ಪತ್ತಿಯಾಗುತ್ತದೆ. ಈ ಅಂತಃಕರಣವು ವೃತ್ತಿಭೇದದಿಂದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಎಂಬ ನಾಲ್ಕು ಬಗೆಯ ವ್ಯವಹಾರಭೇದವನ್ನೂ ಹೊಂದುತ್ತದೆ. ಹೇಗೆಂದರೆ—॥೩೬॥

ಯಾವಾಗ ಅಂತಃಕರಣವು ಈ ಕೆಲಸವನ್ನು ಈ ಉದ್ದೇಶಕ್ಕಾಗಿ ಮಾಡುತ್ತೇನೆ ಎಂದು ಮುಂತಾದ ಸಂಕಲ್ಪ ಮತ್ತು ಮಬ್ಬಿನಲ್ಲಿ ಸ್ಥಾಣುವನ್ನು ನೋಡಿ, ಇದು ಸ್ಥಾಣುವೋ, ಪುರುಷನೋ, ಎಂದು ಮುಂತಾದ ಸಂಶಯರೂಪವಾದ ಈ ಕೃತ್ಯಗಳನ್ನು ಮಾಡುತ್ತದೆಯೋ ಆಗ ಅದು ಮನಸ್ಸೆಂದು ಕರೆಯಲ್ಪಡುವುದು. ಯಾವಾಗ ಅದು ಸಂಶಯ ಮತ್ತು ತಪ್ಪುತಿಳಿವಳಿಕೆ ಎಂಬ ವಿಪರ್ಯಯಗಳಿಲ್ಲದೇ ತತ್ವದ ನಿಶ್ಚಿತರೂಪದ ಜ್ಞಾನವನ್ನು ಹೊಂದಲು ಸಮರ್ಥವಾಗುವುದೋ ಆಗ ಬುದ್ಧಿಸಂಜ್ಞೆಯನ್ನು ಪಡೆಯುವುದು. ಯಾವಾಗ ಅಂತಃಕರಣವು ಒಂದಾವೃತ್ತಿ ಬಂದ ಅನುಭವದ ಜ್ಞಾನವನ್ನು ಆಮೇಲೆ ಅದರಿಂದುಂಟಾಗಿದ್ದ ಸಂಸ್ಕಾರದಿಂದ ಅನುಸಂಧಾನರೂಪದಲ್ಲಿ ತರುವುದೋ ಆಗ ಚಿತ್ತವೆಂದೂ ಸಂಜ್ಞೆಯನ್ನು ಪಡೆಯುವುದು. ಯಾವಾಗ ಅದೇ ಅಂತಃಕರಣವು ಪ್ರತಿಯೊಂದು ವೃತ್ತಿಯಲ್ಲೂ ತೋರುವ ನಾನೆಂಬ ವೃತ್ತಿರೂಪವಾಗಿರುವುದೋ ಆಗ ಅದು ಅಹಂಕಾರತತ್ವವೆಂದು ಹೇಳಿಸಿಕೊಳ್ಳುವುದು. ॥೩೭-೩೮॥

ತೇಷಾಂ ರಜೋಽಂಶೈರ್ಜಾತಾನಿ ಕ್ರಮಾತ್ ಕರ್ಮೇಂದ್ರಿಯಾಣಿ ಚ ।
ಪ್ರತ್ಯೇಕಂ ಮಿಲಿತೈಸ್ತ್ರೈಸ್ತು ಪ್ರಾಣೋ ಭವತಿ ಪಂಚಧಾ ॥೩೯॥

ಹೃದಿ ಪ್ರಾಣೋ ಗುದೇಽಪಾನೋ ನಾಭಿಸ್ಥಸ್ತು ಸಮಾನಕಃ ।
ಕಂಠದೇಶೇಽಪ್ಯುದಾನಃ ಸ್ಯಾದ್ವ್ಯಾನಃ ಸರ್ವಶರೀರಗಃ ॥೪೦॥

ಜ್ಞಾನೇಂದ್ರಿಯಾಣಿ ಪಂಚೈವ ಪಂಚ ಕರ್ಮೇಂದ್ರಿಯಾಣಿ ಚ ।
ಪ್ರಾಣಾದಿ ಪಂಚಕಂ ಚೈವ ಧಿಯಾ ಚ ಸಹಿತಂ ಮನಃ ॥೪೧॥

ಏತತ್ ಸೂಕ್ಷ್ಮಶರೀರಂ ಸ್ಯಾನ್ಮಮ ಲಿಂಗಂ ಯದುಚ್ಯತೇ ।
ತತ್ರ ಯಾ ಪ್ರಕೃತಿಃ ಪ್ರೋಕ್ತಾ ಸಾ ರಾಜನ್ ದ್ವಿವಿಧಾ ಸ್ಮೃತಾ ॥೪೨॥

---

ಪಂಚಭೂತತತ್ತ್ವಗಳ ರಾಜಸವಾದ ಮತ್ತು ಪ್ರತ್ಯೇಕವಾದ ಅಂಶಗಳಿಂದ ನಾಲಿಗೆ, ಕೈ, ಕಾಲು, ವಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳು ಉತ್ಪನ್ನವಾಗುತ್ತವೆ. ಈ ಐದು ಭೂತತತ್ತ್ವಗಳ ರಾಜಸವಾದ ಐದು ಅಂಶಗಳಿಂದ ಕೂಡಿದ ಸಮಷ್ಟಿಯಿಂದ ಪ್ರಾಣಾಪಾನಾದಿ ವೃತ್ತ್ಯಾತ್ಮಕವಾದ ಪಂಚಪ್ರಾಣಗಳು ಉತ್ಪನ್ನವಾಗುತ್ತವೆ. ॥೩೯॥

ಹಿಂದೆ ಹೇಳಿದ ಐದು ವಾಯುಗಳಿಗೆ ವೃತ್ತಿಭೇದದಿಂದ ಸ್ಥಾನ ಮತ್ತು ಹೆಸರುಗಳನ್ನು ಹೇಳುತ್ತಾರೆ. ಹೃದಯದಲ್ಲಿ ಇರತಕ್ಕ ವಾಯುವಿಗೆ ಪ್ರಾಣವೆಂದು ಹೆಸರು ; ಗುದದಲ್ಲಿ ಇರುವ ವಾಯುವಿಗೆ ಅಪಾನವೆಂದೂ, ನಾಭಿಯಲ್ಲಿ ಇರುವುದಕ್ಕೆ ಸಮಾನವೆಂದೂ, ಕಂಠದೇಶದಲ್ಲಿರುವ ಅದಕ್ಕೆ ಉದಾನವೆಂತಲೂ, ಶರೀರದ ಎಲ್ಲ ಭಾಗಗಳಲ್ಲಿರುವ ವಾಯುವಿಗೆ ವ್ಯಾನವೆಂತಲೂ ಹೆಸರು ಇರುವುದು ॥೪೦॥

ಹೀಗೆ ಮೇಲೆ ವಿವರಿಸಿರುವ ಈ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣವಾಯುಗಳು, ಬುದ್ಧಿ, ಮನಸ್ಸು ಈ ಹದಿನೇಳು ಅಂಶಗಳಿಂದ ಕೂಡಿರುವುದೇ ಸೂಕ್ಷ್ಮಶರೀರವೆಂದೂ, ಇದೇ ನನ್ನ ಲಿಂಗಶರೀರವೆಂದೂ ಹೆಸರನ್ನು ಪಡೆದಿರುವುದು. ಹೀಗೆ ಮೂರುಬಗೆಯ ಶರೀರಗಳನ್ನೂ ವಿವರಿಸಲಾಗಿದೆ. ॥೪೧॥

ಈಗ ಜೀವ, ಈಶ್ವರ ಎಂಬ ವಿಭಾಗದ ಕಾರಣವನ್ನು ವಿವರಿಸುತ್ತಾರೆ. ಓ ಪರ್ವತರಾಜನೇ, ಹಿಂದೆ ನಾನು ಯಾವುದನ್ನು ಪ್ರಕೃತಿಯೆಂದು ಹೇಳಿದೆನೋ ಅದು ಎರಡು ವಿಧವಾಗಿರುವುದು. ಮೊದಲನೆಯದಾದ ಮಾಯೆಯು ಶುದ್ಧ

ಸತ್ತ್ವಾತ್ಮಿಕಾ ತು ಮಾಯಾ ಸ್ಯಾತ್ ಅವಿದ್ಯಾ ಗುಣಮಿಶ್ರಿತಾ ।
ಸ್ವಾಶ್ರಯಂ ಯಾ ತು ಸಂರಕ್ಷೇತ್ ಸಾ ಮಾಯೇತಿ ನಿಗದ್ಯತೇ ॥೪೩॥

ತಸ್ಯಾಂ ಯತ್ ಪ್ರತಿಬಿಂಬಂ ಸ್ಯಾದ್ಬಿಂಬಭೂತಸ್ಯ ಚೇಶಿತುಃ ।
ಸ ಈಶ್ವರಃ ಸಮಾಖ್ಯಾತಃ ಸ್ವಾಶ್ರಯಜ್ಞಾನವಾನ್ಪರಃ ॥೪೪॥

ಸರ್ವಜ್ಞಃ ಸರ್ವಕರ್ತಾ ಚ ಸರ್ವಾನುಗ್ರಹಕಾರಕಃ ।
ಅವಿದ್ಯಾಯಾಂ ತು ಯತ್ಕಿಂಚಿತ್ಪ್ರತಿಬಿಂಬಂ ನಗಾಧಿಪ ॥೪೫॥

ತದೇವ ಜೀವಸಂಜ್ಞಂ ಸ್ಯಾತ್ ಸರ್ವದುಃಖಾಶ್ರಯಂ ಪುನಃ ।
ದ್ವಯೋರಪೀಹ ಸಂಪ್ರೋಕ್ತಂ ದೇಹತ್ರಯಮವಿದ್ಯಯಾ ॥೪೬॥

---

ಸಾತ್ತ್ವಿಕರೂಪವಾದುದು. ಎರಡನೆಯದು ಮಲಿನಸತ್ತ್ವರೂಪದಿಂದ ಕೂಡಿರುತ್ತದೆ. ಮಾಯೆಯು ಸ್ವಾಶ್ರಯವಾದ ಪರಮಾತ್ಮನನ್ನು ತಿಳಿಯಲಾಗದಿರುವಂತೆ ಆವರಿಸಿರುವುದಿಲ್ಲ. ಅವಿದ್ಯೆಯು ಸ್ವಾಶ್ರಯವಾದ ಜೀವಿಗಳನ್ನು ಆವರಿಸಿ ಆತ್ಮನ ನಿಜಸ್ವರೂಪವನ್ನು ತಿಳಿಯಲಾಗದಂತೆ ಮಾಡಿರುವುದು. ಎಂಬುದು ಈ ಎರಡರಲ್ಲಿರುವ ವ್ಯತ್ಯಾಸವು. ||೪೨-೪೩||

ಆ ಶುದ್ಧ ಮತ್ತು ಸಾತ್ತ್ವಿಕವಾದ ಮಾಯೆಯಲ್ಲಿ ಪ್ರತಿಫಲಿಸಿರುವ ಪರಮೇಶ್ವರನ ಪ್ರತಿಬಿಂಬವೇ ಈಶ್ವರನು. ಇವನು ಮಾಯೆಗೆ ಅಧೀನನಾಗದೆ ಸ್ವಾಶ್ರಯವೂ ಅಧಿಷ್ಠಾನವೂ ಆದ ಪರಬ್ರಹ್ಮತತ್ತ್ವದ ಸಾಕ್ಷಾತ್ಕಾರವನ್ನು ಯಾವಾಗಲೂ ಹೊಂದಿರುವನು. ಆದುದರಿಂದ, ||೪೪||

ಈ ಈಶ್ವರನು ವ್ಯಾಪಕನಾಗಿರುವುದರಿಂದಲೂ, ಅವನ ಜ್ಞಾನಕ್ಕೆ ಆವರಣವು ಇಲ್ಲದಿರುವುದರಿಂದಲೂ, ಅವನು ಸರ್ವಜ್ಞನು ಅಚಿಂತ್ಯಶಕ್ತಿಯಾದ ಮಾಯೆಗೆ ಆಶ್ರಯನಾದ್ದರಿಂದ ಎಲ್ಲಕ್ಕೂ ಕಾರಣನೂ, ಸರ್ವಕಾರ್ಯಸಮರ್ಥನೂ ಆಗಿ ಎಲ್ಲರಿಗೂ ಅನುಗ್ರಹಗಳನ್ನೂ ನಿಗ್ರಹಗಳನ್ನೂ ಮಾಡುವವನೂ ಆಗಿರುವನು. ಈಶ್ವರನ ಪ್ರತಿಬಿಂಬವು ಅವಿದ್ಯೆಯಲ್ಲಿ ಕಾಣಿಸಿಕೊಂಡರೆ ಅದಕ್ಕೆ ಜೀವನೆಂದು. ಹೆಸರು. ಆನಂದಸ್ವರೂಪನಾದ ಜೀವನು ಮಲಿನಸತ್ತ್ವಪ್ರಧಾನವಾದ ಮಾಯೆಯ ಅಲ್ಪಾಂಶವಾದ ಅವಿದ್ಯೆಯಿಂದ ಆವರಿಸಲ್ಪಟ್ಟಿರುತ್ತಾನಾದ್ದರಿಂದ ಜೀವನು ಸಚ್ಚಿದಾನಂದರೂಪನಾದ ಆತ್ಮನ ಸ್ವರೂಪವನ್ನು ತಿಳಿಯಲಾರದೆ ತಾನು ದುಃಖಮಯವಾಗಿರುವಂತೆ ತಿಳಿಯುತ್ತಿರು

ದೇಹತ್ರಯಾಭಿಮಾನಾಚ್ಚಾಪ್ಯಭೂನ್ನಾಮ ತ್ರಯಂ ಪುನಃ ।
ಪ್ರಾಜ್ಞಸ್ತು ಕಾರಣಾತ್ಮಾಸ್ಯಾತ್ ಸೂಕ್ಷ್ಮದೇಹೀ ತು ತೈಜಸಃ ॥೪೭॥

ಸ್ಥೂಲದೇಹೀ ತು ವಿಶ್ವಾಖ್ಯಃ ತ್ರಿವಿಧಃ ಪರಿಕೀರ್ತಿತಃ ।
ಏವಮೀಶೋಽಪಿ ಸಂಪ್ರೋಕ್ತಃ ಈಶಸೂತ್ರವಿರಾಟ್ಪದೈಃ ॥೪೮॥

ಪ್ರಥಮೋ ವ್ಯಷ್ಟಿರೂಪಸ್ತು ಸಮಷ್ಟ್ಯಾತ್ಮಾ ಪರಃ ಸ್ಮೃತಃ ।
ಸ ಹಿ ಸರ್ವೇಶ್ವರಃ ಸಾಕ್ಷಾತ್ ಜೀವಾನುಗ್ರಹಕಾಂಕ್ಷಯಾ ॥೪೯॥

---

ವನು. ಆದುದರಿಂದಲೇ ಜೀವನು ಅಸರ್ವಜ್ಞನೂ, ಅಲ್ಪಶಕ್ತನೂ, ಅವ್ಯಾಪಕನೂ ಆಗಿರುವನು. ಹೀಗೆ ಜೀವ ಮತ್ತು ಈಶ್ವರರ ಮೂರು ಬಗೆಯ ಎಂದರೆ ಸ್ಥೂಲ, ಸೂಕ್ಷ್ಮ, ಕಾರಣ ಅಥವಾ ಲಿಂಗ ಎಂಬ ದೇಹಗಳು ಅವಿದ್ಯೆಯಿಂದಲೇ ಉತ್ಪನ್ನವಾಗುವುವು. ||೪೫-೪೬||

ಜೀವೇಶ್ವರರಿಬ್ಬರಿಗೂ ದೇಹತ್ರಯಗಳ ಅಭಿಮಾನದಿಂದ ಮೂರು ಮೂರು ಮೂರು ಹೆಸರುಗಳು ಬರುತ್ತವೆ. ಅಂತಹ ಜೀವನ ಹೆಸರುಗಳಾವುವೆಂದರೆ, ಕಾರಣ ದೇಹಾಭಿಮಾನಿಯಾದ ಜೀವನಿಗೆ ಪ್ರಾಜ್ಞನೆಂತಲೂ, ವ್ಯಷ್ಟಿಸೂಕ್ಷ್ಮದೇಹಾಭಿಮಾನಿಗೆ ತೈಜಸನೆಂತಲೂ ಹೆಸರು ಇರುವುದು. ||೪೭||

ವ್ಯಷ್ಟಿಸ್ಥೂಲದೇಹಾಭಿಮಾನಿಯಾದ ಜೀವನಿಗೆ ವಿಶ್ವನೆಂದೂ ಹೆಸರು ಇರುವುದು. ಈ ರೀತಿಯಾಗಿ ಜೀವನು ಮೂರು ವಿಧವಾಗಿರುವನು. ಇದರಂತೆ ಈಶ್ವರನೂ ಕೂಡ ಸಮಷ್ಟಿಕಾರಣಶರೀರಾಭಿಮಾನಿಗೆ ಈಶನೆಂದೂ, ಸಮಷ್ಟಿಸೂಕ್ಷ್ಮ ಶರೀರಾಭಿಮಾನಿಗೆ ಸೂತ್ರಾತ್ಮನೆಂದೂ, ಸಮಷ್ಟಿಸ್ಥೂಲಶರೀರಾಭಿಮಾನಿಗೆ ವಿರಾಟ್ ಎಂದೂ ವ್ಯವಹಾರವಿದೆ. ||೪೮||

ಮೊದಲಿನಲ್ಲಿ ವಿವರಿಸಿರುವ ಜೀವನು ವ್ಯಷ್ಟಿದೇಹಕ್ಕೆ ಅಭಿಮಾನಿಯಾದವನಾಗಿಯೂ, ಇರುವನು. ಈ ಎಲ್ಲಕ್ಕೂ ಒಡೆಯನಾದ ಈಶ್ವರನು ತಾನು ನಿತ್ಯತೃಪ್ತನಾದರೂ ಜೀವಿಗಳಿಗೆ ಭೋಗ, ಅಪವರ್ಗಗಳನ್ನು ಉಂಟುಮಾಡುವುದೆಂಬ ಅನುಗ್ರಹವನ್ನು ಮಾಡುವುದಕ್ಕಾಗಿ ಈ ನಾನಾವಿಧವಾದ ವಿಶ್ವವನ್ನು ರಚಿಸುತ್ತಾನೆ. ||೪೯||

ಎಲೈ ಪರ್ವತರಾಜನೇ, ಜೀವರ ನಾನಾವಿಧವಾದ ಭೋಗಕ್ಕೆ ಮತ್ತು ವೈರಾಗ್ಯ ವಿವೇಕಶಾಲಿಗಳಾದವರ ಮೋಕ್ಷಕ್ಕೂ ಆಶ್ರಯವಾದ ಈ ಸೃಷ್ಟಿಯು ಬ್ರಹ್ಮರೂಪಿಣಿಯಾದ ನನ್ನ ಮಾಯಾಶಕ್ತಿಯಿಂದ ಉಂಟಾಗಿರುತ್ತದೆ. ಈಶ್ವರನೂ ಆ ಮಾಯಾ

ಕರೋತಿ ವಿವಿಧಂ ವಿಶ್ವಂ ನಾನಾಭೋಗಾಶ್ರಯಂ ಪುನಃ ।
ಮಚ್ಛಕ್ತಿಪ್ರೇರಿತೋ ನಿತ್ಯಂ ಮಯಿ ರಾಜನ್ ಪ್ರಕಲ್ಪಿತಃ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ದ್ವಾತ್ರಿಂಶೋಽಧ್ಯಾಯಃ

---

ಶಕ್ತಿಯಿಂದ ಪ್ರೇರಿತನಾಗಿಯೇ ಸೃಜಿಸುತ್ತಾನೆ. ಮತ್ತು ಸರ್ಪವು ರಜ್ಜುವಿನಲ್ಲಿ ಆರೋಪಿತವಾಗಿ ತೋರುತ್ತಿರುವಂತೆ ನನ್ನಲ್ಲಿ ಪ್ರಪಂಚವೆಲ್ಲವೂ ಈಶನೂ ಆರೋಪಿತವಾಗಿ ತೋರುತ್ತಿರುತ್ತದೆ. ಆದ್ದರಿಂದ ಅದೆಲ್ಲವೂ ನನ್ನ ಶಕ್ತಿಯಿಂದ ಮಾಯೆಗೆ ಅಧೀನವಾದದ್ದು. ಎಂದು ತಿಳಿಯಬೇಕು. ಹೀಗೆ ಪರಬ್ರಹ್ಮತತ್ವದಲ್ಲಿ ಈಶ್ವರನೂ, ಜೀವರೂ, ಪ್ರಪಂಚವೂ, ಅಧ್ಯಾರೋಪದಿಂದ ತೋರುತ್ತವೆ ಎಂದು ತಿಳಿದು ಬ್ರಹ್ಮಸಾಕ್ಷಾತ್ಕಾರದಿಂದ ಇದೆಲ್ಲಕ್ಕೂ ಅಪವಾದವಾಗಿ ಈಶ್ವರತ್ವವೂ, ಜೀವತ್ವವೂ, ಪ್ರಪಂಚವೂ ತೋರದಂತಾಗಿ ಬ್ರಹ್ಮತತ್ವದಲ್ಲೇ ಎಲ್ಲವೂ ಅಡಗಿ ಪರಬ್ರಹ್ಮ ಒಂದೇ ಎಂದಿನಂತೆ ಉಳಿದಿರುತ್ತದೆ. ಎಂದು ತಾತ್ಪರ್ಯವು. ॥೫೦॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

## ॥ ತ್ರಯಸ್ತ್ರಿಂಶೋಽಧ್ಯಾಯಃ ॥

### ಮೂವತ್ತುಮೂರನೆಯ ಅಧ್ಯಾಯವು

॥ ದೇವ್ಯುವಾಚ ॥

**ಮನ್ಮಾಯಾಶಕ್ತಿಸಂಕ್ಲೃಪ್ತಂ ಜಗತ್ಸರ್ವಂ ಚರಾಚರಂ ।**
**ಸಾಽಪಿ ಮತ್ತಃ ಪೃಥಙ್ಮಾಯಾ ನಾಸ್ತ್ಯೇವ ಪರಮಾರ್ಥತಃ ॥೧॥**

**ವ್ಯವಹಾರದೃಶಾ ಸೇಯಂ ವಿದ್ಯಾ ಮಾಯೇತಿ ವಿಶ್ರುತಾ ।**
**ತತ್ತ್ವದೃಷ್ಟ್ಯಾ ತು ನಾಸ್ತ್ಯೇವ ತತ್ತ್ವಮೇವಾಸ್ತಿ ಕೇವಲಂ ॥೨॥**

---

ಹಿಂದಿನ ಅಧ್ಯಾಯದಲ್ಲಿ ಅಧ್ಯಾರೋಪರೀತಿಯಿಂದ ಆತ್ಮತತ್ವದ ಜಗದ್ವ್ಯವಹಾರವನ್ನು ವಿವರಿಸಿ, ಈ ಅಧ್ಯಾಯದಲ್ಲಿ ಅಪವಾದರೀತಿಯಿಂದ ಆತ್ಮತತ್ವವನ್ನು ವಿವರಿಸುತ್ತ ದೇವಿಯು ಹಿಮವಂತನನ್ನು ಕುರಿತು, ಹೇಳಿದಳು. ಎಲೈ ಪರ್ವತರಾಜನೇ, ನನ್ನ ಮಾಯಾಶಕ್ತಿಯಿಂದ ಈ ಸಮಸ್ತ ಚರಾಚರಪ್ರಾಣಿಗಳಿಂದ ಕೂಡಿದ ಜಗತ್ತು ಕಲ್ಪಿಸಲ್ಪಟ್ಟಿರುವುದು. ಆ ಮಾಯೆಯೂ ಕೂಡ ನನ್ನ ಸ್ವರೂಪಕ್ಕಿಂತಲೂ ಬೇರೆಯಾದುದಲ್ಲ. ಆ ಮಾಯೆಯು ನನ್ನಲ್ಲೇ ಕಲ್ಪಿತವಾದುದರಿಂದ ಮಿಥ್ಯೇ ಎಂಬ ಹೆಸರನ್ನು ಹೊಂದಿರುವುದು. ಮಿಥ್ಯಾಪದಾರ್ಥಕ್ಕೆ ಅಧಿಷ್ಠಾನಸತ್ತೆಯು ಹೊರತಾಗಿ ಬೇರೆ ಸತ್ತೆಯು ಇರುವುದಿಲ್ಲ. ಆದುದರಿಂದ ಪರಮಾರ್ಥವಾದ ವಸ್ತುವು ನಾನೇ ಹೊರತು ಬೇರೊಂದು ವಸ್ತುವು ಇಲ್ಲವೆಂದು ಅಭಿಪ್ರಾಯವು. ಹಾಗಾದರೆ ಎರಡನೆಯ ವಸ್ತುವು, ದ್ವೈತವು, ಅಥವಾ ಭೇದವು ಸರ್ವಥಾ ಸಿದ್ಧಿಸುವುದಿಲ್ಲವೆಂದ ಮೇಲೆ ಈ ಜಗತ್ತು ಹೇಗೆ ಭಾಸಮಾನವಾಗುತ್ತದೆ ಎಂದರೆ, ॥೧॥

ಅನಾದಿಯಾದ ಅವಿದ್ಯೆಯಿಂದ ಭ್ರಾಂತರಾದವರ ವ್ಯವಹಾರದೃಷ್ಟಿಯಿಂದ ಈ ಜಗತ್ತು ಮಾಯೆಯೆಂದೂ, ಅವಿದ್ಯೆಯೆಂದೂ ಪ್ರಸಿದ್ಧವಾಗಿರುವುದು. ತತ್ವ

ಸಾಽಹಂ ಸರ್ವಂ ಜಗತ್ಸೃಷ್ಟ್ವಾ ತದಂತಃ ಪ್ರವಿಶಾಮ್ಯಹಂ ।
ಮಾಯಾ ಕರ್ಮಾದಿಸಹಿತಾ ಗಿರೇ ಪ್ರಾಣಪುರಸ್ಸರಾ ॥೩॥

---

ವೆಂದರೆ ಬ್ರಹ್ಮದೃಷ್ಟಿಯಿಂದ ಈ ಜಗತ್ತು ಇಲ್ಲವೇ ಇಲ್ಲ ಎಂದರೆ ಬ್ರಹ್ಮಪದಾರ್ಥವು ಒಂದೇ ಇರುವುದು. ಹೇಗೆಂದರೆ ಭ್ರಾಂತನಾದವನು ಹಗ್ಗವನ್ನು ನೋಡಿ ಹಾವೆಂದು ತಿಳಿಯುವನೇ ಹೊರತು ಆ ಭ್ರಾಂತಿಯ ತಿಳಿವಳಿಕೆಗೆ ಆಶ್ರಯವೂ ಅಧಿಷ್ಠಾನವೂ ಆಗಿರುವ ಆ ಹಗ್ಗದ ನಿಜವಾದ ಸ್ವರೂಪವನ್ನು ತಿಳಿದವನು ಅದರಲ್ಲಿ ಸರ್ಪವನ್ನೆಂದಿಗೂ ಕಾಣುವುದಿಲ್ಲ. ಇದಕ್ಕೆ ಶ್ರುತಿಪ್ರಮಾಣವು—

" ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ ।
ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥ "

ಎಂದು ನೃಸಿಂಹ ತಾಪನೀಯ ಉಪನಿಷತ್ತಿನಲ್ಲಿ " ಅಸತ್ವಮಂಜಸ್ಕಮತಮಸ್ಕಮಮಾಯಂ " ಎಂದೂ ಬ್ರಹ್ಮವಸ್ತುವು ವರ್ಣಿತವಾಗಿರುವುದು. ॥೨॥

ಅಧ್ಯಾರೋಪಾಪವಾದ ರೀತಿಯಿಂದ ಈ ಪ್ರಪಂಚವು ಮಿಥ್ಯಾವಸ್ತುವಾದರೆ ಇದರಲ್ಲಿರುವ ಜೀವರೂ ಕೂಡ ಮಿಥ್ಯಾವಸ್ತುವೆಂದು ಹೇಳಬೇಕು. ಜೀವನು ಮಿಥ್ಯಾವಸ್ತುವಾದರೆ ಮೋಕ್ಷದೆಸೆಯಲ್ಲಿ ಜೀವನು ಇಲ್ಲವೇ ಹೋಗುವುದರಿಂದ, ಜೀವನು ತನ್ನ ನಾಶಕ್ಕೋಸ್ಕರವಾಗಿ ಎಂದಿಗೂ ಪ್ರಯತ್ನ ಮಾಡನು. ಆದುದರಿಂದ ಮೋಕ್ಷಶಾಸ್ತ್ರವು ವ್ಯರ್ಥವಾಗುತ್ತದೆ ಎಂದು ಸಂದೇಹಪಟ್ಟರೆ ಈ ವಿಷಯದಲ್ಲಿ ಸಮಾಧಾನವನ್ನು ಹೇಳಲಾಗುವುದು. ಎಲೈ ಪರ್ವತರಾಜನೇ, ಬೇರೆ ಬೇರೆ ಜೀವರುಗಳಿಗೆ ಸಂಬಂಧಪಟ್ಟ ಅವಿದ್ಯೆಯು ಆಯಾ ಜೀವರುಗಳ ಕರ್ಮಫಲಗಳಿಂದಲೂ, ಬಗಬಗೆಯ ಸಂಸ್ಕಾರಗಳಿಂದಲೂ, ಕೂಡಿರುವುದು. ಅದಕ್ಕೆ ತಕ್ಕಂತೆ ಕೂಟಸ್ಥಬ್ರಹ್ಮಸ್ವರೂಪಳಾದ ನಾನೇ ಈ ಸಮಸ್ತಪ್ರಪಂಚವನ್ನೂ ಮೊದಲು ಸೃಷ್ಟಿಮಾಡಿ ಅದರ ಮಧ್ಯದಲ್ಲಿ, ಘಟದಲ್ಲಿ ಆಕಾಶದಂತೆ ಅಥವಾ ಕನ್ನಡಿಯಲ್ಲಿ ಪ್ರತಿಬಿಂಬದಂತೆ, ಚಿದಾಭಾಸರೂಪದಿಂದ ಎಂದರೆ ಜೀವರೂಪದಿಂದ ಪ್ರಾಣವಾಯುವನ್ನು ಮುಂದುಮಾಡಿಕೊಂಡು ಪ್ರವೇಶಿಸುವೆನು. ಈ ಅನುಪ್ರವೇಶವು ಏತಕ್ಕೆಂದರೆ—॥೩॥

**ಲೋಕಾಂತರಗತಿರ್ನೋಽಚೇತ್ಕಥಂ ಸ್ಯಾದಿತಿ ಹೇತುನಾ ।**
**ಯಥಾ ಯಥಾ ಭವಂತ್ಯೇವ ಮಾಯಾಭೇದಾಸ್ತಥಾ ತಥಾ ॥೪॥**

**ಉಪಾಧಿಭೇದಾದ್ಭಿನ್ನಾಽಹಂ ಘಟಾಕಾಶಾದಯೋ ಯಥಾ ।**
**ಉಚ್ಚನೀಚಾದಿ ವಸ್ತೂನಿ ಭಾಸಯನ್ಭಾಸ್ಕರಸ್ಸದಾ ॥೫॥**
**ನ ದುಷ್ಯತಿ ತಥೈವಾಹಂ ದೋಷೈರ್ಲಿಪ್ತಾ ಕದಾಪಿ ನ ।**

---

ನಾನು ಪ್ರಾಣಾಭಿಮಾನವನ್ನು ಇಟ್ಟುಕೊಂಡು ಅನುಪ್ರವೇಶಮಾಡದೇ ಹೋದರೆ ನನಗೆ ಸರ್ವವ್ಯಾಪಕತ್ವವಿರುವುದರಿಂದ ಲೋಕಾಂತರಗಮನವೂ, ಜನನ ಮರಣವ್ಯವಹಾರವೂ, ಇಲ್ಲದೇಹೋಗುವುದು. ವ್ಯಾಪಕವಾದ ವಸ್ತುವಿಗೆ ಗಮನಾಗಮನವೂ, ದೇಹಸಂಬಂಧವೂ, ದೇಹತ್ಯಾಗವೂ, ಸಂಭವಿಸುವುದಿಲ್ಲವೆಂಬ ಕಾರಣದಿಂದ ಅವುಗಳ ಸಿದ್ಧಿಗಾಗಿ ಪ್ರಾಣಾಭಿಮಾನದಿಂದ ಅನುಪ್ರವೇಶಮಾಡುವೆನು. ಪ್ರಾಣಾಭಿಮಾನಸ್ವೀಕಾರದಿಂದ ಗಮನಾಗಮನಗಳೂ, ಜನನಮರಣಗಳೂ ಸಿದ್ಧಿಸುವುವು. ಕೇವಲ ಚಿದಾಭಾಸವೊಂದೇ ಜೀವನಲ್ಲವು. ಮತ್ತೇನೆಂದರೆ—ಸಾಕ್ಷಿಕೂಟಸ್ಥ ಸ್ವರೂಪಳಾದ ನಾನೂ ಅಂತಃಕರಣವೂ ಆ ಅಂತಃಕರಣಕ್ಕೆ ಆಧಾರವಾದ ಅವಿದ್ಯೆಯೂ ಚಿದಾಭಾಸವೂ ಈ ನಾಲ್ಕೂ ಸೇರಿ ಜೀವನೆಂಬ ವ್ಯವಹಾರವು. ಜ್ಞಾನದಿಂದ ಅವಿದ್ಯೆ, ಅಂತಃಕರಣ, ಚಿದಾಭಾಸ, ಈ ಮೂರೂ ನಾಶವಾದರೂ ಕೂಟಸ್ಥಬ್ರಹ್ಮಾಂಶವು ಮುಕ್ತ್ಯವಸ್ಥೆಯಲ್ಲಿ ಇದ್ದೇ ಇರುವುದು ಹೀಗಿರುವುದರಿಂದ ಜೀವನಿಗೆ ಮೋಕ್ಷಕ್ಕಾಗಿ ಪ್ರಯತ್ನವೂ ಮೋಕ್ಷಶಾಸ್ತ್ರಕ್ಕೆ ಸಾಫಲ್ಯವೂ ಉಂಟಾಗುವುದು. ಕೂಟಸ್ಥಬ್ರಹ್ಮ ಚೈತನ್ಯವು ಒಂದೇ ಆದುದರಿಂದ ಜೀವವೂ ಒಂದೇ ಆಗಲಿ ಎಂದರೆ ವ್ಯಾಪಕವಾದ ಒಂದೇ ಆಕಾಶವು ಘಟ, ಮಠಾದಿ ಉಪಾಧಿಭೇದದಿಂದ ಹೇಗೆ ಬೇರೆಯಾಗಿರುವಂತೆ ತೋರುತ್ತಿರುವುದೋ, ಹಾಗೆ ಅವಿದ್ಯೆ ಮತ್ತು ಅಂತಃಕರಣಗಳ ಭೇದದಿಂದ ಕೂಟಸ್ಥ ಚೈತನ್ಯವೂ ಬೇರೆಯಾಗಿ ಅನೇಕ ಜೀವರುಗಳೆಂಬುದಾಗಿ ತೋರುತ್ತಿರುವುದು. ಇದಕ್ಕೆ ಶ್ರುತಿಪ್ರಮಾಣವು "ಇಂದ್ರೋ ಮಾಯಾಭಿಃ ಪುರುರೂಪ ಈಯತೇ" ಇತ್ಯಾದಿ. ॥೪॥

ನೀನು ಜಗತ್ತಿನ ಅನುಪ್ರವೇಶಮಾಡಿದಮೇಲೆ ಆ ಜಗತ್ತಿನ ದೋಷಗಳಿಂದ ನಿನಗೂ ದೋಷವು ಉಂಟಾಗುವುದಿಲ್ಲವೇ ಎಂದರೆ, ಸೂರ್ಯನು ಉತ್ತಮವಾದ ಮತ್ತು ನೀಚವಾದ ಸಮಸ್ತ ಪದಾರ್ಥಗಳನ್ನೂ ಪ್ರಕಾಶಪಡಿಸಿದರೂ, ಎಂದರೆ ಸೂರ್ಯಕಿರಣಗಳಿಗೂ ದುಷ್ಟಪದಾರ್ಥಗಳಿಗೂ ಸಂಬಂಧವಾದರೂ, ಆ ಪದಾರ್ಥ

ಮಯಿ ಬುದ್ಧ್ಯಾದಿ ಕರ್ತೃತ್ವಮಧ್ಯಸ್ಯೈವಾಪರೇ ಜನಾಃ ॥೬॥

ವದಂತಿ ಚಾತ್ಮಾ ಕರ್ತೇತಿ ವಿಮೂಢಾ ನ ಸುಬುದ್ಧಯಃ ।
ಅಜ್ಞಾನಭೇದತಸ್ತದ್ವನ್ಮಾಯಾಯಾ ಭೇದತಸ್ತಥಾ ॥೭॥

ಜೀವೇಶ್ವರವಿಭಾಗಶ್ಚ ಕಲ್ಪಿತೋ ಮಾಯಯೈವ ತು ।
ಘಟಾಕಾಶಮಹಾಕಾಶವಿಭಾಗಃ ಕಲ್ಪಿತೋ ಯಥಾ ॥೮॥

---

ಗಳ ಗುಣದೋಷಗಳು ಸೂರ್ಯನಿಗೆ ಹೇಗೆ ಅಂಟುವುದಿಲ್ಲವೋ, ಹಾಗೆ ನಾನೂ ಕೂಡ ಜಗತ್ತಿನ ದೋಷಗಳ ಸಂಬಂಧವನ್ನೆಂದಿಗೂ ಪಡೆಯುವುದಿಲ್ಲ. ಏಕೆಂದರೆ ನಾನು, ನನ್ನದು ಎಂಬ ಅಭಿಮಾನವೂ, ಕರ್ತೃತ್ವ, ಭೋಕ್ತೃತ್ವಗಳ ಅಭಿಮಾನವೂ ಆತ್ಮನ ಸ್ವರೂಪದ ತಿಳಿವಳಿಕೆ ಇಲ್ಲದಿರುವುದರಿಂದ ಉಂಟಾಗಿರುತ್ತದೆ. ಜೀವರಿಗೂ ಪ್ರಪಂಚಕ್ಕೂ ಸಂಬಂಧವು ಅಭಿಮಾನಿಕವಾದುದೇ ಹೊರತು ವಾಸ್ತವವಾದುದಾಗಿ ರಲಾರದು. ದೇವಿಗೆ ಮಾಯೆಯು ಅಧೀನವಾಗಿರುತ್ತಾ ಪರಮಾತ್ಮಜ್ಞಾನಕ್ಕೆ ಅಡ್ಡಿಯಾಗದೆ ಇರುವುದರಿಂದ ಆತ್ಮಜ್ಞಾನವು ಸರ್ವದಾಜಾಗರೂಕವಾಗಿರಲು, ಅವಿವೇಕದಿಂದ ಉಂಟಾಗುವ ಅಜ್ಞಾನವೂ, ಅಭಿಮಾನವೂ, ತನ್ಮೂಲಕವಾದ ಸಂಬಂಧವೂ ಯಾವಾಗಲೂ ಸಾಕ್ಷಿರೂಪಳಾಗಿರುವ ದೇವಿಗೆ ಉಂಟಾಗುವುದಿಲ್ಲವೆಂದು ತಾತ್ಪರ್ಯವು. ॥೫॥

ಸೂರ್ಯನು ಸಾಕ್ಷಿಸ್ವರೂಪನಾದುದರಿಂದ ವಸ್ತುಗಳ ಗುಣದೋಷಗಳು ಸೂರ್ಯನಿಗೆ ಅಂಟುವುದಿಲ್ಲವೆಂಬುದು ಸರಿ. ನೀನಾದರೋ ಸಮಸ್ತಕಾರ್ಯಗಳಿಗೂ ಕರ್ತೃವಾಗಿರುವುದರಿಂದ ಕರ್ತೃವಿಗೆ ದೋಷಸಂಬಂಧವು ಬಂದೇಬರುವುದು. ಎಂದರೆ, ಬೇರೆ ಮೂಢಜನರು ಅಜ್ಞಾನದಿಂದ ಬುದ್ಧಿಯೇ ಮುಂತಾದವುಗಳಲ್ಲಿರುವ ಕರ್ತೃತ್ವವನ್ನು ಆತ್ಮಸ್ವರೂಪಳಾದ ನನ್ನಲ್ಲಿ ಅಧ್ಯಾಸಮಾಡಿ ಆತ್ಮನೇ ಕರ್ತೃವೆಂದು ಹೇಳುವವರು. ಆದರೆ ವಿವೇಕಿಗಳು ಹಾಗೆ ಹೇಳುವುದಿಲ್ಲ. ಆದುದರಿಂದ ಸೂರ್ಯನಂತೆ ನಾನೂ ಕೂಡ ಸಾಕ್ಷಿಣಿಯೇ ಹೊರತು ಕರ್ತೃವಲ್ಲ. ॥೬-೭॥

ಅಜ್ಞಾನಭೇದದಿಂದ ಜೀವಭೇದಗಳು ಹೇಗೆ ಕಲ್ಪಿತವಾದುವೋ ಹಾಗೆಯೇ ಮಾಯಾಭೇದದಿಂದ ಬ್ರಹ್ಮಾ, ವಿಷ್ಣು, ಈಶ್ವರ ಮುಂತಾದ ಭೇದಗಳೂ ಕೂಡ ಘಟಾಕಾಶ ಮಹಾಕಾಶಗಳಂತೆ ಕಲ್ಪಿತವಾದವುಗಳಾಗಿರುತ್ತವೆ. ॥೮॥

ತಥೈವ ಕಲ್ಪಿತೋ ಭೇದೋ ಜೀವಾತ್ಮಪರಮಾತ್ಮನೋಃ ।
ಯಥಾ ಜೀವಬಹುತ್ವಂ ಚ ಮಾಯಯೈವ ನ ಚ ಸ್ವತಃ ॥೯॥

ತಥೇಶ್ವರಬಹುತ್ವಂ ಚ ಮಾಯಯಾ ನ ಸ್ವಭಾವತಃ ।
ದೇಹೇಂದ್ರಿಯಾದಿ ಸಂಘಾತವಾಸನಾ ಭೇದಭೇದಿತಾ ॥೧೦॥

ಅವಿದ್ಯಾ ಜೀವಭೇದಸ್ಯ ಹೇತುರ್ನಾನ್ಯಃ ಪ್ರಕೀರ್ತಿತಃ ।
ಗುಣಾನಾಂ ವಾಸನಾಭೇದ ಭೇದಿತಾಯಾ ಧರಾಧರ ॥೧೧॥

ಮಾಯಾ ಸಾ ಪರಭೇದಸ್ಯ ಹೇತುರ್ನಾನ್ಯಃ ಕದಾಚನ ।
ಮಯಿ ಸರ್ವಮಿದಂ ಪ್ರೋತಮೋತಂ ಚ ಧರಣೀಧರ ॥೧೨॥

ಈಶ್ವರೋಽಹಂ ಚ ಸೂತ್ರಾತ್ಮಾ ವಿರಾಡಾತ್ಮಾಽಹಮಸ್ಮಿ ಚ ।
ಬ್ರಹ್ಮಾಽಹಂ ವಿಷ್ಣುರುದ್ರೌ ಚ ಗೌರೀ ಬ್ರಾಹ್ಮೀ ಚ ವೈಷ್ಣವೀ ॥೧೩॥

---

ಹಾಗೆಯೇ ಜೀವಾತ್ಮಪರಮಾತ್ಮರಿಗೂ ಭೇದವು ಕಲ್ಪಿತವಾದುದು. ಜೀವರು ಅನೇಕರೆಂಬ ವಾದವಾಗಲಿ ಈಶ್ವರರು ಅನೇಕರೆಂಬ ವಾದವಾಗಲಿ ಮಾಯಾ ಸಂಬಂಧದಿಂದುಂಟಾದುದೇ ಹೊರತು ಸ್ವಾಭಾವಿಕವಾದುದಲ್ಲವು. ॥೯॥

ದೇಹ ಮತ್ತು ಇಂದ್ರಿಯಗಳ ಸಮೂಹ, ಜನ್ಮಾಂತರ ಕರ್ಮರೂಪವಾದ ವಾಸನಾ ಇವುಗಳಿಂದ ಬೇರೆ ಬೇರೆಯಾದ ಅವಿದ್ಯೆಯೇ ಜೀವರುಗಳ ಭೇದಕ್ಕೆ ಕಾರಣವು. ಮತ್ತಾವ ಕಾರಣವೂ ಇರುವುದಿಲ್ಲ. ॥೧೦॥

ಎಲೈ ಪರ್ವತರಾಜನೇ, ಸಾತ್ವಿಕರಾಜಸತಾಮಸಗುಣಗಳ ವಾಸನೆ (ಸಂಸ್ಕಾರ) ಯಿಂದ ಬೇರೆ ಬೇರೆಯಾದ ಮಾಯೆಯೇ, ಈಶ್ವರ ವಿಷ್ಣು ಬ್ರಹ್ಮಾ ಇವರ ಭೇದಕ್ಕೆ ಕಾರಣವೇ ಹೊರತು ಬೇರೊಂದಿಲ್ಲ. ॥೧೧॥

ಓ ಪರ್ವತರಾಜನೇ, ಸರ್ವಾತ್ಮಚೈತನ್ಯಸ್ವರೂಪಳಾದ ನನ್ನಲ್ಲಿ ಈ ಸಮಸ್ತವೂ ಸಂಬಂಧಿಸಿಕೊಂಡಿರುವುದು. ಕಾರಣದೇಹಾಭಿಮಾನಿಯಾದ ಈಶ್ವರನೂ ನಾನೇ. ಲಿಂಗದೇಹಾಭಿಮಾನಿಯಾದ ಸೂತ್ರಾತ್ಮನಾದ ಹಿರಣ್ಯಗರ್ಭನೂ ನಾನೇ. ಸ್ಥೂಲದೇಹಾಭಿಮಾನಿಯಾದ ವಿರಾಡಾತ್ಮನೂ ನಾನೇ. ಬ್ರಹ್ಮವಿಷ್ಣುರುದ್ರರೂ ನಾನೇ. ಗೌರೀ ಸರಸ್ವತೀ ಲಕ್ಷ್ಮೀಯರೂ ನಾನೇ. ॥೧೨-೧೩॥

ಸೂರ್ಯೋಽಹಂ ತಾರಕಾಶ್ಚಾಹಂ ತಾರಕೇಶಸ್ತಥಾಽಸ್ಮ್ಯಹಂ ।
ಪಶುಪಕ್ಷಿ ಸ್ವರೂಪಾಽಹಂ ಚಾಂಡಾಲೋಽಹಂ ಚ ತಸ್ಕರಃ ॥೧೪॥

ವ್ಯಾಧೋಽಹಂ ಕ್ರೂರಕರ್ಮಾಽಹಂ ಸತ್ಕರ್ಮಾಽಹಂ ಮಹಾಜನಃ ।
ಸ್ತ್ರೀಪುನ್ನಪುಂಸಕಾಕಾರೋಽಪ್ಯಹಮೇವ ನ ಸಂಶಯಃ ॥೧೫॥

ಯಚ್ಚ ಕಿಂಚಿತ್ಕ್ವಚಿದ್ವಸ್ತು ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯಾಹಂ ಸರ್ವದಾ ಸ್ಥಿತಾ ॥೧೬॥

ನ ತದಸ್ತಿ ಮಯಾ ತ್ಯಕ್ತಂ ವಸ್ತು ಕಿಂಚಿಚ್ಚರಾಚರಂ ।
ಯದ್ಯಸ್ತಿ ಚೇತ್ತಚ್ಛೂನ್ಯಂ ಸ್ಯಾದ್ವಂಧ್ಯಾಪುತ್ರೋಪಮಾ ಹಿ ತತ್॥೧೭॥

ರಜ್ಜುರ್ಯಥಾ ಸರ್ಪಮಾಲಾ ಭೇದೈರೇಕಾ ವಿಭಾತಿ ಹಿ ।
ತಥೈವೇಶಾದಿ ರೂಪೇಣ ಭಾಮ್ಯಹಂ ನಾತ್ರ ಸಂಶಯಃ ॥೧೮॥

---

ಸೂರ್ಯನೂ, ನಕ್ಷತ್ರಗಳೂ, ನಕ್ಷತ್ರಗಳಿಗೆ ರಾಜನಾದ ಚಂದ್ರನೂ, ನಾನೇ. ಪಶುಪಕ್ಷಿಗಳೂ ನಾನೇ. ಚಾಂಡಾಲನೂ ಕಳ್ಳನೂ ನಾನೇ. ಕ್ರೂರವಾದ ಕೆಲಸ ಮಾಡುವವನೂ, ಬೇಡನೂ, ಮಹಾಜನರೂ, ನಾನೇ ಆಗಿರುವೆನು. ನಾನೇ ಪುರುಷ ಸ್ತ್ರೀ ನಪುಂಸಕಾಕಾರಳಾಗಿರುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು. ॥೧೪-೧೫॥

ಎಲ್ಲಿಯಾದರೂ ಯಾವ ವಸ್ತುವಾದರೂ ಕಂಡರೂ ಕೇಳಿದರೂ ಆ ವಸ್ತುಗಳೆಲ್ಲವನ್ನೂ ಒಳಗೂ ಹೊರಗೂ ನಾನು ಆವರಿಸಿಕೊಂಡು ಯಾವಾಗಲೂ ಸತ್ತಾಪ್ರದವಾದ ಚೈತನ್ಯರೂಪಳಾಗಿ ಮತ್ತು ಪ್ರಕಾಶಕವಾದ ಸಾಕ್ಷಿರೂಪಳಾಗಿ ಇರುವೆನು. ॥೧೬॥

ಚರಾಚರವಸ್ತುಗಳಲ್ಲಿ ಸದ್ರೂಪಳಾದ ನಾನಿಲ್ಲದ ವಸ್ತುವಾವುದೂ ಇಲ್ಲವು. ಹಾಗಿದ್ದುದೇ ಆದರೆ ಅದು ಬಂಜೆಯಮಗನಂತೆ ಶೂನ್ಯವಾದುದಾಗಿರುವುದು. ॥೧೭॥

ಒಂದೇ ಆದ ಹಗ್ಗವು ಹಾವೆಂದೂ ಹೂಮಾಲೆಯೆಂದೂ ಬೇರೆಬೇರೆಯಾಗಿ ಹೇಗೆ ಕಾಣಿಸುವುದೋ ಹಾಗೆ ನಾನು ಈಶ್ವರ ವಿಷ್ಣು ಮುಂತಾದ ರೂಪದಿಂದ ಪ್ರಕಾಶಿಸುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು. ॥೧೮॥

ಅಧಿಷ್ಠಾನಾತಿರೇಕೇಣ ಕಲ್ಪಿತಂ ತನ್ನ ಭಾಸತೇ ।
ತಸ್ಮಾನ್ಮತ್ಸತ್ತಯೈ ವೈತತ್ಸತ್ತಾವನ್ನಾನ್ಯಥಾ ಭವೇತ್ ॥೧೯॥

॥ ಹಿಮಾಲಯ ಉವಾಚ ॥

ಯಥಾ ವದಸಿ ದೇವೇಶಿ ಸಮಷ್ಟ್ಯಾತ್ಮವಪುಸ್ತ್ವಿದಂ ।
ತಥೈವ ದ್ರಷ್ಟುಮಿಚ್ಛಾಮಿ ಯದಿ ದೇವಿ ಕೃಪಾ ಮಯಿ ॥೨೦॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಸರ್ವೇ ದೇವಾಃ ಸವಿಷ್ಣವಃ ।
ನನಂದುರ್ಮುದಿತಾತ್ಮಾನಃ ಪೂಜಯಂತಶ್ಚ ತದ್ವಚಃ ॥೨೧॥

ಅಥ ದೇವಮತಂ ಜ್ಞಾತ್ವಾ ಭಕ್ತಕಾಮದುಘಾ ಶಿವಾ ।
ಅದರ್ಶಯನ್ನಿಜಂ ರೂಪಂ ಭಕ್ತಕಾಮಪ್ರಪೂರಿಣೀ ॥೨೨॥

---

ಕಲ್ಪಿತವಾದವಸ್ತುವು ಯಾವುದರಲ್ಲಿ ಕಲ್ಪಿತವಾಗಿರುವುದೋ ಆ ಅಧಿಷ್ಠಾನ ವಸ್ತುವಿಗೆ ಯಾವ ಸತ್ತೆಯು ಇದೆಯೋ ಆ ಸತ್ತೆಯಿಂದಲೇ ಪ್ರಕಾಶಿಸುವುದು ಆದುದರಿಂದ ಕಲ್ಪಿತವಾದ ಈ ಜಗತ್ತು ಪಾರಮಾರ್ಥಿಕವಾದ ನನ್ನ ಸತ್ತೆಯಿಂದ ಸತ್ತಾಗಿ ಕಾಣುವುದೇ ಹೊರತು ಅದಕ್ಕೆ ಸ್ವತಂತ್ರವಾದ ಸತ್ತೆ ಇಲ್ಲವು. ॥೧೯॥

ಹಿಮವಂತನು ಹೇಳಿದನು— ಓ ದೇವಿಯೇ, ನೀನು ಹೇಳಿರುವಂತೆ ಸರ್ವ ಸಮಷ್ಟಿರೂಪಿಯಾದ ನಿನ್ನ ವಿಶ್ವಸ್ವರೂಪವನ್ನು ನೋಡಬೇಕೆಂದು ಅಪೇಕ್ಷಿಸುತ್ತೇನೆ. ನನ್ನಲ್ಲಿ ನಿನಗೆ ದಯೆಯಿದ್ದರೆ ಆ ವಿಶ್ವರೂಪವನ್ನು ನನಗೆ ತೋರಿಸು. ॥೨೦॥

ವ್ಯಾಸನು ಹೇಳಿದನು— ಪರ್ವತರಾಜನ ಮಾತನ್ನು ಕೇಳಿ ವಿಷ್ಣುವಿನೊಡನೆ ಕೂಡಿದ ಸಮಸ್ತ ದೇವತೆಗಳೂ ಸಂತೋಷದಿಂದ ಅವನ ಮಾತನ್ನು ಶ್ಲಾಘಿಸಿದರು. ಮತ್ತು ದೇವಿಯ ವಿರಾಟ್ಸ್ವರೂಪದ ದರ್ಶನಾಸಕ್ತಿಯಿಂದ ಆನಂದಿಸುತ್ತಿದ್ದರು.॥೨೧॥

ಭಕ್ತರ ಇಷ್ಟಾರ್ಥಗಳನ್ನು ಕೊಡುವುದರಲ್ಲಿ ಕಾಮಧೇನುವಿನಂತಿರುವ ಭುವನೇಶ್ವರೀದೇವಿಯು ದೇವತೆಗಳ ಅಭಿಪ್ರಾಯವನ್ನು ತಿಳಿದು ಭಕ್ತರಾದ ದೇವತೆಗಳ ಆ ಕೋರಿಕೆಯನ್ನು ಪೂರ್ಣಮಾಡುವವಳಾಗಿ ತನ್ನ ವಿರಾಟ್ಸ್ವರೂಪವನ್ನು ತೋರಿಸಿದಳು. ॥೨೨॥

ಅಪಶ್ಯಂಸ್ತೇ ಮಹಾದೇವ್ಯಾ ವಿರಾಡ್ರೂಪಂ ಪರಾತ್ಪರಂ ।
ದ್ಯೌರ್ಮಸ್ತಕಂ ಭವೇದ್ಯಸ್ಯ ಚಂದ್ರಸೂರ್ಯೌ ಚ ಚಕ್ಷುಷೀ ॥೨೩॥

ದಿಶಃ ಶ್ರೋತ್ರೇ ವಚೋ ವೇದಾಃ ಪ್ರಾಣೋ ವಾಯುಃ ಪ್ರಕೀರ್ತಿತಃ ।
ವಿಶ್ವಂ ಹೃದಯಮಿತ್ಯಾಹುಃ ಪೃಥಿವೀ ಜಘನಂ ಸ್ಮೃತಂ ॥೨೪॥

ನಭಸ್ತಲಂ ನಾಭಿಸರೋ ಜ್ಯೋತಿಶ್ಚಕ್ರಮುರಸ್ಸ್ಥಲಂ ।
ಮಹರ್ಲೋಕಸ್ತು ಗ್ರೀವಾ ಸ್ಯಾಜ್ಜನೋಲೋಕೋ ಮುಖಂ ಸ್ಮೃತಂ॥೨೫॥

ತಪೋಲೋಕೋ ಲಲಾಟಸ್ತು ಸತ್ಯಲೋಕಾದಧಃ ಸ್ಥಿತಃ ।
ಇಂದ್ರಾದಯೋ ಬಾಹವಃ ಸ್ಯುಃ ಶಬ್ದಃ ಶ್ರೋತ್ರಂ ಮಹೇಶಿತುಃ ॥೨೬॥

---

ಆ ದೇವತೆಗಳು ಅತ್ಯಂತಶ್ರೇಷ್ಠವಾದ ಆ ದೇವಿಯ ವಿರಾಡ್ರೂಪವನ್ನು ನೋಡಿದರು. ಆ ವಿರಾಡ್ರೂಪದ ತಲೆಯು ಎಲ್ಲಕ್ಕೂ ಮೇಲಿನದಾಗಿರುವ ಸತ್ಯಲೋಕವಾಗಿದ್ದಿತು. ಚಂದ್ರಸೂರ್ಯರೇ ಕಣ್ಣಾಗಿದ್ದರು. ॥೨೩॥

ಆ ದೇವಿಯ ವಿಶ್ವರೂಪದಲ್ಲಿ ದಿಕ್ಕುಗಳೇ ಕಿವಿಗಳೂ ಎಂದರೆ ಶ್ರೋತ್ರೇಂದ್ರಿಯಾಧಾರವೂ, ವೇದವೇ ಮಾತುಗಳೂ, ವಾಯುವೇ ಪ್ರಾಣವೂ, ಆಗಿದೆ ಎಂದು ವೇದದಲ್ಲಿ ಹೇಳಿರುತ್ತದೆ. ವಿಶ್ವಂ ಎಂದರೆ ಸರ್ವಾತ್ಮಕವಾದ ಅವ್ಯಕ್ತವೆಂಬ ತತ್ವವು ಆ ವಿರಾಡ್ರೂಪದ ಹೃದಯಸ್ಥಾನವೂ, ಭೂಮಿಯೇ ಸೊಂಟದ ಮುಂಭಾಗವಾದ ಜಘನವೂ ಆಗಿದ್ದಿತು ! ಈ ಅಂಶವನ್ನು ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃಶ್ರೋತ್ರೇ ವಾಗ್ವಿವೃತಾಶ್ಚವೇದಾಃ । ವಾಯುಃಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷಸರ್ವಭೂತಾಂತರಾತ್ಮಾ ॥ ಎಂದು ಮುಂಡಕೋಪನಿಷತ್ತಿನಲ್ಲೂ ಹೇಳಿದೆ. ॥೨೪॥

ಭುವರ್ಲೋಕವೇ ಹೊಕ್ಕುಳು. ಸ್ವರ್ಗಲೋಕವೇ ಎದೆಯು. ಮಹರ್ಲೋಕವೇ ಕುತ್ತಿಗೆಯು. ಜನೋಲೋಕವೇ ಮುಖವೂ ಆಗಿದ್ದಿತು ! ॥೨೫॥

ಸತ್ಯಲೋಕದ ಕೆಳಭಾಗದಲ್ಲಿರುವ ತಪೋಲೋಕವೇ ಹಣೆಯು. ಇಂದ್ರಾದಿ ಅಷ್ಟದಿಕ್ಪಾಲಕರೇ ತೋಳುಗಳು. ನಮ್ಮ ಕಿವಿಗೆ ಕೇಳುವ ಸಮಸ್ತ ಶಬ್ದಗಳೂ ಆ ಮಹಾದೇವಿಯ ವಿಶ್ವರೂಪದ ಶ್ರೋತ್ರೇಂದ್ರಿಯವಾಗಿದ್ದಿತು. ॥೨೬॥

ನಾಸತ್ಯದಸ್ರೌ ನಾಸೋಽಸ್ಯಾಃ ಗಂಧೋ ಘ್ರಾಣಂ ಸ್ಮೃತೋ ಬುಧೈಃ ।
ಮುಖಮಗ್ನಿಃ ಸಮಾಖ್ಯಾತೋ ದಿವಾರಾತ್ರೀ ಚ ಪಕ್ಷ್ಮಣೀ ॥೨೭॥

ಬ್ರಹ್ಮಸ್ಥಾನಂ ಭ್ರೂವಿಜೃಂಭೋಽಪ್ಯಾಪಸ್ತಾಲುಃ ಪ್ರಕೀರ್ತಿತಾಃ ।
ರಸೋ ಜಿಹ್ವಾ ಸಮಾಖ್ಯಾತಾ ಯಮೋ ದಂಷ್ಟ್ರಾಃ ಪ್ರಕೀರ್ತಿತಾಃ ॥೨೮॥

ದಂತಾಃ ಸ್ನೇಹಕಲಾ ಯಸ್ಯ ಹಾಸೋ ಮಾಯಾ ಪ್ರಕೀರ್ತಿತಾ ।
ಸರ್ಗಸ್ತ್ವಪಾಂಗಮೋಕ್ಷಃ ಸ್ಯಾದ್ವ್ರೀಡೋರ್ಧ್ವೋಷ್ಠೋ ಮಹೇಶಿತುಃ॥೨೯॥

ಲೋಭಃ ಸ್ಯಾದಧರೋಷ್ಠೋಽಸ್ಯಾಽಧರ್ಮಮಾರ್ಗಸ್ತು ಪೃಷ್ಠಭೂಃ ।
ಪ್ರಜಾಪತಿಶ್ಚ ಮೇಢ್ರಂ ಸ್ಯಾದ್ಯಃ ಸ್ರಷ್ಟಾ ಜಗತೀತಲೇ ॥೩೦॥

ಕುಕ್ಷಿಃ ಸಮುದ್ರಾ ಗಿರಯೋಽಸ್ಥೀನಿ ದೇವ್ಯಾ ಮಹೇಶಿತುಃ ।
ನದ್ಯೋ ನಾಡ್ಯಃ ಸಮಾಖ್ಯಾತಾ ವೃಕ್ಷಾಃ ಕೇಶಾಃ ಪ್ರಕೀರ್ತಿತಾಃ ॥೩೧॥

---

ಅಶ್ವಿನೀದೇವತೆಗಳೇ ಆ ದೇವಿಯ ವಿಶ್ವರೂಪದ ಮೂಗೂ, ವಾಸನೆಯೇ ಘ್ರಾಣೇಂದ್ರಿಯವೂ, ಅಗ್ನಿಯೇ ವಾಗಿಂದ್ರಿಯವೂ, ಹಗಲು ರಾತ್ರಿಗಳೇ ಕಣ್ಣಿನ ರೆಪ್ಪೆಗಳೂ ಆಗಿದ್ದುವು ! ॥೨೭॥

ಚತುರ್ಮುಖಬ್ರಹ್ಮನ ಸ್ಥಾನವೇ ಆ ರೂಪದ ಹುಬ್ಬುಗಳ ವಿಲಾಸವೂ, ನೀರೇ ರಸನೇಂದ್ರಿಯಾಧಾರವಾದ ದವಡೆಗಳೂ, ರಸವೇ ರಸನೇಂದ್ರಿಯವಾದ ನಾಲಿಗೆಯೂ, ಯಮನೇ ಕೋರೇಹಲ್ಲುಗಳೂ, (ದವಡೆ ಹಲ್ಲುಗಳೂ) ಆಗಿದ್ದುವು ! ॥೨೮॥

ಸ್ತ್ರೀಪುತ್ರಾದಿಗಳ ಪ್ರೀತಿಯೇ ಆ ದೇವಿಯ ವಿರಾಡ್ರೂಪದ ಹಲ್ಲುಗಳೂ, ಮಾಯಾರೂಪವಾದ ಅಜ್ಞಾನವೇ ನಗುವೂ ಆಗಿದೆ ಎಂದು ಹೇಳಿರುತ್ತದೆ. ಸೃಷ್ಟಿಯೇ ಆ ಮಹಾದೇವಿಯ ವಿಶ್ವರೂಪದ ಕಡೆಗಣ್ಣಿನ ನೋಟವೂ, ನಾಚಿಕೆಯೇ ಮೇಲಿನ ತುಟಿಯೂ, ಆಗಿರುತ್ತದೆ! ॥೨೯॥

ಅತ್ಯಾಶೆಯೇ ಕೆಳತುಟಿಯೂ, ಅಧರ್ಮ ಮಾರ್ಗವೇ ಪೃಷ್ಠಗಳೂ, ಲೋಕದಲ್ಲಿ ಸಮಸ್ತವನ್ನೂ ಸೃಷ್ಟಿಸುವ ಪ್ರಜಾಪತಿಯೆಂಬ ಬ್ರಹ್ಮನೇ ಜನನೇಂದ್ರಿಯವೂ, ಆಗಿವೆ । ॥೩೦॥

ಸಮುದ್ರವೇ ಆ ಮಹೇಶ್ವರೀದೇವಿಯ ಹೊಕ್ಕುಳೂ, ಪರ್ವತಗಳೇ ಮೂಳೆಗಳೂ, ನದಿಗಳೇ ನಾಡಿಗಳೂ, ಮರಗಳೇ ಕೂದಲುಗಳೂ, ಆಗಿವೆ ಎಂದು ಹೇಳಿದೆ. ॥೩೧॥

ಕೌಮಾರಯೌವನಜರಾ ವಯೋಽಸ್ಯಾ ಗತಿರುತ್ತಮಾ ।
ಬಲಾಹಕಾಸ್ತು ಕೇಶಾಃ ಸ್ಯುಃ ಸಂಧ್ಯೇ ತೇ ವಾಸಸೀ ವಿಭೋಃ ॥೩೨॥

ರಾಜನ್ ಶ್ರೀಜಗದಂಬಾಯಾಶ್ಚಂದ್ರಮಾಸ್ತು ಮನಃ ಸ್ಮೃತಃ ।
ವಿಜ್ಞಾನಶಕ್ತಿಸ್ತು ಹರೀ ರುದ್ರೋಽಂತಃಕರಣಂ ಸ್ಮೃತಂ ॥೩೩॥

ಅಶ್ವಾದಿಜಾತಯಃ ಸರ್ವಾಃ ಶ್ರೋಣೀದೇಶೇ ಸ್ಥಿತಾ ವಿಭೋಃ ।
ಅತಲಾದಿ ಮಹಾಲೋಕಾಃ ಕಟ್ಯಧೋ-ಭಾಗತಾಂ ಗತಾಃ ॥೩೪॥

ಏತಾದೃಶಂ ಮಹಾರೂಪಂ ದದೃಶುಃ ಸುರಪುಂಗವಾಃ ।
ಜ್ವಾಲಾ ಮಾಲಾ ಸಹಸ್ರಾಢ್ಯಂ ಲೇಲಿಹಾನಂ ಚ ಜಿಹ್ವಯಾ ॥೩೫॥

---

ಕೌಮಾರ, ಯೌವನ, ಜರಾ, ಎಂಬ ಮೂರು ಬಗೆಗಳೇ ಆ ದೇವಿಯ ವಯೋಗತಿಯೂ, ಮೇಘಗಳೇ ತಲೆಯ ಕೂದಲುಗಳೂ, ಪ್ರಾತಃ ಸಾಯಂ ಸಂಧ್ಯೆಗಳೆರಡೂ ವಸ್ತ್ರಗಳೂ, ಆಗಿರುತ್ತವೆ. ॥೩೨॥

ಓ ಪರ್ವತರಾಜನೇ, ಚಂದ್ರನೇ ಆ ಜಗದಂಬೆಯ ಮನಸ್ಸೂ, ವಿಷ್ಣುವೇ ಬುದ್ಧಿಶಕ್ತಿಯೂ, ರುದ್ರನೇ ಅಂತಃಕರಣವೂ, ಆಗಿರುತ್ತಾರೆ! ॥೩೩॥

ಕುದರೆಯೇ ಮುಂತಾದ ಸಮಸ್ತ ತಿರ್ಯಗ್ಜಾತಿಗಳೂ ಆ ದೇವಿಯ ಸೊಂಟವು. ಅತಲಾದಿ ಪಾತಾಳಾಂತವಾದ ಸಪ್ತ ಅಧೋಲೋಕಗಳು ಸೊಂಟ ಮೊದಲುಗೊಂಡು ಪಾದಗಳಪರ್ಯಂತವೂ ಇರುವ ಅವಯವಗಳಾಗಿ ಇರುವುವು. ವೇದಪ್ರಮಾಣವನ್ನನುಸರಿಸಿ ಈ ವಿರಾಡ್ರೂಪವು ವರ್ಣಿತವಾಗಿರುವುದು. ಶ್ರುತಿ "ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ" ॥ ಎಂದು ಹೇಳಿರುವುದನ್ನು ಇಲ್ಲಿ ವಿಸ್ತರಿಸಿ ಹೆಚ್ಚು ವಿವರಣೆಗಳೊಡನೆ ಹೇಳಿದೆ. ॥೩೪॥

ದೇವಶ್ರೇಷ್ಠರು ಈ ರೀತಿಯಾದ ದೊಡ್ಡ ದೇವಿಯ ವಿಶ್ವರೂಪವನ್ನು ನೋಡಿದರು! ಆ ರೂಪವು ಮತ್ತು ಹೇಗಿತ್ತೆಂದರೆ ಸಾವಿರಾರು ಉರಿಗಳಿಂದ ಕೂಡಿದ ನಾಲಿಗೆಯಿಂದ ಸಮಸ್ತ ಜಗತ್ತನ್ನೂ ನೆಕ್ಕುತ್ತಿರುವಂತಿದ್ದಿತು! ॥೩೫॥

ದಂಷ್ಟ್ರಾ ಕಟಕಟಾರಾವಂ ವಮಂತಂ ವಹ್ನಿಮಕ್ಷಿಭಿಃ ।
ನಾನಾಯುಧಧರಂ ವೀರಂ ಬ್ರಹ್ಮಕ್ಷತ್ರೌದನಂ ಚ ಯತ್ ॥೩೬॥

ಸಹಸ್ರಶೀರ್ಷನಯನಂ ಸಹಸ್ರಚರಣಂ ತಥಾ ।
ಕೋಟಿಸೂರ್ಯಪ್ರತೀಕಾಶಂ ವಿದ್ಯುತ್ಕೋಟಿಸಮಪ್ರಭಂ ॥೩೭॥

ಭಯಂಕರಮಹಾಘೋರಂ ಹೃದಕ್ಷ್ಣೋಃ ತ್ರಾಸಕಾರಕಂ ।
ದದೃಶುಸ್ತೇ ಸುರಾಸ್ಸರ್ವೇ ಹಾಹಾಕಾರಂ ಚ ಚಕ್ರಿರೇ ॥೩೮॥

ವಿಕಂಪಮಾನಹೃದಯಾ ಮೂರ್ಛಾಮಾಪುರ್ದುರತ್ಯಯಾಂ ।
ಸ್ಮರಣಂ ಚ ಗತಂ ತೇಷಾಂ ಜಗದಂಬೇಯಮಿತ್ಯಪಿ ॥೩೯॥

---

ದವಡೆಯ ಹಲ್ಲುಗಳನ್ನು ಕಟಕಟನೆ ಕಡಿಯುತ್ತ, ಕಣ್ಣುಗಳಿಂದ ಉರಿಯನ್ನು ಕಾರುತ್ತ, ಅನೇಕ ಆಯುಧಗಳನ್ನು ಧರಿಸಿ ಪರಾಕ್ರಮವನ್ನು ತೋರಿಸುತ್ತ ಬ್ರಾಹ್ಮಣ ಕ್ಷತ್ರಿಯರಲ್ಲಿ ಆತ್ಮತತ್ವವನ್ನರಿಯದವರನ್ನು ನುಂಗುತ್ತ ಇರುವಂತೆ ಆ ದೇವಿಯ ರೂಪವು ತೋರುತ್ತಾ ಇದ್ದಿತು. ಶ್ರುತಿ " ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದಯತ್ರ ಸಃ " ॥ ॥೩೬॥

ಅನೇಕ ತಲೆಗಳೂ, ಕಣ್ಣುಗಳೂ, ಕಾಲುಗಳೂ, ಇವುಗಳಿಂದ ಕೂಡಿ ಅನೇಕ ಸೂರ್ಯರ ಪ್ರಕಾಶದಂತೆ ಪ್ರಕಾಶವೂ, ಅನೇಕ ಮಿಂಚುಗಳ ಸಮವಾದ ಕಾಂತಿಯೂ ಉಳ್ಳದ್ದಾಗಿದ್ದಿತು. ॥೩೭॥

ಬಹಳ ಕ್ರೂರವಾದುದರಿಂದ ಮನಸ್ಸಿಗೂ ಕಣ್ಣಿಗೂ ಹೆದರಿಕೆಯನ್ನುಂಟು ಮಾಡುವ ಆ ರೂಪವನ್ನು ನೋಡಿ ದೇವತೆಗಳೆಲ್ಲರೂ ಹೆದರಿ ಗಟ್ಟಿಯಾಗಿ ಹಾ ಹಾ ಎಂದು ಕೂಗಿಕೊಂಡರು. ॥೩೮॥

ಮತ್ತು ಹೃದಯದಲ್ಲಿ ನಡುಕವನ್ನು ಹೊಂದಿ, ಮೈಮರೆತು ಈಕೆಯು ನಮ್ಮನ್ನು ಕಾಪಾಡತಕ್ಕ ಜಗದಂಬೆಯು ಎಂಬ ತಿಳಿವಳಿಕೆಯನ್ನೂ ತಂದುಕೊಳ್ಳ ಲಾರದೇ ಹೋದರು ! ಎಂದರೆ ಅವರ ಜ್ಞಾಪಕಶಕ್ತಿಯೂ ಹೋಯಿತು. ॥೩೯॥

ಅಥ ತೇ ಯೇ ಸ್ಥಿತಾ ವೇದಾಶ್ಚತುರ್ದಿಕ್ಷು ಮಹಾವಿಭೋಃ ।
ಬೋಧಯಾಮಾಸುರತ್ಯುಗ್ರಂ ಮೂರ್ಚ್ಛಾತೋ ಮೂರ್ಚ್ಛಿತಾನ್ಸುರಾನ್ ॥

ಅಥ ತೇ ಧೈರ್ಯಮಾಲಂಬ್ಯ ಲಬ್ಧ್ವಾ ಚ ಶ್ರುತಿಮುತ್ತಮಾಂ ।
ಪ್ರೇಮಾಶ್ರುಪೂರ್ಣನಯನಾ ರುದ್ಧಕಂಠಾಸ್ತು ನಿರ್ಜರಾಃ ॥೪೧॥

ಬಾಷ್ಪಗದ್ಗದಯಾ ವಾಚಾ ಸ್ತೋತುಂ ಸಮುಪಚಕ್ರಿರೇ ।

॥ ದೇವಾ ಊಚುಃ ॥

ಅಪರಾಧಂ ಕ್ಷಮಸ್ವಾಂಬ ಪಾಹಿ ದೀನಾನ್ ತ್ವದುದ್ಭವಾನ್ ॥೪೨॥

ಕೋಪಂ ಸಂಹರ ದೇವೇಶಿ ಸಭಯಾ ರೂಪದರ್ಶನಾತ್ ।
ಕಾ ತೇ ಸ್ತುತಿಃ ಪ್ರಕರ್ತವ್ಯಾ ಪಾಮರೈರ್ನಿರ್ಜರೈರಿಹ ॥೪೩॥

---

ಆಮೇಲೆ ಸರ್ವವ್ಯಾಪಿಯಾದ ಆ ವಿರಾಡ್ರೂಪದ ನಾಲ್ಕು ದಿಕ್ಕುಗಳಲ್ಲಿಯೂ ಇದ್ದ ಮೂರ್ತಿರೂಪರಾದ ವೇದಗಳು ವೇದಾಭಿಮಾನಿದೇವತೆಗಳು ಬಲವಾಗಿ ಮೈಮರೆತಿದ್ದ ಆ ದೇವತೆಗಳನ್ನು ತಿಳಿವಳಿಕೆಯುಂಟಾಗುವಂತೆ ಮಾಡಿ ಎಚ್ಚರಗೊಳಿಸಿದುವು. ॥೪೦॥

ಆಮೇಲೆ ಆ ದೇವತೆಗಳು ಧೈರ್ಯವನ್ನು ಹೊಂದಿ ಉತ್ತಮವಾದ ವೇದ ಋಕ್ಕುಗಳ ತಿಳಿವಳಿಕೆಯನ್ನು ಪಡೆದು, ದೇವಿಯಲ್ಲುಂಟಾದ ಭಕ್ತಿಯಿಂದ ಕಣ್ಣಿನಲ್ಲಿ ಆನಂದಬಾಷ್ಪವು ಉಕ್ಕಿ, ಕುತ್ತಿಗೆಯ ನಾಳಗಳು ಬಿಗಿಯುತ್ತಿರಲು ಸರಿಯಾಗಿ ಮಾತನಾಡಲಾರದೇ ಗದ್ಗದಧ್ವನಿಯಿಂದಲೇ ದೇವಿಯನ್ನು ಸ್ತೋತ್ರಮಾಡಲು ಪ್ರಾರಂಭಿಸಿದರು. ॥೪೧॥

ದೇವತೆಗಳು ಹೇಳಿದರು—ಓ ತಾಯಿಯೇ, ನಮ್ಮ ತಪ್ಪುಗಳನ್ನು ಕ್ಷಮಿಸು. ನಿನ್ನ ಮಕ್ಕಳಾದ ದೀನರಾದ ನಮ್ಮನ್ನು ಕಾಪಾಡು. ಮಹಾತಾಯಿಯೇ, ನಿನ್ನ ಕೋಪವನ್ನು ಅಡಗಿಸು. ನಾವು ನಿನ್ನ ವಿರಾಟ್‌ರೂಪವನ್ನು ನೋಡಿ ಭಯಪಟ್ಟಿರುತ್ತೇವೆ. ಈ ಸಂದರ್ಭದಲ್ಲಿ ಮೂಢರಾದ ದೇವತೆಗಳಾದ ನಾವು ನಿನ್ನ ಯಾವ ಸ್ತೋತ್ರವನ್ನು ಹೇಗೆ ಮಾಡಬೇಕೋ ತಿಳಿಯಲಾರದವರಾಗಿರುತ್ತೇವೆ. ॥೪೨-೪೩॥

ಸ್ವಸ್ಯಾಪ್ಯಜ್ಞೇಯ ಏವಾಽಸೌ ಯಾವಾನ್ಯಶ್ಚ ಸ್ವವಿಕ್ರಮಃ ।
ತದರ್ವಾಕ್ ಜಾಯಮಾನಾನಾಂ ಕಥಂ ಸ ವಿಷಯೋ ಭವೇತ್ ॥೪೪॥

ನಮಸ್ತೇ ಭುವನೇಶಾನಿ ನಮಸ್ತೇ ಪ್ರಣವಾತ್ಮಕೇ ।
ಸರ್ವವೇದಾಂತಸಂಸಿದ್ಧೇ ನಮೋ ಹ್ರೀಂಕಾರಮೂರ್ತಯೇ ॥೪೫॥

ಯಸ್ಮಾದಗ್ನಿಃ ಸಮುತ್ಪನ್ನೋ ಯಸ್ಮಾತ್ಸೂರ್ಯಶ್ಚ ಚಂದ್ರಮಾಃ ।
ಯಸ್ಮಾದೋಷಧಯಸ್ಸರ್ವಾಸ್ತಸ್ಮೈ ಸರ್ವಾತ್ಮನೇ ನಮಃ ॥೪೬॥

ಯಸ್ಮಾಚ್ಚ ದೇವಾಃ ಸಂಭೂತಾಃ ಸಾಧ್ಯಾಃ ಪಕ್ಷಿಣ ಏವ ಚ ।
ಪಶವಶ್ಚ ಮನುಷ್ಯಾಶ್ಚ ತಸ್ಮೈ ಸರ್ವಾತ್ಮನೇ ನಮಃ ॥೪೭॥

---

ನಿನ್ನ ಪರಾಕ್ರಮವು ಯಾವುದು? ಎಷ್ಟು ಅಳತೆಯುಳ್ಳದ್ದು? ಎಂಬುದು ಅನಾದಿಯಾದ ನಿನಗೇ ತಿಳಿಯದಿರುವಲ್ಲಿ ಈಚೆಗೆ ಹುಟ್ಟಿದ ನಮಗೆ ಆ ನಿನ್ನ ಪರಾಕ್ರಮದ ಪರಿಣಾಮವು ಹೇಗೆತಾನೇ ತಿಳಿಯುವುದು? ವೇದದಲ್ಲಿ "ಅರ್ವಾಗ್ ದೇವಾ ಅಸ್ಯ ವಿಸರ್ಜನೇ ನಾಥಾಕೋ ವೇದ ಯತ ಆ ಬಭೂವ । ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ನೋ ಅಂಗ ವೇದ ಯದಿ ವಾ ನ ವೇದ ॥" ಎಂದಿರುವುದು. ಎಂದರೆ ದೇವಿಯ ಪರಾಕ್ರಮವು ಅಳತೆಗೆ ಸಿಕ್ಕತಕ್ಕುದಲ್ಲವೆಂದು ಭಾವವು. ॥೪೪॥

ಲೋಕಕ್ಕೆಲ್ಲ ಅಧಿಪತಿಯಾದವಳೇ, ಓಂಕಾರದ ಅರ್ಥಸ್ವರೂಪಳೇ, ನಿನಗೆ ನಮಸ್ಕಾರವು. ಸಮಸ್ತವೇದಾಂತಗಳ ವಿಚಾರದಿಂದ ತಿಳಿಯತಕ್ಕವಳೂ ಹ್ರೀಂ ಶಬ್ದದ ಮೂರ್ತಿಸ್ವರೂಪಳೂ ಆದ ನಿನಗೆ ನಮಸ್ಕಾರವು. ॥೪೫॥

ಯಾವ ತತ್ವದಿಂದ ಅಗ್ನಿಯೂ, ಸೂರ್ಯಚಂದ್ರರೂ ಸಮಸ್ತ ಓಷಧಿಗಳೂ ಹುಟ್ಟಿದುವೋ, ಆ ಸಮಸ್ತವಸ್ತುಸ್ವರೂಪವಾದ ಆತ್ಮತತ್ವಕ್ಕೆ ನಮಸ್ಕಾರವು. ॥೪೬॥

ಯಾವ ತತ್ವದಿಂದ ದೇವತೆಗಳೂ ಸಾಧ್ಯರೂ ಪಕ್ಷಿಗಳೂ, ಪಶುಗಳೂ, ಮನುಷ್ಯರೂ ಹುಟ್ಟಿದರೋ ಅಂತಹ ಸಮಸ್ತ ವಸ್ತುಸ್ವರೂಪವಾದ ಆತ್ಮತತ್ವಕ್ಕೆ ನಮಸ್ಕಾರವು. ಮುಂಡಕೋಪನಿಷತ್ ೨.೧. ೧-೬ ನೋಡಬಹುದು. ॥೪೭॥

ಪ್ರಾಣಾಪಾನೌ ವ್ರೀಹಿಯವೌ ತಪಃ ಶ್ರದ್ಧಾ ಋತಂ ತಥಾ ।
ಬ್ರಹ್ಮಚರ್ಯಂ ವಿಧಿಶ್ಚೈವ ಯಸ್ಮಾತ್ತಸ್ಮೈ ನಮೋ ನಮಃ ॥೪೮॥

ಸಪ್ತ ಪ್ರಾಣಾರ್ಚಿಷೋ ಯಸ್ಮಾತ್ ಸಮಿಧಃ ಸಪ್ತ ಏವ ಚ ।
ಹೋಮಾಃ ಸಪ್ತ ತಥಾ ಲೋಕಾಸ್ತಸ್ಮೈ ಸರ್ವಾತ್ಮನೇ ನಮಃ ॥೪೯॥

ಯಸ್ಮಾತ್ಸಮುದ್ರಾ ಗಿರಯಃ ಸಿಂಧವಃ ಪ್ರಚರಂತಿ ಚ ।
ಯಸ್ಮಾದೋಷಧಯಸ್ಸರ್ವಾ ರಸಾಸ್ತಸ್ಮೈ ನಮೋನಮಃ ॥೫೦॥

ಯಸ್ಮಾದ್ಯಜ್ಞಃ ಸಮುದ್ಭೂತೋ ದೀಕ್ಷಾಯೂಪಶ್ಚ ದಕ್ಷಿಣಾಃ ।
ಋಚೋ ಯಜೂಂಷಿ ಸಾಮಾನಿ ತಸ್ಮೈ ಸರ್ವಾತ್ಮನೇ ನಮಃ ॥೫೧॥

---

ಪ್ರಾಣಾಪಾನಾದಿವಾಯುಕಾರ್ಯಗಳೂ, ಗೋಧಿ, ಭತ್ತ ಮುಂತಾದ ಧಾನ್ಯಗಳೂ, ತಪಸ್ಸೂ, ಸತ್ಕರ್ಮಾಸಕ್ತಿಯೂ, ಸತ್ಯವೂ, ಬ್ರಹ್ಮಚರ್ಯನಿಯಮಗಳೂ, ಯಾವ ತತ್ವದಿಂದುಂಟಾಗಿರುವುವೋ ಆ ತತ್ವಕ್ಕೆ ನಮಸ್ಕಾರವು. ॥೪೮॥

" ಸಪ್ತಶೀರ್ಷಣ್ಯಾಃ ಪ್ರಾಣಾಃ " ಎಂದು ವೇದದಲ್ಲಿ ಹೇಳಿದೆ. ಎಂದರೆ ತಲೆಯಲ್ಲಿ ಏಳು ಇಂದ್ರಿಯಗಳಿವೆ ಎಂದು ಅರ್ಥವು. ಕಣ್ಣುಗಳು, ಕಿವಿಗಳು, ಮೂಗು, ಬಾಯಿ ಇವುಗಳನ್ನೇ ಸಪ್ತಪ್ರಾಣಗಳೆಂದು ಕರೆವುದು. ಸಪ್ತಾರ್ಚಿ ಎಂದರೆ ಏಳು ಪ್ರಕಾಶಗಳು. ಅಂದರೆ ವಿಷಯಗಳನ್ನು ಪ್ರಕಾಶಪಡಿಸುವ ಶಕ್ತಿಗಳು. ಸಪ್ತಸಮಿಧಃ ಎಂದರೆ ಏಳು ವಿಷಯಗಳು. ವಿಷಯಗಳಿಂದಲೇ ಇಂದ್ರಿಯಗಳು ಉಜ್ವಲಗಳಾಗುವುವು. ಸಪ್ತಹೋಮ ಎಂದರೆ ವಿಷಯಗಳ ತಿಳಿವಳಿಕೆ. ಸಪ್ತಲೋಕ ಎಂದರೆ ಇಂದ್ರಿಯಗಳ ಸ್ಥಾನಗಳು. ಇವುಗಳು ಯಾವ ತತ್ವದಿಂದ ಹುಟ್ಟಿದುವೋ ಆ ಸಮಸ್ತಕ್ಕೂ ಆತ್ಮಸ್ವರೂಪವಾದ ತತ್ವಕ್ಕೆ ನಮಸ್ಕಾರವು. ಮುಂಡಕೋಪನಿಷತ್ ೨.೧. ೭-೧೦. ನ್ನು ನೋಡಬಹುದು. ॥೪೯॥

ಯಾವ ತತ್ವದಿಂದ ಸಮುದ್ರಗಳೂ, ಪರ್ವತಗಳೂ, ಉಂಟಾದುವೋ, ಯಾವ ತತ್ವದಿಂದ ನದಿಗಳು ಹರಿಯುತ್ತಿರುವುವೋ, ಸಮಸ್ತ ಮೂಲಿಕೆಗಳೂ ಯಾವ ತತ್ವದಿಂದ ರಸವತ್ತಾಗಿರುವುವೋ ಅಂತಹ ತತ್ವಕ್ಕೆ ನಮಸ್ಕಾರವು. ॥೫೦॥

ಯಾವ ತತ್ವದಿಂದ ಯಜ್ಞವೂ, ಯಜ್ಞನಿಯಮಗಳೂ, ಯಾಗಗಳಲ್ಲಿ ಅಗ್ನಿಸಮೀಪದಲ್ಲಿ ನೆಡುವ ಯೂಪವೆಂಬ ಸ್ತಂಭವೂ, ದಕ್ಷಿಣೆಯೂ, ಋಗ್ವೇದ, ಯಜು

ನಮಃ ಪುರಸ್ತಾತ್ಪೃಷ್ಠೇ ಚ ನಮಸ್ತೇ ಪಾರ್ಶ್ವಯೋರ್ದ್ವಯೋಃ ।
ಅಥ ಊರ್ಧ್ವಂ ಚತುರ್ದಿಕ್ಷು ಮಾತರ್ಭೂಯೋ ನಮೋ ನಮಃ ॥೫೨॥

ಉಪಸಂಹರ ದೇವೇಶಿ ರೂಪಮೇತದಲೌಕಿಕಂ ।
ತದೇವ ದರ್ಶಯಾಸ್ಮಾಕಂ ರೂಪಂ ಸುಂದರಸುಂದರಂ ॥೫೩॥

॥ ವ್ಯಾಸ ಉವಾಚ ॥

ಇತಿ ಭೀತಾನ್ಸುರಾನ್ದೃಷ್ಟ್ವಾ ಜಗದಂಬಾ ಕೃಪಾರ್ಣವಾ ।
ಸಂಹೃತ್ಯರೂಪಂ ಘೋರಂ ತದ್ದರ್ಶಯಾಮಾಸ ಸುಂದರಂ ॥೫೪॥

ಪಾಶಾಂಕುಶವರಾಭೀತಿಧರಂ ಸರ್ವಾಂಗಕೋಮಲಂ ।
ಕರುಣಾಪೂರ್ಣನಯನಂ ಮಂದಸ್ಮಿತ ಮುಖಾಂಬುಜಂ ॥೫೫॥

---

ವೇದ, ಸಾಮವೇದಗಳೂ ಉಂಟಾದುವೋ ಆ ತತ್ವಕ್ಕೆ ನಮಸ್ಕಾರವು. ಇದಕ್ಕೆ ಮುಂಡಕೋಪನಿಷತ್ತಿನಲ್ಲಿ ೨. ೧. ೫, ೬. ಪ್ರಮಾಣವಿರುವುದು. "ಯಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ । ಸೋಮಾತ್ಪರ್ಜನ್ಯ ಓಷಧಯಃ ಪ್ರಜಾನಾಂ । ತಸ್ಮಾದೃಚಃ ಸಾಮಯಜೂಂಷಿ ದೀಕ್ಷಾಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ" ಇತ್ಯಾದಿ. ॥೫೧॥

ಓ ತಾಯಿಯೇ, ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ, ಪಾರ್ಶ್ವಗಳಲ್ಲಿಯೂ ಮೇಲೂ, ಕೆಳಗೂ, ನಾಲ್ಕುದಿಕ್ಕುಗಳಲ್ಲಿಯೂ, ಎಂದರೆ ಸರ್ವವ್ಯಾಪಿಯಾಗಿ ಇರುವ ನಿನಗೆ ಎಲ್ಲಡೆಗಳಲ್ಲಿಯೂ ನಮಸ್ಕಾರಮಾಡುವೆವು. ॥೫೨॥

ಓ ಭುವನೇಶ್ವರಿಯೇ, ಈ ಲೋಕದಲ್ಲಿ ನಮ್ಮಲ್ಲಿ ಯಾರಿಗೂ ಯಾವಾಗಲೂ ಪರಿಚಿತವಲ್ಲದೆ ವಿರುದ್ಧವಾದ ಈರೂಪವನ್ನು ಮರೆಮಾಡು. ನಮಗೆ ಅತ್ಯಂತ ಮನೋಹರವಾದ ಹಿಂದೆ ತೋರಿಸಿದ ಅತ್ಯಂತ ಸುಂದರವಾಗಿರುವ ರೂಪವನ್ನೇ ತೋರಿಸು. ॥೫೩॥

ಹೀಗೆ ಭಯಪಡುತ್ತಿರುವ ದೇವತೆಗಳನ್ನು ನೋಡಿ ದಯಾಸಾಗರಳಾದ ಜಗದಂಬೆಯು ಭಯಂಕರವಾದ ರೂಪವನ್ನು ಮರೆಮಾಡಿ ಸುಂದರವಾದ ತನ್ನ ರೂಪವನ್ನು ತೋರಿಸಿದಳು. ॥೫೪॥

ಆ ದೇವತೆಗಳು, ಪಾಶ ಮತ್ತು ಅಂಕುಶಾಯುಧಗಳಿಂದ ಕೂಡಿದ ವರದ, ಅಭಯ ಚಿಹ್ನೆಗಳಿಂದ ಕೂಡಿದ, ನಾಲ್ಕು ತೋಳುಗಳೂ, ದಯೆಯನ್ನು ಬೀರುವ

ದೃಷ್ಟ್ವಾ ತತ್ಸುಂದರಂ ರೂಪಂ ತದಾ ಭೀತಿವಿವರ್ಜಿತಾಃ ।
ಶಾಂತಚಿತ್ತಾಃ ಪ್ರಣೇಮುಸ್ತೇ ಹರ್ಷಗದ್ಗದನಿಸ್ವನಾಃ ॥೫೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ತ್ರಯಸ್ತ್ರಿಂಶೋಽಧ್ಯಾಯಃ

---

ಕಣ್ಣುಗಳೂ, ಮುಗುಳುನಗೆಗೂಡಿದ ಮುಖಕಮಲವೂ, ಕೋಮಲವಾದ ಅವಯವಗಳೂ, ಉಳ್ಳ ಸುಂದರವಾದ ರೂಪವನ್ನು ಕಂಡು ಭಯವನ್ನು ಬಿಟ್ಟು, ಶಾಂತವಾದ ಮನಸ್ಸಿನಿಂದ ಕೂಡಿ ಸಂತೋಷದಿಂದ ಧ್ವನಿಮಾಡುತ್ತ, ಆ ಭುವನೇಶ್ವರೀ ದೇವಿಗೆ ನಮಸ್ಕಾರಮಾಡಿದರು. ||೫೫-೫೬||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಚತುಸ್ತ್ರಿಂಶೋಽಧ್ಯಾಯಃ ||

### ಮೂವತ್ತುನಾಲ್ಕನೆಯ ಅಧ್ಯಾಯವು

|| ದೇವ್ಯುವಾಚ ||

**ಕ್ವ ಯೂಯಂ ಮಂದಭಾಗ್ಯಾ ವೈ ಕ್ವೇದಂ ರೂಪಂ ಮಹಾದ್ಭುತಂ ।**
**ತಥಾಽಪಿ ಭಕ್ತವಾತ್ಸಲ್ಯಾತ್ ಈದೃಶಂ ದರ್ಶಿತಂ ಮಯಾ ||೧||**

**ನ ವೇದಾಧ್ಯಯನೈರ್ಯೋಗೈಃ ನ ದಾನೈಸ್ತಪಸೇಜ್ಯಯಾ ।**
**ರೂಪಂ ದ್ರಷ್ಟುಮಿದಂ ಶಕ್ಯಂ ಕೇವಲಂ ಮತ್ಕೃಪಾಂ ವಿನಾ ||೨||**

**ಪ್ರಕೃತಂ ಶೃಣು ರಾಜೇಂದ್ರ ಪರಮಾತ್ಮಾತ್ರ ಜೀವತಾಂ ।**
**ಉಪಾಧಿಯೋಗಾತ್ಸಂಪ್ರಾಪ್ತಃ ಕರ್ತೃತ್ವಾದಿಕಮಪ್ಯುತ ||೩||**

---

ದೇವಿಯು ಹೇಳಿದಳು—ದೇವಿಯು ದೇವತೆಗಳನ್ನು ಕುರಿತು ಎಲೈ ದೇವತೆಗಳೇ, ಅತ್ಯಾಶ್ಚರ್ಯಕರವಾದ ಈ ನನ್ನ ರೂಪವನ್ನು ನೋಡುವ ಪುಣ್ಯದ ಸಾಮರ್ಥ್ಯವು ನಿಮಗೆ ಪೂರ್ಣವಾಗಿ ಇಲ್ಲವೆಂಬುದು ನನಗೆ ತಿಳಿದಿದ್ದರೂ, ಭಕ್ತರಾದ ನಿಮ್ಮಲ್ಲಿ ಕರುಣೆಯಿಂದ ಈ ರೂಪವನ್ನು ತೋರಿಸಿರುವೆನು. ||೧||

ವೇದವನ್ನು ಅಭ್ಯಾಸಮಾಡುವುದರಿಂದಲಾಗಲಿ ಯೋಗಾಭ್ಯಾಸದಿಂದಲಾಗಲಿ ದಾನ, ತಪಸ್ಸು, ಯಜ್ಞ, ಇವುಗಳಿಂದಲಾಗಲಿ ನನ್ನ ಈ ರೂಪವನ್ನು ಸ್ವತಂತ್ರವಾಗಿ ನೋಡಲು ಸಾಧ್ಯವಾಗುವುದಿಲ್ಲ. ಆದರೆ ನನ್ನ ದಯೆಯು ಯಾರಮೇಲುಂಟಾಗುವುದೋ ಅವರು ಮಾತ್ರ ಈ ರೂಪವನ್ನು ನೋಡಲು ಶಕ್ತರಾಗುವರು. ||೨||

ಬ್ರಹ್ಮವಿದ್ಯೆಯ ಉಪದೇಶಪ್ರಕರಣ ಸಂದರ್ಭದಲ್ಲಿ ದೇವತೆಗಳ ಪ್ರಾರ್ಥನೆಯಂತೆ ದೇವಿಯು ವಿಶ್ವರೂಪವನ್ನು ತೋರಿಸಿದ ಮೇಲೆ ಪುನಃ ಆವಶ್ಯಕವಾದ

ಕ್ರಿಯಾಃ ಕರೋತಿ ವಿವಿಧಾ ಧರ್ಮಾಧರ್ಮೈಕಹೇತವಃ ।
ನಾನಾಯೋನೀಸ್ತತಃ ಪ್ರಾಪ್ಯ ಸುಖದುಃಖೈಶ್ಚ ಯುಜ್ಯತೇ ॥೪॥

ಪುನಸ್ತತ್ಸಂಸ್ಕೃತಿವಶಾತ್ ನಾನಾಕರ್ಮರತಃ ಸದಾ ।
ನಾನಾದೇಹಾನ್ಸಮಾಪ್ನೋತಿ ಸುಖದುಃಖೈಶ್ಚ ಯುಜ್ಯತೇ ॥೫॥

ಘಟೀಯಂತ್ರವದೇತಸ್ಯ ನ ವಿರಾಮಃ ಕದಾಪಿ ಹಿ ।
ಅಜ್ಞಾನಮೇವ ಮೂಲಂ ಸ್ಯಾತ್ತತಃ ಕಾಮಃ ಕ್ರಿಯಾಸ್ತತಃ ॥೬॥

ತಸ್ಮಾದಜ್ಞಾನನಾಶಾಯ ಯತೇತ ನಿಯತಂ ನರಃ ।
ಏತದ್ಧಿ ಜನ್ಮಸಾಫಲ್ಯಂ ತದಜ್ಞಾನಸ್ಯ ನಾಶನಂ ॥೭॥

---

ಉಪದೇಶ ಪ್ರಕರಣವು ಪ್ರಾಸ್ತವಾಗಲು ದೇವಿಯು ಹಿಮವಂತನನ್ನು ಕುರಿತು, ಎಲೈ ಪರ್ವತರಾಜನೇ, ಪ್ರಕೃತವಾದ ವಿಷಯವನ್ನು ಪುನಃ ಮುಂದುವರಿಸಿ ಹೇಳುವೆನು ಕೇಳು. ಪರಮಾತ್ಮನು ಉಪಾಧಿಯ ಸಂಬಂಧದಿಂದ ಜೀವಭಾವವನ್ನೂ ಕರ್ತೃತ್ವ ಮುಂತಾದುವುಗಳನ್ನೂ ಪಡೆದಿರುವನು. ॥೩॥

ಧರ್ಮಕ್ಕೂ ಅಧರ್ಮಕ್ಕೂ ಕಾರಣವಾದ ಬಗೆ ಬಗೆಯ ಕೆಲಸಗಳನ್ನು ಮಾಡುವನು. ಆ ಕಾರಣದಿಂದ ಬಗೆ ಬಗೆಯ ಜನ್ಮವನ್ನು ಪಡೆದು ಸುಖದುಃಖಗಳಿಂದ ಕೂಡಿರುವನು. ॥೪॥

ಮತ್ತೆ ಆ ಸುಖದುಃಖಗಳ ಸಂಸ್ಕಾರದಿಂದಲೇ ಬಗೆ ಬಗೆಯ ಕೆಲಸಗಳಲ್ಲಿ ಯಾವಾಗಲೂ ಆಸಕ್ತನಾಗಿ ಬಗೆ ಬಗೆಯ ಶರೀರಗಳನ್ನು ಪಡೆದು ಸುಖದುಃಖಗಳನ್ನು ಅನುಭವಿಸುವನು. ॥೫॥

ಚಕ್ರದಂತೆ ಸುತ್ತುವ ಈ ಜನನ ಮರಣರೂಪವಾದ ಸಂಸಾರಕ್ಕೆ ಆತ್ಮಜ್ಞಾನವಲ್ಲದೆ ಕೊನೆಯು ಇಲ್ಲವೇ ಇಲ್ಲ. ಇದುವರೆಗೂ ಅನೇಕ ಸೃಷ್ಟಿಪ್ರಳಯಗಳಾದರೂ ಜೀವನ ಉತ್ಪತ್ತಿ ಮರಣರೂಪ ಸಂಸಾರವು ಇದ್ದೇ ಇರುವುದು. ಈ ಸಂಸಾರಕ್ಕೆ ಅಜ್ಞಾನವೇ ಮುಖ್ಯಕಾರಣವು. ಈ ಅಜ್ಞಾನದಿಂದಲೇ ಇಚ್ಛೆಯು ಹುಟ್ಟುವುದು. ಆ ಇಚ್ಛೆಯಿಂದಲೇ ಕಾರ್ಯಗಳುಂಟಾಗುವುವು. ॥೬॥

ಆದುದರಿಂದ ಮನುಷ್ಯನು ಅಜ್ಞಾನ ನಾಶಕ್ಕೋಸ್ಕರವಾಗಿ ಬಲವಾದ ಪ್ರಯತ್ನವನ್ನು ಮಾಡಬೇಕು. ಹುಟ್ಟಿದುದಕ್ಕೆ ತನಗುಂಟಾಗಿರುವ ಅಜ್ಞಾನವನ್ನು ನಾಶಮಾಡಿ ಕೊಳ್ಳುವುದೇ ಮುಖ್ಯವಾದ ಪ್ರಯೋಜನವು. ॥೭॥

**ಪುರುಷಾರ್ಥಸಮಾಪ್ತಿಶ್ಚ ಜೀವನ್ಮುಕ್ತದಶಾಽಪಿ ಚ ।**
**ಅಜ್ಞಾನನಾಶನೇ ಶಕ್ತಾ ವಿದ್ಯೈವ ತು ಪಟೀಯಸೀ ॥೮॥**

**ನ ಕರ್ಮ ತಜ್ಜಂ ನೋಪಾಸ್ತಿಃ ವಿರೋಧಾಭಾವತೋ ಗಿರೇ ।**
**ಪ್ರತ್ಯುತಾಶಾಽಜ್ಞಾನನಾಶೇ ಕರ್ಮಣಾ ನೈವ ಭಾವ್ಯತಾಂ ॥೯॥**

**ಅನರ್ಥದಾನಿ ಕರ್ಮಾಣಿ ಪುನಃಪುನರುಶಂತಿ ಹಿ ।**
**ತತೋ ರಾಗಸ್ತತೋ ದೋಷ ಸ್ತತೋಽನರ್ಥೋ ಮಹಾನ್ಭವೇತ್ ॥೧೦॥**

**ತಸ್ಮಾತ್ಸರ್ವಪ್ರಯತ್ನೇನ ಜ್ಞಾನಂ ಸಂಪಾದಯೇನ್ನರಃ ।**
**ಕುರ್ವನ್ನೇವೇಹ ಕರ್ಮಾಣೀತ್ಯತಃ ಕರ್ಮಾಪ್ಯವಶ್ಯಕಂ ॥೧೧॥**

---

ಅಜ್ಞಾನವುನಾಶವಾದರೆ ಮನುಜನಿಗೆ ಪುರುಷಾರ್ಥವು ಪೂರ್ಣವಾಗುವುದು. ಮತ್ತು ಜೀವನ್ಮುಕ್ತಸ್ಥಿತಿಯುಂಟಾಗುವುದು. ಆ ಅಜ್ಞಾನವನ್ನು ನಾಶಮಾಡುವ ಶಕ್ತಿಯು ವಿದ್ಯೆ ಎಂದರೆ ಜ್ಞಾನಕ್ಕೆ ಮಾತ್ರವಿರುವುದು. ॥೮॥

ಅಜ್ಞಾನದಿಂದಲೇ ಹುಟ್ಟಿದ ಉಪಾಸನಾ ಮುಂತಾದ ಕರ್ಮವೂ ಅಜ್ಞಾನವನ್ನು ನಾಶಮಾಡಲಾರದು. ಪರ್ವತರಾಜನೇ, ಒಂದು ಕತ್ತಲೆಯು ಮತ್ತೊಂದು ಕತ್ತಲೆಯನ್ನು ಹೇಗೆ ನಾಶಮಾಡಲಾರದೋ ಹಾಗೆ ಕರ್ಮಕ್ಕೂ ಅಜ್ಞಾನಕ್ಕೂ ವಿರೋಧವಿಲ್ಲದುದರಿಂದ, ಅಜ್ಞಾನದಿಂದ ಹುಟ್ಟಿದ ಕರ್ಮವೂ ಅಜ್ಞಾನವೇ ಆದುದರಿಂದ, ಇಂತಹ ಕರ್ಮದಿಂದ ಅಜ್ಞಾನವು ನಾಶವಾಗುವುದೆಂಬ ಪ್ರತ್ಯಾಶೆಯು, ನಿರೀಕ್ಷಣೆಯು, ಭಾವನೆಯನ್ನೂ ಖಂಡಿತವಾಗಿ ಇಟ್ಟುಕೊಳ್ಳಬಾರದು. ಅವಿದ್ಯೆಗೆ ಅಜ್ಞಾನವೆಂದು ಹೆಸರು. ॥೯॥

ಹೀಗೆ ಅವಿದ್ಯಾ, ಕಾಮುಗಳಿಂದ ಅನರ್ಥವನ್ನುಂಟುಮಾಡುವ ಕಾಮ್ಯಕರ್ಮಗಳು ಮತ್ತೆ ಮತ್ತೆ ಉಂಟಾಗುತ್ತಿರುವುವು. ಅವುಗಳಿಂದ ಪ್ರೀತಿಯೂ, ಆ ಪ್ರೀತಿಯಿಂದ ದೋಷವೂ, ಆ ದೋಷಗಳಿಂದ ದೊಡ್ಡ ಅನರ್ಥಗಳೂ ಉಂಟಾಗುವುವು. ॥೧೦॥

ಆದುದರಿಂದ ಮನುಷ್ಯನು ಸರ್ವ ಪ್ರಯತ್ನದಿಂದಲೂ ಜ್ಞಾನವನ್ನು ಸಂಪಾದಿಸಬೇಕು. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂಸಮಾಃ" ಎಂದು ವೇದದಲ್ಲಿ ಬದುಕಿರುವವರೆಗೂ ಕರ್ಮವನ್ನು ಮಾಡಬೇಕೆಂದೂ, "ಜ್ಞಾನಾದೇವಹಿ ಕೈವಲ್ಯಂ" ಎಂಬ ಶ್ರುತಿಯಿಂದ ಜ್ಞಾನದಿಂದಲೇ ಮೋಕ್ಷವೆಂದೂ, ಹೇಳಿರುವುದರಿಂದ

ಜ್ಞಾನಾದೇವಹಿ ಕೈವಲ್ಯಮತಃಸ್ಯಾತ್ತತ್ಸಮುಚ್ಚಯಃ ।
ಸಹಾಯತಾಂ ವ್ರಜೇತ್ಕರ್ಮ ಜ್ಞಾನಸ್ಯ ಹಿತಕಾರಿ ಚ ॥೧೨॥

ಇತಿ ಕೇಚಿದ್ವದಂತ್ಯತ್ರ ತದ್ವಿರೋಧಾನ್ನ ಸಂಭವೇತ್ ।
ಜ್ಞಾನಾತ್ ಹೃದ್ಗ್ರಂಥಿಭೇದಃ ಸ್ಯಾತ್ ಹೃದ್ಗ್ರಂಥೌ ಕರ್ಮ ಸಂಭವಃ॥೧೩॥

ಯೌಗಪದ್ಯಂ ನ ಸಂಭಾವ್ಯಂ ವಿರೋಧಾತ್ತು ತತಸ್ತಯೋಃ ।
ತಮಃ ಪ್ರಕಾಶಯೋರ್ಯದ್ವತ್ ಯೌಗಪದ್ಯಂ ನ ಸಂಭವಿ ॥೧೪॥

---

ಮನುಷ್ಯನು ಜ್ಞಾನಕರ್ಮಗಳೆನ್ನೆರಡನ್ನೂ ಆಶ್ರಯಿಸಬೇಕೆಂದೂ, ಕರ್ಮದಿಂದ ಜ್ಞಾನಕ್ಕೆ ಸಾಹಾಯ್ಯವಾಗುವುದೆಂದೂ, ಹಿತಕರವಾದುದೆಂದೂ ಕೆಲವರು ಹೇಳುವರು. ॥೧೧-೧೨॥

ಹೀಗೆ ಹೇಳುವ ಮಾತು ಕರ್ಮ, ಜ್ಞಾನಗಳಿಗೆ ವಿರೋಧವಾದುದರಿಂದ ಯುಕ್ತವಾದುದಲ್ಲ. ಏತಕ್ಕೆಂದರೆ ಜ್ಞಾನದಿಂದ ಹೃದಯಗ್ರಂಥಿ ಎಂದರೆ ಅಂತಃಕರಣವೂ ದೇಹವೂ ನಾನು, ನನ್ನದೆಂಬ ಭಾವನೆಯು ನಾಶವಾಗುವುದು. ಹೃದಯಗ್ರಂಥಿ ಇದ್ದರೆ ಎಂದರೆ ನಾನು ಮನುಷ್ಯ ಬ್ರಾಹ್ಮಣ ಪರಲೋಕೇಚ್ಛೆಯುಳ್ಳವನು ಎಂಬ ಭಾವನೆಯಿದ್ದರೆ, ಅಂತಹ ಫಲಕ್ಕಾಗಿ ತಕ್ಕ ಕರ್ಮವನ್ನು ಮಾಡಬೇಕಾಗುವುದು. ಇಂತಹ ಅಧಿಕಾರಿಯನ್ನು ಉದ್ದೇಶಿಸಿಯೇ ಕರ್ಮವನ್ನು ವಿಧಾನಮಾಡಿರುವುದು. ಸಂಕಲ್ಪರಹಿತನಾದ ಆತ್ಮಜ್ಞಾನಿಗೆ ಅಲ್ಲವು. ಏಕೆಂದರೆ ಆತ್ಮನು ವಾಸ್ತವವಾಗಿ ಅವಿದ್ಯಾ, ಕಾಮ, ಕರ್ಮ, ರಹಿತನು. ಎಂದರೆ ಅಜ್ಞಾನದಿಂದ ಯಾವ ಫಲವನ್ನೂ ಅಪೇಕ್ಷಿಸದೆ, ಅಕಾಮನಾಗಿ ಪೂರ್ಣಕಾಮನಾಗಿ, ಇರುವುದರಿಂದ ಯಾವ ಕರ್ಮವನ್ನೂ ಮಾಡನು. ಅಲ್ಲದೆ ಆತ್ಮನು ಅಸಂಗನು ಎಂದರೆ ದೇಹಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವಿಲ್ಲದವನಾದುದರಿಂದ, ಅಭಿಮಾನವಿಲ್ಲದೆ ಕರ್ಮ ಮಾಡುವುದು ಅಸಾಧ್ಯವೂ ಅಸ್ವಾಭಾವಿಕವೂ ಆದುದರಿಂದ, ಅಂತಹ ಆತ್ಮಜ್ಞಾನಿಗೆ ಕರ್ಮವು ವಿಹಿತವಾಗಿರುವುದಿಲ್ಲವೆಂದು ಭಾವವು. ಆದುದರಿಂದ ಜ್ಞಾನ, ಕರ್ಮಗಳಿಗೆ ಒಂದೇ ಆಧಾರದಲ್ಲಿರುವಿಕೆಯು ಸಂಭವಿಸುವುದಿಲ್ಲ. ಪರಸ್ಪರ ವಿರೋಧವಾದ ಕತ್ತಲೆಯೂ ಬೆಳಕೂ ಒಂದೇಕಾಲದಲ್ಲಿ ಒಂದೇ ಎಡೆಯಲ್ಲಿ ಹೇಗೆ ಇರುವುದಿಲ್ಲವೋ ಹಾಗೆ ಜ್ಞಾನ ಕರ್ಮಗಳಿಗೆ ಪರಸ್ಪರ ವಿರೋಧವಿರುವುದರಿಂದ ಒಂದೇ ಕಾಲದಲ್ಲಿ ಒಂದೇ ಎಡೆಯಲ್ಲಿ ಇವು ಇರಲು ಅವಕಾಶವಿಲ್ಲ. ಆದುದರಿಂದ ಯಾವಜ್ಜೀವ

**ತಸ್ಮಾತ್ಸರ್ವಾಣಿ ಕರ್ಮಾಣಿ ವೈದಿಕಾನಿ ಮಹಾಮತೇ ।**
**ಚಿತ್ತಶುದ್ಧ್ಯಂ ತಮೇವ ಸ್ಯುಸ್ತಾನಿ ಕುರ್ಯಾತ್ ಪ್ರಯತ್ನತಃ ॥೧೫॥**

---

ಶ್ರುತಿಯು ಫಲವಿಶೇಷಗಳನ್ನು ಅಪೇಕ್ಷಿಸುತ್ತಿರುವ, ವಿವೇಕ, ವೈರಾಗ್ಯಗಳಿಲ್ಲದ, ಅಜ್ಞಾನಿಗೆ ವಿಧಾಯಕವೇ ಹೊರತು ಜ್ಞಾನಿಗೆ ವಿಧಾಯಕವಲ್ಲ. ॥೧೩-೧೪॥

ಆದುದರಿಂದ ಮಹಾಬುದ್ಧಿವಂತನಾದ ಪರ್ವತರಾಜನೇ, ಕೇಳು. ವೇದೋಕ್ತವಾದ ಸಮಸ್ತಕರ್ಮಗಳನ್ನೂ ಚಿತ್ತಶುದ್ಧಿಯಾಗುವವರೆಗೂ ಪ್ರಯತ್ನಪೂರ್ವಕವಾಗಿ ಶ್ರದ್ಧೆಯಿಂದ ಆಚರಿಸಬೇಕು. ಆದುದರಿಂದ ಶ್ರುತಿಯಲ್ಲಿ ಕರ್ಮಗಳನ್ನು ವಿಧಿಸಿರುವುದೂ ವ್ಯರ್ಥವೆಂದಾಗುವುದಿಲ್ಲವು. ಆತ್ಮಜ್ಞಾನವುಂಟಾಗುವುದಕ್ಕೆ ಚಿತ್ತಶುದ್ಧಿಯು ಅವಶ್ಯಕವಾಗಿ ಬೇಕು. ಆ ಚಿತ್ತಶುದ್ಧಿಯು ಕರ್ಮಾಚರಣೆಯಿಂದ ಉಂಟಾಗುತ್ತದೆ. ಹೇಗೆಂದರೆ ವಿವೇಕಿಗಳು ಸತ್ಕರ್ಮಗಳನ್ನು ಮಾಡುತ್ತಾರೆ. ಫಲಗಳನ್ನೂ ಅನುಭವಿಸುತ್ತಾರೆ. ಪುನಃ ಕರ್ಮಗಳನ್ನು ಮಾಡುವುದು, ಇವುಗಳ ಫಲವಾದ ಐಹಿಕ ಮತ್ತು ಆಮುಷ್ಮಿಕ ಅಭ್ಯುದಯಗಳನ್ನು ಅನುಭವಿಸುವುದು, ಅವು ಅನಿತ್ಯಗಳೂ, ಸಾತಿಶಯಗಳೂ, ದುಃಖಮಿಶ್ರಗಳೂ, ಸುಖಾಭಾಸಗಳೂ ಆಗಿವೆ ಎಂಬುದನ್ನು ಮನಗಾಣುವುದು, ಇವುಗಳಿಂದ ವಿಚಾರಪರರಾದ ವಿವೇಕಿಗಳಿಗೆ ಪ್ರತಿಯೊಬ್ಬರಿಗೂ ಒಂದಲ್ಲದಿದ್ದರೆ ಇನ್ನೊಂದು ಕಾಲದಲ್ಲಿ ಬೇಸರ ಉಂಟಾಗುತ್ತದೆ. ಈ ವೈರಾಗ್ಯವನ್ನು ವೇದಾಂತ ವಿಚಾರದಿಂದ, ಆತ್ಮಸ್ವರೂಪದ ತಿಳಿವಳಿಕೆಯಿಂದ ಬಲಪಡಿಸಿಕೊಳ್ಳುತ್ತಾರೆ. ಹೀಗೆ ಸ್ವಲ್ಪವಾಗಿ ಉಂಟಾದ ವೈರಾಗ್ಯ, ಜ್ಞಾನಗಳಿಂದ, ರಾಗದ್ವೇಷಗಳೆಂಬ ಚಿತ್ತಮಲಗಳು ಕಡಮೆಯಾಗುತ್ತಾ ಆ ಚಿತ್ತವು ಹೆಚ್ಚು ಹೆಚ್ಚಾಗಿ ಶುದ್ಧವಾಗುತ್ತದೆ. ಇಂಥವರು ವರ್ಣಾಶ್ರಮಧರ್ಮಗಳನ್ನು ಲೋಕಸಂಗ್ರಹಕ್ಕಾಗಿ ಆಚರಿಸುತ್ತಿರುತ್ತಾರೆ. ಕಡೆಕಡೆಗೆ ವಿವೇಕ, ವೈರಾಗ್ಯಗಳು ದೃಢವಾಗಲು, ರಾಗದ್ವೇಷಗಳೆಂಬ ಚಿತ್ತಮಲಗಳು ನಿರ್ಮೂಲವಾಗಲು, ಆತ್ಮನಿಷ್ಠವಾದ, ಆತ್ಮವಿಷಯಕವಾದ, ಅಜ್ಞಾನದ ಮುಸುಕು ಸಂಪೂರ್ಣವಾಗಿ ನಾಶವಾಗಲು, ಆತ್ಮಜ್ಞಾನವು ಸಾಕ್ಷಾತ್ಕಾರದಿಂದ ಅಪರೋಕ್ಷಾನುಭವವಾಗಿ, ಸಚ್ಚಿದಾನಂದರೂಪದಲ್ಲಿ ಬ್ರಹ್ಮಾತ್ಮೈಕ್ಯದ ಅನುಭವದಿಂದ ಜೀವನು ಬ್ರಹ್ಮನಾಗಿ ಎಂದಿನಂತೆ ಉಳಿಯುತ್ತಾನೆ. ನಾಮ, ರೂಪ, ಲಿಂಗಗಳನ್ನು ಮೀರಿ ಮುಕ್ತನಾಗುತ್ತಾನೆ. ಎಂದು ತಿಳಿಯಬೇಕು. ॥೧೫॥

**ಶಮೋ ದಮಸ್ತಿತಿಕ್ಷಾ ಚ ವೈರಾಗ್ಯಂ ಸತ್ವಸಂಭವಃ ।**
**ತಾವತ್ಪರ್ಯಂತಮೇವ ಸ್ಯುಃ ಕರ್ಮಾಣಿ ನ ತತಃ ಪರಂ ॥೧೬॥**

**ತದಂತೇ ಚೈವ ಸನ್ನಸ್ಯ ಸಂಶ್ರಯೇತ್ ಗುರುಮಾತ್ಮವಾನ್ ।**
**ಶ್ರೋತ್ರಿಯಂ ಬ್ರಹ್ಮನಿಷ್ಠಂ ಚ ಭಕ್ತ್ಯಾ ನಿರ್ವ್ಯಾಜಯಾ ಪುನಃ ॥೧೭॥**

**ವೇದಾಂತಶ್ರವಣಂ ಕುರ್ಯಾತ್ ನಿತ್ಯಮೇವಮತಂದ್ರಿತಃ ।**
**ತತ್ತ್ವಮಸ್ಯಾದಿ ವಾಕ್ಯಸ್ಯ ನಿತ್ಯಮರ್ಥಂ ವಿಚಾರಯೇತ್ ॥೧೮॥**

---

ಅಂತರಿಂದ್ರಿಯನಿಗ್ರಹವೂ, ಬಹಿರಿಂದ್ರಿಯನಿಗ್ರವೂ, ಶೀತೋಷ್ಣಸುಖದುಃಖಾದಿಗಳ ಸಹನೆಯೂ, ಇಹಪರಲೋಕಗಳ ಸುಖಾಭಿಲಾಷೆಯಿಲ್ಲದ ವೈರಾಗ್ಯವೂ, ಅಂತಃಕರಣದಲ್ಲಿರುವ ಸತ್ವಗುಣದ ಶುದ್ಧಿಯಾಗುವಿಕೆಯೂ, ಕ್ರಮವಾಗಿ ಆಗಲು ಅಲ್ಲಿಯ ಪರಿಯಂತವಾಗಿ ಕರ್ಮಗಳ ಆಚರಣೆಯು ಚಿತ್ತಶುದ್ಧಿಗಾಗಿ ಬೇಕಾಗಿರುತ್ತದೆ. ಅಲ್ಲಿಂದ ಮುಂದೆ ವರ್ಣಾಶ್ರಮಧರ್ಮಗಳೆಂಬ ಕರ್ಮಗಳ ಆಚರಣೆಯ ಆವಶ್ಯಕತೆಯಿಲ್ಲವು. ||೧೬||

ನಿಷ್ಕಾಮಕರ್ಮಾಚರಣೆಯಿಂದ ಚಿತ್ತವು ಶುದ್ಧವಾಗಲು ಕರ್ಮತ್ಯಾಗಮಾಡಿದಮೇಲೆ ಸನ್ಯಾಸಗ್ರಹಣ ಮಾಡಬೇಕು. ವೇದವಿಧಿಯಿಂದ ಕರ್ಮವು ಪ್ರಾಪ್ತವಾಗಿದ್ದುದರಿಂದ ಚಿತ್ತಶುದ್ಧ್ಯನಂತರದಲ್ಲಿ ಆ ವೇದವಿಧಿಯಿಂದಲೇ ಸನ್ಯಾಸವನ್ನೂ ಗ್ರಹಿಸಬೇಕು. ಎಂದರೆ ಕರ್ಮತ್ಯಾಗಮಾಡಬೇಕು. ಆಮೇಲೆ ಅಂತಃಕರಣವನ್ನು ತನ್ನ ಅಧೀನಮಾಡಿಕೊಂಡು ವೇದಾರ್ಥವನ್ನು ಬಲ್ಲ, ಬ್ರಹ್ಮಸ್ವರೂಪವನ್ನು ಅನುಭವಿಸುತ್ತಿರುವ, ಗುರುವನ್ನು ನಿಷ್ಕಪಟವಾದ ಭಕ್ತಿಯಿಂದ ಸೇವಿಸಬೇಕು. ಏತಕ್ಕೆಂದರೆ ಶ್ರುತಿಯಲ್ಲಿ “ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥” ಎಂದು ಹೇಳಿರುವುದು. ||೧೭||

ಪ್ರತಿದಿನವೂ ಆಲಸ್ಯಮಾಡದೆ ವೇದಾಂತವೆಂದರೆ ಉಪನಿಷತ್ತುಗಳನ್ನು ಅರ್ಥವಿವರಣೆಗಳೊಡನೆ ಕೇಳಬೇಕು. “ತತ್ವಮಸಿ” ಮುಂತಾದ ಮಹಾವಾಕ್ಯಗಳ ಅರ್ಥವನ್ನು ಪ್ರತಿದಿನವೂ ವಿಚಾರಮಾಡುತ್ತಿರಬೇಕು. ||೧೮||

**ತತ್ವಮಸ್ಯಾದಿ ವಾಕ್ಯಂ ತು ಜೀವಬ್ರಹ್ಮೈಕ್ಯಬೋಧಕಂ ।**
**ಐಕ್ಯೇ ಜ್ಞಾತೇ ನಿರ್ಭಯಸ್ತು ಮದ್ರೂಪೋ ಹಿ ಪ್ರಜಾಯತೇ ॥೧೯॥**

**ಪದಾರ್ಥಾವಗತಿಃ ಪೂರ್ವಂ ವಾಕ್ಯಾರ್ಥಾವಗತಿಸ್ತತಃ ।**
**ತತ್ಪದಸ್ಯ ಚ ವಾಚ್ಯಾರ್ಥೋ ಗಿರೇಽಹಂ ಪರಿಕೀರ್ತಿತಃ ॥೨೦॥**

**ತ್ವಂ ಪದಸ್ಯ ಚ ವ್ಯಾಚ್ಯಾರ್ಥೋ ಜೀವ ಏವ ನ ಸಂಶಯಃ ।**
**ಉಭಯೋರೈಕ್ಯಮಸಿನಾ ಪದೇನ ಪ್ರೋಚ್ಯತೇ ಬುಧೈಃ ॥೨೧॥**

**ವಾಚ್ಯಾರ್ಥಯೋರ್ವಿರುದ್ಧತ್ವಾದೈಕ್ಯಂ ನೈವ ಘಟೇತ ಹ ।**
**ಲಕ್ಷಣಾಽತಃ ಪ್ರಕರ್ತವ್ಯಾ ತತ್ವಮೋಃ ಶ್ರುತಿಸಂಸ್ಥಯೋಃ ॥೨೨॥**

---

'ತತ್ವಮಸಿ' ಮುಂತಾದ ಮಹಾವಾಕ್ಯಗಳು ಜೀವನಿಗೂ ಬ್ರಹ್ಮನಿಗೂ ಅಭೇದವನ್ನು ಬೋಧಿಸುವುವು. ಜೀವಬ್ರಹ್ಮರು ಒಂದೇ ಎಂಬ ಏಕತ್ವ ಜ್ಞಾನ ವುಂಟಾದರೆ, ನಿರ್ಭಯವೂ ನನ್ನ ಸ್ವರೂಪವೂ ಆ ಜ್ಞಾನಿಗೆ ಉಂಟಾಗುವುದು. " ಬ್ರಹ್ಮವಿದ್ಬ್ರಹ್ಮೈವ ಭವತಿ " ಎಂಬ ಶ್ರುತಿಯೇ ಇದಕ್ಕೆ ಪ್ರಮಾಣವು. ॥೧೯॥

ಓ ಪರ್ವತರಾಜನೇ, ವಾಕ್ಯಾರ್ಥಜ್ಞಾನವಾಗಬೇಕಾದರೆ ಪದಾರ್ಥಜ್ಞಾನವೇ ಕಾರಣವಾಗಿರುವುದರಿಂದ, ಮೊದಲು ಪದದ ಅರ್ಥವನ್ನು ತಿಳಿದು ಆ ಮೇಲೆ ವಾಕ್ಯದ ಅರ್ಥವನ್ನು ತಿಳಿಯಬೇಕು. ಎಲೈ ಪರ್ವತರಾಜನೇ ." ತತ್ವಮಸಿ " ಎಂಬ ವಾಕ್ಯ ದಲ್ಲಿರುವ ತತ್ ಎಂಬ ಪದಕ್ಕೆ ಷಡ್ಗುಣೈಶ್ವರ್ಯಸಂಪನ್ನಳಾದ ಭುವನೇಶ್ವರಿಯಾದ ನಾನೇ ಅರ್ಥವು. ॥೨೦॥

ತ್ವಂಪದಕ್ಕೆ ಜೀವನೇ ಅರ್ಥವು. ಈ ವಿಷಯದಲ್ಲಿ ಸಂದೇಹವಿಲ್ಲ. ವಿದ್ವಾಂಸರು ಈ ತತ್, ತ್ವಂ, ಎಂಬ ಪದಾರ್ಥಗಳೆರಡನ್ನೂ ಬೋಧಿಸಿ, ಅಸಿ ಎಂಬ ಪದದಿಂದ ಬ್ರಹ್ಮ, ಜೀವ, ರ ಐಕ್ಯವನ್ನು ಸೂಚಿಸಿದೆ. ಎಂದು ಹೇಳುವರು. ॥೨೧॥

ತತ್ ತ್ವಂ ಪದಗಳ ವಾಚ್ಯಾರ್ಥವಾದ ಈಶ್ವರ ಮತ್ತು ಜೀವರುಗಳಿಗೆ ಸರ್ವಜ್ಞತ್ವ ವ್ಯಾಪಕತ್ವ ಮತ್ತು ಅಸರ್ವಜ್ಞತ್ವ ಪರಿಚ್ಛಿನ್ನತ್ವ ರೂಪವಾದ ಉತ್ಕೃಷ್ಟ ನಿಕೃಷ್ಟ ಧರ್ಮಗಳಿರುವುದರಿಂದ, ವಿರುದ್ಧವಾದ ಧರ್ಮಗಳುಳ್ಳ ಜೀವೇಶ್ವರರಿಗೆ ಐಕ್ಯವು ಎಂದರೆ ಅಭೇದವು ಸಂಭವಿಸುವುದೇ ಇಲ್ಲ. ಆದುದರಿಂದ ಶ್ರುತಿಯಲ್ಲಿರುವ ತತ್ ತ್ವಂ ಪದಗಳಿಗೆ ವಾಚ್ಯಾರ್ಥವನ್ನು ಬಿಟ್ಟು ಲಕ್ಷಣಾರ್ಥದ ಗ್ರಹಣವನ್ನು ಮಾಡಬೇಕು. ॥೨೨॥

ಚಿನ್ಮಾತ್ರಂತು ತಯೋರ್ಲಕ್ಷ್ಯಂ ತಯೋರೈಕ್ಯಸ್ಯ ಸಂಭವಃ ।
ತಯೋರೈಕ್ಯಂ ತಥಾ ಜ್ಞಾತ್ವಾ ಸ್ವಾಭೇದೇನಾದ್ವಯೋ ಭವೇತ್॥೨೩॥

ದೇವದತ್ತಃ ಸ ಏವಾಯಮಿತಿವತ್ ಲಕ್ಷಣಾ ಸ್ಮೃತಾ ।
ಸ್ಥೂಲಾದಿ ದೇಹರಹಿತೋ ಬ್ರಹ್ಮ ಸಂಪದ್ಯತೇ ನರಃ ॥೨೪॥

ಪಂಚೀಕೃತಮಹಾಭೂತಸಂಭೂತಸ್ಥೂಲದೇಹಕಃ ।
ಭೋಗಾಲಯೋ ಜರಾವ್ಯಾಧಿಸಂಯುತಃ ಸರ್ವಕರ್ಮಣಾಂ ॥೨೫॥

---

ಲಕ್ಷಣಾರ್ಥವನ್ನು ಹೇಗೆ ಮಾಡಬೇಕೆಂದರೆ ಸರ್ವಜ್ಞತ್ವ, ಸರ್ವಶಕ್ತತ್ವ, ಸರ್ವವ್ಯಾಪಕತ್ವ, ಸ್ವತಂತ್ರತ್ವ, ಇತ್ಯಾದಿಗಳಿಂದ ಕೂಡಿದ ಬ್ರಹ್ಮಚೈತನ್ಯವೇ ಈಶ್ವರನು. ಅಸರ್ವಜ್ಞತ್ವಾದಿ ಎಂದರೆ ಅಲ್ಪಜ್ಞತ್ವ, ಅಲ್ಪಶಕ್ತತ್ವ, ಅಲ್ಪವ್ಯಾಪಿತ್ವ, ಈಶ್ವರಾಧೀನತ್ವಗಳಿಂದ ಕೂಡಿದ ಬ್ರಹ್ಮಚೈತನ್ಯವೇ ಜೀವನು. ಈ ಎರಡರಲ್ಲಿಯೂ ಇರುವ ಸರ್ವಜ್ಞತ್ವವೆಂಬ ವಿರುದ್ಧಾಂಶದ ಧರ್ಮಗಳನ್ನು ಭಾಗತ್ಯಾಗಲಕ್ಷಣೆಯಿಂದ ಬಿಟ್ಟು ಚೈತನ್ಯಮಾತ್ರವನ್ನು ಗ್ರಹಿಸಬೇಕು. ಹಾಗೆ ಗ್ರಹಿಸಿದ ಲಕ್ಷಣಾರ್ಥಕ್ಕೆ ಅಭೇದವು ಸ್ವಾಭಾವಿಕವಾಗಿರುವುದು. ಹೀಗೆ ಜೀವೇಶ್ವರರ ಅಭೇದವನ್ನು ತಿಳಿದ ಮೇಲೆ, ಕ್ರಮವಾಗಿ ಮನನನಿದಿಧ್ಯಾಸನಗಳಿಂದ ತನಗೂ ಬ್ರಹ್ಮನಿಗೂ ಅಭೇದಜ್ಞಾನವು ಅಪರೋಕ್ಷಾನುಭವವಾಗುವುದು. ಇದೇ ಮುಖ್ಯ ಫಲವು. ॥೨೩॥

ಲೋಕದಲ್ಲಿ ಭಾಗತ್ಯಾಗಲಕ್ಷಣೆಯು ಎಲ್ಲಿ ಕಾಣುವುದೆಂದರೆ "ಸೋಽಯಂ ದೇವದತ್ತಃ" ಎಂದರೆ ಆ ದೇವದತ್ತನೇ ಇವನು ಎಂಬ ವಾಕ್ಯದಲ್ಲಿ ಆ ಕಾಲ ಆ ಪ್ರದೇಶದಲ್ಲಿದ್ದ ದೇವದತ್ತನಿಗೂ ಈ ಕಾಲ ಈಪ್ರದೇಶದಲ್ಲಿರುವ ದೇವದತ್ತನಿಗೂ ಭೇದವಿದ್ದರೂ, ಆ ಕಾಲದೇಶಗಳನ್ನೂ ಈ ಕಾಲದೇಶಗಳನ್ನೂ ಬಿಟ್ಟು, ಅವಿರುದ್ಧವಾದ ದೇವದತ್ತರೂಪ ವ್ಯಕ್ತಿಯನ್ನು ಭಾಗತ್ಯಾಗಲಕ್ಷಣೆಯಿಂದ ಗ್ರಹಿಸಿ ಅಭೇದರೂಪವಾದ ಪ್ರತ್ಯಭಿಜ್ಞೆಯನ್ನು ಪಡೆಯುತ್ತೇವೆ. ಈ ರೀತಿಯನ್ನು ಅನುಸರಿಸುವುದರಿಂದ ಜೀವನು ಸ್ಥೂಲ, ಸೂಕ್ಷ್ಮ, ಕಾರಣ, ಶರೀರಗಳಿಲ್ಲದ ಚೈತನ್ಯಮಾತ್ರನು. ಎಂಬ ತಿಳುವಳಿಕೆಯು ಬಂದು, ಜೀವನು ಬ್ರಹ್ಮಸ್ವರೂಪನೇ ಆಗಿರುವನು. ಎಂಬಂಶವು ಅಪರೋಕ್ಷಾನುಭವವಾಗಿ ಉಳಿಯುವುದು. ॥೨೪॥

ಪಂಚೀಕೃತವಾದ ಪಂಚಮಹಾಭೂತಗಳಿಂದ ಸ್ಥೂಲದೇಹವು ಉತ್ಪನ್ನವಾಗುವುದು. ಈ ಸ್ಥೂಲದೇಹವು ಸಮಸ್ತ ಕರ್ಮಗಳ ಫಲವನ್ನೂ ಅನುಭವಿಸಲು ಸಾಧನವಾದುದು. ಮುಪ್ಪು, ರೋಗ, ಸಾವು, ಇವುಗಳಿಂದ ಕೂಡಿದುದು. ॥೨೫॥

**ಮಿಥ್ಯಾಭೂತೋಽಯಮಾಭಾತಿ ಸ್ಫುಟಂ ಮಾಯಾಮಯತ್ವತಃ ।**
**ಸೋಽಯಂ ಸ್ಥೂಲ ಉಪಾಧಿಸ್ಸ್ಯಾತ್ ಆತ್ಮನೋ ಮೇ ನಗೇಶ್ವರ ॥೨೬॥**

**ಜ್ಞಾನಕರ್ಮೇಂದ್ರಿಯಯುತಂ ಪ್ರಾಣಪಂಚಕಸಂಯುತಂ ।**
**ಮನೋಬುದ್ಧಿಯುತಂ ಚೈತತ್ಸೂಕ್ಷ್ಮಂ ತತ್ಕವಯೋ ವಿದುಃ ॥೨೭॥**

---

ಪಂಚೀಕರಣದ ರೀತಿಯು ಹೀಗಿದೆ. ಒಟ್ಟಿನಲ್ಲಿ ಈ ಪ್ರಪಂಚವನ್ನೂ ದೇಹಗಳನ್ನೂ ಪಾಂಚಭೌತಿಕಗಳೆಂದು ವ್ಯವಹರಿಸುತ್ತಿದೆ. ಏಕೆಂದರೆ, ಈ ಪಂಚಭೂತಗಳಲ್ಲಿ ಪ್ರತಿಯೊಂದರಲ್ಲೂ ತನ್ನದೇ ಆದುದು ಅರ್ಧಭಾಗವು. ಎಂದರೆ ಎಂಟನೆಯ ನಾಲ್ಕುಭಾಗ ಮಾತ್ರವಾಗಿರುತ್ತದೆ. ಉಳಿದ ಅರ್ಧಭಾಗವು ಇತರ ನಾಲ್ಕು ಭೂತಗಳ ಎಂಟನೆಯ ಒಂದು ಭಾಗಗಳಿಂದ ಉಂಟಾಗಿರುತ್ತದೆ. ಹೀಗೆ ಭೂಯೋಽನುಗ್ರಹ ನ್ಯಾಯವನ್ನು ಅನುಸರಿಸಿ, ಹೆಚ್ಚಾಗಿರುವ ಅರ್ಧಭಾಗವನ್ನು ಅವಲಂಬಿಸಿ, ಒಂದೊಂದು ಭೂತಕ್ಕೂ ಆಯಾ ಭೂತವೆಂದು ವ್ಯವಹಾರವಿದೆ. ಅಲ್ಲದೆ ಆಕಾಶದಿಂದ ವಾಯುವೂ, ಅದರಿಂದ ತೇಜಸ್ಸೂ, ಅದರಿಂದ ಜಲವೂ, ಅದರಿಂದ ಪೃಥಿವಿಯೂ ಉಂಟಾಗುವುದರಿಂದ, ಕಾರಣಗಳಲ್ಲಿನ ಗುಣಗಳು ಕಾರ್ಯಗಳಲ್ಲಿರಬೇಕಾದುದು ಸ್ವಾಭಾವಿಕವಾದುದರಿಂದ, ಎಲ್ಲಕ್ಕೂ ಮೊದಲಿನ ಭೂತವಾದ ಆಕಾಶದಲ್ಲಿ ಅದರದೇ ಆದ ಶಬ್ದ ಎಂಬ ಒಂದು ಗುಣವೂ, ವಾಯುವಿನಲ್ಲಿ ಶಬ್ದ, ಸ್ಪರ್ಶ, ಎಂಬ ಎರಡು ಗುಣಗಳೂ, ತೇಜಸ್ಸಿನಲ್ಲಿ ಶಬ್ದ, ಸ್ಪರ್ಶ, ರೂಪ ಎಂಬ ಮೂರು ಗುಣಗಳೂ, ಜಲದಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಎಂಬ ನಾಲ್ಕು ಗುಣಗಳೂ, ಪೃಥಿವಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ಗುಣಗಳೂ ಇರುತ್ತವೆ. ಆದುದರಿಂದ ಎಲ್ಲವನ್ನೂ ಪಾಂಚಭೌತಿಕಗಳೆಂದು ವ್ಯವಹರಿಸುತ್ತಿರುವುದು ಯುಕ್ತವಾಗಿರುತ್ತದೆ. ದೇವೀಭಾಗವತ ಸ್ಕಂಧ ಮೂರು ಪುಟ ೧೧೧ ನೋಡಿ.

ಆದುದರಿಂದ ಪರಮಾರ್ಥದೃಷ್ಟಿಯಿಂದ ಬರಿಯ ತೋರಿಕೆಯ ಸ್ವಭಾವವುಳ್ಳ ಈ ಸ್ಥೂಲದೇಹವು ಮಾಯಾಮಯವಾದುದರಿಂದ ಮಿಥ್ಯಾವಸ್ತುವಾಗಿ ಜ್ಞಾನದಿಂದ ಮೋಕ್ಷವಾಗುವವರೆಗೆ ಮಾತ್ರ ಪ್ರಕಾಶಿಸುತ್ತಿರುವುದು. ಎಲೈ ಪರ್ವತರಾಜನೇ, ಆತ್ಮಸ್ವರೂಪಳಾದ ನನಗೆ ಈ ಸ್ಥೂಲದೇಹವು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಗಳೆಂಬ ವ್ಯವಹಾರದ ದಶೆಯಲ್ಲಿರುವಾಗ ಮಾತ್ರ ಉಪಾಧಿ ಎನಿಸುವುದು. ॥೨೬॥

ಪಂಚ ಜ್ಞಾನೇಂದ್ರಿಯಗಳು ಪಂಚ ಕರ್ಮೇಂದ್ರಿಯಗಳು ಪಂಚಪ್ರಾಣಗಳು ಮನಸ್ಸು ಬುದ್ಧಿ ಈ ಹದಿನೇಳು ಅವಯವಗಳಿಂದ ಕೂಡಿದುದೇ ಸೂಕ್ಷ್ಮ ಶರೀರವು.

**ಅಪಂಚೀಕೃತಭೂತೋತ್ಥಂ ಸೂಕ್ಷ್ಮದೇಹೋಽಯಮಾತ್ಮನಃ ।**
**ದ್ವಿತೀಯೋಽಯಮುಪಾಧಿಃ ಸ್ಯಾತ್ ಸುಖಾದೇರವಬೋಧಕಃ ॥೨೮॥**

**ಅನಾದ್ಯನಿರ್ವಾಚ್ಯಮಿದಂ ಅಜ್ಞಾನಂತು ತೃತೀಯಕಃ ।**
**ದೇಹೋಽಯಮಾತ್ಮನೋ ಭಾತಿ ಕಾರಣಾತ್ಮಾ ನಗೇಶ್ವರ ॥೨೯॥**

**ಉಪಾಧಿವಿಲಯೇ ಜಾತೇ ಕೇವಲಾತ್ಮಾಽವಶಿಷ್ಯತೇ ।**
**ದೇಹತ್ರಯೇ ಪಂಚಕೋಶಾ ಅಂತಸ್ಸ್ಥಾಃ ಸಂತಿ ಸರ್ವದಾ ॥೩೦॥**

**ಪಂಚಕೋಶಪರಿತ್ಯಾಗೇ ಬ್ರಹ್ಮಪುಚ್ಛಂ ಹಿ ಲಭ್ಯತೇ ।**
**ನೇತಿ ನೇತೀತ್ಯಾದಿ ವಾಕ್ಯೈರ್ಮಮ ರೂಪಂ ಯದುಚ್ಯತೇ ॥೩೧॥**

---

ಎಂದು ಕವಿಗಳು ಎಂದರೆ ತತ್ವಸ್ವರೂಪವನ್ನು ಮನಗಂಡವರು, ತಿಳಿದಿರುವರು ಮತ್ತು ವಿವರಿಸಿರುವರು. ॥೨೭॥

ಅಪಂಚೀಕೃತವಾದ ಪಂಚ ಮಹಾಭೂತಗಳಿಂದ ಉತ್ಪತ್ತಿಯಾದ ಈ ಸೂಕ್ಷ್ಮ ದೇಹವು ಆತ್ಮನಿಗೆ ಸುಖದುಃಖಗಳನ್ನು ತಿಳಿಸುವ ಎರಡನೆಯ ಉಪಾಧಿಯಾಗಿರುವುದು. ॥೨೮॥

ಓ ಪರ್ವತರಾಜನೇ, ಅನಾದಿಯೂ, ಇಂತಹುದೆಂದು ವಿವರಿಸಿ ಹೇಳಲಸಾಧ್ಯವಾದುದೂ, ಆದ ಈ ಅಜ್ಞಾನವೇ ಆತ್ಮನಿಗೆ ಮೂರನೆಯದಾದ ಕಾರಣದೇಹವಾಗಿರುವುದು. ॥೨೯॥

ಸ್ಥೂಲ, ಸೂಕ್ಷ್ಮ, ಕಾರಣ, ಶರೀರವೆಂಬ ಮೂರು ಉಪಾಧಿಗಳು ನಾಶವಾಗಲಾಗಿ ಆತ್ಮಸ್ವರೂಪವೊಂದೇ ಉಳಿಯುವುದು. ಈ ಮೂರು ದೇಹಗಳ ಒಳಗೆ ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯವೆಂಬ ಐದು ಕೋಶಗಳು ಯಾವಾಗಲೂ ಇರುವುವು. ಮೂರು ದೇಹಗಳು ನಾಶವಾದರೆ ಪಂಚಕೋಶಗಳೂ ನಾಶವಾಗುವುವು. ಆಮೇಲೆ " ಬ್ರಹ್ಮಪುಚ್ಛಂ ಪ್ರತಿಷ್ಠಾ " ಎಂದು ಶ್ರುತಿಯಲ್ಲಿ ಹೇಳಿರುವಂತೆ ಸರ್ವಕಾರಣವಾದ ಬ್ರಹ್ಮವಸ್ತುವು ಅಪರೋಕ್ಷಾನುಭವವಾಗಿ ಉಳಿಯುತ್ತದೆ. ಆ ಬ್ರಹ್ಮವಸ್ತುವೇ ನನ್ನ ವಾಸ್ತವವಾದ ಸ್ವರೂಪವು. ಅದನ್ನೇ " ನೇತಿನೇತಿ '' ಎಂಬ ವಾಕ್ಯದಿಂದ, ಎಂದರೆ ಇತರವಾದ, ಪರಿಚ್ಛಿನ್ನವಾದ, ಬರಿಯ ತೋರಿಕೆಯ ಸ್ವಭಾವವುಳ್ಳ, ಪದಾರ್ಥಗಳನ್ನೂ ಬ್ರಹ್ಮವು ಇದಲ್ಲವು ಎಂದು ನಿಷೇಧಿಸುವ ರೀತಿಯನ್ನು ಅನುಸರಿಸಿ ನಿಷೇಧಿಸಿ ವೇದದಲ್ಲಿ ಹೇಳಿರುತ್ತದೆ. ॥೩೦-೩೧॥

ನ ಜಾಯತೇ ಮ್ರಿಯತೇ ತತ್ಕದಾಚಿತ್
ನಾಯಂ ಭೂತ್ವಾ ನ ಬಭೂವ ಕಶ್ಚಿತ್ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥೩೨॥

ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇತ್ ಮನ್ಯತೇ ಹತಂ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೩೩॥

ಅಣೋರಣೀಯಾನ್ಮಹತೋ ಮಹೀಯಾ
ನಾತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಂ ।
ತಮಕ್ರತುಃ ಪಶ್ಯತಿ ವೀತಶೋಕೋ
ಧಾತುಃ ಪ್ರಸಾದಾತ್ ಮಹಿಮಾನಮಸ್ಯ ॥೩೪॥

---

ಆ ಬ್ರಹ್ಮವಸ್ತುವು ಹುಟ್ಟುವುದಿಲ್ಲ. ಸಾಯುವುದೂ ಅಲ್ಲವು. ಈ ವಸ್ತುವು ಹಿಂದೆ ಇರಲಿಲ್ಲ. ಇದ್ದಿತು. ಎಂಬುದೂ ಅಲ್ಲವು. ಏತಕ್ಕೆಂದರೆ ಆ ವಸ್ತುವಿಗೆ ಜನನವಿಲ್ಲ. ಅನಾದಿಯಿಂದಲೂ ಯಾವಾಗಲೂ ನಿರ್ವಿಕಾರವಾಗಿ ನಿತ್ಯವಾಗಿ ಇರುವ ವಸ್ತುವಾಗಿರುವುದರಿಂದ ಶರೀರಗಳು ನಾಶವಾದರೂ ಆ ವಸ್ತುವಿಗೆ ನಾಶವಿಲ್ಲ. ಆ ಬ್ರಹ್ಮವಸ್ತುವಿಗೆ ಷಡ್ಭಾವವಿಕಾರವಿಲ್ಲ. ಎಂದರೆ ಹುಟ್ಟುವಿಕೆ, ಇರುವಿಕೆ, ಬೆಳೆಯುವಿಕೆ, ಕ್ಷೀಣಿಸುವಿಕೆ, ಮುಪ್ಪು, ಸಾವು ಎಂಬ ಆರು ಬಗೆಯ ವಿಕಾರಗಳಿಲ್ಲವು. ಎಂದು ತಾತ್ಪರ್ಯವು. ॥೩೨॥

ಕೊಲ್ಲುವವನು ನಾನು ಕೊಲ್ಲುತ್ತೇನೆಂದು ತಿಳಿದರೂ, ಕೊಲ್ಲಲ್ಪಟ್ಟವನು ನಾನು ಕೊಲ್ಲಲ್ಪಟ್ಟೆನೆಂದು ತಿಳಿದರೂ, ಈ ಇಬ್ಬರೂ ಅಜ್ಞಾನಿಗಳೇ ಸರಿ. ಈ ಇಬ್ಬರಿಗೂ ಚೈತನ್ಯಸ್ವರೂಪನಾದ ಆತ್ಮನು ಕೊಲ್ಲುವವನೂ ಅಲ್ಲವು. ಕೊಲ್ಲಲ್ಪಡತಕ್ಕವನೂ ಅಲ್ಲವು. ॥೩೩॥

ಆತ್ಮನು ಸೂಕ್ಷ್ಮವಾದ ಅಣುವಿಗಿಂತಲೂ ಸೂಕ್ಷ್ಮನು. ದೊಡ್ಡವಾದ ಆಕಾಶಕ್ಕಿಂತಲೂ ದೊಡ್ಡವನು. ಆ ಆತ್ಮನು ಬುದ್ಧಿಯೆಂಬ ಗುಹೆಯಲ್ಲಿ ಇರುವನು ಎಂದರೆ ಬುದ್ಧಿಯಿಂದಲೇ ಈತನನ್ನು ತಿಳಿಯಬೇಕು. ಆ ಆತ್ಮನ ಮಹಿಮೆಯನ್ನು ಸಂಕಲ್ಪ ವಿಕಲ್ಪಗಳಿಲ್ಲದೆ ಪರಿಶುದ್ಧವಾದ ಚಿತ್ತದಿಂದ ನೋಡಬಹುದು. ಆಮೇಲೆ ಸಮಸ್ತ ದುಃಖಗಳೂ ನಿವೃತ್ತಿಯಾಗುವುವು. ॥೩೪॥

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥೩೫॥

ಇಂದ್ರಿಯಾಣಿ ಹಯಾನಾಹುಃ ವಿಷಯಾಂ ಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಣಃ॥೩೬॥

ಯಸ್ತ್ವ ವಿದ್ವಾನ್ಭವತಿ ಚಾಮನಸ್ಕಶ್ಚಸ್ಸದಾಽಶುಚಿಃ ।
ನ ತತ್ಪದಮವಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥೩೭॥

ಯಸ್ತು ವಿಜ್ಞಾನವಾನ್ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥೩೮॥

ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ಮದೀಯಂ ತತ್ಪರಂ ಪದಂ ॥೩೯॥

---

ಇಲ್ಲಿ ಆತ್ಮನೆಂದರೆ ಚಿದಾಭಾಸನಾದ ಜೀವನು. ಅವನೇ ರಥದ ಸ್ವಾಮಿಯು. ಶರೀರವೇ ರಥವು. ಬುದ್ಧಿಯೇ ಸಾರಥಿಯು. ಮನಸ್ಸೇ ಹಗ್ಗವು. ಇಂದ್ರಿಯಗಳೇ ಕುದುರೆಗಳು. ವಿಷಯಗಳೇ ನಡೆಯುವ ದಾರಿಯು. ಹೀಗೆ ಚಿದಾಭಾಸನಾದ ಜೀವನೂ ಇಂದ್ರಿಯಗಳೂ ಮನಸ್ಸೂ ಈ ಮೂರೂ ಸೇರಿ ಸುಖದುಃಖಗಳನ್ನನುಭವಿಸುವ ಭೋಕ್ತೃವಾಗುವನೆಂದು ವಿದ್ವಾಂಸರು ಹೇಳುವರು. ॥೩೫-೩೬॥

ಯಾವ ಮನುಷ್ಯನು ಅವಿವೇಕಿಯಾಗಿ ಮನಸ್ಸನ್ನು ತನ್ನಧೀನದಲ್ಲಿಟ್ಟುಕೊಳ್ಳದೆ ಯಾವಾಗಲೂ ಅಯೋಗ್ಯವಾದ ಕರ್ಮವನ್ನು ಮಾಡುವನೋ ಅವನು ಪರಮಾತ್ಮಸ್ವರೂಪವನ್ನು ಹೊಂದಲಾರನು. ಮತ್ತೇನೆಂದರೆ ಜನನಮರಣರೂಪವಾದ ಸಂಸಾರವನ್ನೇ ಪಡೆಯುತ್ತಿರುವನು. ॥೩೭॥

ಯಾವ ಮನುಷ್ಯನು ವಿವೇಕಿಯಾಗಿ ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಂಡು ಯಾವಾಗಲೂ ವೇದವಿಹಿತವಾದ ಪರಿಶುದ್ಧವಾದ ಕರ್ಮಗಳನ್ನು ಮಾಡುತ್ತಿರುವನೋ, ಅವನು ಕ್ರಮವಾಗಿ ಚಿತ್ತಶುದ್ಧಿ, ಜ್ಞಾನಪ್ರಾಪ್ತಿಗಳ ಮೂಲಕ ಪುನರಾವೃತ್ತಿಯಿಲ್ಲದ ಆ ಪರಮಪದವನ್ನು ಪಡೆಯುವನು. ॥೩೮॥

ವಿಜ್ಞಾನವೆಂಬ ಸಾರಥಿಯೂ ಮನಸ್ಸೆಂಬ ಹಗ್ಗವೂ ಉಳ್ಳವನಾದ ಆ ಮನುಜನು ಎಂದರೆ, ಜೀವನು ಮನಸ್ಸನ್ನು ಯುಕ್ತಾಯುಕ್ತ ವಿವೇಕಕ್ಕೆ ಅಧೀನಮಾಡಿ

ಇತ್ಥಂ ಶ್ರುತ್ವಾ ಚ ಮತ್ವಾ ಚ ನಿಶ್ಚಿತ್ಯಾತ್ಮಾನಮಾತ್ಮನಾ ।
ಭಾವಯೇನ್ಮಾಂ ಆತ್ಮರೂಪಾಂ ನಿದಿಧ್ಯಾಸನತೋಽಪಿ ಚ ॥೪೦॥

ಯೋಗವೃತ್ತೇಃ ಪುರಾ ಸ್ವಸ್ಮಿನ್ ಭಾವಯೇದಕ್ಷರತ್ರಯಂ ।
ದೇವೀಪ್ರಣವ ಸಂಜ್ಞಸ್ಯ ಧ್ಯಾನಾರ್ಥಂ ಮಂತ್ರವಾಚ್ಯಯೋಃ ॥೪೧॥

ಹಕಾರಃ ಸ್ಥೂಲದೇಹಃ ಸ್ಯಾದ್ರಕಾರಃ ಸೂಕ್ಷ್ಮದೇಹಕಃ ।
ಈಕಾರಃ ಕಾರಣಾತ್ಮಾಸೌ ಹ್ರೀಂಕಾರೋಽಹಂ ತುರೀಯಕಃ ॥೪೨॥

ಏವಂ ಸಮಷ್ಟಿದೇಹೇಽಪಿ ಜ್ಞಾತ್ವಾ ಬೀಜತ್ರಯಂ ಕ್ರಮಾತ್ ।
ಸಮಷ್ಟಿವ್ಯಷ್ಟ್ಯೋರೇಕತ್ವಂ ಭಾವಯೇತ್ ಮತಿಮಾನ್ನರಃ ॥೪೩॥

---

ನಡೆದರೆ ನಡೆಯಬೇಕಾದ ದಾರಿಯ ಕೊನೆಯನ್ನು ತಲಪುವನು. ಅದೇ ಸಚ್ಚಿದಾನಂದಸ್ವರೂಪವಾದ ನನ್ನ ಪರಮೋತ್ತಮ ಸ್ಥಾನವು. ॥೩೯॥

ಈ ರೀತಿಯಾಗಿ ವೇದಾಂತಶ್ರವಣದಿಂದಲೂ, ಹಾಗೆ ಕೇಳಿದುದನ್ನು ಪುನಃ ಪುನಃ ಮನನಮಾಡುವುದರಿಂದಲೂ, ಸಂದೇಹವೂ ವಿರುದ್ಧಭಾವನೆಯೂ ಇಲ್ಲದೆ ಹೋಗಿ, ಪರೋಕ್ಷಜ್ಞಾನವನ್ನು ಎಂದರೆ ಶಾಸ್ತ್ರಜನ್ಯಜ್ಞಾನವನ್ನು ಪಡೆದು, ಆಮೇಲೆ ಅಪರೋಕ್ಷಜ್ಞಾನಾರ್ಥವಾಗಿ ಅಂದರೆ ಆತ್ಮಸಾಕ್ಷಾತ್ಕಾರಕ್ಕಾಗಿ ಏಕಾಗ್ರಚಿತ್ತದಿಂದ ಆತ್ಮಸ್ವರೂಪಳಾದ ನನ್ನನ್ನು ನಿದಿಧ್ಯಾಸನದಿಂದ ಭಾವನೆಮಾಡುತ್ತಾ ಇರಬೇಕು. ॥೪೦॥

ಏಕಾಗ್ರಚಿತ್ತವಾದ ಸಮಾಧಿಯೆಂಬ ಯೋಗಾಂಗಕ್ಕಿಂತಲೂ ಮುಂಚಿತವಾಗಿ ಯೋಗಿಯು ತನ್ನ ಶರೀರದಲ್ಲಿ ದೇವಿಯ ಪ್ರಣವ ಸಂಜ್ಞೆಯಾದ ಮಾಯಾಬೀಜ ಮಂತ್ರದ ಮೂರು ಅಕ್ಷರಗಳನ್ನು ಮಂತ್ರ ಮತ್ತು ಅರ್ಥಗಳ ಧ್ಯಾನಕ್ಕೋಸ್ಕರವಾಗಿ ಭಾವನೆಮಾಡಬೇಕು. ॥೪೧॥

ಮಾಯಾಬೀಜದಲ್ಲಿರುವ ಹಕಾರವು ಸ್ಥೂಲದೇಹವು. ರಕಾರವು ಸೂಕ್ಷ್ಮದೇಹವು. ಈಕಾರವು ಕಾರಣಶರೀರವು. ಸಮಷ್ಟಿಯಾದ ಹ್ರೀಂಕಾರದ ಅರ್ಥವು (ನಾಲ್ಕನೇ) ತುರೀಯಳಾದ ನಾನೇ ಆಗಿರುವೆನು. ॥೪೨॥

ಬುದ್ಧಿವಂತನಾದ ಮನುಜನು ಸಮಷ್ಟಿಯಾದ ಬ್ರಹ್ಮಾಂಡದಲ್ಲಿಯೂ ಅಕ್ಷರತ್ರಯವನ್ನೂ ಹೀಗೆಯೇ ಭಾವನೆಮಾಡಿ ಆಮೇಲೆ ಸಮಷ್ಟಿದೇಹಕ್ಕೂ ವ್ಯಷ್ಟಿದೇಹಕ್ಕೂ ಏಕತ್ವವನ್ನು ಭಾವನೆಮಾಡಬೇಕು. ॥೪೩॥

ಸಮಾಧಿಕಾಲಾತ್ಪೂರ್ವಂ ತು ಭಾವಯಿತ್ವೈವ ಮಾದೃತಃ ।
ತತೋ ಧ್ಯಾಯೇನ್ನಿಲೀನಾಕ್ಷೋ ದೇವೀಂ ಮಾಂ ಜಗದೀಶ್ವರೀಂ ॥೪೪॥

ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರ ಚಾರಿಣೌ ।
ನಿವೃತ್ತವಿಷಯಾಕಾಂಕ್ಷೋ ವೀತದೋಷೋ ವಿಮತ್ಸರಃ ॥೪೫॥

ಭಕ್ತ್ಯಾ ನಿರ್ವ್ಯಾಜಯಾ ಯುಕ್ತೋ ಗುಹಾಯಾಂ ನಿಃಸ್ವನೇ ಸ್ಥಲೇ।
ಹಕಾರವಿಶ್ವಮಾತ್ಮಾನಂ ರಕಾರೇ ಪ್ರವಿಲಾಪಯೇತ್ ॥೪೬॥

ರಕಾರಂ ತೈಜಸಂ ದೇವಮೀಕಾರೇ ಪ್ರವಿಲಾಪಯೇತ್ ।
ಈಕಾರಂ ಪ್ರಾಜ್ಞಮಾತ್ಮಾನಂ ಹ್ರೀಂಕಾರೇ ಪ್ರವಿಲಾಪಯೇತ್ ॥೪೭॥

---

ಏಕಾಗ್ರಚಿತ್ತವಾದ ಸಮಾಧಿಗಿಂತಲೂ ಮುಂಚಿತವಾಗಿ ಈ ರೀತಿಯಾದ ಭಾವನೆಯನ್ನು ಮಾಡಿಕೊಂಡು, ಅಮೇಲೆ ಇಂದ್ರಿಯಗಳ ವ್ಯಾಪಾರವನ್ನೆಲ್ಲಾ ಅಡಗಿಸಿ, ಜಗದೀಶ್ವರಿಯಾದ ನನ್ನನ್ನು ಧ್ಯಾನಮಾಡಬೇಕು. ॥೪೪॥

ಮೂಗಿನಲ್ಲಿ ಪ್ರಾಣಾಪಾನ ವಾಯುಗಳು ಸಮವಾಗಿ ಸಂಚರಿಸುವಂತೆ ಮಾಡಿಕೊಂಡು, ಎಂದರೆ ಪ್ರಾಣಾಯಾಮಾಭ್ಯಾಸವನ್ನು ಮಾಡಿ, ವಿಷಯಗಳ ಮೇಲಿನ ಅಪೇಕ್ಷೆಯನ್ನು ತೊರೆದು, ಮಾತ್ಸರ್ಯ ಮುಂತಾದ ದೋಷಗಳನ್ನು ಮನಸ್ಸಿನಲ್ಲಿ ಇರಗೊಡದೆ, ನಿಷ್ಕಾರಣವಾದ ಸಂಪೂರ್ಣವಾದ ಅವ್ಯಾಜವಾದ ಭಕ್ತಿಯಿಂದ ಕೂಡಿ ಬುದ್ಧಿಗುಹೆಯಲ್ಲಿ ಶಬ್ದವೇ ಮೊದಲಾದ ವಿಕ್ಷೇಪ ಕಾರಣಗಳಿಲ್ಲದಿರಲು, ॥೪೫॥

ದೇವೀಪ್ರಣವವಾದ ಹ್ರೀಂಕಾರ ಜಪವನ್ನು ಮಾಡುತ್ತಾ, ವಿಶ್ವವೆಂದರೆ ಸ್ಥೂಲದೇಹವಾಚಕವಾದ ಹಕಾರವನ್ನು ತೈಜಸ ಎಂದರೆ ಸೂಕ್ಷ್ಮದೇಹವಾಚಕವಾದ ರಕಾರದಲ್ಲಿಯೂ, ಆ ರಕಾರವನ್ನು ಕಾರಣದೇಹ (ಪ್ರಾಜ್ಞ) ವಾಚಕವಾದ ಈಕಾರದಲ್ಲಿಯೂ, ಆ ಈಕಾರವನ್ನು ಹ್ರೀಂಕಾರದಲ್ಲಿಯೂ ಸೇರಿಸಬೇಕು ಎಂದರೆ ಕ್ರಮವಾಗಿ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನು ಪರಬ್ರಹ್ಮತತ್ವದಲ್ಲಿ ಸೇರಿಸಿ ಅಭೇದಭಾವನೆಯಿಂದ ಧ್ಯಾನಿಸಬೇಕು. ॥೪೭॥

ವಾಚ್ಯವಾಚಕತಾಹೀನಂ ದ್ವೈತಭಾವವಿವರ್ಜಿತಂ ।
ಅಖಂಡಂ ಸಚ್ಚಿದಾನಂದಂ ಭಾವಯೇತ್ತಚ್ಛಿಖಾಂತರೇ ॥೪೮॥

ಇತಿ ಧ್ಯಾನೇನ ಮಾಂ ರಾಜನ್ಸಾಕ್ಷಾತ್ಕೃತ್ಯ ನರೋತ್ತಮಃ ।
ಮದ್ರೂಪಏವ ಭವತಿ ದ್ವಯೋರಪ್ಯೇಕತಾ ಯತಃ ॥೪೯॥

ಯೋಗಯುಕ್ತ್ಯಾಽನಯಾ ದೃಷ್ಟ್ವಾ ಮಾಮಾತ್ಮಾನಂ ಪರಾತ್ಪರಂ ।
ಅಜ್ಞಾನಸ್ಯ ಸಕಾರ್ಯಸ್ಯ ತತ್ಕ್ಷಣೇ ನಾಶಕೋ ಭವೇತ್ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಚತುಸ್ತ್ರಿಂಶೋಽಧ್ಯಾಯಃ

---

ವಾಚ್ಯವಾಚಕ ಎಂದರೆ ಅರ್ಥ, ಶಬ್ದ, ಎಂಬ ಭೇದವಿಲ್ಲದ ಅಖಂಡವಾದ ಸಚ್ಚಿದಾನಂದಸ್ವರೂಪವನ್ನು ಆತ್ಮಚೈತನ್ಯವೆಂಬ ದೀಪದ ಜ್ಯೋತಿಯ ನಡುವೆ ಭಾವನೆ ಮಾಡಬೇಕು. ಶ್ರುತಿಯಲ್ಲಿ " ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ '' ಎಂದಿರುವುದು. ॥೪೮॥

ಓ ಪರ್ವತರಾಜನೇ, ಮನುಷ್ಯರಲ್ಲಿ ಉತ್ತಮನಾದವನು ಈ ರೀತಿಯಾದ ಧ್ಯಾನದಿಂದ ನನ್ನ ಸಾಕ್ಷಾತ್ಕಾರವನ್ನು ಮಾಡಿಕೊಂಡು, ಆತ್ಮನಿಗೂ ಜೀವನಿಗೂ ಹಿಂದೆ ಹೇಳಿದ ಭಾಗತ್ಯಾಗಲಕ್ಷಣೆಯಿಂದ ಏಕತ್ವನಿರುವುದನ್ನು ಬುದ್ಧಿವೃತ್ತಿಯಿಂದ ತಿಳಿದು, ಹೀಗೆ ನನ್ನ ಸಾಕ್ಷಾತ್ಕಾರವನ್ನೂ ಮಾಡಿಕೊಂಡ ಆ ಜೀವನು ನನ್ನ ಸ್ವರೂಪವೇ ಆಗಿಬಿಡುವನು. ॥೪೯॥

ಅಂತಹ ಸಾಧಕನೂ ಮುಮುಕ್ಷುವೂ ಆದ ಮನುಜನು ಈ ಯೋಗಾಭ್ಯಾಸವೆಂಬ ಈ ಸಾಧನದಿಂದ ಅತ್ಯಂತ ಶ್ರೇಷ್ಠಳಾದ ಎಲ್ಲಕ್ಕೂ ಆತ್ಮಸ್ವರೂಪಳಾದ ನನ್ನನ್ನು ಅಪರೋಕ್ಷವಾಗಿ ನೋಡಿ, ಅಜ್ಞಾನವನ್ನೂ, ಅದರ ಕಾರ್ಯವೂ ಮಿಥ್ಯಾಸ್ವರೂಪವೂ ಆದ ಪ್ರಪಂಚವನ್ನೂ ಆಕ್ಷಣದಲ್ಲಿಯೇ ನಾಶಮಾಡಿಕೊಂಡು ಬಿಡುವನು. ॥೫೦॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಪಂಚತ್ರಿಂಶೋಽಧ್ಯಾಯಃ ॥

### ಮೂವತ್ತೈದನೆಯ ಅಧ್ಯಾಯವು

॥ ಹಿಮಾಲಯ ಉವಾಚ ॥

**ಯೋಗಂ ವದ ಮಹೇಶಾನಿ ಸಾಂಗಂ ಸಂವಿತ್ಪ್ರದಾಯಕಂ ।**
**ಕೃತೇನ ಯೇನ ಯೋಗ್ಯೋಽಹಂ ಭವೇಯಂ ತತ್ತ್ವದರ್ಶನೇ ॥೧॥**

॥ ಶ್ರೀ ದೇವ್ಯುವಾಚ ॥

**ನ ಯೋಗೋ ನಭಸಃ ಪೃಷ್ಠೇ ನ ಭೂಮೌ ನ ರಸಾತಲೇ ।**
**ಐಕ್ಯಂ ಜೀವಾತ್ಮನೋರಾಹುರ್ಯೋಗಂ ಯೋಗವಿಶಾರದಾಃ ॥೨॥**

**ತತ್ಪ್ರತ್ಯೂಹಾಃ ಷಡಾಖ್ಯಾತಾ ಯೋಗವಿಘ್ನಕರಾನಘ ।**
**ಕಾಮಕ್ರೋಧೌ ಲೋಭಮೋಹೌ ಮದಮಾತ್ಸರ್ಯಸಂಜ್ಞಕೌ ॥೩॥**

---

ಹಿಮವಂತನು ಹೇಳಿದನು — ಓ ಮಹಾದೇವಿಯೇ, ಬ್ರಹ್ಮಜ್ಞಾನವನ್ನುಂಟು ಮಾಡುವ ಯೋಗವನ್ನು ಅದರ ಅಂಗಸಹಿತವಾಗಿ ನನಗೆ ವಿವರಿಸಿ ಹೇಳು. ಯಾವ ಯೋಗಾಭ್ಯಾಸವನ್ನು ಮಾಡಿದರೆ ನಾನು ಬ್ರಹ್ಮತತ್ತ್ವವನ್ನು ತಿಳಿಯಲು ಯೋಗ್ಯನಾಗುವೆನೋ ಅಂತಹ ಯೋಗದ ಸ್ವರೂಪವನ್ನು ನನಗೆ ತಿಳಿಯಹೇಳು. ॥೧॥

ದೇವಿಯು ಹೇಳಿದಳು — ಯೋಗವೆಂಬುದು ಆಕಾಶದಲ್ಲಿಯಾಗಲಿ, ಭೂಮಿಯಲ್ಲಿಯಾಗಲಿ, ಪಾತಾಳದಲ್ಲಿಯಾಗಲಿ ಇರುವುದಿಲ್ಲ. ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಅಭೇದವಿಷಯಕವಾದ ಮನೋವೃತ್ತಿಯೇ ಯೋಗವೆಂದು ಯೋಗಶಾಸ್ತ್ರವನ್ನು ಬಲ್ಲವರು ಹೇಳುವರು. ॥೨॥

ಆ ಜೀವಾತ್ಮ ಪರಮಾತ್ಮರ ಅಭೇದರೂಪವಾದ ಮನೋವೃತ್ತಿಯ ಸಂಪಾ

ಯೋಗಾಂಗೈರಿವ ಭಿತ್ವಾ ತಾನ್ಯೋಗಿನೋ ಯೋಗಮಾಪ್ನುಯುಃ ।
ಯಮಂ ನಿಯಮಮಾಸನಪ್ರಾಣಾಯಾಮೌ ತತಃ ಪರಂ ॥೪॥

ಪ್ರತ್ಯಾಹಾರಂ ಧಾರಣಾಖ್ಯಂ ಧ್ಯಾನಂ ಸಾರ್ಧಂ ಸಮಾಧಿನಾ ।
ಅಷ್ಟಾಂಗಾನ್ಯಾಹುರೇತಾನಿ ಯೋಗಿನಾಂ ಯೋಗಸಾಧನೇ ॥೫॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾರ್ಜವಂ ।
ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚೇತಿ ಯಮಾ ದಶ ॥೬॥

---

ದನೆಗೆ ಶತ್ರುಗಳು ಆರು. ಅವು ಯೋಗಕ್ಕೆ ವಿಘ್ನವನ್ನುಂಟುಮಾಡುವುವು. ಆ ಶತ್ರುಗಳೇ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು. ॥೩॥

ಯೋಗಾಂಗಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಎಂಬ ಎಂಟು ಅವಯವಗಳನ್ನುಳ್ಳ ಯೋಗವನ್ನು ಯೋಗಿಗಳು ಪುರುಷಾರ್ಥಸಾಧನೆಗಾಗಿ ಅಭ್ಯಾಸಮಾಡುವರು. ಈ ಯೋಗಾಂಗಗಳಿಂದ ಮೊದಲು ಕಾಮಕ್ರೋಧಾದಿಶತ್ರುಗಳನ್ನು ನಾಶಮಾಡಿ, ಆಮೇಲೆ ಜೀವಬ್ರಹ್ಮರ ಅಭೇದರೂಪವಾದ ಅಖಂಡವೃತ್ತಿಯನ್ನು ಪಡೆಯುವರು. ॥೪-೫॥

ಪರರಿಗೆ ವಾಕ್ಕಾಯಭಾವಗಳಿಂದ ಮೂರು ಬಗೆಯಾಗಿರುವ ತೊಂದರೆಯನ್ನು ಕೊಡದಿರುದೇ ಅಹಿಂಸೆಯು. ನಿಜವಾದ ಮಾತನಾಡುವುದೇ ಸತ್ಯವು. ಕಳ್ಳತನ ಮೋಸಗಳನ್ನು ಮಾಡದಿರುವುದೇ ಅಸ್ತೇಯವು. ದರ್ಶನ, ಸ್ಪರ್ಶನ, ಕೇಳಿ, ಕೀರ್ತನ, ಗುಟ್ಟಾದ ಮಾತನಾಡುವುದು, ಸಂಕಲ್ಪ, ಅಧ್ಯವಸಾಯ, ಕ್ರಿಯಾನಿರ್ವೃತ್ತಿ ಎಂಬ ಎಂಟುಬಗೆಯ ಸ್ತ್ರೀಪುರುಷರ ಸಂಬಂಧವಿಲ್ಲದಿರುವುದೇ ಬ್ರಹ್ಮಚರ್ಯೆಯು. ಪ್ರಾಣಿಗಳಲ್ಲಿ ಕರುಣೆಯೇ ದಯೆಯು. ನಡೆನುಡಿಭಾವಗಳಲ್ಲಿ ಒಂದೇವಿಧವಾದ ಸರಳತೆಯೇ, ಆರ್ಜವವು. ಅಪಮಾನಾದಿಗಳನ್ನು ಸಹಿಸುವುದೇ ಕ್ಷಮೆಯು. ತನ್ನ ಸರ್ವಸ್ವವೂ ಹೋದರೂ ಧೈರ್ಯದಿಂದಿರುವುದೇ ಧೃತಿಯು. ತನ್ನ ಹೊಟ್ಟೆಯಲ್ಲಿನ ಅನ್ನಕೋಶದಲ್ಲಿ ಎರಡು ಭಾಗವನ್ನು ಅನ್ನದಿಂದಲೂ, ಒಂದು ಭಾಗವನ್ನು ನೀರಿನಿಂದಲೂ, ತುಂಬಿಕೊಂಡು, ಉಳಿದ ಒಂದು ಭಾಗವನ್ನು ಗಾಳಿಯ ಸಂಚಾರಕ್ಕಾಗಿ ಬಿಟ್ಟಿರುವಂತೆ ಅಲ್ಪಾಹಾರವನ್ನು ತೆಗೆದುಕೊಳ್ಳುವುದೇ ಮಿತಾಹಾರವು. ಹೊರಗಿನ ಮತ್ತು ಒಳಗಿನ ಅವಯುವಗಳ ಶುದ್ಧಿಯೇ ಶೌಚವು. ಈ ಹತ್ತೂ ಯಮವೆಂಬ ಹೆಸರನ್ನು ಹೊಂದಿದ ಯೋಗಾಂಗವು. ॥೬॥

ತಪಸ್ಸಂತೋಷ ಆಸ್ತಿಕ್ಯಂ ದಾನಂ ದೇವಸ್ಯ ಪೂಜನಂ ।
ಸಿದ್ಧಾಂತಶ್ರವಣಂ ಚೈವ ಹ್ರೀರ್ಮತಿಶ್ಚ ಜಪೋ ಹುತಂ ॥೭॥

ದಶೈತೇ ನಿಯಮಾಃ ಪ್ರೋಕ್ತಾ ಮಯಾ ಪರ್ವತನಾಯಕ ।
ಪದ್ಮಾಸನಂ ಸ್ವಸ್ತಿಕಂ ಚ ಭದ್ರಂ ವಜ್ರಾಸನಂ ತಥಾ ॥೮॥

ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನಪಂಚಕಂ ।
ಊರ್ವೋರುಪರಿ ವಿನ್ಯಸ್ಯ ಸಮ್ಯಕ್ಪಾದತಲೇ ಶುಭೇ ॥೯॥

ಅಂಗುಷ್ಠೌ ಚ ನಿಬಧ್ನೀಯಾದ್ಧಸ್ತಾಭ್ಯಾಂ ವ್ಯುತ್ಕ್ರಮಾತ್ತತಃ ।
ಪದ್ಮಾಸನಮಿತಿ ಪ್ರೋಕ್ತಂ ಯೋಗಿನಾಂ ಹೃದಯಂಗಮಂ ॥೧೦॥

---

ತಪಸ್ಸೆಂದರೆ ವೇದವು ವಿಧಿಸಿದ ಸಂಧ್ಯಾದಿಕರ್ಮಗಳನ್ನು ಅನುಷ್ಠಾನ ಮಾಡುವುದು. ಸಂತೋಷವೆಂದರೆ ತನಗೆಷ್ಟು ದೊರೆಯುವುದೋ ಅದರಿಂದಲೇ ತೃಪ್ತಿಪಡುವುದು. ಆಸ್ತಿಕ್ಯವೆಂದರೆ ವೇದ, ದೇವತೆಗಳು, ಬ್ರಾಹ್ಮಣರು, ಗುರುಗಳು ಇವರಲ್ಲಿರುವ ದೃಢನಂಬಿಕೆ. ತನ್ನ ಶಕ್ತಿಯನ್ನು ಮೀರದೆ ಯೋಗ್ಯರಾದವರಿಗೆ ದ್ರವ್ಯವನ್ನು ಕೊಡುವುದೇ ದಾನವು. ದೇವರ ಎಂದರೆ ಪರಮೇಶ್ವರನ ಪೂಜೆ, ವೇದಾಂತ ಶ್ರವಣ, ಕೆಟ್ಟಕೆಲಸಮಾಡುವುದರಲ್ಲಿ ನಾಚಿಕೆ, ಸತ್ಕರ್ಮಸಚ್ಛಾಸ್ತ್ರಗಳ ತಿಳಿವಳಿಕೆಯೇ ಮತಿಯು. ಗಾಯತ್ರೀಪ್ರಣವ ಭುವನೇಶ್ವರೀಮಂತ್ರ ಇವುಗಳ ಆವೃತ್ತಿಯೇ ಜಪವು. ಪ್ರತಿದಿನವೂ ಅಗ್ನಿಯಲ್ಲಿ ಹೋಮಮಾಡುವುದು, ಈ ಹತ್ತೂ ನಿಯಮವೆಂಬ ಯೋಗಾಂಗವು. ॥೭॥

ಪದ್ಮಾಸನ, ಸ್ವಸ್ತಿಕಾಸನ, ಭದ್ರಾಸನ, ವಜ್ರಾಸನ, ವೀರಾಸನ ಎಂಬ ಐದು ಪ್ರಸಿದ್ಧವಾದ ಮುಖ್ಯವಾದ ಆಸನಗಳು. ॥೮॥

ಎರಡು ಅಂಗಾಲುಗಳನ್ನೂ ತೊಡೆಗಳ ಮೇಲೆ ಕಾಣುವಂತೆ ಇಟ್ಟುಕೊಂಡು, ಹಿಂಭಾಗದಿಂದ ಎರಡು ಕೈಗಳನ್ನೂ ವ್ಯುತ್ಕ್ರಮವೆಂದರೆ ಬಲಗೈಯನ್ನು ಎಡಕ್ಕೂ, ಎಡಗೈಯನ್ನು ಬಲಕ್ಕೂ ತಂದು, ಬಲಗೈಯಿಂದ ಬಲಗಾಲಿನ ಹೆಬ್ಬೆರಳನ್ನೂ, ಎಡಗೈಯಿಂದ ಎಡಗಾಲಿನ ಹೆಬ್ಬೆರಳನ್ನೂ ಹಿಡಿದುಕೊಂಡಿರುವುದು, " ಪದ್ಮಾಸನವು." ಇದು ಯೋಗಿಗಳಿಗೆ ಮನೋಹರವಾಗಿರುವುದು. ॥೯-೧೦॥

ಜಾನೂರ್ವೋರಂತರೇ ಸಮ್ಯಕ್ ಕೃತ್ವಾ ಪಾದತಲೇ ಶುಭೇ ।
ಋಜುಕಾಯೋ ವಿಶೇದ್ಯೋಗೇ ಸ್ವಸ್ತಿಕಂ ತತ್ಪ್ರಚಕ್ಷತೇ ॥೧೧॥

ಸೀವನ್ಯಾಃ ಪಾರ್ಶ್ವಯೋರ್ನ್ಯಸ್ಯ ಗುಲ್ಫಯುಗ್ಮಂ ಸುನಿಶ್ಚಿತಂ ।
ವೃಷಣಾಧಃ ಪಾದಪಾರ್ಷ್ಣೀ ಪಾಣಿಭ್ಯಾಂ ಪರಿಬಂಧಯೇತ್ ॥೧೨॥

ಭದ್ರಾಸನಮಿತಿ ಪ್ರೋಕ್ತಂ ಯೋಗಿಭಿಃ ಪರಿಪೂಜಿತಂ ।
ಊರ್ವೋಃ ಪಾದೌ ಕ್ರಮಾನ್ನ್ಯಸ್ಯ ಜಾನ್ವೋಃ ಪ್ರತ್ಯಙ್ಮುಖಾಂಗುಲೀ॥೧೩॥

ಕರೌ ವಿದಧ್ಯಾದಾಖ್ಯಾತಂ ವಜ್ರಾಸನಮನುತ್ತಮಂ ।
ಏಕಪಾದ ಮಧಃ ಕೃತ್ವಾ ವಿನ್ಯಸ್ಯೋರುಂ ತಥೋತ್ತರೇ ॥೧೪॥
ಋಜುಕಾಯೋ ವಿಶೇದ್ಯೋಗೀ ವೀರಾಸನಮಿತೀರಿತಂ ।

---

ಪಾದಗಳನ್ನು ತೊಡೆಗೂ, ಮಂಡಿಗೂ, ಮಧ್ಯದಲ್ಲಿಟ್ಟುಕೊಂಡು ಶರೀರವನ್ನು ಸರಳವಾಗಿ ಮಾಡಿಕೊಂಡು ಕುಳಿತರೆ ಅದು '' ಸ್ವಸ್ತಿಕಾಸನ ''ವು. ॥೧೧॥

ಅಂಡದ ಕೆಳಗಡೆ ಇರುವ ನಾಡಿಯ ಪಕ್ಕಗಳಲ್ಲಿ ಕಾಲಿನ ಗೆಣ್ಣುಗಳು ಬರುವಂತೆ ಇಟ್ಟು, ವೃಷಣದ ಕೆಳಗಡೆಗೆ ಬಂದಿರುವ ಹಿಮ್ಮಡಿಗಳನ್ನು ಎರಡು ಕೈಗಳಿಂದಲೂ ಹಿಡಿದುಕೊಂಡರೆ ಯೋಗಿಗಳು ಕೊಂಡಾಡುವ '' ಭದ್ರಾಸನ ''ವಾಗುವುದು. ॥೧೨॥

ತೊಡೆಗಳ ಮೇಲೆ ಪಾದಗಳನ್ನಿಟ್ಟು ಮಂಡಿಗಳ ಮೇಲೆ ಬೆರಳುಗಳು ಪಶ್ಚಿಮಾಭಿಮುಖವಾಗಿರುವಂತೆ ಕೈಗಳನ್ನಿಟ್ಟುಕೊಂಡರೆ ಶ್ರೇಷ್ಠವಾದ " ವಜ್ರಾಸನ ''ವಾಗುವುದು. ॥೧೩॥

ಒಂದು ಹೆಜ್ಜೆಯನ್ನು ಕೆಳಗೆ ಊರಿಕೊಂಡು ಮತ್ತೊಂದು ತೊಡೆಯು ಆ ಪಾದದ ಉತ್ತರಕ್ಕೆ ಬರುವಂತೆ ಕುಳಿತು ಶರೀರವನ್ನು ಸರಳವಾಗಿಟ್ಟುಕೊಂಡಿದ್ದರೆ ಅದು " ವೀರಾಸನ "ವಾಗುವುದು. ಈ ಆಸನಗಳನ್ನು ಗುರುಮುಖದಿಂದ ತಿಳಿದು ಅಭ್ಯಾಸಮಾಡಬೇಕು. ॥೧೪॥

ಇಡಯಾ ಕರ್ಷಯೇದ್ವಾಯುಂ ಬಾಹ್ಯಂ ಷೋಡಶ ಮಾತ್ರಯಾ ॥೧೫॥

ಧಾರಯೇತ್ಪೂರಿತಂ ಯೋಗೀ ಚತುಃಷಷ್ಟ್ಯಾ ತು ಮಾತ್ರಯಾ ।
ಸುಷುಮ್ನಾ ಮಧ್ಯಗಂ ಸಮ್ಯಗ್ದ್ವಾತ್ರಿಂಶನ್ಮಾತ್ರಯಾ ಶನೈಃ ॥೧೬॥

ನಾಡ್ಯಾ ಪಿಂಗಳಯಾ ಚೈವ ರೇಚಯೇದ್ಯೋಗವಿತ್ತಮಃ ।
ಪ್ರಾಣಾಯಾಮಮಿಮಂ ಪ್ರಾಹುರ್ಯೋಗಶಾಸ್ತ್ರವಿಶಾರದಾಃ ॥೧೭॥

ಭೂಯೋ ಭೂಯಃ ಕ್ರಮಾತ್ತಸ್ಯ ಬಾಹ್ಯಮೇವಂ ಸಮಾಚರೇತ್ ।
ಮಾತ್ರಾವೃದ್ಧಿಃ ಕ್ರಮೇಣೈವ ಸಮ್ಯಗ್ದ್ವಾದಶ ಷೋಡಶ ॥೧೮॥

ಜಪಧ್ಯಾನಾದಿಭಿಃ ಸಾರ್ಧಂ ಸಗರ್ಭಂ ತಂ ವಿದುರ್ಬುಧಾಃ ।
ತದಪೇತಂ ವಿಗರ್ಭಂ ಚ ಪ್ರಾಣಾಯಾಮಂ ಪರೇ ವಿದುಃ ॥೧೯॥

---

ಎಡಭಾಗದ ಮೂಗಿನಿಂದ ಹದಿನಾರು ಪ್ರಣವವನ್ನುಚ್ಚರಿಸುವಷ್ಟುಕಾಲದ ವರೆಗೆ ಗಾಳಿಯನ್ನು ಎಳೆದುಕೊಂಡು, ಅರವತ್ತನಾಲ್ಕು ಪ್ರಣವವನ್ನು ಉಚ್ಚರಿಸು ವಷ್ಟುಕಾಲದವರೆಗೆ ಕುಂಭಕವನ್ನು ಮಾಡಿ, ಎಂದರೆ ವಾಯುವನ್ನು ಶರೀರದಲ್ಲಿ ತಡೆದಿದ್ದು, ಮತ್ತೆ ಮೂವತ್ತೆರಡು ಪ್ರಣವೋಚ್ಚಾರಣಪರ್ಯಂತವಾದ ಕಾಲದವರೆಗೆ ಬಲಭಾಗದ ಮೂಗಿನಿಂದ ವಾಯುವನ್ನು ಹೊರಕ್ಕೆ ಬಿಡಬೇಕು. ಯೋಗಶಾಸ್ತ್ರವನ್ನು ಬಲ್ಲವರು ಇದನ್ನು ಪ್ರಾಣಾಯಾಮವೆಂದು ಕರೆಯುವರು. ||೧೫-೧೬||

ಮತ್ತೆ ಮತ್ತೆ ಇಡಾ ಪಿಂಗಳಾದಿ ಕ್ರಮದಿಂದಲೂ, ಪಿಂಗಳೇಡಾಕ್ರಮದಿಂದಲೂ ಹೊರಗಿನ ವಾಯುವನ್ನು ಎಳೆದುಬಿಡುತ್ತಿರಬೇಕು. ಅಭ್ಯಾಸವು ಹೆಚ್ಚಿದ ಹಾಗೆಲ್ಲ ಮಾತ್ರಾಕಾಲಗಳನ್ನು ಹೆಚ್ಚು ಮಾಡಬಹುದು. ಹಾಗೆಯೇ ಪ್ರಾಣಾಯಾಮವನ್ನೂ ಮೊದಲು ಹನ್ನೆರಡು ತರುವಾಯ ಹದಿನಾರು ಹೀಗೆ ಕ್ರಮವಾಗಿ ಹೆಚ್ಚುಮಾಡಿ ಕೊಂಡು ಹೋಗಬಹುದು. ||೧೭-೧೮||

ತನ್ನಿಷ್ಟವಾದ ಮಂತ್ರದ ಜಪ, ಅದರ ಅರ್ಥದ ಧ್ಯಾನ ಇವುಗಳಿಂದ ಕೂಡಿದ ಪ್ರಾಣಾಯಾಮವನ್ನು ಸಗರ್ಭವೆಂದೂ, ಜಪಧ್ಯಾನವಿಲ್ಲದುದನ್ನು ವಿಗರ್ಭ ವೆಂದೂ ಕರೆವರು. ||೧೯||

ಕ್ರಮಾದಭ್ಯಸ್ಯತಃ ಪುಂಸೋ ದೇಹೇ ಸ್ವೇದೋದ್ಗಮೋಽಧಮಃ ।
ಮಧ್ಯಮಃ ಕಂಪಸಂಯುಕ್ತೋ ಭೂಮಿತ್ಯಾಗಃ ಪರೋ ಮತಃ॥೨೦॥

ಉತ್ತಮಸ್ಯ ಗುಣಾವಾಪ್ತಿರ್ಯಾವಚ್ಛೀಲನಮಿಷ್ಯತೇ ।
ಇಂದ್ರಿಯಾಣಾಂ ವಿಚರತಾಂ ವಿಷಯೇಷು ನಿರರ್ಗಳಂ ॥೨೧॥

ಬಲಾದಾಹರಣಂ ತೇಭ್ಯಃ ಪತ್ಯಾಹಾರೋಽಭಿಧೀಯತೇ ।
ಅಂಗುಷ್ಠಗುಲ್ಫಜಾನೂರು ಮೂಲಾಧಾರಲಿಂಗನಾಭಿಷು ॥೨೨॥

ಹೃದ್ಗ್ರೀವಾ ಕಂಠದೇಶೇಷು ಲಂಬಿಕಾಯಾಂ ತತೋಽನಸಿ ।
ಭ್ರೂಮಧ್ಯೇ ಮಸ್ತಕೇ ಮೂರ್ಧ್ನಿ ದ್ವಾದಶಾಂತೇ ಯಥಾವಿಧಿ॥೨೩॥
ಧಾರಣಂ ಪ್ರಾಣಮರುತೋ ಧಾರಣೇತಿ ನಿಗದ್ಯತೇ ।

---

ಪ್ರಾಣಾಯಾಮವನ್ನು ಕ್ರಮವಾಗಿ ಅಭ್ಯಾಸಮಾಡುವ ಮನುಷ್ಯನ ಶರೀರದಲ್ಲಿ ಬೆವರು ಹುಟ್ಟಿದರೆ ಅದು ಅಧಮಪ್ರಾಣಾಯಾಮವು. ನಡುಕವುಂಟಾದರೆ ಮಧ್ಯಮಪ್ರಾಣಾಯಾಮವು. ಭೂಮಿಯನ್ನು ಬಿಟ್ಟು ಆಸನದ ಮೇಲೆಯೇ ನಿಂತಿರುವುದಾದರೆ ಅದು ಉತ್ತಮ ಪ್ರಾಣಾಯಾಮವು. ॥೨೦॥

ಉತ್ತಮ ಪ್ರಾಣಾಯಾಮವನ್ನು ಸಿದ್ಧಿಯಾಗುವ ವರೆಗೂ ಅಭ್ಯಾಸಮಾಡಿದರೆ, "ವಪುಃ ಪ್ರಕಾಶೋ ಜ್ವಲನಸ್ಯ ದೀಪ್ತಿರಲ್ಪಾಶಿತಾ ಚೈವ ತನೋರ್ಲಘುತ್ವಂ" ಎಂದು ಹೇಳಿರುವಂತೆ ಈ ಗುಣಗಳ ವೃದ್ಧಿಯಾಗುತ್ತದೆ. ಇಂದ್ರಿಯಗಳು ಸ್ವಭಾವವಾಗಿ ವಿಷಯಗಳ ಕಡೆಗೆ ತಡೆಯಿಲ್ಲದೆ ಹೋಗುತ್ತಿರುವುದನ್ನು ತಪ್ಪಿಸಿ ಇಂದ್ರಿಯಗಳನ್ನು ಬಲಾತ್ಕಾರಪೂರ್ವಕವಾಗಿಯಾದರೂ ವಿಷಯಗಳ ದೆಸೆಯಿಂದ ಹಿಂದಿರುಗಿಸುವುದು ಪ್ರತ್ಯಾಹಾರವೆನಿಸುವುದು. ॥೨೧॥

ಪಾದದ ಹೆಬ್ಬೆರಳು ಮೊದಲುಮಾಡಿಕೊಂಡು ಮೂಗಿನಪರ್ಯಂತವಾಗಿ ಹನ್ನೆರಡು ಸ್ಥಾನಗಳಲ್ಲಿ ಪ್ರಾಣವಾಯುವನ್ನು ನಿಲ್ಲಿಸುವುದನ್ನು ಅಭ್ಯಾಸಮಾಡಿದ ಮೇಲೆ ಭ್ರೂಮಧ್ಯದಲ್ಲಿಯೂ ತಲೆಯಲ್ಲಿಯೂ ಬ್ರಹ್ಮರಂಧ್ರದಲ್ಲಿಯೂ ಪ್ರಾಣವಾಯುವನ್ನು ನಿಲ್ಲಿಸುವುದು. ಧಾರಣವೆಂಬ ಯೋಗಾಂಗವಾಗುವುದು. ಇಂತಹ ವಾಯುವು ಯೋಗಿಯ ಸ್ವಾಧೀನದಲ್ಲಿರುವುದು. ಈ ವಾಯುಜಯವು ಇಷ್ಟಾರ್ಥಸಿದ್ಧಿಗೆ ತುಂಬ ಅನುಕೂಲವಾದುದು. ॥೨೨-೨೩॥

ಸಮಾಹಿತೇನ ಮನಸಾ ಚೈತನ್ಯಾಂತರವರ್ತಿನಾ ॥೨೪॥

ಆತ್ಮನ್ಯಭೀಷ್ಟದೇವಾನಾಂ ಧ್ಯಾನಂ ಧ್ಯಾನಮಿಹೋಚ್ಯತೇ ।
ಸಮತ್ವ ಭಾವನಾ ನಿತ್ಯಂ ಜೀವಾತ್ಮ ಪರಮಾತ್ಮನೋಃ ॥೨೫॥

ಸಮಾಧಿಮಾಹುರ್ಮುನಯಃ ಪ್ರೋಕ್ತಮಷ್ಟಾಂಗಲಕ್ಷಣಂ ।
ಇದಾನೀಂ ಕಥಯೇ ತೇಽಹಂ ಮಂತ್ರಯೋಗಮನುತ್ತಮಂ ॥೨೬॥

ವಿಶ್ವಂ ಶರೀರಮಿತ್ಯುಕ್ತಂ ಪಂಚಭೂತಾತ್ಮಕಂ ನಗ ।
ಚಂದ್ರಸೂರ್ಯಾಗ್ನಿತೇಜೋಭಿಃ ಜೀವಬ್ರಹ್ಮೈಕ್ಯರೂಪಕಂ ॥೨೭॥

---

ಆತ್ಮಚೈತನ್ಯದ ಕಡೆಗೆ ಅಭಿಮುಖವಾಗಿರುವ ಶಾಂತವಾದ ಶುದ್ಧವಾದ ಮನಸ್ಸಿನಿಂದ ತನಗಿಷ್ಟವಾದ ದೇವತಾಮೂರ್ತಿಯ ಧ್ಯಾನವನ್ನೂ ಮಾಡುವುದು ಧ್ಯಾನವೆಂಬ ಯೋಗಾಂಗವಾಗುವುದು. ॥೨೪॥

ಯಾವಾಗಲೂ ಜೀವಾತ್ಮಪರಮಾತ್ಮರಿಗೆ ಸಚ್ಚಿದಾನಂದರೂಪದಲ್ಲಿರುವ ಏಕತ್ವದ ಭಾವನೆಯೇ ಸಮತ್ವಭಾವನೆಯು. ಇದನ್ನೇ ಮುನಿಗಳು ಸಮಾಧಿಯೆಂದು ಹೇಳುವರು. ಇದು ಸಂಪ್ರಜ್ಞಾತ ಸಮಾಧಿಯೆಂದು ಯೋಗಸೂತ್ರ ಮತ್ತು ಭಾಷ್ಯ ಇವುಗಳಲ್ಲಿ ಹೇಳಿರುವರು. ಈ ಎಂಟೂ ಯೋಗಾಂಗಗಳು. ನಿರ್ವಿಕಲ್ಪಸಮಾಧಿ ಯಾದರೋ ಅಂಗಿಯಾಗಿರುವುದು ಎಂದರೆ ಮುಖ್ಯವಾದುದಾಗಿರುವುದು. ಇಲ್ಲಿಗೆ ಅಷ್ಟಾಂಗಯೋಗಲಕ್ಷಣವು ಮುಗಿದುದು. ॥೨೫॥

ಓ ಹಿಮವಂತನೇ, ಈಗ ನಾನು ನಿನಗೆ ಶ್ರೇಷ್ಠವಾದ ಮಂತ್ರಯೋಗವನ್ನು ಹೇಳುವೆನು. ಈ ಶರೀರವೇ ವಿಶ್ವವು ಎಂದರೆ ಬ್ರಹ್ಮಾಂಡವು. ಅದು ಪೃಥಿವ್ಯಾದಿ ಪಂಚಭೂತಸ್ವರೂಪವು. ॥೨೬॥

ಜೀವಬ್ರಹ್ಮರಿಗೆ ಹೇಗೆ ಏಕರೂಪತ್ವವಿರುವುದೋ ಹಾಗೆ ಪಿಂಡಬ್ರಹ್ಮಾಂಡಗಳೂ ಏಕರೂಪವಾಗಿರುವುವು. ಚಂದ್ರಸೂರ್ಯ ಅಗ್ನಿಗಳ ತೇಜಸ್ಸು ಬ್ರಹ್ಮಾಂಡದಲ್ಲಿರುವಂತೆ ಶರೀರದಲ್ಲಿಯೂ ಇರುವುದು. ॥೨೭॥

ತಿಸ್ರಃ ಕೋಟ್ಯಸ್ತದರ್ಧೇನ ಶರೀರೇ ನಾಡಯೋ ಮತಾಃ ।
ತಾಸು ಮುಖ್ಯಾ ದಶ ಪ್ರೋಕ್ತಾಸ್ತಾಭ್ಯಸ್ತಿಸ್ರೋ ವ್ಯವಸ್ಥಿತಾಃ ॥೨೮॥

ಪ್ರಧಾನಾ ಮೇರುದಂಡೇಽತ್ರ ಚಂದ್ರಸೂರ್ಯಾಗ್ನಿ ರೂಪಿಣೀ ।
ಇಡಾ ವಾಮೇ ಸ್ಥಿತಾ ನಾಡೀ ಶುಭ್ರಾ ತು ಚಂದ್ರರೂಪಿಣೀ ॥೨೯॥

ಶಕ್ತಿರೂಪಾ ತು ಸಾ ನಾಡೀ ಸಾಕ್ಷಾದಮೃತವಿಗ್ರಹಾ ।
ದಕ್ಷಿಣೇ ಯಾ ಪಿಂಗಳಾಖ್ಯಾ ಪುಂ ರೂಪಾ ಸೂರ್ಯವಿಗ್ರಹಾ ॥೩೦॥

ಸರ್ವತೇಜೋ ಮಯೀ ಸಾ ತು ಸುಷುಮ್ನಾ ವಹ್ನಿರೂಪಿಣೀ ।
ತಸ್ಯಾ ಮಧ್ಯೇ ವಿಚಿತ್ರಾಖ್ಯೇ ಇಚ್ಛಾಜ್ಞಾನಕ್ರಿಯಾತ್ಮಕಂ ॥೩೧॥

ಮಧ್ಯೇ ಸ್ವಯಂಭೂಲಿಂಗಂ ತು ಕೋಟಿಸೂರ್ಯಸಮಪ್ರಭಂ ।
ತದೂರ್ಧ್ವಂ ಮಾಯಾಬೀಜಂ ತು ಹರಾತ್ಮಾ ಬಿಂದುನಾದಕಂ ॥೩೨॥

---

ಈ ಶರೀರದಲ್ಲಿ ಮೂರೂವರೆ ಕೋಟಿ ನಾಡಿಗಳಿರುವುವು. ಅವುಗಳಲ್ಲಿ ಮುಖ್ಯವಾದುವುಗಳು ಹತ್ತು. ಆ ಹತ್ತರಲ್ಲಿ ಮೂರು ನಾಡಿಗಳು ಮಾತ್ರ ಅತ್ಯಂತ ಮುಖ್ಯವಾದುವುಗಳು. ಮತ್ತು ಅವು ಚಂದ್ರಸೂರ್ಯಅಗ್ನಿರೂಪವಾದವುಗಳು. ॥೨೮॥

ಮುಖ್ಯವಾದ ಸುಷುಮ್ನಾನಾಡಿಯು ಮೂಲಾಧಾರದಿಂದ ಹೊರಟು ಬೆನ್ನು ಮೂಳೆಯ ಮಾರ್ಗವಾಗಿ ಬ್ರಹ್ಮರಂಧ್ರಪರ್ಯಂತವಾಗಿರುವುದು. ಅದರ ಎಡಭಾಗದಲ್ಲಿ ಚಂದ್ರರೂಪವಾದ ಪರಿಶುದ್ಧವಾದ ಅಮೃತಸ್ವರೂಪವಾದ ಶಕ್ತಿದೇವತಾಸ್ವರೂಪವಾದ ಇಡಾನಾಡಿಯು ಇರುವುದು. ॥೨೯॥

ಬಲಭಾಗದಲ್ಲಿ ಪುರುಷಾಕಾರವಾದ ಸೂರ್ಯರೂಪವಾದ ಪಿಂಗಳಾ ಎಂಬ ನಾಡಿಯು ಇರುವುದು. ನಡುವೆ ಇರುವ ಸುಷುಮ್ನಾ ನಾಡಿಯು ಅಗ್ನಿರೂಪವಾಗಿ ಸಮಸ್ತಕಾಂತಿಗಳಿಂದಲೂ ತುಂಬಿರುವುದು. ಆ ಸುಷುಮ್ನಾನಾಡಿಯ ಮಧ್ಯದಲ್ಲಿ ಮೂಲಪ್ರದೇಶದಲ್ಲಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಸ್ವರೂಪವಾದ ಸೂಕ್ಷ್ಮವಾದ ಚಿತ್ರಾ ಎಂಬ ನಾಡಿಯೂ ಇರುವುದು. ॥೩೦-೩೧॥

ಆ ಚಿತ್ರಾ ನಾಡಿಯ ಮಧ್ಯದಲ್ಲಿ ಅನೇಕ ಸೂರ್ಯರ ಕಾಂತಿಯಂತೆ ಪ್ರಕಾಶಿಸುವ ಆತ್ಮ ತೇಜಸ್ಸೂ ಅದರ ಮೇಲೆ ಮಾಯಾಬೀಜವೂ ಇರುವುದು. ಆ ಮಾಯಾಬೀಜವು ಹಕಾರ ರಕಾರ ಈಕಾರ ಬಿಂದು ನಾದಾತ್ಮಕವಾದ ಹ್ರೀಂಕಾರವು ॥೩೨॥

ತದೂರ್ಧ್ವಂ ತು ಶಿಖಾ ಕಾರಾ ಕುಂಡಲೀ ರಕ್ತವಿಗ್ರಹಾ ।
ದೇವ್ಯಾತ್ಮಿಕಾ ತು ಸಾ ಪ್ರೋಕ್ತಾ ಮದಭಿನ್ನಾ ನಗಾಧಿಪ ॥೩೩॥

ತದ್ಬಾಹ್ಯೇ ಹೇಮರೂಪಾಭಂ ವಾದಿ ಸಾಂತ ಚತುರ್ದಲಂ ।
ದ್ರುತಹೇಮ ಸಮಪ್ರಖ್ಯಂ ಪದ್ಮಂ ತತ್ರ ವಿಚಿಂತಯೇತ್ ॥೩೪॥

ತದೂರ್ಧ್ವಮನಲಪ್ರಖ್ಯಂ ಷಡ್ದಳಂ ಹೀರಕಪ್ರಭಂ ।
ಬಾದಿ ಲಾಂತ ಷಡ್ವರ್ಣೇನ ಸ್ವಾಧಿಷ್ಠಾನಮನುತ್ತಮಂ ॥೩೫॥

ಮೂಲಮಾಧಾರಷಟ್ಕೋಣಂ ಮೂಲಾಧಾರಂ ತತೋ ವಿದುಃ ।
ಸ್ವಶಬ್ದೇನ ಪರಂ ಲಿಂಗಂ ಸ್ವಾಧಿಷ್ಠಾನಂ ತತೋ ವಿದುಃ ॥೩೬॥

---

ಓ ಪರ್ವತರಾಜನೇ, ಆ ಮಾಯಾಬೀಜದ ಮೇಲ್ಗಡೆಯಲ್ಲಿ ದೀಪದ ಕುಡಿಯಂತೆ ಕೆಂಪಾದ ಕುಂಡಲಿನೀ ಶಕ್ತಿಯು ಇರುವುದು. ಆ ಶಕ್ತಿಯು ನನಗಿಂತ ಬೇರೆಯಾದುದಲ್ಲ. ಅದೇ ದೇವೀಸ್ವರೂಪವೆಂದು ತಿಳಿಯಬೇಕು. ||೩೩||

ಆ ಕುಂಡಲಿನೀಶಕ್ತಿಯು ಹೊರಭಾಗದಲ್ಲಿ ಚಿನ್ನದ ಬಣ್ಣದಂತೆ ಹೊಳೆಯುವ, ವ-ಶ-ಷ-ಸ ಎಂಬ ನಾಲ್ಕು ಅಕ್ಷರಗಳಿಂದ ಕೂಡಿದ ನಾಲ್ಕು ದಳಗಳುಳ್ಳ, ಕರಗಿದ ಚಿನ್ನದ ಕಾಂತಿಯಂತೆ ಶೋಭಿಸುವ, ಕಮಲವಿರುವುದೆಂದು ಧ್ಯಾನಿಸಬೇಕು. ಇದೇ ಮೂಲಾಧಾರಚಕ್ರವು. ಪಂಚೋಪನಿಷತ್ತಿನ ೪೯ನೆಯ ಪುಟ ನೋಡಿ. ||೩೪||

ಅಲ್ಲಿಂದ ಮೇಲಕ್ಕೆ ಬೆಂಕಿಯಂತೆ ಹೊಳೆಯುವ, ಬಕಾರಾದಿ ಲಕಾರಾಂತವಾದ ಆರು ಅಕ್ಷರಗಳಿಂದ ಕೂಡಿದ, ಹೀರಮಣಿಯ ಕಾಂತಿಯಂತೆ ಪ್ರಕಾಶಿಸುವ, ಸ್ವಾಧಿಷ್ಠಾನವೆಂಬ ಚಕ್ರವಿರುವುದು. ಪಂಚೋಪನಿಷತ್ ಪುಟ ೫೦ ನೋಡಬೇಕು. ||೩೫||

ಸಕಲಮಂತ್ರಶಾಸ್ತ್ರಕ್ಕೂ ಆಶ್ರಯವಾದ ಷಟ್ಕೋಣಚಕ್ರಕ್ಕೂ ಕಾರಣವಾದುದರಿಂದ ಮೇಲೇವಿವರಿಸಿದ ಚತುರ್ದಳ ಪದ್ಮಕ್ಕೆ ಮೂಲಾಧಾರ ಚಕ್ರವೆಂದೂ, ಸ್ವಶಬ್ದಕ್ಕೆ ಪರಮಾತ್ಮನೇ ಅರ್ಥವಾದುದರಿಂದ, ಆ ಪರಮಾತ್ಮನು ಪ್ರಕಾಶಿಸುತ್ತಿರುವ ಷಡ್ದಳಚಕ್ರಕ್ಕೆ ಸ್ವಾಧಿಷ್ಠಾನ ಚಕ್ರವೆಂದೂ, ಹೆಸರಾಗಿರುವುದು. ||೩೬||

ತದೂರ್ಧ್ವಂ ನಾಭಿದೇಶೇ ತು ಮಣಿಪೂರಂ ಮಹಾಪ್ರಭಂ ।
ಮೇಘಾಭಂ ವಿದ್ಯುದಾಭಂ ಚ ಬಹುತೇಜೋಮಯಂ ತತಃ ॥೩೭॥

ಮಣಿವದ್ಭಿನ್ನಂ ತತ್ಪದ್ಮಂ ಮಣಿಪದ್ಮಂ ತಥೋಚ್ಯತೇ ।
ದಶಭಿಶ್ಚ ದಳೈರ್ಯುಕ್ತಂ ಡಾದಿಫಾಂತಾಕ್ಷರಾನ್ವಿತಂ ॥೩೮॥

ವಿಷ್ಣುನಾಽಧಿಷ್ಠಿತಂ ಪದ್ಮಂ ವಿಷ್ಣ್ವಾಲೋಕನಕಾರಣಂ ।
ತದೂರ್ಧ್ವೇಽನಾಹತಂ ಪದ್ಮಮುದ್ಯದಾದಿತ್ಯಸನ್ನಿಭಂ ॥೩೯॥

ಕಾದಿ ಠಾಂತದಳೈರರ್ಕಪತ್ರೈಶ್ಚ ಸಮಧಿಷ್ಠಿತಂ ।
ತನ್ಮಧ್ಯೇ ಬಾಣಲಿಂಗಂ ತು ಸೂರ್ಯಾಯುತಸಮಪ್ರಭಂ ॥೪೦॥

ಶಬ್ದಬ್ರಹ್ಮಮಯಂ ಶಬ್ದಾನಾಹತಂ ತತ್ರ ದೃಶ್ಯತೇ ।
ಅನಾಹತಾಖ್ಯಂ ತತ್ಪದ್ಮಂ ಮುನಿಭಿಃ ಪರಿಕೀರ್ತಿತಂ ॥೪೧॥
ಆನಂದಸದನಂ ತತ್ತು ಪುರುಷಾಧಿಷ್ಠಿತಂ ಪರಂ ।

---

ಅಲ್ಲಿಂದ ಮೇಲಕ್ಕೆ ಹೊಕ್ಕುಳಿನ ಪ್ರದೇಶದಲ್ಲಿ ವಿಶೇಷ ಕಾಂತಿಯಿಂದ ಕೂಡಿ ಮಣಿಪೂರವೆಂಬ ಚಕ್ರವಿರುವುದು. ಅದು ಮೇಘದಂತೆಯೂ, ಮಿಂಚಿನಂತೆಯೂ ಹೊಳೆಯುತ್ತಿರುವುದು. ॥೩೭॥

ಮಣಿಯಂತೆ ವಿಕಸಿತವಾಗಿರುವುದರಿಂದ ಈ ಸ್ಥಾನಕ್ಕೆ ಮಣಿಪದ್ಮವೆಂದು ಹೆಸರಾದುದು. ಇದು ಡಕಾರಾದಿ ಫಕಾರಾಂತವಾದ ಹತ್ತು ಅಕ್ಷರಗಳಿಂದ ಕೂಡಿದ ಹತ್ತು ದಳಗಳುಳ್ಳದ್ದಾಗಿರುವುದು. ॥೩೮॥

ಆ ಮಣಿಪೂರಚಕ್ರವು ವಿಷ್ಣುವಿಗೆ ಆಶ್ರಯವಾಗಿರುವುದರಿಂದ ಅಲ್ಲಿ ವಿಷ್ಣುವನ್ನು ಪ್ರತ್ಯಕ್ಷವಾಗಿ ಕಾಣಬಹುದು. ॥೩೮॥

ಅಲ್ಲಿಂದಮೇಲಕ್ಕೆ ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಕೂಡಿದ ಅನಾಹತವೆಂಬ ಚಕ್ರವಿರುವುದು. ಅದು ಕಕಾರಾದಿ ಠಕಾರಾಂತವಾದ ಹನ್ನೆರೆಡು ಅಕ್ಷರಗಳಿಂದ ಕೂಡಿದ ಹನ್ನೆರಡು ದಳಗಳುಳ್ಳದ್ದಾಗಿರುವುದು. ॥೩೯॥

ಆ ಅನಾಹತಚಕ್ರದ ನಡುವೆ ಹತ್ತುಸಾವಿರ ಸೂರ್ಯರಿಗೆ ಸಮಾನವಾದ ಕಾಂತಿಯಿಂದ ಕೂಡಿದ ಬಾಣಲಿಂಗವಿದೆ. ತಾಡನವಿಲ್ಲದೆ ಉಂಟಾಗುವ ಶಬ್ದಕ್ಕೆ ಅನಾಹತವೆಂದು ಹೆಸರು ಇರುವುದು. ಅಂತಹ ಶಬ್ದವು ಅಲ್ಲಿ ಉಂಟಾಗುತ್ತಿರುವುದ

ತದೂರ್ಧ್ವಂ ತು ವಿಶುದ್ಧಾಖ್ಯಂ ದಳಷೋಡಶಪಂಕಜಂ ॥೪೨॥

ಸ್ವರೈಷ್ಷೋಡಶಭಿರ್ಯುಕ್ತಂ ಧೂಮ್ರವರ್ಣಂ ಮಹಾಪ್ರಭಂ ।
ವಿಶುದ್ಧಂ ತನುತೇ ಯಸ್ಮಾಜ್ಜೀವಸ್ಯ ಹಂಸಲೋಕನಾತ್ ॥೪೩॥

ವಿಶುದ್ಧಂ ಪದ್ಮಮಾಖ್ಯಾತಮಾಕಾಶಾಖ್ಯಂ ಮಹಾದ್ಭುತಂ ।
ಆಜ್ಞಾಚಕ್ರಂ ತದೂರ್ಧ್ವೇ ತು ಆತ್ಮನಾಽಧಿಷ್ಠಿತಂ ಪರಂ ॥೪೪॥

ಆಜ್ಞಾಸಂಕ್ರಮಣಂ ತತ್ರ ತೇನಾಜ್ಞೇತಿ ಪ್ರಕೀರ್ತಿತಂ ।
ದ್ವಿದಳಂ ಹಕ್ಷಸಂಯುಕ್ತಂ ಪದ್ಮಂ ತತ್ಸುಮನೋಹರಂ ॥೪೫॥

---

ರಿಂದ, ಶಬ್ದ ಬ್ರಹ್ಮಸ್ವರೂಪವಾದ ಮಧ್ಯಮವಾಣೀಪ್ರದೇಶವಾದ ಆಸ್ಥಾನವನ್ನು ಅನಾಹತಪದ್ಮವೆಂದು ಕರೆಯುವರು. ಅದು ಆನಂದಕ್ಕೆ ಮನೆಯಾಗಿ ರುದ್ರನಿಗೆ ಆಶ್ರಯಸ್ಥಾನವಾಗಿರುವುದು. ಪಂಚೋಪನಿಷತ್ ಪುಟ ೫೦ ನೋಡಿ. ||೪೦-೪೧||

ಅಲ್ಲಿಂದ ಮೇಲಕ್ಕೆ ಹದಿನಾರು ಸ್ವರಾಕ್ಷರಗಳಿಂದ ಕೂಡಿದ ಹದಿನಾರು ದಳಗಳುಳ್ಳ ವಿಶುದ್ಧವೆಂಬ ಚಕ್ರವಿರುವುದು. ಅದು ಬೂದುಬಣ್ಣವಾಗಿ ಮಹಾಕಾಂತಿಯಿಂದ ಕೂಡಿರುವುದು, ಅಲ್ಲಿ ಜೀವನು ಪರಮಾತ್ಮನನ್ನು ತಿಳಿದು ಶುದ್ಧನಾಗುವುದರಿಂದ ವಿಶುದ್ಧಪದ್ಮವೆಂದು ಆ ಚಕ್ರಕ್ಕೆ ಹೆಸರು ಬಂದಿರುವುದು. ಈ ಅನಾಹತಚಕ್ರವು ಹೃದಯದಲ್ಲಿಯೂ, ವಿಶುದ್ಧಚಕ್ರವು ಕಂಠಪ್ರದೇಶದಲ್ಲಿಯೂ ಇರುವುದೆಂದು ಗ್ರಂಥಾಂತರದಿಂದಲೂ ತಿಳಿಯಬಹುದು. ಪಂಚೋಪನಿಷತ್ ಪುಟ ೫೧ ನೊಡಬೇಕು. ||೪೨-೪೩||

ಅಲ್ಲಿಂದ ಮೇಲಕ್ಕೆ ಭ್ರೂಮಧ್ಯದಲ್ಲಿ ಹ-ಕ್ಷ ಎಂಬೆರಡಕ್ಷರಗಳಿಂದ ಕೂಡಿದ ಮನೋಹರವಾದ ಎರಡು ದಳಗಳುಳ್ಳ, ಆತ್ಮನು ಯಾವಾಗಲೂ ನೆಲೆಸಿರುವ, ಆಜ್ಞಾಚಕ್ರವಿರುವುದು. ಆ ಸ್ಥಳದಲ್ಲಿ ಸಾಧಕನಾದ ಪುರುಷನು ತನ್ನ ಮನಸ್ಸನ್ನು ನೆಲೆಯಾಗಿ ನಿಲ್ಲಿಸಿದರೆ, ಸಮಸ್ತ ಪದಾರ್ಥಗಳ ಸಾಕ್ಷಾತ್ಕಾರವಾಗುವುದು. ಇದರಿಂದ ತ್ರಿಕಾಲಜ್ಞಾನವುಂಟಾಗುವುದು. ಮುಂದೆ ಸಾಧಕನು ಹೇಗೆ ಮಾಡಬೇಕೆಂದು ಪರಮೇಶ್ವರನ ಆಜ್ಞೆಯ ದೊರೆಯುವಿಕೆಯು ಅಲ್ಲಿ ಉಂಟಾಗುವುದರಿಂದ ಅದಕ್ಕೆ ಆಜ್ಞಾಚಕ್ರವೆಂಬ ಹೆಸರು ಬಂದಿರುವುದು. ಪಂಚೋಪನಿಷತ್ ಪುಟ ೫೨-೫೪ ||೪೪-೪೫||

ಕೈಲಾಸಾಖ್ಯಂ ತದೂರ್ಧ್ವಂ ತು ರೋಧಿನೀ ತು ತದೂರ್ಧ್ವತಃ ।
ಏವಂ ತ್ವಾಧಾರಚಕ್ರಾಣಿ ಪ್ರೋಕ್ತಾನಿ ತವ ಸುವ್ರತ ॥೪೬॥

ಸಹಸ್ರಾರಯುತಂ ಬಿಂದುಸ್ಥಾನಂ ತದೂರ್ಧ್ವಮೀರಿತಂ ।
ಇತ್ಯೇತತ್ಕಥಿತಂ ಸರ್ವಂ ಯೋಗಮಾರ್ಗಮನುತ್ತಮಂ ॥೪೭॥

ಆದೌ ಪೂರಕಯೋಗೇನಾಪ್ಯಾಧಾರೇ ಯೋಜಯೇನ್ನರಃ ।
ಗುದಮೇಢ್ರಾಂತರೇ ಶಕ್ತಿಸ್ತಾಮಾಕುಂಚ್ಯ ಪ್ರಬೋಧಯೇತ್ ॥೪೮॥

ಲಿಂಗಭೇದಕ್ರಮೇಣೈವ ಬಿಂದುಚಕ್ರಂ ಚ ಪ್ರಾಪಯೇತ್ ।
ಶಂಭುನಾ ತಾಂ ಪರಾಶಕ್ತಿಮೇಕೀಭೂತಾಂ ವಿಚಿಂತಯೇತ್ ॥೪೯॥

---

ಅಲ್ಲಿಂದ ಮೇಲೆ ಕೈಲಾಸಚಕ್ರವೂ, ಅಲ್ಲಿಂದ ಮೇಲೆ ರೋಧಿನೀ ಚಕ್ರವೂ ಇರುವುದು. ಇವೆರಡು ಚಕ್ರಗಳ ವಿವರಣೆಯು ದೇವೀ ಗೀತೆಯ ಬೃಹಟ್ಟೀಕೆಯಲ್ಲಿರುವುದು. ಈ ರೀತಿಯಾಗಿ ನಿನಗೆ ಈ ಆಧಾರ ಚಕ್ರಗಳನ್ನು ವಿವರಿಸಿರುವೆನು. ॥೪೬॥

ಎಲ್ಲ ಚಕ್ರಗಳಿಗಿಂತಲೂ ಮೇಲೆ ಸಹಸ್ರಾರವೆಂಬ ಚಕ್ರವಿರುವುದು. ಅದು ಪರಮಾತ್ಮನ ಸ್ಥಾನವು. ಹೀಗೆ ಶ್ರೇಷ್ಠವಾದ ಯೋಗಮಾರ್ಗವನ್ನು ಪುಣ್ಯವಂತನಾದ ನಿನಗೆ ಹೇಳಿರುವೆನು. ॥೪೭॥

ಯೋಗಿಯು ಮೊದಲು ಪೂರಕಪ್ರಾಣಾಯಾಮದಿಂದ ಹೊರಗಿನ ವಾಯುವನ್ನು ಎಳೆದುಕೊಂಡು ಕುಂಭಕವನ್ನು ಮಾಡಿ ತನ್ನ ಮನಸ್ಸನ್ನೂ ವಾಯುವನ್ನೂ ಮೂಲಾಧಾರದಲ್ಲಿ ಸೇರಿಸಬೇಕು. ಆಮೇಲೆ ಗುದಪ್ರದೇಶಕ್ಕೂ ಲಿಂಗಪ್ರದೇಶಕ್ಕೂ ನಡುವೆ ಇರುವ ಮೂಲಾಧಾರಚಕ್ರದಲ್ಲಿ ನೆಲಸಿರುವ ಕುಂಡಲಿನೀಶಕ್ತಿಯನ್ನೆಚ್ಚರಗೊಳಿಸಬೇಕು. ॥೪೮॥

ಆಮೇಲೆ ಹಿಂದೆ ಹೇಳಿದ ಚಕ್ರಗತವಾದ ತೇಜೋಮಯವಾದ ಲಿಂಗಗಳನ್ನು ಭೇದಿಸಿಕೊಂಡು ಎಂದರೆ ಆ ಮಾರ್ಗದಿಂದ ಕುಂಡಲಿನೀಶಕ್ತಿಯನ್ನು ಸಹಸ್ರಾರಕ್ಕೆ ಸೇರಿಸಬೇಕು. ಆ ಸಹಸ್ರಾರದಲ್ಲಿರುವ ಶಂಭುವಿನೊಡನೆ ಪರಾಶಕ್ತಿ ಸ್ವರೂಪವಾದ ಕುಂಡಲಿನೀ ಶಕ್ತಿಯು ಕೂಡಿಕೊಂಡಂತೆ ಭಾವಿಸಬೇಕು. ॥೪೯॥

ತತಸ್ತ್ರೋತ್ಥಿತಾಮೃತಂ ಯತ್ತು ದ್ರುತಲಾಕ್ಷಾರಸೋಪಮಂ ।
ಪಾಯಯಿತ್ವಾ ತು ತಾಂ ಶಕ್ತಿಂ ಮಾಯಾಖ್ಯಾಂ ಯೋಗಸಿದ್ಧಿದಾಂ ॥೫೦॥

ಷಟ್ಚಕ್ರದೇವತಾಸ್ತತ್ರ ಸಂತರ್ಪ್ಯಾಮೃತಧಾರಯಾ ।
ಆನಯೇತ್ತೇನ ಮಾರ್ಗೇಣ ಮೂಲಾಧಾರಂ ತತಃ ಸುಧೀಃ ॥೫೧॥

ಏವಮಭ್ಯಸ್ಯ ಮಾನಸ್ಯಾಪ್ಯಹನ್ಯಹನಿ ನಿಶ್ಚಿತಂ ।
ಪೂರ್ವೋಕ್ತದೂಷಿತಾಮಂತ್ರಾಃ ಸರ್ವೇ ಸಿಧ್ಯಂತಿ ನಾನ್ಯಥಾ ॥೫೨॥

ಜರಾಮರಣದುಃಖಾದ್ಯೈರ್ಮುಚ್ಯತೇ ಭವಬಂಧನಾತ್ ।
ಯೇ ಗುಣಾಸ್ಸಂತಿ ದೇವ್ಯಾ ಮೇ ಜಗನ್ಮಾತುರ್ಯಥಾ ತಥಾ ॥೫೩॥

---

ಆ ಸಹಸ್ರಾರದಲ್ಲಿ ಶಿವಶಕ್ತಿಗಳ ಸಂಬಂಧದಿಂದ ಉಂಟಾದ, ಕರಗಿದ ಅರಗಿನ ರಸದ ಬಣ್ಣದಂತಿರುವ, ಅಮೃತರಸವನ್ನು ಆ ಕುಂಡಲಿನೀ ಶಕ್ತಿಗೆ ಪಾನಮಾಡಿಸಿ ಎಂದರೆ ಯೋಗಸಿದ್ಧಿಯನ್ನು ಕೊಡುವ ಆ ಮಾಯೆಗೆ ಆನಂದವನ್ನುಂಟು ಮಾಡುವುದರಿಂದ ತೃಪ್ತಿಪಡಿಸಿ, ॥೫೦॥

ಹಿಂದೆ ಹೇಳಿದ ಆರು ಚಕ್ರಗಳಲ್ಲಿರುವ ದೇವತೆಗಳನ್ನು ಶಿವಶಕ್ತಿಸಮಾಗಮದಿಂದುಂಟಾದ ಆನಂದರಸರೂಪವಾದ ಅಮೃತದ ಮಳೆಯಿಂದ ತೃಪ್ತಿಪಡಿಸಿ ಯಾವ ಮಾರ್ಗದಿಂದ ಕುಂಡಲಿನೀ ಶಕ್ತಿಯನ್ನು ಸಹಸ್ರಾರಕ್ಕೆ ತೆಗೆದುಕೊಂಡು ಹೋಗಿದ್ದದೋ ಅದೇ ಮಾರ್ಗದಿಂದ ಆ ಶಕ್ತಿಯನ್ನು ಮೂಲಾಧಾರಕ್ಕೆ ಸೇರಿಸಬೇಕು. ॥೫೧॥

ಹೀಗೆ ಪ್ರತಿದಿನವೂ ಯೋಗಾಭ್ಯಾಸವನ್ನು ಮಾಡುವ ಉಪಾಸಕನಾದ ಮನುಜನಿಗೆ ಹಿಂದೆ ಹೇಳಿದ ಭಿನ್ನಾದಿದೋಷಗಳಿಂದ ಕೂಡಿದ ಮಂತ್ರಗಳೂ ಶೋಧಿತಗಳಾಗಿ ಸಿದ್ಧಿಯನ್ನುಂಟುಮಾಡುವುವು. ॥೫೨॥

ಮಂತ್ರಸಿದ್ಧರಿಗೆ ಮುಪ್ಪು, ಮರಣ, ದುಃಖ, ಸಂಸಾರಬಂಧ ಇವುಗಳ ಬಿಡುಗಡೆಯಾಗುವುದು. ಜಗತ್ತಿಗೆ ತಾಯಿಯಾದ ಭುವನೇಶ್ವರೀ ದೇವಿಯಾದ ನನ್ನಲ್ಲಿ ಯಾವ ಗುಣಗಳಿವೆಯೋ ಆ ಗುಣಗಳು ಯೋಗಸಾಧನೆಯನ್ನು ಮಾಡುವ ಶ್ರೇಷ್ಠನಾದ ಉಪಾಸಕನಾದ ಮಂತ್ರಸಿದ್ಧನಿಗೂ ಉಂಟಾಗುವುವು. ಈ ವಿಷಯದಲ್ಲಿ ಸಂದೇಹವಿಲ್ಲವು. ॥೫೩॥

ತೇ ಗುಣಾಃ ಸಾಧಕವರೇ ಭವಂತ್ಯೇವ ನ ಚಾನ್ಯಥಾ ।
ಇತ್ಯೇವಂ ಕಥಿತಂ ತಾತ ವಾಯುಧಾರಣಮುತ್ತಮಂ ॥೫೪॥

ಇದಾನೀಂ ಧಾರಣಾಖ್ಯಂ ತು ಶೃಣುಷ್ವಾವಹಿತೋ ಮಮ ।
ದಿಕ್ಕಾಲಾದ್ಯನವಚ್ಛಿನ್ನದೇವ್ಯಾಂ ಚೇತೋ ವಿಧಾಯ ಚ ॥೫೫॥

ತನ್ಮಯೋ ಭವತಿ ಕ್ಷಿಪ್ರಂ ಜೀವಬ್ರಹ್ಮೈಕ್ಯ-ಯೋಜನಾತ್ ।
ಅಥವಾ ಸಮಲಂ ಚೇತೋ ಯದಿ ಕ್ಷಿಪ್ರಂ ನ ಸಿದ್ಧ್ಯತಿ ॥೫೬॥

ತದಾಽವಯವಯೋಗೇನ ಯೋಗೀ ಯೋಗಾನ್ ಸಮುಭ್ಯಸೇತ್।
ಮದೀಯ-ಹಸ್ತಪಾದಾದಾವಂಗೇ ತು ಮಧುರೇ ನಗ ॥೫೭॥

ಚಿತ್ತಂ ಸಂಸ್ಥಾಪಯೇನ್ಮಂತ್ರೀ ಸ್ಥಾನಸ್ಥಾನಜಯಾತ್ಪುನಃ ।
ವಿಶುದ್ಧ ಚಿತ್ತಃ ಸರ್ವಸ್ಮಿನ್ರೂಪೇ ಸಂಸ್ಥಾಪಯೇನ್ಮನಃ ॥೫೮॥

ಯಾವನ್ಮನೋ ಲಯಂ ಯಾತಿ ದೇವ್ಯಾಂ ಸಂವಿದಿ ಪರ್ವತ ।
ತಾವದಿಷ್ಟಮನುಂ ಮಂತ್ರೀ ಜಪಹೋಮೈಃ ಸಮುಭ್ಯಸೇತ್ ॥೫೯॥

---

ಓ ಪರ್ವತರಾಜನೇ, ಪ್ರಾಣಾಯಾಮದಿಂದ ಧಾರಣಾಯೋಗವನ್ನು ಹಿಂದೆ ವಿವರಿಸಿದೆನು. ಈಗ ಹೇಳುವ ಧಾರಣಾಮಾರ್ಗವನ್ನು ಗಮನವಿಟ್ಟು ಕೇಳು. ॥೫೪॥

ದಿಕ್ಕು, ಕಾಲ, ಮುಂತಾದವುಗಳಿಂದ ಅಳತೆಗೆ ಸಿಕ್ಕದ ದೇವಿಯಲ್ಲಿ ಮನಸ್ಸನ್ನು ನಿಲ್ಲಿಸಿ, ಜೀವಬ್ರಹ್ಮರ ಏಕತ್ವಭಾವನೆಯಿಂದ ಸಾಧಕನು ಬೇಗನೆ ಬ್ರಹ್ಮಸ್ವರೂಪನಾಗುವನು. ॥೫೫॥

ಮನಸ್ಸು ಶುದ್ಧವಿಲ್ಲದಿದ್ದರೆ ಬೇಗನೆ ಸಿದ್ಧಿಯಾಗದಪಕ್ಷದಲ್ಲಿ ಯೋಗಿಯಾದವನು ಅವಯವಯೋಗದಿಂದ ಯೋಗಾಭ್ಯಾಸವನ್ನು ಮಾಡಬೇಕು. ॥೫೬॥

ಮಂತ್ರಜಪಮಾಡತಕ್ಕವನು ನನ್ನ ಮನೋಹರವಾದ ಕೈಗಳು, ಕಾಲುಗಳು ಮುಂತಾದ ಒಂದೊಂದು ಅಂಗಗಳಲ್ಲಿ ಮನಸ್ಸನ್ನು ನಿಲ್ಲಿಸಿ ಜಪವನ್ನು ಮಾಡುತ್ತ, ಚಿತ್ತವು ಶುದ್ಧವಾದುದನ್ನು ತಿಳಿದು, ಒಂದೊಂದಾಗಿ ಆಸ್ಥಾನಗಳನ್ನು ಜಯಿಸಿದ ಮೇಲೆ ನನ್ನ ಸಂಪೂರ್ಣರೂಪದಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ॥೫೭-೫೮॥

ಜ್ಞಾನಸ್ವರೂಪಳಾದ ದೇವಿಯಲ್ಲಿ ಮನಸ್ಸು ಲಯವಾಗುವವರೆಗೂ ಮಂತ್ರಜಪಮಾಡತಕ್ಕವನು ತನಗಿಷ್ಟವಾದ ಮಂತ್ರವನ್ನು ಜಪಹೋಮಾದಿಗಳಿಂದ ಅಭ್ಯಾಸ ಮಾಡುತ್ತಿರಬೇಕು. ॥೫೯॥

ಮಂತ್ರಾಭ್ಯಾಸೇನ ಯೋಗೇನ ಜ್ಞೇಯಜ್ಞಾನಾಯ ಕಲ್ಪತೇ ।
ನ ಯೋಗೇನ ವಿನಾ ಮಂತ್ರೋ ನ ಮಂತ್ರೇಣ ವಿನಾ ಹಿ ಸಃ ॥೬೦॥

ದ್ವಯೋರಭ್ಯಾಸಯೋಗೋ ಹಿ ಬ್ರಹ್ಮಸಂಸಿದ್ಧಿಕಾರಣಂ ।
ತಮಃ ಪರಿವೃತೇ ಗೇಹೇ ಘಟೋ ದೀಪೇನ ದೃಶ್ಯತೇ ॥೬೧॥

ಏವಂ ಮಾಯಾಽಽವೃತೋ ಹ್ಯಾತ್ಮಾ ಮನುನಾ ಗೋಚರೀಕೃತಃ ।
ಇತಿ ಯೋಗವಿಧಿಃ ಕೃತ್ಸ್ನಃ ಸಾಂಗಃ ಪ್ರೋಕ್ತೋ ಮಯಾಽಧುನಾ ॥೬೨॥
ಗುರೂಪದೇಶತೋ ಜ್ಞೇಯೋ ನಾನ್ಯಥಾ ಶಾಸ್ತ್ರಕೋಟಿಭಿಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಪಂಚತ್ರಿಂಶೋಽಧ್ಯಾಯಃ

---

ಮಂತ್ರ ಜಪರೂಪವಾದ ಯೋಗದಿಂದ ತಿಳಿಯಬೇಕಾದ ಆತ್ಮವಸ್ತುವನ್ನು ತಿಳಿಯಬಹುದು. ಚಿತ್ತೈಕಾಗ್ರ್ಯವಿಲ್ಲದೆ ಮಂತ್ರವಿಲ್ಲ. ಮಂತ್ರವಿಲ್ಲದೆ ಚಿತ್ತೈಕಾಗ್ರ್ಯವಿಲ್ಲ. ||೬೦||

ಮಂತ್ರಜಪ ಚಿತ್ತೈಕಾಗ್ರ್ಯ ಈ ಎರಡೂ ಬ್ರಹ್ಮಜ್ಞಾನಕ್ಕೆ ಕಾರಣವಾದುದು. ಹೇಗೆಂದರೆ ಕತ್ತಲೆಯ ಮನೆಯಲ್ಲಿರುವ ಗಡಿಗೆಯನ್ನು ದೀಪದಿಂದ ನೋಡಬಹುದು. ಹಾಗೆಯೇ ಮಂತ್ರಜಪ ಸಹಾಯದಿಂದಾಗುವ ಚಿತ್ತೈಕಾಗ್ರತೆಯಿಂದ ಬ್ರಹ್ಮ ಸ್ವರೂಪವನ್ನು ತಿಳಿಯಬಹುದು. ||೬೧||

ಓ ಪರ್ವತರಾಜನೇ, ಈ ರೀತಿಯಲ್ಲಿ ಮಾಯೆಯಿಂದ ಮುಚ್ಚಿದ ಆತ್ಮನನ್ನು ಮಂತ್ರದಿಂದ ತಿಳಿಯಬಹುದು. ಹೀಗೆ ಅಂಗಸಹಿತವಾದ ಸಂಪೂರ್ಣವಾದ ಈ ಯೋಗಕ್ರಮವನ್ನು ನಾನು ನಿನಗೆ ಹೇಳಿದೆನು. ಇದನ್ನು ಗುರುಗಳ ಉಪದೇಶದಿಂದ ತಿಳಿಯಬೇಕು. ಅನೇಕ ಶಾಸ್ತ್ರಗಳಿಂದ ತಿಳಿದುದೂ ಅಷ್ಟು ಪ್ರಯೋಜನಕರವಾಗುವುದಿಲ್ಲವು. ||೬೨||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### || ಷಟ್ತ್ರಿಂಶೋಽಧ್ಯಾಯಃ ||

### ಮೂವತ್ತಾರನೆಯ ಅಧ್ಯಾಯವು

|| ಶ್ರೀ ದೇವ್ಯುವಾಚ ||

**ಇತ್ಯಾದಿ ಯೋಗಯುಕ್ತಾತ್ಮಾ ಧ್ಯಾಯೇನ್ಮಾಂ ಬ್ರಹ್ಮರೂಪಿಣೀಂ ।**
**ಭಕ್ತ್ಯಾ ನಿರ್ವ್ಯಾಜಯಾ ರಾಜನ್ನಾಸನೇ ಸಮುಪಸ್ಥಿತಃ ॥೧॥**

**ಆವಿಃ ಸನ್ನಿಹಿತಂ ಗುಹಾ ಚರಂ ನಾಮ ಮಹತ್ಪದಂ ।**
**ಅತ್ರೈತತ್ಸರ್ವಮರ್ಪಿತಮೇಜತ್ಪ್ರಾಣನ್ನಿಮಿಷಚ್ಚ ಯತ್ ॥೨॥**

---

ದೇವಿಯು ಹೇಳಿದಳು—ಎಲೈ ಪರ್ವತರಾಜನೇ, ಹಿಂದೆ ಹೇಳಿದ ಯೋಗಾಭ್ಯಾಸದಿಂದ ಪರಬ್ರಹ್ಮಸ್ವರೂಪಳಾದ ನನ್ನನ್ನು ಕಪಟವಿಲ್ಲದ ಭಕ್ತಿಯಿಂದ ಒಂದೆಡೆಯಲ್ಲಿ ಕುಳಿತು ಧ್ಯಾನಮಾಡಬೇಕು. ||೧||

ಇಲ್ಲಿಂದ “ಬ್ರಹ್ಮೈವೇದಂ ವಿಶ್ವಂ ವರಿಷ್ಠಂ” ಎಂಬಲ್ಲಿಯವರೆಗೆ ಮುಂಡಕೋಪನಿಷತ್ತಿನ ೨.೨. ೧-೧೨ ಮಂತ್ರಗಳಿರುವುವು. ಆ ಉಪನಿಷತ್ತಿಗೆ ಶಂಕರ ಭಗವತ್ಪಾದರು ವಿಸ್ತಾರವಾಗಿ ಭಾಷ್ಯವನ್ನು ಬರೆದಿರುವರು. ಇಲ್ಲಿ ಆ ಶ್ರುತಿಯ ಮುಖ್ಯ ತಾತ್ಪರ್ಯವನ್ನು ಮಾತ್ರ ಬರೆದಿರುವುದು.

ಆ ಪರಬ್ರಹ್ಮವಸ್ತುವು ಪ್ರಕಾಶರೂಪವಾದುದು. ಅತಿಸಮೀಪದಲ್ಲಿರುವುದು. ಬುದ್ಧಿಗೋಚರವಾದುದು. ಮುನಿಗಳು ಯೋಗಾದಿಸಾಧನಗಳಿಂದ ದೊಡ್ಡದಾದ ಆ ಪರಬ್ರಹ್ಮವಸ್ತುವಿನ ಸಾಕ್ಷಾತ್ಕಾರವನ್ನು ಪಡೆಯುವರು. ಎಲ್ಲಕ್ಕೂ ಅಧಿಷ್ಠಾನವಾಗಿರುವ ಆ ಬ್ರಹ್ಮವಸ್ತುವಿನಲ್ಲಿ ಈ ಸಮಸ್ತ ಪ್ರಪಂಚವೂ ಕಲ್ಪಿತವಾಗಿರುವುದು. ಚಲಿಸುವ ಪಕ್ಷ್ಯಾದಿಗಳೂ, ಪ್ರಾಣವ್ಯಾಪಾರವನ್ನು ಮಾಡುವ ಮನುಷ್ಯಾದಿಗಳೂ,

ಏತಜ್ಜ್ಞಾನಥ ಸದಸದ್ವರೇಣ್ಯಂ ಪರಂ
ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಂ ।
ಯದರ್ಚಿಮದ್ಯದಣುಭ್ಯೋಽಣು ಚ
ಯಸ್ಮಿಂಲ್ಲೋಕಾ ನಿಹಿತಾ ಲೋಕಿನಶ್ಚ ॥೩॥

ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದುವಾಙ್ಮನಃ ।
ತದೇತತ್ಸತ್ಯಮಮೃತಂ ತದ್ವೇದ್ಧವ್ಯಂ ಸೌಮ್ಯವಿದ್ಧಿ ॥೪॥

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸಾನಿಶಿತಂ ಸಂಧಧೀ (ಯಿಾ)ತ ।
ಆಯಮ್ಯ ತದ್ಭಾವಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೌಮ್ಯವಿದ್ಧಿ ॥೫॥

---

ನಿಮೇಷೋನ್ಮೇಷ ಮುಂತಾದ ಕ್ರಿಯೆಗೆ ಸಂಬಂಧಪಟ್ಟ ಸಕಲವಸ್ತುಗಳೂ ಬ್ರಹ್ಮ ವಸ್ತುವಿನಲ್ಲಿಯೇ ಇರುವುವು. ॥೨॥

ಸತ್ ಕಾರಣವಾದಮಾಯೆ, ಅಸತ್ ಕಾರ್ಯವಾದ ಜಗತ್ತು, ಇವೆರಡಕ್ಕಿಂತಲೂ ಶ್ರೇಷ್ಠವಾದುದು. ಜನರ ವಿಜ್ಞಾನಕ್ಕೆ ಮಿಗಿಲಾಗಿ ಸಿಲುಕದುದು. ಅದು ಅತ್ಯಂತ ಶ್ರೇಷ್ಠವಾದುದರಿಂದ ಸಾಮಾನ್ಯವಾಗಿ ಎಲ್ಲರ ಬುದ್ಧಿಗೂ ಗೋಚರವಾಗತಕ್ಕದ್ದಲ್ಲ. ಸೂರ್ಯಾದಿತೇಜಸ್ಸಿಗೂ ಪ್ರಕಾಶವನ್ನು ಕೊಡಬಲ್ಲದು. ಆದುದರಿಂದಲೇ ಅತ್ಯಂತ ಪ್ರಕಾಶವಾದುದು. ಮತ್ತು ಅತ್ಯಂತ ಸೂಕ್ಷ್ಮವಾದುದು. ಯಾವ ಆತ್ಮನಲ್ಲಿ ಭೂರಾದಿಲೋಕಗಳೂ, ಅಲ್ಲಿ ವಾಸಿಸುವ ಜನರೂ, ಕಲ್ಪಿಸಲ್ಪಟ್ಟಿರುವರೋ ಅಂತಹ ಆತ್ಮನನ್ನು ತಿಳಿದುಕೊಳ್ಳಿರಿ. ॥೩॥

ಪ್ರಾಣಕ್ಕೂ ವಾಕ್ಕಿಗೂ ಮನಸ್ಸಿಗೂ ಆಶ್ರಯವಾದ ನಾಶರಹಿತವಾದ ಪರಬ್ರಹ್ಮವಸ್ತುವೇ ಇದು. ಇದು ಸತ್ಯವಾದುದರಿಂದ ಮರಣಧರ್ಮವಿಲ್ಲದುದು. ಆದುದರಿಂದ ಆ ಬ್ರಹ್ಮವಸ್ತುವನ್ನು ಮನೋರೂಪವಾದ ಬಾಣದಿಂದ ಹೊಡೆಯಬೇಕು. ಎಂದರೆ ಆ ಬ್ರಹ್ಮದಲ್ಲಿ ಮನಸ್ಸಮಾಧಿಯನ್ನು ಪಡೆಯಬೇಕು. ॥೪॥

ಉಪನಿಷತ್ತಿನಲ್ಲಿ ಬೋಧನೆ ಮಾಡಿರುವ ಉಪದೇಶ ಎಂಬ ಧನುಸ್ಸನ್ನು ತೆಗೆದುಕೊಂಡು, ಉಪಾಸನೆಯಿಂದ ಹರಿತವಾಗಿ ಮಾಡಿದ ಸಂಸ್ಕೃತವಾದ ಮನಸ್ಸೆಂಬ ಬಾಣವನ್ನು ಸೇರಿಸಿ, ಇಂದ್ರಿಯಗಳಿಂದ ಕೂಡಿದ ಅಂತಃಕರಣವನ್ನು ವಿಷ

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥೬॥

ಯಸ್ಮಿನ್ದ್ಯೌಃ ಪೃಥಿವೀ ಚಾಂತರಿಕ್ಷ
ಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।
ತಮೇವೈಕಂ ಜಾನಥಾಃತ್ಮಾ ನಮನ್ಯಾ
ವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ ॥೭॥

ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ।
ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ॥೮॥

---

ಯಗಳ ದೆಸೆಯಿಂದ ಪ್ರತ್ಯಾಹಾರಕ್ರಮದಿಂದ ಸೆಳೆದು, ಬ್ರಹ್ಮಭಾವದಿಂದ ಕೂಡಿದ ಮನಸ್ಸಿನಿಂದ ಗುರಿಯಾದ ನಾಶರಹಿತವಾದ ಆ ಪರಬ್ರಹ್ಮವಸ್ತುವನ್ನು ಹೊಡೆಯ ಬೇಕು. ॥೫॥

ಓಂಕಾರ, ಅಥವಾ ದೇವೀಪ್ರಣವವಾದ ಹ್ರೀಂಕಾರವೇ ಧನುಸ್ಸು ಎಂದರೆ ಗುರಿಯಲ್ಲಿ ಬಾಣವು ಪ್ರವೇಶಿಸುವುದಕ್ಕೆ ಕಾರಣವಾದುದು. ಮನಸ್ಸೇ ಬಾಣವು. ಬ್ರಹ್ಮವೇ ಗುರಿಯು. ಪ್ರಣವಜಪಮಾಡುವುದರಿಂದ ಮನಸ್ಸಿಗೆ ಒಂದು ಸಂಸ್ಕಾರ ವುಂಟಾಗಿ ಅದು ತಡೆಯಿಲ್ಲದೆ ಗುರಿಯಾದ ಪರಬ್ರಹ್ಮವಸ್ತುವಿನಲ್ಲಿ ಹೋಗಿ ಸೇರು ವುದು. ಏಕಾಗ್ರತೆಯಿಂದ ಬಾಣವಾದ ಆ ಮನಸ್ಸು ದೇಹಾತ್ಮಭಾವವನ್ನು ತಿರಸ್ಕರಿಸಿ ಬ್ರಹ್ಮಾತ್ಮೈಕ್ಯಸಾಕ್ಷಾತ್ಕಾರರೂಪವಾದ ಫಲವನ್ನು ಹೊಂದುವುದು. ॥೬॥

ಎಲೈ ದೇವತೆಗಳೇ, ಯಾವ ಆ ನಾಶರಹಿತವಾದ ಪರಬ್ರಹ್ಮವಸ್ತುವಿನಲ್ಲಿ ದ್ಯುಲೋಕವೂ, ಭೂಮಿಯೂ, ಅಂತರಿಕ್ಷವೂ, ಪ್ರಾಣಗಳಿಂದ ಕೂಡಿದ ಮನಸ್ಸೂ ಸೇರಿ ಇರುವುವೋ, ಅದೊಂದನ್ನೇ ಆತ್ಮವಸ್ತುವನ್ನಾಗಿ ತಿಳಿಯಿರಿ. ಇತರವಾದ ಅಪರ ವಿದ್ಯಾರೂಪವಾದ ಮಾತುಗಳನ್ನು ಬಿಡಿ. ಇದೇ ಸಂಸಾರಸಮುದ್ರವನ್ನು ದಾಟಲು ಸೇತುವೆಯಂತಿರುವುದು. ಎಂದರೆ ಇದರಿಂದಲೇ ಜನನ, ಮರಣಗಳ ಭೋಗನಿರ್ಬಂಧಗಳ ದುಃಖವು ತಪ್ಪಿ, ಅಮೃತದಂತೆ ಆನಂದರೂಪವಾದ ಸ್ಥಿತಿ ಎಂಬ ಮೋಕ್ಷ ಪ್ರಾಪ್ತಿಯಾಗುವುದು. ॥೭॥

ಚಕ್ರದ ಆರೇ ಕಾಲುಗಳು ಗುಂಬವೆಂಬ ಚಕ್ರದ ಮಧ್ಯಕ್ಕೆ ಹೇಗೆ ಸೇರಿರು ವುವೋ, ಹಾಗೆ ಶರೀರದಲ್ಲಿರುವ ಸಮಸ್ತ ನಾಡಿಗಳೂ ಹೃದಯದಲ್ಲಿ ಸೇರಿರುವುದು.

ಓ ಮಿತ್ಯೇವಂ ಧ್ಯಾಯಥಾತ್ಮಾನಂ ಸ್ವಸ್ತಿವಃ ಪಾರಾಯ ತಮಸಃ ಪರಸ್ತಾತ್।
ದಿವ್ಯೇ ಬಹ್ಮಪುರೇ ವ್ಯೋಮ್ನಿ ಆತ್ಮಾಸೌ ಸಂಪ್ರತಿಷ್ಠಿತಃ ॥೯॥

ಮನೋ-ಮಯಃ ಪ್ರಾಣಶರೀರನೇತಾ
ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।
ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ
ಆನಂದರೂಪಮಮೃತಂ ಯದ್ವಿಭಾತಿ ॥೧೦॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ ॥೧೧॥

---

ಆ ಹೃದಯದಲ್ಲಿ ಬುದ್ಧಿವೃತ್ತಿಗೆ ಸಾಕ್ಷಿಯಾಗಿ ಆತ್ಮನು ಗೋಚರಿಸುತ್ತಿರುವನು. ಬುದ್ಧಿವೃತ್ತಿಗಳಿಂದ ಅವನನ್ನು ಜನರು ಬೇರೆ ಬೇರೆ ವಿಧವಾಗಿ ತಿಳಿಯುವರು ||೮||

ನೀವು ಓಂ ಎಂಬ ಪ್ರಣವವನ್ನೇ ಆಶ್ರಯಿಸಿಕೊಂಡು ಆತ್ಮನನ್ನು ಧ್ಯಾನ ಮಾಡಿರಿ. ಅವಿದ್ಯಾರಹಿತವಾದ ಬ್ರಹ್ಮತ್ವಪ್ರಾಪ್ತಿಯು ನಿಮಗೆ ವಿಘ್ನವಿಲ್ಲದೆ ಉಂಟಾಗುವುದು. ಆ ಬ್ರಹ್ಮನು ಪ್ರಕಾಶವಾದ ಹೃದಯಕಮಲದಲ್ಲಿರುವ ಆಕಾಶದಲ್ಲಿ ಸ್ಥಿರವಾಗಿರುವನು. ||೯||

ಆ ಆತ್ಮನು ಮನೋವೃತ್ತಿಯಿಂದಲೇ ತಿಳಿಯಲ್ಪಡತಕ್ಕವನಾದುದರಿಂದ ಮನೋಮಯನೂ, ಪ್ರಾಣವನ್ನೂ ಶರೀರವನ್ನೂ ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ತೆಗೆದುಕೊಂಡು ಹೋಗತಕ್ಕವನೂ, ಅನ್ನಪರಿಣಾಮವಾದ ಶರೀರದಲ್ಲಿರುವ ಬುದ್ಧಿಯನ್ನು ಸಮಾಪಿಸಿ ಇರುವವನೂ, ನಾಶರಹಿತನೂ ಆದ ಆ ಆತ್ಮನನ್ನು ಬುದ್ಧಿವಂತರು ಸಂಪೂರ್ಣವಾಗಿ ಸಾಕ್ಷಾತ್ಕಾರಮಾಡಿಕೊಂಡಿರುವರು. ||೧೦||

ಶ್ರೇಷ್ಠವಾದ ಆ ಪರಮಾತ್ಮಜ್ಞಾನವುಂಟಾದರೆ, ಅಹಂಕಾರ ತಾದಾತ್ಮ್ಯರೂಪವಾದ ಅಜ್ಞಾನದಿಂದ ಹೃದಯದಲ್ಲಿರುವ ಚಿದಚಿದ್ಗ್ರಂಥಿಯು ಬಿಚ್ಚಿಹೋಗುವುದು. ಸಕಲಪದಾರ್ಥಗಳೂ ಮಿಥ್ಯಾವಸ್ತುಗಳೆಂಬ ನಿಶ್ಚಯದಿಂದ ನಿವಾರಿಸಬೇಕಾದ ಸಂದೇಹಗಳೆಲ್ಲವೂ ನಾಶವಾಗುವುವು. ಪ್ರಾರಬ್ಧವನ್ನು ಬಿಟ್ಟು ಮಿಕ್ಕ ಎಲ್ಲ ಕರ್ಮಗಳೂ ನಾಶಹೊಂದುವುವು. ||೧೧||

ಹಿರಣ್ಮಯೇ ಪರೇ ಕೋಶೇ ನಿರಜಂ ಬ್ರಹ್ಮ ನಿಷ್ಕಲಂ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥೧೨॥

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೧೩॥

ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ
ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ ।
ಅಧಶ್ಚೋರ್ಧ್ವಂ ಚ ಪ್ರಸೃತಂ
ಬ್ರಹ್ಮೈವೇದಂ ವಿಶ್ವಂ ವರಿಷ್ಠಂ ॥೧೪॥

---

ಪ್ರಕಾಶಮಯವಾದ ಆನಂದಮಯಕೋಶದಲ್ಲಿ ಸತ್ವರಜಸ್ತಮೋಗುಣಗಳಿಲ್ಲದೆ ಮಾಯಾರಹಿತವಾಗಿ ಸ್ವಚ್ಛವಾಗಿ ಸೂರ್ಯಾದಿಗಳಿಗೂ, ಪ್ರಕಾಶವನ್ನು ಕೊಡತಕ್ಕದ್ದಾಗಿರುವ ತತ್ವವನ್ನು ತಿಳಿದಿರುವವರು ಆತ್ಮಜ್ಞರಾಗುವರು. ॥೧೨॥

ಆ ಪರಬ್ರಹ್ಮನಿದುರಿಗೆ ಸೂರ್ಯನು ಪ್ರಕಾಶಿಸಲಾರನು. ಚಂದ್ರನೂ, ನಕ್ಷತ್ರಗಳೂ, ಮಿಂಚುಗಳೂ, ಪ್ರಕಾಶಿಸಲಾರವು. ಇನ್ನು ಅಗ್ನಿಯ ವಿಷಯವನ್ನು ಹೇಳುವುದೇನು. ಸ್ವಪ್ರಕಾಶನಾದ ಆತ್ಮನನ್ನನುಸರಿಸಿ ಸೂರ್ಯಾದಿ ಸಮಸ್ತ ಪ್ರಕಾಶಕವಸ್ತುಗಳೂ ಪ್ರಕಾಶಿಸುವುವು. ಆ ಆತ್ಮನ ಪ್ರಕಾಶದಿಂದಲೇ ಸೂರ್ಯಾದಿ ಸಮಸ್ತ ಜಗತ್ತೂ ಪ್ರಕಾಶಿಸುತ್ತಿರುವುದು. ॥೧೩॥

ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ, ಮೇಲೂ, ಕೆಳಗೂ ಹರಡಿರುವ, ದೊಡ್ಡದಾದ ಈ ಪ್ರಪಂಚವೆಲ್ಲವೂ ನಾಶರಹಿತವಾದ ಪರಬ್ರಹ್ಮವಸ್ತುವೇ ಆಗಿದೆ. ಆದರೂ ಅವಿದ್ಯೆಯಿಂದ ಇವು ಹೀಗೆ ಕಾಣುವುವು. ಹಗ್ಗವನ್ನು ನೋಡಿ ಹಾವೆಂದು ತಿಳಿಯುವಂತೆ ಬ್ರಹ್ಮವಸ್ತುವನ್ನೇ ಅವಿದ್ಯೆಯಿಂದ ಪ್ರಪಂಚವಾಗಿ ತಿಳಿಯುವರು. ಅವಿದ್ಯೆಯು ನಾಶವಾದರೆ ಸಮಸ್ತವೂ ಬ್ರಹ್ಮಸ್ವರೂಪವಾಗಿ ಕಾಣುವುದೆಂದು ವೇದವು ಬೋಧಿಸುತ್ತಿರುವುದು. ॥೧೪॥

ಏತಾದೃಗನುಭವೋ ಯಸ್ಯ ಸ ಕೃತಾರ್ಥೋ ನರೋತ್ತಮಃ ।
ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ॥೧೫॥

ದ್ವಿತೀಯಾದ್ವೈ ಭಯಂ ರಾಜಂಸ್ತದಭಾವಾದ್ಬಿಭೇತಿ ನ ।
ನ ತದ್ವಿಯೋಗೋಽಮೇಽಪ್ಯಸ್ತಿ ಮದ್ವಿಯೋಗೋಽಪಿ ತಸ್ಯ ನ ॥೧೬॥

ಅಹಮೇವ ಸ ಸೋಽಹಂ ವೈ ನಿಶ್ಚಿತಂ ವಿದ್ಧಿ ಪರ್ವತ ।
ಮದ್ದರ್ಶನಂ ತು ತತ್ರ ಸ್ಯಾದ್ಯತ್ರ ಜ್ಞಾನೀ ಸ್ಥಿತೋ ಮಮ ॥೧೭॥

ನಾಹಂ ತೀರ್ಥೇ ನ ಕೈಲಾಸೇ ವೈಕುಂಠೇ ವಾ ನ ಕರ್ಹಿಚಿತ್ ।
ವಸಾಮಿ ಕಿಂ ತು ಮಜ್ಜ್ಞಾನಿ ಹೃದಯಾಂಭೋಜಮಧ್ಯಮೇ ॥೧೮॥

---

ಈ ರೀತಿಯಾದ ಎಂದರೆ ಈ ಎಲ್ಲವೂ ಬ್ರಹ್ಮರೂಪವಾದುದು, ಜೀವಾತ್ಮರೂ ಪರಮಾತ್ಮನೂ ಅಭಿನ್ನರು, ಎಂಬ ಅಪರೋಕ್ಷವಾದ ಅನುಭವವು ಯಾವ ಮನುಜ ನಿಗೆ ಆಗುವುದೋ, ಅವನು ಕೃತಾರ್ಥನಾಗುವನು. ಅವನು ಪರಿಶುದ್ಧವಾದ ಮನ ಸ್ಸುಳ್ಳವನಾಗಿ ಬ್ರಹ್ಮಸ್ವರೂಪನಾಗಿರುವುದರಿಂದ ಅವನಿಗೆ ಯಾವ ದುಃಖವಾಗಲಿ ಯಾವ ಆಸೆಯಾಗಲಿ ಇರುವುದಿಲ್ಲ. ॥೧೫॥

ಬ್ರಹ್ಮಜ್ಞಾನಿಗೆ ಸರ್ವವೂ ಬ್ರಹ್ಮವಾಗಿ ಕಾಣುವುದರಿಂದ ಎರಡನೆಯ ವಸ್ತುವೇ ಇಲ್ಲದುದರಿಂದ ಭಯಕಾರಣವಿಲ್ಲ. ಪರ್ವತರಾಜನೇ, ಆ ಬ್ರಹ್ಮಜ್ಞಾನಿಗೆ ನನ್ನ ಅಗಲಿಕೆಯಾಗಲಿ, ನನಗೆ ಆ ಬ್ರಹ್ಮಜ್ಞಾನಿಯ ಅಗಲಿಕೆಯಾಗಲಿ, ಇರು ವುದಿಲ್ಲ. ॥೧೬॥

ಪರ್ವತರಾಜನೇ, ನಾನೇ ಆ ಜ್ಞಾನಿಯು. ಆ ಜ್ಞಾನಿಯೇ ನಾನು. ಎಂದು ತಿಳಿ. ಜ್ಞಾನಿಯೆಲ್ಲಿರುವನೋ ಅಲ್ಲಿಯೇ ನನ್ನ ದರ್ಶನವಾಗುವುದೆಂದೂ ತಿಳಿ. ॥೧೭॥

ನಾನು ತೀರ್ಥಕ್ಷೇತ್ರಗಳಲ್ಲಾಗಲಿ, ಕೈಲಾಸ, ವೈಕುಂಠಗಳಲ್ಲಾಗಲಿ ಮತ್ತೆ ಲ್ಲಿಯಾಗಲಿ ವಾಸಮಾಡತಕ್ಕವಳಲ್ಲ. ನನ್ನ ಪರಬ್ರಹ್ಮಸ್ವರೂಪವನ್ನೇ ಯಾವನು, ಆತ್ಮಾಭೇದಸಾಕ್ಷಾತ್ಕಾರದಿಂದ ತಿಳಿದಿರುವನೋ ಅವನ ಹೃದಯಕಮಲಮಧ್ಯದಲ್ಲಿ ಯಾವಾಗಲೂ ವಾಸವಾಗಿರುವೆನು. ॥೧೮॥

**ಮತ್ಪೂಜಾ ಕೋಟಿಫಲದಂ ಸಕೃನ್ಮಜ್ಞಾನಿನೋಽರ್ಚನಂ ।**
**ಕುಲಂ ಪವಿತ್ರಂ ತಸ್ಯಾಸ್ತಿ ಜನನೀ ಕೃತಕೃತ್ಯಕಾ ॥೧೯॥**

**ವಿಶ್ವಂಭರಾ ಪುಣ್ಯವತೀ ಚಿಲ್ಲಯೋ ಯಸ್ಯ ಚೇತಸಃ ।**
**ಬ್ರಹ್ಮಜ್ಞಾನಂ ತು ಯತ್ಪೃಷ್ಟಂ ತ್ವಯಾ ಪರ್ವತಸತ್ತಮ ॥೨೦॥**

**ಕಥಿತಂ ತನ್ಮಯಾ ಸರ್ವಂ ನಾಽತೋ ವಕ್ತವ್ಯಮಸ್ತಿ ಹಿ ।**
**ಇದಂ ಜ್ಯೇಷ್ಠಾಯ ಪುತ್ರಾಯ ಭಕ್ತಿಯುಕ್ತಾಯ ಶೀಲಿನೇ ॥೨೧॥**

**ಶಿಷ್ಯಾಯ ಚ ಯಥೋಕ್ತಾಯ ವಕ್ತವ್ಯಂ ನಾನ್ಯಥಾ ಕ್ವಚಿತ್ ।**
**ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ॥೨೨॥**

**ತಸ್ಯೈತೇ(ಽ)ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।**
**ಯೇನೋಪದಿಷ್ಟಾ ವಿದ್ಯೇಯಂ ಸ ಏವ ಪರಮೇಶ್ವರಃ ॥೨೩॥**

---

ಆತ್ಮಜ್ಞಾನಿಯನ್ನು ಒಂದಾವೃತ್ತಿ ಪೂಜೆಮಾಡಿದರೆ, ನನ್ನನ್ನು ಕೋಟಿಬಾರಿ ಪೂಜೆಮಾಡಿದ ಫಲವು ಬರುವುದು. ಅವನ ವಂಶವು ಪರಿಶುದ್ಧವಾಗುವುದು. ಅವನ ತಾಯಿಯೂ ಪುಣ್ಯಫಲವನ್ನು ಪಡೆಯುವಳು. ॥೧೯॥

ಯಾವ ಪುರುಷನ ಮನಸ್ಸು ಪರಮಾತ್ಮನಲ್ಲಿ ಲಯವಾಗುವುದೋ ಆ ಮನುಷ್ಯನು ವಾಸಮಾಡುವ ಭೂಮಿಯೇ ಪುಣ್ಯಫಲದಿಂದ ಕೂಡಿರುವುದು. ಎಲೈ ಪರ್ವತಶ್ರೇಷ್ಠನೇ, ನೀನು ಕೇಳಿದ ಬ್ರಹ್ಮಜ್ಞಾನದ ವಿಷಯವನ್ನೆಲ್ಲವನ್ನೂ ಹೇಳಿರುವೆನು. ಇನ್ನೂ ಹೇಳಬೇಕಾದುದೇನೂ ಉಳಿದು ಇರುವುದಿಲ್ಲ. ॥೨೦॥

ಇದನ್ನು ಭಕ್ತಿಯಿಂದಲೂ, ಒಳ್ಳೆಯ ಉಚಿತವಾದ ನಡತೆಯಿಂದಲೂ ಕೂಡಿದ ಹಿರಿಯ ಮಗನಿಗೂ, ಅಂತಹವನೇ ಆದ ಶಿಷ್ಯನಿಗೂ ಹೇಳಬೇಕು ಇತರರಿಗೆ ಹೇಳಬಾರದು. ॥೨೧॥

ಯಾವನಿಗೆ ದೇವರಲ್ಲಿಯೂ, ಗುರುವಿನಲ್ಲಿಯೂ ಒಂದೇ ಸಮವಾದ ಸಂಪೂರ್ಣವಾದ ಭಕ್ತಿ ಇರುವುದೋ ಅವನಿಗೆ ಗುರುವು ಹೇಳಿದ ವಿಷಯವೆಲ್ಲವೂ ಅನುಭವಕ್ಕೆ ಬರುವುದು ! ಮತ್ತು ಹೇಳದೇ ಇರಬಹುದಾದ ತತ್ವದ ಸ್ವರೂಪವೂ ಸ್ಫುರಿಸುತ್ತಿರುವುದು. ॥೨೨॥

ಯಾರಿಂದ ಈ ಬ್ರಹ್ಮವಿದ್ಯೆಯು ಉಪದೇಶಿಸಲ್ಪಟ್ಟಿತೋ ಅವನೇ ಪರಮೇಶ್ವರನು. ಈ ಉಪದೇಶಮಾಡಿದ ಗುರುವಿಗೆ ಶಿಷ್ಯನು ಆ ಉಪಕಾರಕ್ಕೆ ತಕ್ಕುದಾದ

ಯಸ್ಮಾಯಂ ಸುಕೃತಂ ಕರ್ತುಮಸಮರ್ಥಸ್ತತೋ ಋಣೀ ।
ಪಿತ್ರೋರಪ್ಯಧಿಕಃ ಪ್ರೋಕ್ತೋ ಬ್ರಹ್ಮ ಜನ್ಮ ಪ್ರದಾಯಕಃ ॥೨೪॥

ಪಿತೃಜಾತಂ ಜನ್ಮನಷ್ಟಂ ನೇತ್ಥಂ ಜಾತಂ ಕದಾಚನ ।
ತಸ್ಮೈ ನ ದ್ರುಹ್ಯೇದಿತ್ಯಾದಿ ನಿಗಮೋಽಪ್ಯವದನ್ನಗ ॥೨೫॥

ತಸ್ಮಾಚ್ಛಾಸ್ತ್ರಸ್ಯ ಸಿದ್ಧಾಂತೋ ಬ್ರಹ್ಮದಾತಾ ಗುರುಃ ಪರಃ ।
ಶಿವೇ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಶಂಕರಃ ॥೨೬॥

ತಸ್ಮಾತ್ಸರ್ವಪ್ರಯತ್ನೇನ ಶ್ರೀಗುರುಂ ತೋಷಯೇನ್ನಗ ।
ಕಾಯೇನ ಮನಸಾ ವಾಚಾ ಸರ್ವದಾ ತತ್ಪರೋ ಭವೇತ್ ॥೨೭॥

ಅನ್ಯಥಾ ತು ಕೃತಘ್ನಃ ಸ್ಯಾತ್ ಕೃತಘ್ನೇ ನಾಸ್ತಿ ನಿಷ್ಕೃತಿಃ ।
ಇಂದ್ರೇಣಾಥರ್ವಣಾ ಯೋಕ್ತಾ ಶಿರಶ್ಛೇದ ಪ್ರತಿಜ್ಞಯಾ ॥೨೮॥

---

ಪ್ರತ್ಯುಪಕಾರಮಾಡಲು ಅಸಮರ್ಥನಾದುದರಿಂದ, ಜೀವವಿರುವವರೆಗೂ ಅವನು ಋಣಿಯಾಗಿಯೇ ಇರುವನು. ॥೨೩॥

ಬ್ರಹ್ಮರೂಪವಾದ ಜನ್ಮವನ್ನು ಕೊಟ್ಟವನು ತಂದೆತಾಯಿಯರಿಗಿಂತಲೂ ಹೆಚ್ಚಿನವನು. ಏಕೆಂದರೆ ತಂದೆಯಿಂದ ಹುಟ್ಟಿದ ಈ ಪಾರ್ಥಿವಶರೀರವೂ ನಷ್ಟವಾಗುವುದು. ಬ್ರಹ್ಮಜ್ಞಾನರೂಪವಾದ ಈ ಶರೀರವಾದರೋ ಎಂದೆಂದಿಗೂ ನಷ್ಟವಾಗದು ! ಆದುದರಿಂದಲೇ, ಓ ಪರ್ವತರಾಜನೇ, ಅಂಥ ಗುರುವಿಗೆ ದ್ರೋಹಮಾಡಬಾರದೆಂದು ವೇದವು ಸಾರುತ್ತಿರುವುದು ! ॥೨೪-೨೫॥

ಆದುದರಿಂದಲೇ ಬ್ರಹ್ಮಜ್ಞಾನವನ್ನು ಉಪದೇಶಿಸಿದ ಗುರುವೇ ಶ್ರೇಷ್ಠನೆಂದು ಶಾಸ್ತ್ರಸಿದ್ಧಾಂತವಿರುವುದು. ಏಕೆಂದರೆ ಶಿವನು ಕೋಪಗೊಂಡರೆ ಗುರುವು ಕಾಪಾಡುವನು. ಗುರುವು ಕೋಪಗೊಂಡರೆ ಶಿವನೂ ಕಾಪಾಡಲಾರನು. ॥೨೬॥

ಓ ಪರ್ವತರಾಜನೇ, ಆದುದರಿಂದ ಸರ್ವಪ್ರಯತ್ನದಿಂದಲೂ ಗುರುವನ್ನು ಶಿಷ್ಯನು ಸಂತೋಷಪಡಿಸಬೇಕು. ಅಲ್ಲದೆ ಅವನು ತ್ರಿಕರಣಶುದ್ಧಿಪೂರ್ವಕವಾಗಿ ಗುರುವಿಗೆ ವಿಧೇಯನಾಗಿಯೂ ಇರಬೇಕು. ॥೨೭॥

ಎಲೈ ಪರ್ವತರಾಜನೇ, ಬ್ರಹ್ಮವಿದ್ಯೆಯನ್ನುಪದೇಶಿಸಿದ ಗುರುವಿಗೆ ಶಿಷ್ಯನು ವಿಧೇಯನಾಗಿರದಿದ್ದರೆ ಅವನು ಕೃತಘ್ನನಾಗುವನು. ಮತ್ತು ಅವನ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ. ಈ ವಿಚಾರದಲ್ಲಿ ವೇದದಲ್ಲಿ ಒಂದು ಕಥೆಯು ಇರುವುದು. ದಧ್ಯಙ್

**ಅಶ್ವಿಭ್ಯಾಂ ಕಥನೇ ತಸ್ಯ ಶಿರಶ್ಛಿನ್ನಂ ಚ ವಜ್ರಿಣಾ ।**
**ಅಶ್ವೀಯಮಂತಚ್ಛಿರೋ ನಷ್ಟಂ ದೃಷ್ಟ್ವಾ ವೈದ್ಯೌ ಸುರೋತ್ತಮೌ॥೨೯॥**
**ಪುನಃ ಸಂಯೋಜಿತಂ ಸ್ವೀಯಂ ತಾಭ್ಯಾಂ ಮುನಿಶಿರಸ್ತದಾ ।**
**ಇತಿ ಸಂಕಟಸಂಪಾದ್ಯಾ ಬ್ರಹ್ಮವಿದ್ಯಾ ನಗಾಧಿಪ ॥೩೦॥**
**ಲಬ್ಧಾ ಯೇನ ಸ ಧನ್ಯಃ ಸ್ಯಾತ್ಕೃತಕೃತ್ಯಶ್ಚ ಭೂಧರ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ ಷಟ್ತ್ರಿಂಶೋಽಧ್ಯಾಯಃ.**

---

ಎಂಬ ಹೆಸರಿನ, ಅಥರ್ವಣವೇದವನ್ನಭ್ಯಾಸಮಾಡಿದ, ಮುನಿಯು ಇಂದ್ರನ ಸಮಿಾಪಕ್ಕೆ ಹೋಗಿ ತನಗೆ ಬ್ರಹ್ಮವಿದ್ಯೆಯನ್ನು ಉಪದೇಶಮಾಡೆಂದನು. ಇಂದ್ರನು ಆ ಮುನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿ, ನೀನು ಇದನ್ನು ಇನ್ನೊಬ್ಬರಿಗೆ ಹೇಳಿದ ಕ್ಷಣದಲ್ಲಿಯೇ ನಿನ್ನ ತಲೆಯನ್ನು ಕತ್ತರಿಸುವೆನೆಂದನು. ಕೆಲವು ಕಾಲದ ಮೇಲೆ ಅಶ್ವಿನೀದೇವತೆಗಳು ಆ ಮುನಿಯ ಬಳಿಗೆ ಬಂದು ಬ್ರಹ್ಮವಿದ್ಯೆಯನ್ನು ಯಾಚಿಸಿದರು. ಮುನಿಯು ಇಂದ್ರನ ಪ್ರತಿಜ್ಞೆಯನ್ನು ಅವರಿಗೆ ತಿಳಿಸಿದನು. ಆಗ ದೇವವೈದ್ಯರು ಆ ಮುನಿಯನ್ನು ಕುರಿತು ನಿನ್ನ ಈ ತಲೆಯನ್ನು ಕತ್ತರಿಸಿ ಬೇರೆಕಡೆ ಮರೆಮಾಡಿರುತ್ತೇವೆ. ಮತ್ತು ನಿನಗೊಂದು ಕುದುರೆಯ ತಲೆಯನ್ನು ಸೇರಿಸಿರುತ್ತೇವೆ. ಆ ಬಾಯಿಯಿಂದ ಬ್ರಹ್ಮವಿದ್ಯೆಯನ್ನು ನಮಗೆ ಹೇಳು. ದೇವೇಂದ್ರನು ಆ ತಲೆಯನ್ನು ಕತ್ತರಿಸಿದ ಮೇಲೆ ನಿನ್ನ ಹಿಂದಿನ ತಲೆಯನ್ನು ಮತ್ತೆ ಕೂಡಿಸುವೆವು. ಆಮೇಲೆ ಸಂಪೂರ್ಣವಾಗಿ ಬ್ರಹ್ಮವಿದ್ಯೆಯನ್ನು ನಮಗೆ ಉಪದೇಶಮಾಡೆಂದರು. ಆ ಮುನಿಯೂ ಒಪ್ಪಿದನು. ಹಾಗೆಯೇ ಮಾಡಲು ಆ ಕುದುರೆಯ ತಲೆಯು ಹೋದಮೇಲೆ ಅಶ್ವಿನೀದೇವತೆಗಳು ಆ ಮುನಿಯ ತಲೆಯನ್ನು ಪುನಃ ಶರೀರಕ್ಕೆ ಸೇರಿಸಿದರು. ಬ್ರಹ್ಮವಿದ್ಯೆಯು ಕಷ್ಟದಿಂದ ಸಂಪಾದಿಸತಕ್ಕುದೆಂದು ಉಪದೇಶಿಸುವುದಕ್ಕಾಗಿ ಈ ಕಥೆಯು ವೇದದಲ್ಲಿ ಹೇಳಿದೆ. ಯಾರಿಗೆ ಬ್ರಹ್ಮವಿದ್ಯೆಯು ಪ್ರಾಪ್ತವಾಗುವುದೋ ಅವರೇ ಕೃತಾರ್ಥರು. ||೨೮-೨೯-೩೦||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

### ॥ ಸಪ್ತತ್ರಿಂಶೋಽಧ್ಯಾಯಃ ॥

### ಮೂವತ್ತೇಳನೆಯ ಅಧ್ಯಾಯವು

॥ ಹಿಮಾಲಯ ಉವಾಚ ॥

**ಸ್ವೀಯಾಂ ಭಕ್ತಿಂ ವದಸ್ವಾಂಬ ಯೇನ ಜ್ಞಾನಂ ಸುಖೇನ ಹಿ ।**
**ಜಾಯೇತ ಮನುಜಸ್ಯಾಸ್ಯ ಮಧ್ಯಮಸ್ಯಾವಿರಾಗಿಣಃ ॥೧॥**

॥ ದೇವ್ಯುವಾಚ ॥

**ಮಾರ್ಗಾಃ ತ್ರಯೋ ಮೇ ವಿಖ್ಯಾತಾ ಮೋಕ್ಷಪ್ರಾಪ್ತೌ ನಗಾಧಿಪ ।**
**ಕರ್ಮಯೋಗೋ ಜ್ಞಾನಯೋಗೋ ಭಕ್ತಿಯೋಗಶ್ಚ ಸತ್ತಮ ॥೨॥**

**ತ್ರಯಾಣಾಮಪ್ಯಯಂ ಯೋಗಃ ಕರ್ತುಂ ಶಕ್ಯೋಽಸ್ತಿ ಸರ್ವಥಾ ।**
**ಸುಲಭತ್ವಾನ್ಮಾನಸತ್ವಾತ್ಕಾಯಚಿತ್ತಾದ್ಯಪೀಡನಾತ್ ॥೩॥**

---

ಹಿಮಾಲಯನು ಹೇಳಿದನು—ಓ ತಾಯಿಯೇ ಮಧ್ಯಮಾಧಿಕಾರಿಯಾದ ವೈರಾಗ್ಯವಿಲ್ಲದ ಮನುಷ್ಯನಿಗೆ ಸುಖವಾಗಿ ಜ್ಞಾನವುಂಟಾಗುವುದಕ್ಕೆ ಕಾರಣವಾದ ನಿನ್ನ ಸಂಬಂಧವಾದ ಭಕ್ತಿಯ ಸ್ವರೂಪವನ್ನು ನನಗೆ ವಿವರಿಸಬೇಕು. ॥೧॥

ದೇವಿಯು ಹೇಳಿದಳು—ಶ್ರೇಷ್ಠವಾದ ಪರ್ವತರಾಜನೇ, ಮೋಕ್ಷಪ್ರಾಪ್ತಿಗೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗವೆಂದು ಪ್ರಸಿದ್ಧವಾದ ಮೂರು ಮಾರ್ಗಗಳಿರುವುವು. ॥೨॥

ಆ ಮೂರು ಮಾರ್ಗಗಳಲ್ಲಿ ಭಕ್ತಿಯೋಗವೆಂಬುದು ಸರ್ವರಿಗೂ ಅನುಸರಿಸಲು ಸಾಧ್ಯವಾದುದು. ಇದರಿಂದ ಶರೀರಕ್ಕೂ ಮನಸ್ಸಿಗೂ ಯಾವ ಬಾಧೆಯೂ ಇರುವುದಿಲ್ಲ. ದ್ರವ್ಯ ವ್ಯಯವಾಗುವುದೆಂಬ ಭಯವಿಲ್ಲ. ಇತರ ಎರಡು ಯೋಗ

ಗುಣಭೇದಾತ್ ಮನುಷ್ಯಾಣಾಂ ಸಾ ಭಕ್ತಿಃ ತ್ರಿವಿಧಾ ಮತಾ ।
ಪರಪೀಡಾಂ ಸಮುದ್ದಿಶ್ಯ ದಂಭಂ ಕೃತ್ವಾ ಪುರಸ್ಸರಂ ॥೪॥

ಮಾತ್ಸರ್ಯ ಕ್ರೋಧಯುಕ್ತೋ ಯಃ ತಸ್ಯ ಭಕ್ತಿಸ್ತು ತಾಮಸೀ ।
ಪರಪೀಡಾದಿರಹಿತಃ ಸ್ವ-ಕಲ್ಯಾಣಾರ್ಥಮೇವ ಚ ॥೫॥

ನಿತ್ಯಂ ಸಕಾಮೋ ಹೃದಯೇ ಯಶೋಽರ್ಥೀ ಭೋಗಲೋಲುಪಃ ।
ತತ್ತತ್ಫಲಸಮಾವಾಪ್ತ್ಯೈ ಮಾಮುಪಾಸ್ತೇಽತಿಭಕ್ತಿತಃ ॥೬॥

ಭೇದಬುದ್ಧ್ಯಾ ತು ಮಾಂ ಸ್ವಸ್ಮಾದನ್ಯಾಂ ಜಾನಾತಿ ಪಾಮರಃ ।
ತಸ್ಯ ಭಕ್ತಿಃ ಸಮಾಖ್ಯಾತಾ ನಗಾಧಿಪ ತು ರಾಜಸೀ ॥೭॥

ಪರಮೇಶಾರ್ಪಣಂ ಕರ್ಮ ಪಾಪಸಂಕ್ಷಾಲನಾಯ ಚ ।
ವೇದೋಕ್ತತ್ವಾದವಶ್ಯಂ ತತ್ಕರ್ತವ್ಯಂ ತು ಮಯಾಽನಿಶಂ ॥೮॥

---

ಗಳಿಗಿಂತಲೂ ಇದು ಕೇವಲವಾಗಿ ಮನೋವೃತ್ತಿಮಾತ್ರದಿಂದಲೇ ಸಾಧಿಸಬಹುದಾದುದರಿಂದ ಸುಲಭಸಾಧ್ಯವಾದುದು. ॥೩॥

ಮನುಜನ ಗುಣಗಳ ಭೇದದಿಂದ ಆ ಭಕ್ತಿಯು ಮೂರು ಬಗೆಯಾಗಿರುವುದು. ಹೇಗೆಂದರೆ—ಇತರರಿಗೆ ತೊಂದರೆಯಾಗಬೇಕೆಂಬುದನ್ನೇ ಮುಖ್ಯೋದ್ದೇಶವನ್ನಾಗಿ ಮಾಡಿಕೊಂಡು ಡಂಭದಿಂದ ಭಕ್ತನಂತೆ ನಟಿಸುತ್ತಾ, ಹೊಟ್ಟೆಯ ಕಿಚ್ಚನ್ನೂ ಕೋಪವನ್ನೂ ಹೊಂದಿ ಇರುವ ಮನುಷ್ಯನ ಭಕ್ತಿಯನ್ನು ತಾಮಸ ಭಕ್ತಿಯೆಂದು ಕರೆಯಬೇಕು. ॥೪॥

ಓ ಪರ್ವತರಾಜನೇ, ಇತರರಿಗೆ ತೊಂದರೆಯನ್ನು ಕೊಡದೆ ತನಗೆ ಒಳ್ಳೆಯದಾಗಬೇಕೆಂದು ಯಾವಾಗಲೂ ಮನಸ್ಸಿನಲ್ಲಿ ಆಸೆಯಿಂದ ಕೂಡಿ ಕೀರ್ತಿಯಲ್ಲಿಯೂ, ಸುಖಾನುಭವದಲ್ಲಿಯೂ ಆಸಕ್ತನಾಗಿ ಆ ಫಲಪ್ರಾಪ್ತಿಗೋಸ್ಕರವಾಗಿ ಬಹಳವಾದ ಭಕ್ತಿಯಿಂದ ಯಾವನು ಉಪಾಸನೆಯನ್ನು ಮಾಡುವನೋ ಮತ್ತು ಅಜ್ಞಾನದಿಂದ ನನ್ನನ್ನು ತನಗಿಂತ ಬೇರೆಯಾಗಿ ಜೀವೇಶ್ವರಭೇದ ಬುದ್ಧಿಯಿಂದ ಯಾವನು ತಿಳಿದಿರುವನೋ, ಅವನ ಕಾಮ್ಯಭಕ್ತಿಯು ರಾಜಸಭಕ್ತಿಯಾಗುವುದು. ॥೫-೬-೭॥

ಕರ್ಮವು ವೇದದಲ್ಲಿ ಹೇಳಿರುವುದು. ಅದನ್ನು ಭಕ್ತನಾದವನು ಪಾಪಕ್ಷಯಕ್ಕಾಗಿಯೂ, ಪರಮೇಶ್ವರ ಪ್ರೀತಿಗೋಸ್ಕರವಾಗಿಯೂ, ಅವಶ್ಯಕವಾಗಿ ಯಾವಾಗಲೂ

ಇತಿ ನಿಶ್ಚಿತಬುದ್ಧಿಸ್ತೇ(ಸ್ತು)ಭೇದಬುದ್ಧಿ ಮುಪಾಶ್ರಿತಃ ।
ಕರೋತಿ ಪ್ರೀತಯೇ ಕರ್ಮ ಭಕ್ತಿಃ ಸಾ ನಗ ಸಾತ್ವಿಕೀ ॥೯॥

ಪರಭಕ್ತೇಃ ಪ್ರಾಪಿಕೇ ಯಂ ಭೇದಬುದ್ಧ್ಯವಲಂಬನಾತ್ ।
ಪೂರ್ವಪ್ರೋಕ್ತೇ ಹ್ಯುಭೇ ಭಕ್ತೀ ನ ಪರಪ್ರಾಪಿಕೇ ಮತೇ ॥೧೦॥

ಅಧುನಾ ಪರಭಕ್ತಿಂತು ಪ್ರೋಚ್ಯಮಾನಂ ನಿಬೋಧ ಮೇ ।
ಮದ್ಗುಣಶ್ರವಣಂ ನಿತ್ಯಂ ಮಮ ನಾಮಾನುಕೀರ್ತನಂ ॥೧೧॥

ಕಲ್ಯಾಣಗುಣರತ್ನಾನಾಂ ಆಕರಾಯಾಂ ಮಯಿ ಸ್ಥಿರಂ ।
ಚೇತಸೋ ವರ್ತನಂ ಚೈವ ತೈಲಧಾರಾಸಮಂ ಸದಾ ॥೧೨॥

---

ನಾನು ಮಾಡಬೇಕಾದುದು, ಎಂದು ನಿಶ್ಚಯಮಾಡಿಕೊಂಡು ಆಚರಿಸಬೇಕು. ಮತ್ತು ಜೀವೇಶ್ವರರಿಗೆ ಅಭೇದವೆಂಬ ಬುದ್ಧಿಯನ್ನೇ ಹೊಂದಲು ಈಶ್ವರ ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡುತ್ತಾ ಬರುವವನ ಆ ಭಕ್ತಿಯು ಸಾತ್ವಿಕಭಕ್ತಿಯಾಗುವುದು. ಇಲ್ಲಿ ಕರ್ಮವೆಂದರೆ ವರ್ಣಾಶ್ರಮಧರ್ಮಪಾಲನೆಯಾಗಿದೆ. ||೮-೯||

ಈ ಸಾತ್ವಿಕಭಕ್ತಿಯಲ್ಲಿಯೂ ಜೀವೇಶ್ವರಭೇದವು ಸಂಪೂರ್ಣವಾಗಿ ಅಳಿಯದೇ ಇರುವುದರಿಂದ ಪರಾಭಕ್ತಿಯಾಗಲಾರದು. ಆದರೆ ಇದು ಆ ಪರಾಭಕ್ತಿಯನ್ನುಂಟುಮಾಡುವುದು. ಹಿಂದೆ ಹೇಳಿದ ತಾಮಸ ರಾಜಸ ಭಕ್ತಿಗಳೆರಡೂ ಪರಾಭಕ್ತಿಯನ್ನುಂಟುಮಾಡುವುದಿಲ್ಲ. ಪರಪ್ರೇಮವು ಆತ್ಮನಲ್ಲಿ ಮಾತ್ರ ಸಂಭವಿಸುವುದು. ಅದೇ ಪರಾಭಕ್ತಿಯು "ಪುತ್ರಾತ್ಪ್ರೇಯಃ ವಿತ್ತಾತ್ಪ್ರೇಯಃ ಸರ್ವಸ್ಮಾದ್ಯದಂತರತರಂ ।" ಇತ್ಯಾದಿ ಶ್ರುತಿಯಿಂದ ಆತ್ಮಪ್ರೇಮವೇ ಪರಾಭಕ್ತಿಯೆಂದು ಹೇಳಿರುವುದು. ||೧೦||

ಓ ಪರ್ವತರಾಜನೇ, ಈಗ ಪರಭಕ್ತಿಯ ಸ್ವರೂಪವನ್ನು ಹೇಳುವೆನು, ಕೇಳು. ಪ್ರತಿದಿನವೂ ನನ್ನ ಗುಣಗಳನ್ನು ಕೇಳುವುದು, ನನ್ನ ನಾಮಗಳನ್ನು ಹೇಳುವುದು, ಮತ್ತು ಮಂಗಳಕರವಾದ ಗುಣಗಳೆಂಬ ರತ್ನಗಳಿಗೆ ಗಣಿಯಾದ ನನ್ನಲ್ಲಿ ಮನಸ್ಸನ್ನು ತೈಲಧಾರೆಯಂತೆ ಅವಿಚ್ಛಿನ್ನವಾಗಿ ಸ್ಥಿರವಾಗಿ ನೆಲೆಗೊಳಿಸುವುದೂ, ಪರಾಭಕ್ತಿಯಾಗುತ್ತದೆ. ||೧೧-೧೨||

ಹೇತುಸ್ತು ತತ್ರ ಕೋ ವಾಽಪಿ ನ ಕದಾಚಿದ್ಭವೇದಪಿ ।
ಸಾಮಿಪ್ಯ ಸಾರ್ಷ್ಟಿ ಸಾಯುಜ್ಯ ಸಾಲೋಕ್ಯಾನಾಂ ನಚೈಷಣಾ ॥೧೩॥

ಮತ್ಸೇವಾತೋಽಧಿಕಂ ಕಿಂಚಿನ್ನೈವ ಜಾನಾತಿ ಕರ್ಹಿಚಿತ್ ।
ಸೇವ್ಯಸೇವಕತಾಭಾವಾತ್ತತ್ರ ಮೋಕ್ಷಂ ನ ವಾಂಛತಿ ॥೧೪॥

ಪರಾನುರಕ್ತ್ಯಾ ಮಾಮೇವ ಚಿಂತಯೇದ್ಯೋಽಹ್ಯತಂದ್ರಿತಃ ।
ಸ್ವಾಭೇದೇನೈವ ಮಾಂ ನಿತ್ಯಂ ಜಾನಾತಿ ನ ವಿಭೇದತಃ ॥೧೫॥

ಮದ್ರೂಪತ್ವೇನ ಜೀವಾನಾಂ ಚಿಂತನಂ ಕುರುತೇ ತು ಯಃ ।
ಯಥಾ ಸ್ವಸ್ಯಾತ್ಮನಿ ಪ್ರೀತಿಃ ತಥೈವ ಚ ಪರಾತ್ಮನಿ ॥೧೬॥

ಚೈತನ್ಯಸ್ಯ ಸಮಾನತ್ವಾನ್ನ ಭೇದಂ ಕುರುತೇ ತು ಯಃ ।
ಸರ್ವತ್ರ ವರ್ತಮಾನಾಂ ಮಾಂ ಸರ್ವರೂಪಾಂ ಚ ಸರ್ವದಾ ॥೧೭॥

---

ಪರಭಕ್ತಿಗೆ ಯಾವ ಕಾರಣವಿಶೇಷವೂ ಇರುವುದಿಲ್ಲ. ನನ್ನ ಸಂತೋಷ ಕ್ಕೋಸ್ಕರವಾಗಿ ಭಕ್ತನು ತನ್ನ ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸುವನು. ಆ ಭಕ್ತನು ಸಾಮಿಪ್ಯ ಸಾಲೋಕ್ಯ ಸಾರೂಪ್ಯಗಳೆಂಬ ಫಲಗಳಲ್ಲಿ ಆಸೆಯಿಂದ ನನ್ನ ಪೂಜೆಯನ್ನು ಮಾಡುತ್ತಿರುವುದಿಲ್ಲ. ನನ್ನ ಪೂಜೆಗಿಂತಲೂ ಮೇಲಾದುದು ಯಾವುದೂ ಇಲ್ಲ ವೆಂದೇ ಅವನು ತಿಳಿದಿರುವನು. ಸೇವ್ಯಸೇವಕ ಎಂಬ ಭೇದಭಾವವನ್ನೂ ಬಿಟ್ಟು ನನ್ನ ಪೂಜೆಯನ್ನೇ ಬಯಸುವನು. ಮೋಕ್ಷವನ್ನೂ ಕೂಡಾ ಬಯಸುವುದಿಲ್ಲ. ॥೧೩-೧೪॥

ಆ ಭಕ್ತನು ಆಲಸ್ಯವಿಲ್ಲದೆ ವಿಶೇಷವಾದ ಅನನ್ಯವೂ ಏಕಾಗ್ರವೂ ಆದ ಪ್ರೀತಿ ಯಿಂದ ನನ್ನನ್ನೇ ಚಿಂತಿಸುತ್ತಿರುವನು. ಯಾವಾಗಲೂ ನನ್ನನ್ನು ತನಗಿಂತ ಬೇರೆ ಯಾಗಿ ಭಾವಿಸುವುದಿಲ್ಲ. ಅಭೇದವಾಗಿ ತಿಳಿವನು. ಸಮಸ್ತ ಜೀವರುಗಳೂ ನನ್ನ ಸ್ವರೂಪವೆಂದು ಯೋಚಿಸುತ್ತಿರುವನು. ತನ್ನ ಶರೀರದಲ್ಲಿರುವ ಜೀವನ ವಿಷಯದಲ್ಲಿ ಯಾವ ಪ್ರೀತಿಯಿರುವುದೋ ಹಾಗೆಯೇ ಮತ್ತೊಬ್ಬನ ಶರೀರದಲ್ಲಿರುವ ಜೀವನ ವಿಷಯದಲ್ಲಿಯೂ ಪ್ರೀತಿಯನ್ನಿಟ್ಟಿರುವನು. ॥೧೫-೧೬॥

ಓ ಪರ್ವತರಾಜನೇ, ಚೈತನ್ಯಶಕ್ತಿಯು ಎಲ್ಲರಲ್ಲಿಯೂ ಒಂದೇವಿಧವಾಗಿರು ವುದರಿಂದ, ಆ ದೃಷ್ಟಿಯಿಂದ ಭೇದಭಾವವನ್ನು ಮಾಡುವುದಿಲ್ಲ. ಯಾವಾಗಲೂ ನಾನು ಚಿದಚಿದ್ರೂಪವಾದ ಸಕಲ ವಸ್ತುಸ್ವರೂಪಳಾಗಿ ಆ ಎಲ್ಲ ಪದಾರ್ಥಗಳಲ್ಲಿಯೂ

ನಮತೇ ಯಾಜತೇ ಚೈವಾಪ್ಯಾ ಚಾಂಡಾಲಾಂತಮೀಶ್ವರ ।
ನ ಕುತ್ರಾಪಿ ದ್ರೋಹಬುದ್ಧಿಂ ಕುರುತೇ ಭೇದವರ್ಜನಾತ್ ॥೧೮॥

ಮತ್ಸ್ಥಾನದರ್ಶನಶ್ರದ್ಧಾ ಮದ್ಭಕ್ತದರ್ಶನೇ ತಥಾ ।
ಮಚ್ಛಾಸ್ತ್ರಶ್ರವಣೇ ಶ್ರದ್ಧಾ ಮಂತ್ರತಂತ್ರಾದಿಷು ಪ್ರಭೋ ॥೧೯॥

ಮಯಿ ಪ್ರೇಮಾಕುಲಮತೀ ರೋಮಾಂಚಿತತನುಃ ಸದಾ ।
ಪ್ರೇಮಾಶ್ರುಜಲಪೂರ್ಣಾಕ್ಷಃ ಕಂಠಗದ್ಗದ ನಿಸ್ವನಃ ॥೨೦॥

ಅನನ್ಯೇನೈವ ಭಾವೇನ ಪೂಜಯೇದ್ಯೋ ನಗಾಧಿಪ ।
ಮಾಮೀಶ್ವರೀಂ ಜಗದ್ಯೋನಿಂ ಸರ್ವಕಾರಣಕಾರಣಾಂ ॥೨೧॥

ವ್ರತಾನಿ ಮಮ ದಿವ್ಯಾನಿ ನಿತ್ಯನೈಮಿತ್ತಿಕಾನ್ಯಪಿ ।
ನಿತ್ಯಂ ಯಃ ಕುರುತೇ ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ॥೨೨॥

---

ಇರುವುದರಿಂದ ಬ್ರಹ್ಮಾದಿ ಚಾಂಡಾಲಾಂತವಾಗಿರುವ ಸಮಸ್ತರನ್ನೂ ನಮಸ್ಕರಿಸುತ್ತಾನೆ. ಮತ್ತು ಪೂಜಿಸುತ್ತಾನೆ. ಸೇವ್ಯಸೇವಕ ಎಂಬ ಭೇದಬುದ್ಧಿಯಿಲ್ಲದುದರಿಂದ, ಎಲ್ಲರೂ ತನಗೆ ಆತ್ಮಸ್ವರೂಪರು ಎಂಬ ನಿಶ್ಚಯಬುದ್ಧಿಯು ಇರುವುದರಿಂದಲೂ, ಯಾರಿಗೂ ಅಂಥವನು ಕೆಡುಕನ್ನು ಬಯಸುವುದಿಲ್ಲ. ॥೧೭-೧೮॥

ಓ ಪರ್ವತರಾಜನೇ, ನಾನು ನೆಲೆಸಿರುವ ಸ್ಥಳಗಳನ್ನೂ ನನ್ನ ಭಕ್ತರನ್ನೂ ನೋಡಬೇಕೆಂಬ ಆಸಕ್ತಿಯುಳ್ಳ, ನನ್ನನ್ನು ತಿಳಿಸುವ ಶಾಸ್ತ್ರವಾದ ದೇವೀಭಾಗವತ, ವೇದಾಂತ, ಮತ್ತು ಮಂತ್ರತಂತ್ರಗಳ ವಿಷಯವನ್ನು ಕೇಳಬೇಕೆಂಬ ಆಸಕ್ತಿಯುಳ್ಳ, ನನ್ನಲ್ಲಿರುವ ಪ್ರೀತಿಬುದ್ಧಿಯಿಂದ ಶರೀರದಲ್ಲಿ ರೋಮಾಂಚವುಳ್ಳವನೂ, ಕಣ್ಣಿನಲ್ಲಿ ಆನಂದದಿಂದುಂಟಾದ ನೀರು ತುಂಬಿರಲು, ಕುತ್ತಿಗೆಯಲ್ಲಿ ಗದ್ಗದಧ್ವನಿಯುಳ್ಳವನೂ ಆಗಿರುವನು. ॥೧೯-೨೦॥

ಓ ಪರ್ವತರಾಜನೇ, ಸಮಸ್ತಕಾರಣವಸ್ತುಗಳಿಗೂ ಕಾರಣಳಾದ ಎಲ್ಲ ಪ್ರಪಂಚಕ್ಕೂ ಉತ್ಪತ್ತಿಸ್ಥಾನಳಾದ, ಭುವನೇಶ್ವರಿಯಾದ, ನನ್ನನ್ನು ತನ್ನ ಆತ್ಮಸ್ವರೂಪವೆಂದು ಭಾವಿಸಿ ಯಾವನು ಪೂಜಿಸುವನೋ, ಶ್ರೇಷ್ಠವಾದ ನನ್ನ ಸಂಬಂಧವಾದ ನಿತ್ಯ ಮತ್ತು ನೈಮಿತ್ತಿಕಗಳಾದ ವ್ರತಗಳನ್ನು ಧನಲೋಭವನ್ನು ಮಾಡದೆ ಅನನ್ಯಭಕ್ತಿಯಿಂದ ಯಾವನು ಮಾಡುವನೋ, ॥೨೧-೨೨॥

ಮದುತ್ಸವ ದಿದೃಕ್ಷಾ ಚ ಮದುತ್ಸವಕೃತಿಸ್ತಥಾ ।
ಜಾಯತೇ ಯಸ್ಯ ನಿಯತಂ ಸ್ವಭಾವಾದೇವ ಭೂಧರ ॥೨೩॥

ಉಚ್ಚೈರ್ಗಾಯಂಶ್ಚ ನಾಮಾನಿ ಮಮೈವ ಖಲು ನೃತ್ಯತಿ ।
ಅಹಂಕಾರಾದಿ ರಹಿತೋ ದೇಹತಾದಾತ್ಮ್ಯವರ್ಜಿತಃ ॥೨೪॥

ಪ್ರಾರಬ್ಧೇನ ಯಥಾ ಯಚ್ಚ ಕ್ರಿಯತೇ ತತ್ತಥಾ ಭವೇತ್ ।
ನ ಮೇ ಚಿಂತಾಽಸ್ತಿ ತತ್ರಾಪಿ ದೇಹಸಂರಕ್ಷಣಾದಿಷು ॥೨೫॥

ಇತಿ ಭಕ್ತಿಸ್ತು ಯಾ ಪ್ರೋಕ್ತಾ ಪರಭಕ್ತಿಸ್ತು ಸಾ ಸ್ಮೃತಾ ।
ಯಸ್ಯಾಂ ದೇವ್ಯತಿರಿಕ್ತಂ ತು ನ ಕಿಂಚಿದಪಿ ಭಾವ್ಯತೇ ॥೨೬॥

ಇತ್ಥಂ ಜಾತಾ ಪರಾಭಕ್ತಿಃ ಯಸ್ಯ ಭೂಧರ ತತ್ವತಃ ।
ತದೈವ ತಸ್ಯ ಚಿನ್ಮಾತ್ರೇ ಮದ್ರೂಪೇ ವಿಲಯೋ ಭವೇತ್ ॥೨೭॥

---

ಮತ್ತೊಬ್ಬರು ಮಾಡುತ್ತಿರುವ ನನ್ನ ಉತ್ಸವಗಳನ್ನು ನೋಡುವುದೂ ತಾನೂ ನನ್ನ ಉತ್ಸವಗಳನ್ನು ತಪ್ಪದೆ ಮಾಡುವುದೂ ಇವುಗಳಲ್ಲಿ ಆದರವು ಯಾವನಿಗೆ ಸ್ವಭಾವವಾಗಿ ಉಂಟಾಗುವುದೋ, ಯಾವನು ಅಹಂಕಾರವನ್ನೂ ಈ ದೇಹವು ತಾನೆಂಬ ಭಾವನೆಯನ್ನೂ, ಬಿಟ್ಟು ನನ್ನ ನಾಮಗಳನ್ನು ಗಟ್ಟಿಯಾಗಿ ಗಾನಮಾಡುತ್ತಾ ನರ್ತನಮಾಡುವನೋ, ॥೨೩-೨೪॥

ಪ್ರಾರಬ್ಧಕರ್ಮಾನುಸಾರವಾಗಿ ಯಾವುದು ಹೇಗಾಗಬೇಕೋ ಹಾಗಾಗುತ್ತದೆ. ದೇಹಸಂರಕ್ಷಣೆಯ ವಿಷಯದಲ್ಲಿಯೂ ನನಗೆ ಯೋಚನೆಯಿರಬೇಕಾಗಿಲ್ಲವು. ಎಂದು ತನ್ನ ಮನಸ್ಸಿನಲ್ಲಿ ದೇವಿಯು ಹೊರತಾಗಿ ಮತ್ತೊಂದನ್ನೂ ಯಾವನು ಭಾವಿಸುವುದಿಲ್ಲವೋ, ಹೀಗೆ ಇದುವರೆಗೂ ವಿಸ್ತರಿಸಿ ವಿವರಿಸಿದ ಭಕ್ತಿಯನ್ನು ಪರಭಕ್ತಿಯೆಂದು ತಿಳಿಯಬೇಕು. ಎಂದು ಹೇಳಿದೆ. ॥೨೫-೨೬॥

ಓ ಪರ್ವತನೇ, ಯಾವನಿಗೆ ಈ ರೀತಿಯಾದ ನಿಜವಾದ ಪರಾಭಕ್ತಿಯುಂಟಾಗುವುದೋ, ಆ ಕ್ಷಣದಲ್ಲಿಯೇ ಆತನಿಗೆ ಜ್ಞಾನಸ್ವರೂಪಳಾದ ನನ್ನಲ್ಲಿ ಐಕ್ಯವುಂಟಾಗುವುದು. ॥೨೭॥

ಭಕ್ತೇಸ್ತು ಯಾ ಪರಾ ಕಾಷ್ಠಾ ಸೈವ ಜ್ಞಾನಂ ಪ್ರಕೀರ್ತಿತಂ ।
ವೈರಾಗ್ಯಸ್ಯ ಚ ಸೀಮಾ ಸಾ ಜ್ಞಾನೇ ತದುಭಯಂ ಯತಃ ॥೨೮॥

ಭಕ್ತೌ ಕೃತಾಯಾಂ ಯಸ್ಯಾಪಿ ಪ್ರಾರಬ್ಧವಶತೋ ನಗ ।
ನ ಜಾಯತೇ ಮಮ ಜ್ಞಾನಂ ಮಣಿದ್ವೀಪಂ ಸ ಗಚ್ಛತಿ ॥೨೯॥

ತತ್ರ ಗತ್ವಾಽಖಿಲಾನ್ಭೋಗಾನನಿಚ್ಛನ್ನಪಿ ಚರ್ಚ್ಛತಿ ।
ತದಂತೇ ಮಮ ಚಿದ್ರೂಪ ಜ್ಞಾನಂ ಸಮ್ಯಗ್ಭವೇನ್ನಗ ॥೩೦॥

---

ಭಕ್ತಿ ವೈರಾಗ್ಯಗಳೆರಡೂ ಜ್ಞಾನಕ್ಕೆ ಸಾಧನಗಳು ಇವುಗಳ ಪರಾಕಾಷ್ಠೆಯೇ ಎಂದರೆ ಕೊನೆಯಮೆಟ್ಟಲೇ ಜ್ಞಾನವು. ಏಕೆಂದರೆ ಭಕ್ತನಿಗೆ ತನ್ನ ಇಷ್ಟದೇವತೆಯಲ್ಲಿ ಸರ್ವಜ್ಞತ್ವ ಸರ್ವಶಕ್ತತ್ವ ಭಾವನೆಯಿಂದ ಸರ್ವೋತ್ತಮ ಭಾವನೆಯುಂಟಾಗಿ ಇತರರಲ್ಲಿ ವೈರಾಗ್ಯದಿಂದ ಭಕ್ತಿಯು ತೀವ್ರವಾಗಿ ಅನನ್ಯವೂ ಏಕಾಗ್ರವೂ ಆಗುತ್ತದೆ. ಆಗಲೇ ತ್ರಿಪುಟಿಯು, ಎಂದರೆ ಪೂಜ್ಯ, ಪೂಜಕ, ಪೂಜಾ ಎಂಬ ಭೇದಭಾವವು ಅಳಿದು ಭಕ್ತನು ದೇವತೆಯಲ್ಲಿ ಅಭೇದ ಭಾವನೆಯಿಂದ ಲೀನನಾಗಿ ಸಚ್ಚಿದಾನಂದ ರೂಪನಾಗುತ್ತಾನೆ. ಆಗ ಜೀವಬ್ರಹ್ಮೈಕ್ಯವು, ಜ್ಞಾನವೈರಾಗ್ಯದಿಂದಲೂ ಆಗುವ ಫಲವು, ಅಪರೋಕ್ಷಾನುಭವವಾಗುವುದರಿಂದ, ವೈರಾಗ್ಯ, ಭಕ್ತಿ, ಜ್ಞಾನ, ಯೋಗಗಳೆಂಬ ಮಾರ್ಗಗಳೆಲ್ಲವೂ ಒಂದೇ ಫಲಪ್ರಾಪ್ತಿಯಲ್ಲಿ ಪರ್ಯವಸಾನವನ್ನು ಪಡೆಯುವುವು. ಎಂಬ ಸರ್ವಸಾಮರಸ್ಯದಲ್ಲಿ ಪರಿಣಮಿಸುತ್ತದೆ. ಎಂದು ತಾತ್ಪರ್ಯವು. ||೨೮||

ಓ ಪರ್ವತರಾಜನೇ, ಈಭಕ್ತಿಯನ್ನು ಮಾಡಿದರೂ ಯಾವನಿಗಾದರೂ ಪ್ರಾರಬ್ಧಕರ್ಮವಶದಿಂದ ನನ್ನಲ್ಲಿ ಅಭೇದಜ್ಞಾನವು ಉಂಟಾಗದೆ ಹೋದರೆ, ಅಂತಹವನು ಹಿಂದೆ ಹೇಳಿದ ಮತ್ತು ಮುಂದೆ ದ್ವಾದಶಸ್ಕಂಧದಲ್ಲಿ ವಿವರಿಸುವ, ನನ್ನ ಸ್ಥಾನವಾದ ಮಣಿದ್ವೀಪಕ್ಕೆ ಹೋಗುವನು. ||೨೯||

ಓ ಹಿಮವಂತನೇ, ಅಲ್ಲಿಗೆ ಹೋಗಿ ಸಮಸ್ತ ಸುಖಗಳನ್ನೂ ತನಗೆ ಅಪೇಕ್ಷೆ ಇಲ್ಲದಿದ್ದರೂ ನಾನು ನನ್ನದೆಂಬ ಅಭಿಮಾನವಿಲ್ಲದೆ, ರಾಗದ್ವೇಷಗಳಿಲ್ಲದೆ, ಅನುಭವಿಸುವನು. ಆಮೇಲೆ ನನ್ನ ಜ್ಞಾನಸ್ವರೂಪದೊಡನೆ ಅಭೇದದ ಅಪರೋಕ್ಷವಾದ ಅನುಭವವು ಚೆನ್ನಾಗಿ ಕಡೆಗೆ ಆಗುವುದು. ||೩೦||

ತೇನ ಮುಕ್ತಿಃ ಸದ್ಯೈವ ಸ್ಯಾಜ್ಜ್ಞಾನಾನ್ಮುಕ್ತಿರ್ನ ಚಾನ್ಯಥಾ ।
ಇಹೈವ ಯಸ್ಯ ಜ್ಞಾನಂ ಸ್ಯಾತ್ ಹೃದ್ಗತಪ್ರತ್ಯಗಾತ್ಮನಃ ॥೩೦॥

ಮಮ ಸಂವಿತ್ಪರತನೋಸ್ತಸ್ಯ ಪ್ರಾಣಾ ವ್ರಜಂತಿ ನ ।
ಬ್ರಹ್ಮೈವ ಸಂಸ್ತದಾಪ್ನೋತಿ ಬ್ರಹ್ಮೈವ ಬ್ರಹ್ಮವೇದ ಯಃ ॥೩೧॥

ಕಂಠಚಾಮೀಕರಸಮಮಜ್ಞಾನಾತ್ತು ತಿರೋಹಿತಂ ।
ಜ್ಞಾನಾದಜ್ಞಾನನಾಶೇನ ಲಬ್ಧಮೇವ ಹಿ ಲಭ್ಯತೇ ॥೩೩॥

---

ಅಂತಹ ಅಭೇದಜ್ಞಾನದಿಂದಲೇ ಮುಕ್ತಿಯಾಗುವುದು. ಬೇರೊಂದರಿಂದ ಆಗುವುದಿಲ್ಲವು. ಆದುದರಿಂದ ಅವನು ಎಂದರೆ ಜ್ಞಾನಸ್ವರೂಪಾನುಭವವುಳ್ಳವನು, ಯಾವಾಗಲೂ ಮುಕ್ತನೇ. ಯಾವ ಜೀವಾತ್ಮನಿಗೆ ಈ ಜನ್ಮದಲ್ಲಿಯೇ ಜ್ಞಾನವುಂಟಾಗುವುದೋ, ನನ್ನ ಜ್ಞಾನಸ್ವರೂಪವಾದ ಶ್ರೇಷ್ಠವಾದ ಸರ್ವವ್ಯಾಪಿಯಾದ ಶರೀರವುಳ್ಳ ಅವನ (ಪ್ರತ್ಯಗಾತ್ಮನ) ಪ್ರಾಣಗಳು ಹೋಗುವುದಿಲ್ಲ. ಎಂದರೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವುದೆಂಬ ಗಮನವು ಸಂಭವಿಸಲಾರದು. " ನ ತಸ್ಯ ಪ್ರಾಣಾ ಉತ್ಕ್ರಾಮಂತಿ " ಎಂಬುದಾಗಿ ಉಪನಿಷತ್ತಿನ ಶ್ರುತಿಪ್ರಮಾಣವೂ ಇದನ್ನೇ ಬೋಧಿಸುತ್ತಿರುವುದು. ಬ್ರಹ್ಮಸ್ವರೂಪನಾಗಿ ಆ ಬ್ರಹ್ಮನನ್ನೇ ಸೇರಿ ಎಂದಿನಂತೆ ಬ್ರಹ್ಮನೇ ಪುನಃ ಆದಂತೆ ಆಗಿಬಿಡುವನು. " ಬ್ರಹ್ಮವಿದ್ಬ್ರಹ್ಮೈವ ಭವತಿ " ಎಂದು ವೇದವಾಕ್ಯ ಪ್ರಮಾಣವೂ ಇರುವುದು. ||೩೦-೩೨||

ಕಂಠಚಾಮೀಕರನ್ಯಾಯದಂತೆ ಎಂದರೆ, ಒಬ್ಬನು ತನ್ನ ಕುತ್ತಿಗೆಯಲ್ಲಿ ಹಾಕಿಕೊಂಡಿದ್ದ ಚಿನ್ನದ ಸರವನ್ನು ಅಜ್ಞಾನದಿಂದ ಮರೆತು ತನ್ನ ಸರವು ಎಲ್ಲಿಯೋ ಹೋಯಿತೆಂದು ಹುಡುಕುತ್ತಾ ದುಃಖಪಡುತ್ತಿರುವಾಗ, ಯಾವನೊಬ್ಬನಾದರೂ ಬಂದು ನಿನ್ನ ಕೊರಳಲ್ಲಿಯೇ ಅದು ಇರುವುದು ; ಹೀಗೇಕೆ ದುಃಖಪಡುವೆ ? ಎಂದು ಹೇಳಿದ ಮೇಲೆ, ಆ ತಿಳಿವಳಿಕೆಯಿಂದ ಅವನ ಅಜ್ಞಾನವು ಹೋಗಿ, ತನ್ನಲ್ಲಿದ್ದುದೇ ತನಗೆ ಪುನಃ ಸಿಕ್ಕಿದಂತೆ, ಹೇಗೆ ಸಂತೋಷವಾಗುವುದೋ ಹಾಗೆ, ಸ್ವಭಾವವಾಗಿಯೇ ಇರುವ ಪರಮಾತ್ಮಸ್ವರೂಪವು ಅಜ್ಞಾನದಿಂದ ಮರೆಯಾಗಿದ್ದು ಶ್ರುತಿಮಾತೆಯ ಉಪದೇಶದಿಂದ ಆ ಜ್ಞಾನವು ಬಂದೊಡನೆಯೇ ಅಜ್ಞಾನವು ನಾಶವಾಗುವುದರಿಂದ ಅದೇ ಪರಮಾತ್ಮರೂಪವೇ ಪ್ರಾಪ್ತಿಯಾದಂತಾಗುತ್ತದೆಯೇ ಹೊರತು ಬೇರೆ ಅಲ್ಲವು.||೩೩||

ವಿದಿತಾವಿದಿತಾದನ್ಯನ್ನಗೋತ್ತ್ರಮ ವಪುರ್ಮಮ ।
ಯಥಾಽದರ್ಶೇ ತಥಾಽಽತ್ಮನಿ ಯಥಾ ಜಲೇ ತಥಾ ಪಿತೃಲೋಕೇ॥೩೪॥

ಛಾಯಾತಪೌ ಯಥಾ ಸ್ವಚ್ಛೌ ವಿವಿಕ್ತೌ ತದ್ವದೇವ ಹಿ ।
ಮಮ ಲೋಕೇ ಭವೇಜ್ಜ್ಞಾನಂ ದ್ವೈತಭಾವ ವಿವರ್ಜಿತಂ ॥೩೫॥

ಯಸ್ತು ವೈರಾಗ್ಯವಾನೇವ ಜ್ಞಾನಹೀನೋ ಮ್ರಿಯೇತ ಚೇತ್ ।
ಬ್ರಹ್ಮಲೋಕೇ ವಸೇನ್ನಿತ್ಯಂ ಯಾವತ್ಕಲ್ಪಂ ತತಃ ಪರಂ ॥೩೬॥

ಶುಚೀನಾಂ ಶ್ರೀಮತಾಂ ಗೇಹೇ ಭವೇತ್ತಸ್ಯ ಜನಿಃ ಪುನಃ ।
ಕರೋತಿ ಸಾಧನಂ ಪಶ್ಚಾತ್ತತೋ ಜ್ಞಾನಂ ಹಿ ಜಾಯತೇ ॥೩೭॥

ಅನೇಕಜನ್ಮಭೀರಾಜನ್ ಜ್ಞಾನಂ ಸ್ಯಾನ್ನೈಕ ಜನ್ಮನಾ ।
ತತಃ ಸರ್ವಪ್ರಯತ್ನೇನ ಜ್ಞಾನಾರ್ಥಂ ಯತ್ನಮಾಶ್ರಯೇತ್ ॥೩೮॥

---

ಓ ಪರ್ವತಶ್ರೇಷ್ಠನೇ, ನನ್ನ ಸ್ವರೂಪವು ವಿದಿತವೆಂದರೆ ಕಾರ್ಯವಾದ ಘಟಾದಿಗಳಿಗಿಂತಲೂ, ಅವಿದಿತವೆಂದರೆ ಕಾರಣವಾದ ಮಾಯೆಗಿಂತಲೂ, ಬೇರೆಯಾದುದು. " ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ "।ಎಂದು ಕೇನೋಪನಿಷತ್ತಿನ ಶ್ರುತಿಯಿರುವುದು. ಕನ್ನಡಿಯಲ್ಲಿ ಹೇಗೆ ಪ್ರತಿಬಿಂಬವು ಬೀಳುವುದೋ ಹಾಗೆ ಈ ದೇಹದಲ್ಲಿ ಆತ್ಮನ ಅನುಭವವಾಗುವುದು. ನೀರಿನಲ್ಲಿ ಪ್ರತಿಬಿಂಬವು ಕನ್ನಡಿಗಿಂತಲೂ ಹೇಗೆ ವ್ಯಕ್ತವೋ ಹಾಗೆ ಪಿತೃಲೋಕದಲ್ಲಿ ಆತ್ಮನ ಅನುಭವವಾಗುವುದು. ॥೩೪॥

ನೆರಳಿಗೂ ಬಿಸಿಲಿಗೂ ಇರುವ ಭೇದದ ಸ್ಪಷ್ಟವಾದ ತಿಳಿವಳಿಕೆಯು ಹೇಗೆ ಉಂಟಾಗುವುದೋ ಹಾಗೆ, ಮಣಿದ್ವೀಪದಲ್ಲಿ ಎರಡನೆಯ ವಸ್ತುವಿನ ಭ್ರಾಂತಿ ಜ್ಞಾನವಿಲ್ಲದ ಸ್ಪಷ್ಟವಾದ ಅಪರೋಕ್ಷ ಜ್ಞಾನಾನುಭವವಾಗುವುದು. ॥೩೫॥

ಯಾವನು ವೈರಾಗ್ಯವುಳ್ಳವನಾಗಿ ಜ್ಞಾನೋತ್ಪತ್ತಿಯಾಗದ ಶರೀರತ್ಯಾಗ ಮಾಡುವನೋ, ಅಂಥವನು ಬ್ರಹ್ಮಲೋಕದಲ್ಲಿ ಆ ಬ್ರಹ್ಮಕಲ್ಪವು ಕಳೆಯುವವರೆಗೂ ಇದ್ದು, ಆ ಮೇಲೆ ಪರಿಶುದ್ಧರೂ ಶ್ರೀಮಂತರೂ ಆದವರ ಮನೆಯಲ್ಲಿ ಪುನಃ ಜನ್ಮವನ್ನು ಪಡೆಯುವನು. ಆ ಮೇಲೆ ಜ್ಞಾನಸಾಧನವಾದ ಕಾರ್ಯಗಳನ್ನು ಮಾಡುವನು. ಆದರಿಂದ ಜೀವೇಶ್ವರಾಭೇದಜ್ಞಾನವು ಉಂಟಾಗುವುದು. ॥೩೭॥

ಓ ಪರ್ವತರಾಜನೇ, ಅನೇಕ ಜನ್ಮಗಳ ಪ್ರಯತ್ನದಿಂದ ಇಂತಹ ಜ್ಞಾನ

ನೋಚೇನ್ಮಹಾವಿನಾಶಸ್ಯಾಜ್ಞನ್ಮೈತದ್ದುರ್ಲಭಂ ಪುನಃ ।
ತತ್ರಾಪಿ ಪ್ರಥಮೋ ವರ್ಣೋ ವೇದಪ್ರಾಪ್ತಿಶ್ಚ ದುರ್ಲಭಾ ॥೩೯॥

ಶಮಾದಿಷಟ್ಕಸಂಪತ್ತಿಃ ಯೋಗಸಿದ್ಧಿಸ್ತಥೈವ ಚ ।
ತಥೋತ್ತಮ ಗುರುಪ್ರಾಪ್ತಿಃ ಸರ್ವಮೇವಾತ್ರ ದುರ್ಲಭಂ ॥೪೦॥

ತಥೇಂದ್ರಿಯಾಣಾಂ ಪಟುತಾ ಸಂಸ್ಕೃತತ್ವಂ ತನೋಸ್ತಥಾ ।
ಅನೇಕಜನ್ಮಪುಣ್ಯೈಸ್ತು ಮೋಕ್ಷೇಚ್ಛಾ ಜಾಯತೇ ತತಃ ॥೪೧॥

ಸಾಧನೇ ಸಕಲೇಽಪ್ಯೇವಂ ಜಾಯಮಾನೇಽಪಿ ಯೋ ನರಃ ।
ಜ್ಞಾನಾರ್ಥಂ ನೈವ ಯತತೇ ತಸ್ಯ ಜನ್ಮ ನಿರರ್ಥಕಂ ॥೪೨॥

---

ವುಂಟಾಗುವುದು. ಒಂದು ಜನ್ಮದಲ್ಲಿಯೇ ಅದು ಸಾಧ್ಯವಾಗುವುದಿಲ್ಲ. ಆದುದರಿಂದ ಸಮಸ್ತ ಪ್ರಯತ್ನಗಳಿಂದಲೂ ಜ್ಞಾನಕ್ಕೋಸ್ಕರವಾಗಿ ಕಾರ್ಯಮಾಡಬೇಕು. ||೩೮||

ಹಾಗೆ ಮಾಡದೇ ಹೋದರೆ ಬಹಳ ನಷ್ಟವುಂಟಾಗುವುದು. ಏತಕ್ಕೆಂದರೆ ಮತ್ತೆ ಈ ಮನುಷ್ಯಜನ್ಮವು ತುಂಬ ಕಷ್ಟಸಾಧ್ಯವು. ಅದರಲ್ಲಿಯೂ ಬ್ರಾಹ್ಮಣನಾಗಿ ಹುಟ್ಟುವುದೂ, ಹಾಗೆ ಹುಟ್ಟಿದರೂ ವೇದಾಧ್ಯಯನಸಂಪನ್ನನಾಗುವುದೂ, ದುರ್ಲಭವಾಗುವುದು. ||೩೯||

ಅಲ್ಲದೆ ವೇದಾಧ್ಯಯನಸಂಪನ್ನನಾದರೂ ಶಮದಮಾದಿ ಆರು ಗುಣಗಳುಂಟಾಗುವುದೂ, ಉತ್ತಮವಾದ ಗುರುವು ಸಿಕ್ಕುವುದೂ, ಮತ್ತೂ ಕಷ್ಟವಾಗುವುದು.||೪೦||

ಹಾಗೆಯೇ ಇಂದ್ರಿಯಗಳಿಗೆ ತಕ್ಕ ಶಕ್ತಿಯೂ, ಶರೀರಕ್ಕೆ ವೇದೋಕ್ತವಾದ ಜಾತಕರ್ಮ ಉಪನಯನಾದಿ ಸಂಸ್ಕಾರಗಳೂ, ದುರ್ಲಭವಾಗುವುವು. ಆದುದರಿಂದ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದಲೇ ಮೋಕ್ಷದಲ್ಲಿ ಅಪೇಕ್ಷೆಯು ಮನುಜನಿಗೆ ಉಂಟಾಗುವುದು. ||೪೧||

ತನಗೆ ಸಂಪೂರ್ಣವಾದ ಜ್ಞಾನಸಾಧನಗಳು ದೊರೆತಿದ್ದರೂ ಯಾವ ಮನುಷ್ಯನು ಜ್ಞಾನಕ್ಕೋಸ್ಕರವಾಗಿ ಪ್ರಯತ್ನಮಾಡುವುದಿಲ್ಲವೋ ಅವನು ಹುಟ್ಟಿದುದು ನಿಷ್ಪ್ರಯೋಜನವಾಗುವುದು. ||೪೨||

ತಸ್ಮಾದ್ರಾಜನ್ಯಥಾಶಕ್ತ್ಯಾ ಜ್ಞಾನಾರ್ಥಂ ಯತ್ನಮಾಶ್ರಯೇತ್ ।
ಪದೇಪದೇಽಶ್ವಮೇಧಸ್ಯ ಫಲ ಮಾಪ್ನೋತಿ ನಿಶ್ಚಿತಂ ॥೪೩॥

ಘೃತಮಿವ ಪಯಸಿ ನಿಗೂಢಂ
ಭೂತೇ ಭೂತೇ ಚ ವಸತಿ ವಿಜ್ಞಾನಂ ।
ಸತತಂ ಮಂಥಯಿತವ್ಯಂ
ಮನಸಾ ಮಂಥಾನಭೂತೇನ ॥೪೪॥

ಜ್ಞಾನಂ ಲಬ್ಧ್ವಾ ಕೃತಾರ್ಥಸ್ಸ್ಯಾದಿತಿ ವೇದಾಂತ ಡಿಂಡಿಮಃ ।
ಸರ್ವಮುಕ್ತಂ ಸಮಾಸೇನ ಕಿಂ ಭೂಯಃ ಶ್ರೋತುಮಿಚ್ಛಸಿ ॥೪೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಸಪ್ತತ್ರಿಂಶೋಽಧ್ಯಾಯಃ

---

ಆದುದರಿಂದ ಎಲೈ ಪರ್ವತರಾಜನೇ, ಮನುಜನು ತನ್ನ ಶಕ್ತಿಯನ್ನನುಸರಿಸಿ ಜ್ಞಾನಸಂಪಾದನೆಗೆ ಪ್ರಯತ್ನ ಮಾಡಬೇಕು. ಒಂದೊಂದು ಪ್ರಯತ್ನದ ಸ್ಥಾನಕ್ಕೂ ಒಂದೊಂದು ಅಶ್ವಮೇಧಯಜ್ಞದ ಫಲವು ಖಂಡಿತವಾಗಿಯೂ ಬರುವುದು. ||೪೩||

ಹಾಲಿನಲ್ಲಿ ಗೋಪ್ಯವಾಗಿ ಅಡಗಿರುವ ತುಪ್ಪದಂತೆ ಸಮಸ್ತ ಭೂತಗಳಲ್ಲಿಯೂ ವಿಜ್ಞಾನಸ್ವರೂಪವಾದ ಬ್ರಹ್ಮವಸ್ತುವೂ ಇರುವುದು. ಹಾಲನ್ನು ಕಾಯಿಸಿ ಹೆಪ್ಪು ಹಾಕಿ ಮೊಸರನ್ನು ಕಡೆಗೋಲಿನಿಂದ ಕಡೆದು ಬೆಣ್ಣೆಯನ್ನು ತೆಗೆದು ಕಾಯಿಸಿ ತುಪ್ಪವನ್ನು ಪಡೆಯುವಂತೆ, ಕಡೆಗೋಲಿನಂತಿರುವ ಮನಸ್ಸಿನಿಂದ ಸಮಸ್ತ ಶರೀರ ಗಳಲ್ಲಿರುವ ಆತ್ಮನನ್ನು ವಿಚಾರಮಾಡಿ ತಿಳಿದುಕೊಳ್ಳಬೇಕು. ||೪೪||

ಓ ಪರ್ವತರಾಜನೇ, ಆದುದರಿಂಲೇ ಜ್ಞಾನವನ್ನು ಪಡೆದವನು ಕೃತಾರ್ಥ ನಾಗುವನೆಂದು ವೇದಾಂತವು ಸಾರುತ್ತಿರುವುದು. ನಿನಗೆ ಹೀಗೆ ಎಲ್ಲವನ್ನೂ ಸಂಗ್ರಹ ವಾಗಿ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ? ಎಂದು ದೇವಿಯು ಹೇಳಿದಳು. ||೪೫||

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯಸ್ಕಂಧದಲ್ಲಿ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಅಷ್ಟತ್ರಿಂಶೋಽಧ್ಯಾಯಃ ॥

### ಮೂವತ್ತೆಂಟನೆಯ ಅಧ್ಯಾಯವು

॥ ಹಿಮಾಲಯ ಉವಾಚ ॥

**ಕತಿಸ್ಥಾನಾನಿ ದೇವೇಶಿ ದ್ರಷ್ಟವ್ಯಾನಿ ಮಹೀತಲೇ ।**
**ಮುಖ್ಯಾನಿ ಚ ಪವಿತ್ರಾಣಿ ದೇವೀಪ್ರಿಯತಮಾನಿ ಚ ॥೧॥**

**ವ್ರತಾನ್ಯಪಿ ತಥಾ ಯಾನಿ ತುಷ್ಟಿದಾನ್ಯುತ್ಸವಾ ಅಪಿ ।**
**ತತ್ಸರ್ವಂ ವದ ಮೇ ಮಾತಃ ಕೃತಕೃತ್ಯೋ ಯತೋ ನರಃ ॥೨॥**

॥ ಶ್ರೀ ದೇವ್ಯುವಾಚ ॥

**ಸರ್ವಂ ದೃಶ್ಯಂ ಮಮ ಸ್ಥಾನಂ ಸರ್ವೇ ಕಾಲಾ ವ್ರತಾತ್ಮಕಾಃ ।**
**ಉತ್ಸವಾಸ್ಸರ್ವಕಾಲೇಷು ಯತೋಽಹಂ ಸರ್ವರೂಪಿಣೀ ॥೩॥**

---

ಹಿಮವಂತನು ಹೇಳಿದನು — ಓ ಸರ್ವಶಕ್ತಳಾದ ದೇವಿಯೇ, ಈ ಪ್ರಪಂಚದಲ್ಲಿ ನಿನ್ನ ದರ್ಶನವನ್ನು ಯಾವ ಯಾವ ಸ್ಥಾನಗಳಲ್ಲಿ ಪಡೆಯಬಹುದು? ಮತ್ತು ನಿನಗೆ ಸಂತೋಷವನ್ನುಂಟುಮಾಡುವ ಪರಿಶುದ್ಧಗಳಾದ ಮುಖ್ಯಸ್ಥಾನಗಳು ಯಾವುವು? ॥೧॥

ಮತ್ತು ದೇವಿಯ ಅನುಗ್ರಹಕ್ಕೋಸ್ಕರ ಯಾವ ವ್ರತಾಚರಣೆಗಳನ್ನು ಮಾಡಬೇಕು? ದೇವಿಗೆ ಸಂತೋಷವನ್ನುಂಟುಮಾಡುವ ಉತ್ಸವಗಳು ಯಾವುವು? ಓ ತಾಯಿಯೇ, ಇದೆಲ್ಲವನ್ನೂ ತಿಳಿಯುವುದರಿಂದ ಪ್ರತಿಯೊಬ್ಬ ಮನುಷ್ಯನೂ ಕೃತಾರ್ಥನಾಗುತ್ತಾನಾಗಿ, ಎಲ್ಲವನ್ನೂ ನನಗೆ ನೀನು ಹೇಳಬೇಕು. ॥೨॥

ದೇವಿಯು ಹೇಳಿದಳು—ನಾನು ಸಮಸ್ತ ಪ್ರಪಂಚಕ್ಕೂ ಅಧಿಷ್ಠಾನವಾದ

ತಥಾಪಿ ಭಕ್ತವಾತ್ಸಲ್ಯಾ ತ್ಕಿಂಚಿತ್ಕಿಂಚಿದಥೋಚ್ಯತೇ ।
ಶೃಣುಷ್ವಾವಹಿತೋ ಭೂತ್ವಾ ನಗರಾಜ ವಚೋ ಮಮ ॥೪॥

ಕೋಲಾಪುರಂ ಮಹಾಸ್ಥಾನಂ ಯತ್ರ ಲಕ್ಷ್ಮೀಃ ಸದಾ ಸ್ಥಿತಾ ।
ಮಾತುಃ ಪುರಂ ದ್ವಿತೀಯಂ ಚ ರೇಣುಕಾಧಿಷ್ಠಿತಂ ಪರಂ ॥೫॥

ತುಲಜಾಪುರಂ ತೃತೀಯಂ ಸ್ಯಾತ್ಸಪ್ತಶೃಂಗಂ ತಥೈವ ಚ ।
ಹಿಂಗುಲಾಯಾ ಮಹಾಸ್ಥಾನಂ ಜ್ವಾಲಾಮುಖ್ಯಾಸ್ತಥೈವ ಚ ॥೬॥

ಶಾಕಂಭರ್ಯಾಃ ಪರಂ ಸ್ಥಾನಂ ಭ್ರಾಮರ್ಯಾಃ ಸ್ಥಾನಮುತ್ತಮಂ ।
ಶ್ರೀರಕ್ತದಂತಿಕಾಸ್ಥಾನಂ ದುರ್ಗಾಸ್ಥಾನಂ ತಥೈವ ಚ ॥೭॥

---

ರಿಂದ ಕಣ್ಣಿಗೆ ಕಾಣುತ್ತಿರುವ ಎಲ್ಲ ಪ್ರಪಂಚವೂ ನನಗೆ ಸ್ಥಾನವು. ಮತ್ತು ನಾನು ಸರ್ವಕಾಲಸ್ವರೂಪಿಣಿಯಾದ್ದರಿಂದ ನನಗೆ ಸಂತೋಷವನ್ನುಂಟುಮಾಡುವ ವ್ರತ ವನ್ನು ಯಾವ ಕಾಲದಲ್ಲಿ ಮಾಡಿದರೂ ಅದರಿಂದ ತೃಪ್ತಿಹೊಂದುವೆನು. ಹಾಗೆಯೇ ಯಾವ ಕಾಲದಲ್ಲಿ ಯಾವ ಉತ್ಸವವನ್ನು ಮಾಡಿದರೂ ನನಗೆ ತೃಪ್ತಿಯಾಗು ವುದು. ॥೩॥

ಎಲೈ ಪರ್ವತರಾಜನೇ, ಆದರೂ ಭಕ್ತನಮೇಲಿರುವ ವಿಶ್ವಾಸದಿಂದ ಕೆಲವು ವಿಷಯಗಳನ್ನು ಹೇಳುವೆನು. ನನ್ನ ಈ ಮಾತುಗಳನ್ನು ಏಕಾಗ್ರಚಿತ್ತದಿಂದ ಕೇಳು. ॥೪॥

ಲಕ್ಷ್ಮಿಯು ಶಾಶ್ವತವಾಗಿ ನೆಲೆಸಿರುವ ಕೋಲಾಪುರವೆಂಬುದು ಬಹಳ ಶ್ರೇಷ್ಠ ವಾದ ಸ್ಥಾನವು. ಎರಡನೆಯದಾಗಿ ಸಹ್ಯಾದ್ರಿಪರ್ವತದಲ್ಲಿ ರೇಣುಕಾದೇವಿಯು ವಾಸವಾಗಿರುವ ಪಟ್ಟಣವೂ ಹಾಗೆಯೇ ಶ್ರೇಷ್ಠವಾದ ಸ್ಥಾನವು. ॥೫॥

ಮೂರನೆಯದು ತುಲಜಾ ಎಂಬ ಪಟ್ಟಣವು. ಹಾಗೆಯೇ ಸಪ್ತಶೃಂಗವೂ, ಅತಿಪವಿತ್ರವಾದ ಹಿಂಗುಲಾ ಎಂಬ ಸ್ಥಾನವೂ, ಜ್ವಾಲಾಮುಖೀ ಎಂದು ಹೆಸರುಳ್ಳ ಸ್ಥಾನಗಳೂ, ಪವಿತ್ರವಾದವುಗಳು. ॥೬॥

ಶಾಕಂಭರೀ, ಭ್ರಾಮರೀ, ರಕ್ತದಂತಿಕಾ, ದುರ್ಗಾ, ಈ ದೇವಿಯರು ನೆಲೆ ಸಿರುವ ಸ್ಥಾನಗಳೆಲ್ಲವೂ ಬಹಳ ಶ್ರೇಷ್ಠವಾದವುಗಳು. ॥೭॥

ವಿಂಧ್ಯಾಚಲನಿವಾಸಿನ್ಯಾಃ ಸ್ಥಾನಂ ಸರ್ವೋತ್ತಮೋತ್ತಮಂ ।
ಅನ್ನಪೂರ್ಣಾಮಹಾಸ್ಥಾನಂ ಕಾಂಚೀಪುರಮನುತ್ತಮಂ ॥೮॥

ಭೀಮಾದೇವ್ಯಾಃ ಪರಂ ಸ್ಥಾನಂ ವಿಮಲಾಸ್ಥಾನಮೇವ ಚ ।
ಶ್ರೀಚಂದ್ರಲಾಮಹಾಸ್ಥಾನಂ ಕೌಶಿಕೀ ಸ್ಥಾನಮೇವ ಚ ॥೯॥

ನೀಲಾಂಬಾಯಾಃ ಪರಂ ಸ್ಥಾನಂ ನೀಲಪರ್ವತಮಸ್ತಕೇ ।
ಜಾಂಬೂನದೇಶ್ವರೀಸ್ಥಾನಂ ತಥಾ ಶ್ರೀನಗರಂ ಶುಭಂ ॥೧೦॥

ಗುಹ್ಯಕಾಲ್ಯಾ ಮಹಾಸ್ಥಾನಂ ನೇಪಾಲೇ ಯತ್ಪ್ರತಿಷ್ಠಿತಂ ।
ಮೀನಾಕ್ಷ್ಯಾಃ ಪರಮಂ ಸ್ಥಾನಂ ಯಚ್ಚ ಪ್ರೋಕ್ತಂ ಚಿದಂಬರೇ॥೧೧॥

ವೇದಾರಣ್ಯಂ ಮಹಾಸ್ಥಾನಂ ಸುಂದರ್ಯಾ ಸಮಧಿಷ್ಠಿತಂ ।
ಏಕಾಂಬರಂ ಮಹಾಸ್ಥಾನಂ ಪರಶಕ್ತ್ಯಾ ಪ್ರತಿಷ್ಠಿತಂ ॥೧೨॥

---

ವಿಂಧ್ಯಪರ್ವತದಲ್ಲಿ ದೇವಿಯು ವಾಸವಾಗಿರುವ ಸ್ಥಾನವು ಎಲ್ಲಕ್ಕಿಂತಲೂ ಶ್ರೇಷ್ಠವಾದುದು. ಹಾಗೆಯೇ ಅನ್ನಪೂರ್ಣಾದೇವಿಯು ನೆಲೆಸಿರುವ ಸ್ಥಾನವೂ, ಕಾಂಚೀಪುರವೂ ಬಹಳ ಪವಿತ್ರವಾದವುಗಳು. ॥೮॥

ಭೀಮಾ, ವಿಮಲಾ, ಈ ದೇವಿಯರ ಸ್ಥಾನಗಳೂ, ಕರ್ಣಾಟದೇಶದಲ್ಲಿ ಚಂದ್ರಲಾ ಎಂಬ ಹೆಸರುಳ್ಳ ದೇವಿಯ ಸ್ಥಾನವೂ, ಕೌಶಿಕೀ ದೇವಿಯ ಸ್ಥಾನವೂ ಅತಿಪವಿತ್ರವಾದವುಗಳು. ॥೯॥

ನೀಲಪರ್ವತದ ಶಿಖರದಲ್ಲಿರುವ ನೀಲಾದೇವಿಯ ಸ್ಥಾನವೂ, ಜಾಂಬೂನದೇಶ್ವರಿಯ ಸ್ಥಾನವೂ, ಹಾಗೆಯೇ ಶ್ರೀನಗರವೂ ಶ್ರೇಷ್ಠವಾದವುಗಳು. ॥೧೦॥

ನೇಪಾಳದೇಶದಲ್ಲಿ ಗುಹ್ಯಕಾಲೀ ಎಂಬ ದೇವಿಯು ನೆಲೆಸಿರುವ ಸ್ಥಾನವೂ, ಚಿದಂಬರದಲ್ಲಿ ಮೀನಾಕ್ಷೀದೇವಿಯು ಇರುವ ಸ್ಥಾನವೂ ಶ್ರೇಷ್ಠವಾದವುಗಳು. ॥೧೧॥

ಸೌಂದರ್ಯಯುಕ್ತಳಾದ ದೇವಿಯ ಸ್ಥಾನವಾದ ವೇದಾರಣ್ಯಕ್ಷೇತ್ರವೂ, ಪುರುಷೋತ್ತಮಕ್ಷೇತ್ರಸಮೀಪದಲ್ಲಿ ಭುವನೇಶ್ವರವೆಂಬ ಹೆಸರುಳ್ಳ ಏಕಾಂಬರ ಕ್ಷೇತ್ರವೂ, ಪರಾಶಕ್ತಿಯಿಂದ ಅಧಿಷ್ಠಿತವಾದದ್ದಾಗಿ ಅತಿಪವಿತ್ರವಾಗಿರುವುದು. ॥೧೨॥

ಮಹಾಲಸಾಪರಂ ಸ್ಥಾನಂ ಯೋಗೇಶ್ವರ್ಯಾಸ್ತಥೈವ ಚ ।
ತಥಾ ನೀಲಸರಸ್ವತ್ಯಾಃ ಸ್ಥಾನಂ ಚೀನೇಷು ವಿಶ್ರುತಂ ॥೧೩॥

ವೈದ್ಯನಾಥೇ ತು ಬಗಲಾಸ್ಥಾನಂ ಸರ್ವೋತ್ತಮಂ ಮತಂ ।
ಶ್ರೀಮಚ್ಛ್ರೀಭುವನೇಶ್ವರ್ಯಾಃ ಮಣಿದ್ವೀಪಂ ಮಮ ಸ್ಮೃತಂ ॥೧೪॥

ಶ್ರೀಮತ್ತ್ರಿಪುರಭೈರವ್ಯಾಃ ಕಾಮಾಖ್ಯಾ ಯೋನಿಮಂಡಲಂ ।
ಭೂಮಂಡಲೇ ಕ್ಷೇತ್ರರತ್ನಂ ಮಹಾಮಾಯಾಧಿವಾಸಿತಂ ॥೧೫॥

ನಾತಃ ಪರತರಂ ಸ್ಥಾನಂ ಕ್ವಚಿದಸ್ತಿ ಧರಾತಲೇ ।
ಪ್ರತಿಮಾಸಂ ಭವೇದ್ದೇವೀ ಯತ್ರ ಸಾಕ್ಷಾದ್ರಜಸ್ವಲಾ ॥೧೬॥

ತತ್ರತ್ಯಾ ದೇವತಾಸ್ಸರ್ವಾಃ ಪರ್ವತಾತ್ಮಕತಾಂ ಗತಾಃ ।
ಪರ್ವತೇಷು ವಸಂತ್ಯೇವ ಮಹತ್ಯೋ ದೇವತಾ ಅಪಿ ॥೧೭॥

---

ದಕ್ಷಿಣದೇಶದಲ್ಲಿ ಮಲ್ಲಾರಿಸ್ಥಾನವೆಂದು ಪ್ರಸಿದ್ಧವಾದ ಮಹಾಲಸಾದೇವಿಯ ಸ್ಥಾನವೂ, ಮರಾಟದೇಶದಲ್ಲಿ ಯೋಗೇಶ್ವರಿಯ ಸ್ಥಾನವೂ, ಚೀನದೇಶದಲ್ಲಿರುವ ನೀಲಸರಸ್ವತಿಯ ಸ್ಥಾನವೂ ಪ್ರಸಿದ್ಧವಾದುದು. ॥೧೩॥

ವೈದ್ಯನಾಥಕ್ಷೇತ್ರದಲ್ಲಿ ಬಗಲಾದೇವಿಯು ವಾಸಿಸುವ ಸ್ಥಾನವು ಎಲ್ಲಕ್ಕಿಂತಲೂ ಪವಿತ್ರವಾದುದು. ಭುವನೇಶ್ವರಿಯಾದ ನಾನು ಮಣಿದ್ವೀಪದಲ್ಲಿ ನೆಲೆಸಿರುವೆನು.॥೧೪॥

ಕಾಮರೂಪದೇಶದಲ್ಲಿ ಕಾಮಾ ಎಂಬ ಹೆಸರುಳ್ಳ ದೇವಿಯ ಯೋನಿಮಂಡಲವು ಎಲ್ಲಿ ಬಿದ್ದಿತೋ ಅಂಥ ಯೋನಿಮಂಡಲಕ್ಷೇತ್ರವು ತ್ರಿಪುರಭೈರವಿಯ ಸ್ಥಾನವು. ಇದು ಪ್ರಪಂಚದಲ್ಲಿರುವ ಕ್ಷೇತ್ರಗಳಲ್ಲೆಲ್ಲ ಶ್ರೇಷ್ಠವಾದುದಾಗಿಯೂ, ಪರಾಶಕ್ತಿಗೆ ಅಧಿಷ್ಠಾನವಾದುದಾಗಿಯೂ ಇರುವುದು. ॥೧೫॥

ಭೂಮಂಡಲದಲ್ಲಿ ಇದಕ್ಕಿಂತಲೂ ಶ್ರೇಷ್ಠವಾದ ಸ್ಥಾನವು ಯಾವದೂ ಇಲ್ಲವು. ಇಲ್ಲಿ ದೇವಿಯು ಪ್ರತಿತಿಂಗಳಲ್ಲೂ ರಜೋವತಿಯಾಗುವಳು. ॥೧೬॥

ಅಲ್ಲಿರುವ ಮಹಿಮಾಶಾಲಿಗಳಾದ ಎಲ್ಲ ದೇವತೆಗಳೂ ಪರ್ವತರೂಪವನ್ನು ಹೊಂದಿ ಅವುಗಳಲ್ಲಿಯೇ ವಾಸವಾಗಿ ಇರುವರು. ॥೧೭॥

ತತ್ರತ್ಯಾ ಪೃಥಿವೀ ಸರ್ವಾ ದೇವೀರೂಪಾ ಸ್ಮೃತಾ ಬುಧೈಃ ।
ನಾತಃ ಪರತರಂ ಸ್ಥಾನಂ ಕಾಮಾಖ್ಯಾಯೋನಿಮಂಡಲಾತ್ ॥೧೮॥

ಗಾಯತ್ರ್ಯಾಶ್ಚ ಪರಂ ಸ್ಥಾನಂ ಶ್ರೀಮತ್ಪುಷ್ಕರಮೀರಿತಂ ।
ಅಮರೇಶೇ ಚಂಡಿ ಕಾ ಸ್ಯಾತ್ ಪ್ರಭಾಸೇ ಪುಷ್ಕರೇಕ್ಷಿಣೀ ॥೧೯॥

ನೈಮಿಶೇ ತು ಮಹಾಸ್ಥಾನೇ ದೇವೀ ಸಾ ಲಿಂಗಧಾರಿಣೀ ।
ಪುರುಹೂತಾ ಪುಷ್ಕರಾಕ್ಷೇ ಆಷಾಢೌ ಚ ರತಿಸ್ತಥಾ ॥೨೦॥

ಚಂಡಮುಂಡೀ ಮಹಾಸ್ಥಾನೇ ದಂಡಿನೀ ಪರಮೇಶ್ವರೀ ।
ಭಾರ(ವ)ಭೂತೌ ಭವೇದ್ಭೂತಿರ್ನಾಕುಲೇ ನಕುಲೇಶ್ವರೀ ॥೨೧॥

ಚಂದ್ರಿಕಾ ತು ಹರಿಶ್ಚಂದ್ರೇ ಶ್ರೀಗಿರೌ ಶಾಂಕರೀ ಸ್ಮೃತಾ ।
ಜಪ್ಯೇಶ್ವರೇ ತ್ರಿಶೂಲಾ ಸ್ಯಾ ತ್ಸೂಕ್ಷ್ಮಾ ಚಾಮ್ರಾತಕೇಶ್ವರೇ ॥೨೨॥

---

ಅಲ್ಲಿರುವ ಪ್ರಸಂಚವೆಲ್ಲವೂ ದೇವೀಸ್ವರೂಪವೆಂದು ಪಂಡಿತರಿಂದ ಹೇಳಲ್ಪಟ್ಟಿದೆ. ಕಾಮಾ'ಎಂದು ಹೆಸರುಳ್ಳ ಈ ಯೋನಿಮಂಡಲಕ್ಕಿಂತಲೂ ಶ್ರೇಷ್ಠವಾದ ಸ್ಥಾನವು ಯಾವುದೂ ಇಲ್ಲವು. ॥೧೮॥

ಶ್ರೇಷ್ಠವಾದ ಪುಷ್ಕರಕ್ಷೇತ್ರವು ಗಾಯತ್ರೀ ದೇವಿಯ ಸ್ಥಾನವು. ಅಮರೇಶ ಕ್ಷೇತ್ರದಲ್ಲಿ ಚಂಡಿಕಾದೇವಿಯೂ, ಪ್ರಭಾಸದಲ್ಲಿ ಪುಷ್ಕರೇಕ್ಷಿಣಿಯೂ ಇರುವರು.॥೧೯॥

ನೈಮಿಶವೆಂಬ ಮಹಾಕ್ಷೇತ್ರದಲ್ಲಿ ಆ ದೇವಿಯು ಲಿಂಗವನ್ನು ಧರಿಸಿರುವ ಲಿಂಗಧಾರಿಣೀದೇವಿಯು ಇರುವಳು. ಪುಷ್ಕರಾಕ್ಷವೆಂಬ ಕ್ಷೇತ್ರದಲ್ಲಿ ಪುರುಹೂತಾ ದೇವಿಯೂ, ಆಷಾಢಕ್ಷೇತ್ರದಲ್ಲಿ ರತಿ ಎಂಬ ದೇವಿಯೂ ಇರುವರು. ॥೨೦॥

ಚಂಡಮುಂಡವೆಂಬ ಶ್ರೇಷ್ಠಸ್ಥಾನಗಳಲ್ಲಿ ಪರಮೇಶ್ವರಿಯಾದ ದಂಡಿನೀ ದೇವಿಯೂ, ಭಾರ(ವ)ಭೂತಿ ಎಂಬ ಸ್ಥಾನದಲ್ಲಿ ಭೂತಿದೇವಿಯೂ, ನಾಕುಲಕ್ಷೇತ್ರದಲ್ಲಿ ನಕುಲೇಶ್ವರಿಯೂ ಇರುವರು. ॥೨೧॥

ಹರಿಶ್ಚಂದ್ರವೆಂಬಸ್ಥಾನದಲ್ಲಿ ಚಂದ್ರಿಕಾದೇವಿಯೂ, ಶ್ರೀಗಿರಿಯಲ್ಲಿ ಶಾಂಕರಿಯೂ, ಜಪ್ಯೇಶ್ವರದಲ್ಲಿ ತ್ರಿಶೂಲಾದೇವಿಯೂ, ಆಮ್ರಾತಕೇಶ್ವರವೆಂಬ ಸ್ಥಾನದಲ್ಲಿ ಸೂಕ್ಷ್ಮಾದೇವಿಯೂ, ಇರುವರು. ॥೨೨॥

**ಶಾಂಕರೀ ತು ಮಹಾಕಾಲೇ ಶರ್ವಾಣೀ ಮಧ್ಯಮಾಭಿಧೇ ।**
**ಕೇದಾರಾಖ್ಯೇ ಮಹಾಕ್ಷೇತ್ರೇ ದೇವೀ ಸಾ ಮಾರ್ಗದಾಯಿನೀ ॥೨೩॥**

**ಭೈರವಾಖ್ಯೇ ಭೈರವೀ ಸಾ ಗಯಾಯಾಂ ಮಂಗಳಾ ಸ್ಮೃತಾ ।**
**ಸ್ಥಾಣುಪ್ರಿಯಾ ಕುರುಕ್ಷೇತ್ರೇ ಸ್ವಾಯಂಭುವ್ಯಪಿ ನಾಕುಲೇ ॥೨೪॥**

**ಕನಖಲೇ ಭವೇದುಗ್ರಾ ವಿಶ್ವೇಶಾ ವಿಮಲೇಶ್ವರೇ ।**
**ಅಟ್ಟಹಾಸೇ ಮಹಾನಂದಾ ಮಹೇಂದ್ರೇ ತು ಮಹಾಂತಕಾ ॥೨೫॥**

**ಭೀಮೇ ಭೀಮೇಶ್ವರೀ ಪ್ರೋಕ್ತಾ ಸ್ಥಾನೇ ವಸ್ತ್ರಾಪಥೇ ಪುನಃ ।**
**ಭವಾನೀ ಶಾಂಕರೀ ಪ್ರೋಕ್ತಾ ರುದ್ರಾಣೀ ತ್ವರ್ಧಕೋಟಿಕೇ ॥೨೬॥**

**ಅವಿಮುಕ್ತೇ ವಿಶಾಲಾಕ್ಷೀ ಮಹಾಭಾಗಾ ಮಹಾಲಯೇ ।**
**ಗೋಕರ್ಣೇ ಭದ್ರಕರ್ಣೀ ಸ್ಯಾದ್ಭದ್ರಾ ಸ್ಯಾ ದ್ಭದ್ರಕರ್ಣಿಕೇ ॥೨೭॥**

---

ಮಹಾಕಾಲದಲ್ಲಿ ಶಾಂಕರಿಯೂ, ಮಧ್ಯಮಾ ಎಂಬ ಕ್ಷೇತ್ರದಲ್ಲಿ ಶರ್ವಾಣೀ ದೇವಿಯೂ, ಕೇದಾರವೆಂಬ ಶ್ರೇಷ್ಠವಾದ ಕ್ಷೇತ್ರದಲ್ಲಿ ಮೋಕ್ಷಪ್ರದಳಾದ ಮಾರ್ಗದಾಯಿನೀ ಎಂಬ ದೇವಿಯೂ ಇರುವರು. ॥೨೩॥

ಭೈರವಕ್ಷೇತ್ರದಲ್ಲಿ ಭೈರವಿಯೂ, ಗಯಾಕ್ಷೇತ್ರದಲ್ಲಿ ಮಂಗಳಾದೇವಿಯೂ, ಕುರುಕ್ಷೇತ್ರದಲ್ಲಿ ಸ್ಥಾಣುಪ್ರಿಯಾದೇವಿಯೂ, ನಾಕುಲವೆಂಬ ಸ್ಥಾನದಲ್ಲಿ ಸ್ವಾಯಂಭುವೀ ದೇವಿಯೂ ಇರುವರು. ॥೨೪॥

ಕನಖಲಕ್ಷೇತ್ರದಲ್ಲಿ ಉಗ್ರಾದೇವಿಯೂ, ವಿಮಲೇಶ್ವರದಲ್ಲಿ ವಿಶ್ವೇಶಾ ಎಂಬ ದೇವಿಯೂ, ಅಟ್ಟಹಾಸವೆಂಬ ಕ್ಷೇತ್ರದಲ್ಲಿ ಮಹಾನಂದಾದೇವಿಯೂ, ಮಹೇಂದ್ರವೆಂಬ ಕ್ಷೇತ್ರದಲ್ಲಿ ಮಹಾಂತಕಾ ಎಂಬ ದೇವಿಯೂ ನೆಲೆಸಿರುವರು. ॥೨೫॥

ಭೀಮಾಕ್ಷೇತ್ರದಲ್ಲಿ ಭೀಮೇಶ್ವರಿಯೂ, ವಸ್ತ್ರಾಪಥವೆಂಬ ಸ್ಥಾನದಲ್ಲಿ ಪರಮೇಶ್ವರಿಯಾದ ಭವಾನಿಯೂ, ಅರ್ಧಕೋಟಿಕಾ ಎಂಬ ಸ್ಥಾನದಲ್ಲಿ ರುದ್ರಾಣೀ ಎಂಬ ದೇವಿಯೂ ಇರುವರು. ॥೨೬॥

ಅವಿಮುಕ್ತಾಕ್ಷೇತ್ರದಲ್ಲಿ ವಿಶಾಲಾಕ್ಷಿಯೂ, ಮಹಾಲಯದಲ್ಲಿ ಮಹಾಭಾಗಾ ದೇವಿಯೂ, ಗೋಕರ್ಣದಲ್ಲಿ ಭದ್ರಕರ್ಣೀದೇವಿಯೂ, ಭದ್ರಕರ್ಣಿಕಾಕ್ಷೇತ್ರದಲ್ಲಿ ಭದ್ರಾದೇವಿಯೂ ಇರುವರು. ॥೨೭॥

ಉತ್ಪಲಾಕ್ಷೀ ಸುವರ್ಣಾಕ್ಷೇ ಸ್ಥಾಣ್ವೀಶಾ ಸ್ಥಾಣುಸಂಜ್ಞಿಕೇ ।
ಕಮಲಾಲಯೇ ತು ಕಮಲಾ ಪ್ರಚಂಡಾ ಛಗಲಂಡಕೇ ॥೨೮॥

ಕುರಂಡಲೇ ತ್ರಿಸಂಧ್ಯಾ ಸ್ಯಾನ್ಮಾಕೋಟೇ ಮುಕುಟೇಶ್ವರೀ ।
ಮಂಡಲೇಶೇ ಶಾಂಡಕೀ ಸ್ಯಾತ್ಕಾಲೀ ಕಾಲಂಜರೇ ಪುನಃ ॥೨೯॥

ಶಂಕುಕರ್ಣೇ ಧ್ವನಿಃ ಪ್ರೋಕ್ತಾ ಸ್ಥೂಲಾ ಸ್ಯಾತ್ ಸ್ಥೂಲಕೇಶ್ವರೇ ।
ಜ್ಞಾನಿನಾಂ ಹೃದಯಾಂಭೋಜೇ ಹೃಲ್ಲೇಖಾ ಪರಮೇಶ್ವರೀ ೩೦॥

ಪ್ರೋಕ್ತಾನೀಮಾನಿ ಸ್ಥಾನಾನಿ ದೇವ್ಯಾಃ ಪ್ರಿಯತಮಾನಿ ಚ ।
ತತ್ತತ್ಕ್ಷೇತ್ರಸ್ಯ ಮಾಹಾತ್ಮ್ಯಂ ಶ್ರುತ್ವಾ ಪೂರ್ವಂ ನಗೋತ್ತಮ ॥೩೧॥

ತದುಕ್ತೇನ ವಿಧಾನೇನ ಪಶ್ಚಾದ್ದೇವೀಂ ಪ್ರಪೂಜಯೇತ್ ।
ಅಥವಾ ಸರ್ವಕ್ಷೇತ್ರಾಣಿ ಕಾಶ್ಯಾಂ ಸಂತಿ ನಗೋತ್ತಮ ॥೩೨॥

---

ಸುವರ್ಣಾಕ್ಷ ಕ್ಷೇತ್ರದಲ್ಲಿ ಉತ್ಪಲಾಕ್ಷಿಯೂ, ಸ್ಥಾಣುವೆಂಬ ಸ್ಥಾನದಲ್ಲಿ ಸ್ಥಾಣ್ವೀಶಾ ಎಂಬ ದೇವಿಯೂ, ಕಮಲಾಲಯದಲ್ಲಿ ಕಮಲಾದೇವಿಯೂ, ದಕ್ಷಿಣ ದೇಶದಲ್ಲಿ ಸಮುದ್ರತೀರದಲ್ಲಿರುವ ಛಗಲಂಡಕವೆಂಬ ಸ್ಥಾನದಲ್ಲಿ ಪ್ರಚಂಡಾದೇವಿಯೂ ಇರುವರು. ॥೨೮॥

ಕುರಂಡಲದಲ್ಲಿ ತ್ರಿಸಂಧ್ಯಾದೇವಿಯೂ, ಮಾಕೋಟದಲ್ಲಿ ಮುಕುಟೇಶ್ವರಿಯೂ ಮಂಡಲೇಶದಲ್ಲಿ ಶಾಂಡಕಿಯೂ ಕಾಲಂಜರದಲ್ಲಿ ಕಾಳಿಯೂ ಇರುವರು. ॥೨೯॥

ಶಂಕುಕರ್ಣನೆಂಬ ಸ್ಥಾನದಲ್ಲಿ ಧ್ವನಿಯೆಂಬ ದೇವಿಯೂ, ಸ್ಥೂಲಕೇಶ್ವರದಲ್ಲಿ ಸ್ಥೂಲಾ ಎಂಬ ದೇವಿಯೂ, ಇರುವರು. ಜ್ಞಾನಿಗಳಾದವರ ಹೃದಯಕಮಲದಲ್ಲಿ ಪರಮೇಶ್ವರಿಯು ಹೃಲ್ಲೇಖೆಯೋಪಾದಿಯಲ್ಲಿ ಪ್ರಕಾಶಿಸುವಳು. ॥೩೦॥

ಎಲೈ ಪರ್ವತರಾಜನೇ, ದೇವಿಗೆ ಅತ್ಯಂತವಾಗಿ ಇಷ್ಟಗಳಾದ ಈ ಸ್ಥಾನಗಳು ನನ್ನಿಂದ ಹೇಳಲ್ಪಟ್ಟವು. ಆ ದೇವಿಯನ್ನು ಆರಾಧಿಸುವವನು ಮೊದಲು ಆಯಾಯ ಕ್ಷೇತ್ರದ ಮಹಿಮೆಯನ್ನು ತಿಳಿದುಕೊಂಡು, ॥೩೧॥

ಅದರಲ್ಲಿ ಹೇಳಿರುವ ಪ್ರಕಾರವಾಗಿ ದೇವಿಯನ್ನು ಪೂಜಿಸಬೇಕು. ಎಲೈ ಪರ್ವತರಾಜನೇ, ಕಾಶಿಯಲ್ಲಿ ಸಮಸ್ತ ಕ್ಷೇತ್ರಗಳೂ ಸನ್ನಿಹಿತವಾಗಿರುತ್ತವೆ. ॥೩೨॥

ತತ್ರ ನಿತ್ಯಂ ವಸೇನ್ನಿತ್ಯಂ ದೇವೀಭಕ್ತಿಪರಾಯಣಃ ।
ತಾನಿ ಸ್ಥಾನಾನಿ ಸಂಪಶ್ಯನ್ ಜಪನ್ ದೇವೀಂ ನಿರಂತರಂ ॥೩೩॥

ಧ್ಯಾಯಂಸ್ತಚ್ಚರಣಾಂಭೋಜಂ ಮುಕ್ತೋ ಭವತಿ ಬಂಧನಾತ್ ।
ಇಮಾನಿ ದೇವೀನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ॥೩೪॥

ಭಸ್ಮೀಭವಂತಿ ಪಾಪಾನಿ ತತ್ಕ್ಷಣಾನ್ನಗ ಸತ್ವರಂ ।
ಶ್ರಾದ್ಧಕಾಲೇ ಪಠೇದೇತಾನ್ಯಮಲಾನಿ ದ್ವಿಜಾಗ್ರತಃ ॥೩೫॥

ಮುಕ್ತಾಸ್ತತ್ಪಿತರಸ್ಸರ್ವೇ ಪ್ರಯಾಂತಿ ಪರಮಾಂ ಗತಿಂ ।
ಅಧುನಾ ಕಥಯಿಷ್ಯಾಮಿ ವ್ರತಾನಿ ತವ ಸುವ್ರತ ॥೩೬॥

ನಾರೀಭಿಶ್ಚ ನರೈಶ್ಚೈವ ಕರ್ತವ್ಯಾನಿ ಪ್ರಯತ್ನತಃ ।
ವ್ರತಮನಂತತೃತೀಯಾಖ್ಯಂ ರಸಕಲ್ಯಾಣಿನೀವ್ರತಂ ॥೩೭॥

---

ಆ ಕಾಶೀಕ್ಷೇತ್ರದಲ್ಲಿ ದೇವಿಯು ಶಾಶ್ವತವಾಗಿ ನೆಲೆಸಿದ್ದಾಳೆ. ಹೆಚ್ಚಾದ ಭಕ್ತಿಯುಳ್ಳವನು ಆ ಕಾಶಿಯಲ್ಲಿ ಎಲ್ಲ ಕ್ಷೇತ್ರಗಳೂ ಇವೆ ಎಂದು ಭಾವಿಸಿ ಸದಾ ಕಾಲದಲ್ಲೂ ದೇವೀಧ್ಯಾನವನ್ನು ಮಾಡುತ್ತಾ, ॥೩೩॥

ಆ ದೇವಿಯ ಪಾದಕಮಲವನ್ನು ಧ್ಯಾನಿಸುತ್ತಿದ್ದರೆ, ಅಂಥವನು ಶೀಘ್ರದಲ್ಲಿಯೇ ಸಂಸಾರವೆಂಬ ಬಂಧನದಿಂದ ಬಿಡುಗಡೆಯನ್ನು ಹೊಂದಿ ಮೋಕ್ಷವನ್ನು ಪಡೆಯುವನು. ಈ ದೇವಿಯ ನಾಮ ವಿಶೇಷಗಳನ್ನು ಪ್ರಾತಃಕಾಲದಲ್ಲೆದ್ದು ಯಾವನು ಪಠಿಸುವನೋ, ॥೩೪॥

ಅವನ ಪಾಪಗಳೆಲ್ಲವೂ ಆ ಕ್ಷಣದಲ್ಲೇ ನಶಿಸಿಹೋಗುವುವು. ಓ ಪರ್ವತ ರಾಜನೇ, ದೇವಿಯ ಈ ಪವಿತ್ರ ನಾಮಗಳನ್ನು ಯಾವನು ಶ್ರಾದ್ಧಸಮಯದಲ್ಲಿ ಬ್ರಾಹ್ಮಣಸನ್ನಿಧಿಯಲ್ಲಿ ಪಠನಮಾಡುವನೋ, ॥೩೫॥

ಅವನ ಪಿತೃಗಳೆಲ್ಲರೂ ಪಾಪಗಳಿಂದ ಬಿಡಲ್ಪಟ್ಟವರಾಗಿ ಶ್ರೇಷ್ಠವಾದ ಸದ್ಗತಿಯನ್ನು ಹೊಂದುವರು. ಓ ನಿಯಮಶೀಲನಾದ ಹಿಮವಂತನೇ, ಈಗ ದೇವಿಯ ಪ್ರೀತ್ಯರ್ಥವಾಗಿ ಮಾಡಬೇಕಾದ ವ್ರತಗಳನ್ನು ಹೇಳುವೆನು. ॥೩೬॥

ಪುರುಷರೂ, ಸ್ತ್ರೀಯರೂ ಸಹ ಪ್ರಯತ್ನಪೂರ್ವಕವಾಗಿ ಮಾಡಬೇಕಾದ ವ್ರತಗಳು ಯಾವುವೆಂದರೆ, ಅನಂತತೃತೀಯಾ ಮತ್ತು ರಸಕಲ್ಯಾಣಿನೀ ವ್ರತಗಳು. ಈ ತೃತೀಯಾವ್ರತಗಳ ವಿಧಾನಗಳನ್ನು ಮತ್ಸ್ಯಪುರಾಣದಲ್ಲಿ ಹೇಳಿದೆ. ॥೩೭॥

ಆರ್ದ್ರಾನಂದಕರಂ ನಾಮ್ನಾ ತೃತೀಯಾಯಾ ವ್ರತಂ ಚ ಯತ್ ।
ಶುಕ್ರವಾರವ್ರತಂ ಚೈವ ತಥಾ ಕೃಷ್ಣ ಚತುರ್ದಶೀ ॥೩೮॥

ಭೌಮವಾರವ್ರತಂ ಚೈವ ಪ್ರದೋಷವ್ರತಮೇವ ಚ ।
ಯತ್ರ ದೇವೋ ಮಹಾದೇವೋ ದೇವೀಂ ಸಂಸ್ಥಾಪ್ಯ ವಿಷ್ಟರೇ ॥೩೯॥

ನೃತ್ಯಂ ಕರೋತಿ ಪುರತಸ್ಸಾರ್ಧಂ ದೇವೈರ್ನಿಶಾಮುಖೇ ।
ತತ್ರೋಪೋಷ್ಯ ರಜನ್ಯಾದೌ ಪ್ರದೋಷೇ ಪೂಜಯೇಚ್ಛಿವಾಂ ॥೪೦॥

ಪ್ರತಿಪಕ್ಷಂ ವಿಶೇಷೇಣ ತದ್ದೇವೀಪ್ರೀತಿಕಾರಕಂ ।
ಸೋಮವಾರವ್ರತಂ ಚೈವ ಮಮಾತಿಪ್ರಿಯಕೃನ್ನಗ ॥೪೧॥

ತತ್ರಾಪಿ ದೇವೀಂ ಸಂಪೂಜ್ಯ ರಾತ್ರೌ ಭೋಜನಮಾಚರೇತ್ ।
ನವರಾತ್ರದ್ವಯಂ ಚೈವ ವ್ರತಂ ಪ್ರೀತಿಕರಂ ಮಮ ॥೪೨॥

---

ಆರ್ದ್ರಾನಂದಕರವೆಂದು ಹೆಸರುಳ್ಳ ತೃತೀಯಾವ್ರತ, ಶುಕ್ರವಾರವ್ರತ, ಮತ್ತು ಕೃಷ್ಣಚತುರ್ದಶೀ ವ್ರತಗಳು. ॥೩೮॥

ಮತ್ತು ಭೌಮವಾರವ್ರತ, ಪ್ರದೋಷವ್ರತಗಳು. ಯಾವ ಪ್ರದೋಷಕಾಲ ದಲ್ಲಿ ಪರಮೇಶ್ವರನು ಪಾರ್ವತಿಯನ್ನು ಆಸನದಲ್ಲಿ ಕೂರಿಸಿ, ॥೩೯॥

ದೇವತೆಗಳೊಡನೆ ನಾಟ್ಯವನ್ನಾಡುವನೋ ಅಂಥ ರಾತ್ರಿಯ ಪ್ರಾರಂಭದಲ್ಲಿ ಹಗಲಿನಲ್ಲಿ ಉಪವಾಸವನ್ನು ಮಾಡಿ ಪ್ರದೋಷಕಾಲದಲ್ಲಿ ಪಾರ್ವತಿಯನ್ನು ಪೂಜಿಸ ಬೇಕು. ॥೪೦॥

ಪ್ರತಿ ಒಂದು ಪಕ್ಷದಲ್ಲೂ ವಿಶೇಷವಾಗಿ ದೇವಿಯನ್ನು ಪ್ರದೋಷ ಸಮಯ ದಲ್ಲಿ ಪೂಜಿಸಿದರೆ ದೇವಿಗೆ ಅದರಿಂದ ಬಹಳ ತೃಪ್ತಿಯಾಗುವುದು. ಓ ಪರ್ವತಶ್ರೇಷ್ಠ ನಾದ ಹಿಮವಂತನೇ, ಸೋಮವಾರ ವ್ರತವೂ ನನಗೆ ಬಹಳ ಇಷ್ಟವಾದುದು. ॥೪೧॥

ಆ ಸೋಮವಾರದ ದಿವಸದಲ್ಲಿ ದೇವಿಯನ್ನು ಹಗಲಿನಲ್ಲಿ ಪೂಜಿಸಿ ರಾತ್ರಿ ಯಲ್ಲಿ ಊಟಮಾಡಬೇಕು. ಶರನ್ನವರಾತ್ರಿ, ವಸಂತನವರಾತ್ರಿಗಳೆಂಬ ಎರಡು ನವರಾತ್ರಿ ವ್ರತಗಳೂ ಸಹ ನನಗೆ ತೃಪ್ತಿಯನ್ನುಂಟುಮಾಡುವುವು. ॥೪೨॥

ಏವಮನ್ಯಾನ್ಯಪಿ ವಿಭೋ ನಿತ್ಯನೈಮಿತ್ತಿಕಾನಿ ಚ ।
ವ್ರತಾನಿ ಕುರುತೇ ಯೋ ವೈ ಮತ್ಪ್ರೀತ್ಯರ್ಥಂ ವಿಮತ್ಸರಃ ॥೪೩॥

ಪ್ರಾಪ್ನೋತಿ ಮಮ ಸಾಯುಜ್ಯಂ ಸ ಮೇ ಭಕ್ತಸ್ಸ ಮೇ ಪ್ರಿಯಃ ।
ಉತ್ಸವಾನಪಿ ಕುರ್ವೀತ ದೋಲೋತ್ಸವಮುಖಾನ್ವಿಭೋ ॥೪೪॥

ಶಯನೋತ್ಸವಂ ಯಥಾ ಕುರ್ಯಾತ್ತಥಾ ಜಾಗರಣೋತ್ಸವಂ ।
ರಥೋತ್ಸವಂ ಚ ಮೇ ಕುರ್ಯಾದ್ದಮನೋತ್ಸವಮೇವ ಚ ॥೪೫॥

ಪವಿತ್ರೋತ್ಸವಮೇವಾಪಿ ಶ್ರಾವಣೇ ಪ್ರೀತಿಕಾರಕಂ ।
ಮಮ ಭಕ್ತಸ್ಸದಾ ಕುರ್ಯಾದೇವಮನ್ಯಾನ್ಮಹೋತ್ಸವಾನ್ ॥೪೬॥

ಮದ್ಭಕ್ತಾನ್ ಭೋಜಯೇತ್ಪ್ರೀತ್ಯಾ ತಥಾ ಚೈವ ಸುವಾಸಿನೀಃ ।
ಕುಮಾರೀರ್ಬಟುಕಾಂಶ್ಚಾಪಿ ಮದ್ಬುದ್ಧ್ಯಾ ಮದ್ಗತಾಂತರಃ ॥೪೭॥

---

ಓ ಮಹಿಮಾಯುಕ್ತನಾದ ಹಿಮವಂತನೇ, ಇದೇ ರೀತಿಯಲ್ಲಿ ಇನ್ನೂ ಅನೇಕವಾಗಿರುವ, ಉಪಾಂಗಲಲಿತಾವ್ರತ, ಮೊದಲಾದ ನಿತ್ಯನೈಮಿತ್ತಿಕವ್ರತಗಳನ್ನು ಯಾವನು ಅಹಂಕಾರವಿಲ್ಲದೆ ನನ್ನ ಪ್ರೀತಿಗೋಸ್ಕರವಾಗಿ ಮಾಡುವನೋ, ಇವನ್ನು ವಾಮನಪುರಾಣ, ದೇವೀಪುರಾಣ, ಶಿವಪುರಾಣಗಳಲ್ಲಿ ನೋಡಬೇಕು. ||೪೩||

ಅವನು ನನ್ನಲ್ಲೇ ಐಕ್ಯವನ್ನು ಹೊಂದುವನು. ಅಂಥವನೇ ನನ್ನ ಭಕ್ತನು. ಮತ್ತು ನನಗೆ ಇಷ್ಟನಾದವನು. ಓ ಮಹಾತ್ಮನಾದ ಹಿಮವಂತನೇ, ದೋಲೋತ್ಸವ ಮೊದಲಾದ ಉತ್ಸವಗಳನ್ನೂ ಸಹ ನನ್ನ ತೃಪ್ತಿಗೋಸ್ಕರ ಮಾಡಬೇಕು. ||೪೪||

ಶಯನೋತ್ಸವವನ್ನು ಮಾಡುವಂತೆ ಜಾಗರಣೋತ್ಸವ, ರಥೋತ್ಸವ, ದಮನೋತ್ಸವಗಳನ್ನೂ ಮಾಡಬೇಕು. ||೪೫||

ಶ್ರಾವಣಮಾಸದ ಪೂರ್ಣಿಯಾ ದಿವಸದಲ್ಲಿ ನನಗೆ ಸಂತೋಷವನ್ನುಂಟು ಮಾಡುವ ಪವಿತ್ರೋತ್ಸವವನ್ನು ಮಾಡಬೇಕು. ನನ್ನಲ್ಲಿ ಭಕ್ತಿಯುಳ್ಳ ಮನುಷ್ಯನು ಇದೇ ರೀತಿಯಾದ ಮಹೋತ್ಸವಗಳನ್ನು ಯಾವಾಗಲೂ ಮಾಡುತ್ತಿರಬೇಕು. ||೪೬||

ವ್ರತಸಮಾಪ್ತಿಯಾದ ಮೇಲೆ ನನ್ನಲ್ಲಿ ಭಕ್ತಿ ಉಳ್ಳ ಬ್ರಾಹ್ಮಣಸುವಾಸಿನಿಯರಿಗೆ ವಿಶ್ವಾಸದಿಂದ ಭೋಜನವನ್ನು ಮಾಡಿಸಬೇಕು. ಮತ್ತು ಕುಮಾರಿಯರನ್ನೂ ಬ್ರಹ್ಮಚಾರಿಗಳನ್ನೂ ಕರೆದು, ನನ್ನ ಸಾನ್ನಿಧ್ಯವು ಅವರಲ್ಲಿರುವುದೆಂಬ ಭಾವನೆಯಿಂದ ವಿಶ್ವಾಸಪೂರ್ವಕವಾಗಿ, ||೪೭||

ವಿತ್ತಶಾಠ್ಯೇನ ರಹಿತೋ ಯಜೇದೇತಾನ್ನುಮಾದಿಭಿಃ ।
ಯ ಏವಂ ಕುರುತೇ ಭಕ್ತ್ಯಾ ಪ್ರತಿವರ್ಷಮತಂದ್ರಿತಃ ॥೪೮॥

ಸ ಧನ್ಯಃ ಕೃತಕೃತ್ಯೋಽಸೌ ಮತ್ಪ್ರೀತೇಃ ಪಾತ್ರಮಂಜಸಾ ।
ಸರ್ವಮುಕ್ತಂ ಸಮಾಸೇನ ಮಮ ಪ್ರೀತಿಪ್ರದಾಯಕಂ ॥೪೯॥
ನಾಶಿಷ್ಯಾಯ ಪ್ರದಾತವ್ಯಂ ನಾಽಭಕ್ತಾಯ ಕದಾಚನ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಅಷ್ಟತ್ರಿಂಶೋಽಧ್ಯಾಯಃ

---

ಪುಷ್ಪ, ವಸ್ತ್ರ, ಭೋಜನ, ಮೊದಲಾದುವುಗಳಿಂದಲೂ ಹೆಚ್ಚಾದ ದಕ್ಷಿಣೆಯಿಂದಲೂ ಸತ್ಕರಿಸಬೇಕು. ಯಾವನು ಪ್ರತಿವರ್ಷವೂ ಅನಲಸನಾಗಿ ವಿಶೇಷವಾದ ಭಕ್ತಿಯಿಂದ ಈ ಪ್ರಕಾರವಾಗಿ ವ್ರತಗಳನ್ನು ಮಾಡುವನೋ, ॥೪೮॥

ಅಂಥವನೇ ಧನ್ಯನು ಮತ್ತು ಕೃತಕೃತ್ಯನು. ಅವನು ಕ್ಷಿಪ್ರದಲ್ಲೇ ನನ್ನ ವಿಶ್ವಾಸಕ್ಕೆ ಪಾತ್ರನಾಗುವನು. ನನಗೆ ಸಂತೋಷದಾಯಕವಾದ ವಿಷಯವೆಲ್ಲವನ್ನೂ ಸಂಗ್ರಹವಾಗಿ ನಿನಗೆ ಹೇಳಿದ್ದಾಯಿತು. ॥೪೯॥

ಇಂತಹ ಸತ್ಕಾರಾದಿಗಳನ್ನು ಅಯೋಗ್ಯನಾದ ಶಿಷ್ಯನಿಗೂ, ನನ್ನಲ್ಲಿ ಭಕ್ತಿ ಇಲ್ಲದವನಿಗೂ ಯಾವಾಗಲೂ ಉಪದೇಶ ಮಾಡಬಾರದು. ॥೫೦॥

ಇಲ್ಲಿಗೆ ಶ್ರಿದೇವೀಭಾಗವತಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಸಪ್ತಮಸ್ಕಂಧೇ

|| ಏಕೋನಚತ್ವಾರಿಂಶೋಽಧ್ಯಾಯಃ ||

### ಮೂವತ್ತೊಂಬತ್ತನೆಯ ಅಧ್ಯಾಯವು

|| ಶ್ರೀ ಹಿಮಾಲಯ ಉವಾಚ ||

**ದೇವದೇವಿ ಮಹೇಶಾನಿ ಕರುಣಾಸಾಗರೇಽಂಬಿಕೇ ।**
**ಬ್ರೂಹಿ ಪೂಜಾವಿಧಿಂ ಸಮ್ಯಗ್ಯಥಾ ವದಧುನಾ ನಿಜಂ ||೧||**

|| ಶ್ರೀದೇವ್ಯುವಾಚ ||

**ವಕ್ಷ್ಯೇ ಪೂಜಾವಿಧಿಂ ರಾಜನ್ ಅಂಬಿಕಾಯಾ ಯಥಾ ಪ್ರಿಯಂ ।**
**ಅತ್ಯಂತಶ್ರದ್ಧಯಾ ಸಾರ್ಧಂ ಶೃಣು ಪರ್ವತ ಪುಂಗವ ||೨||**

**ದ್ವಿವಿಧಾ ಮಮ ಪೂಜಾ ಸ್ಯಾತ್ ಬಾಹ್ಯಾಚಾಭ್ಯಂತರಾಽಪಿ ಚ ।**
**ಬಾಹ್ಯಾಽಪಿ ದ್ವಿವಿಧಾ ಪ್ರೋಕ್ತಾ ವೈದಿಕೀ ತಾಂತ್ರಿಕೀ ತಥಾ ||೩||**

---

ಹಿಮಾಲಯನು ಹೇಳಿದನು— ದೇವತೆಗಳಿಗೂ ಒಡೆಯಳಾದ, ದಯೆಗೆ ಅಪಾರವಾದ ನಿಧಿಯಂತಿರುವ, ಪರಮೇಶ್ವರಸ್ವರೂಪಳಾದ, ಓ ಜಗನ್ಮಾತೆಯೇ, ನಿನ್ನ ಪೂಜೆಯ ಪ್ರಯೋಗಕ್ರಮವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಚನ್ನಾಗಿ ನನಗೆ ತಿಳಿಯಹೇಳು. ||೧||

ದೇವಿಯು ಹೀಗೆ ಹೇಳಿದಳು— ಪರ್ವತಗಳಲ್ಲಿ ಶ್ರೇಷ್ಠನಾದ, ದೊರೆಯಾದ, ಓ ಹಿಮವಂತನೇ, ಜಗನ್ಮಾತೆಗೆ ಪ್ರೀತಿಯನ್ನುಂಟುಮಾಡುವ ಪೂಜೆಯ ವಿಧಾನವನ್ನು ನಿನಗೆ ನಾನು ಹೇಳುವೆನು. ತುಂಬ ಆದರದಿಂದ ಕೂಡಿ ಕೇಳು. ||೨||

ಓ ಪರ್ವತರಾಜನೇ, ನನ್ನ ಪೂಜೆಯ ಕ್ರಮದಲ್ಲಿ ಬಾಹ್ಯಪೂಜೆಯೆಂದೂ, ಆಭ್ಯಂತರಪೂಜೆಯೆಂದೂ, ಎರಡು ಬಗೆ ಇದೆ. ಆ ಬಾಹ್ಯಪೂಜೆಯಲ್ಲೂ ವೈದಿಕೀ ಪೂಜೆಯೆಂದೂ, ತಾಂತ್ರಿಕೀಪೂಜೆಯೆಂದೂ ಎರಡು ರೀತಿಯುಂಟು. ||೩||

ವೈದಿಕ್ಯರ್ಚಾಽಪಿ ದ್ವಿವಿಧಾ ಮೂರ್ತಿಭೇದೇನ ಭೂಧರ ।
ವೈದಿಕೀ ವೈದಿಕೈಃ ಕಾರ್ಯಾ ವೇದದೀಕ್ಷಾಸಮನ್ವಿತೈಃ ॥೪॥

ತಂತ್ರೋಕ್ತದೀಕ್ಷಾವದ್ಭಿಸ್ತು ತಾಂತ್ರಿಕೀ ಸಂಶ್ರಿತಾ ಭವೇತ್ ।
ಇತ್ಥಂ ಪೂಜಾರಹಸ್ಯಂ ಚ ನ ಜ್ಞಾತ್ವಾ ವಿಪರೀತಕಂ ॥೫॥

---

ಓ ಗಿರಿರಾಜನೇ, ವೈದಿಕಪೂಜೆಯೂ ಎರಡು ಬಗೆಯಾಗಿದೆ. ಈ ಪೂಜಾ ಭೇದವು ಮುಂದೆ ಹೇಳುವಂತೆ ಪೂಜೆಗೆ ಇಟ್ಟುಕೊಳ್ಳುವ ಮೂರ್ತಿಯ ರೂಪಭೇದ ವನ್ನು ಅವಲಂಬಿಸಿರುತ್ತದೆ. ಈ ಪೂಜೆಯನ್ನು ವೇದೋಕ್ತವಾದ ರೀತಿಯಲ್ಲಿ ದೀಕ್ಷೆ ಯನ್ನು ಸ್ವೀಕರಿಸಿರುವ ವೈದಿಕರು ಮಾಡಬೇಕು. ಹಿಂದೆ ಮೂವತ್ತುಮೂರನೆಯ ಅಧ್ಯಾಯದಲ್ಲಿ ದೇವಿಯು ಅನುಗ್ರಹಿಸಿ ತೋರಿಸಿದ ವಿಶ್ವರೂಪ ಅಥವಾ ವಿರಾಟ್ ಸ್ವರೂಪವನ್ನು ಅನನ್ಯಭಕ್ತಿಯಿಂದ ಅಚಂಚಲವಾದ ಮನಸ್ಸಿನಿಂದ ಧ್ಯಾನಮಾಡು ವುದೇ ಮೊದಲನೆಯ ವೈದಿಕಪೂಜಾಪ್ರಕಾರವಾಗಿದೆ. ಕೋಮಲವೂ ಮನೋಹರವೂ ಆಗಿರುವ ಕೈಕಾಲು ಮುಂತಾದ ಅವಯವಗಳಿಂದ ಕೂಡಿರುವ ಭಗವತಿಯ ಮೂರ್ತಿ ಯನ್ನು ಧ್ಯಾನಮಾಡುತ್ತಾ ವೈದಿಕವಾದ ಮಂತ್ರಗಳಿಂದ ಆವಾಹನೆ ಮೊದಲು ಗೊಂಡು ವಿಸರ್ಜನೆಯ ವರೆಗಿನ ಉಪಚಾರಗಳನ್ನು ಮಾಡುತ್ತಾ ನೆರವೇರಿಸುವ ಪೂಜೆಯೇ ಎರಡನೆಯ ಬಗೆಯ ವೈದಿಕ ಪೂಜೆಯಾಗಿದೆ. ಹೀಗೆ ಮೂರ್ತಿ ಭೇದ ದಿಂದ ವೈದಿಕ ಪೂಜೆಯ ಪ್ರಕಾರವು ಎರಡು ವಿಧವಾಗಿದೆ. ಇವುಗಳಲ್ಲಿ ವೈದಿಕ ಪೂಜೆಯು ದ್ವಿಜರಿಗೆ ಕ್ಷೇಮಕರವೂ ಉತ್ತಮವೂ ಆಗಿದೆ. ಎಂದು ತಾತ್ಪರ್ಯವು.॥೪॥

ಮಹಾತಂತ್ರ, ಕುಲಾರ್ಣವ, ಮುಂತಾದ ತಂತ್ರಶಾಸ್ತ್ರ ಗ್ರಂಥಗಳಲ್ಲೂ ಆಗಮಗಳಲ್ಲೂ ಹೇಳಿರುವಂತೆ ದೀಕ್ಷೆಯನ್ನು ಸ್ವೀಕರಿಸಿರುವವರು ತಾಂತ್ರಿಕವಾದ ಪೂಜೆಯನ್ನು ಆಚರಿಸಬೇಕು. ಈ ಪ್ರಕಾರವಾಗಿ ಪೂಜೆಯ ಭೇದಗಳನ್ನೂ, ಕ್ರಮ ಗಳನ್ನೂ, ಗುಟ್ಟನ್ನು ತಿಳಿಯದೆ ಯಾರು ವ್ಯತ್ಯಾಸದಿಂದ ಪೂಜಿಸುತ್ತಾರೋ, ಅಂಥಾ ದಡ್ಡನಾದ ಮಾನವನು ಎಲ್ಲರೀತಿಯಿಂದಲೂ ಅಧೋಗತಿಯನ್ನು ಪಡೆಯುತ್ತಾನೆ. ಆದುದರಿಂದ ತಂತ್ರಗಳಲ್ಲಿ ಹೇಳಿರುವ, ಕುಂಡ, ಮಂಟಪಾದಿಗಳನ್ನು ರಚಿಸಿ ಏರ್ಪಡಿಸಿ ಕೊಂಡು, ತಾಂತ್ರಿಕವಾದ ಮಂತ್ರಗಳಿಂದ ಪೂಜೆಯನ್ನು ಆ ಕ್ರಮದಲ್ಲಿಯೇ ಮಾಡ ಬೇಕು. ಈ ಅಂಶವನ್ನು " ಯೋಽನ್ಯೈಸ್ವಾಂ ದೇವತಾಂ ಅತಿಯಜತೇ, ನ ಸ್ವಾಯೈ ದೇವತಾಯೈ ಚ್ಯವತೇ, ನಪರಾಂ ಪ್ರಾಪ್ನೋತಿ, ಪಾಪೀಯಾನ್ ಭವತಿ " ಎಂದು ಮುಂತಾದ ಶ್ರುತಿಯಲ್ಲೂ ವಿಧಾನಮಾಡಿದೆ. ॥೫॥

ಕರೋತಿ ಯೋ ನರೋ ಮೂಢಃ ಸ ಪತತ್ಯೇವ ಸರ್ವಥಾ ।
ತತ್ರ ಯಾ ವೈದಿಕೀ ಪ್ರೋಕ್ತಾ ಪ್ರಥಮಾ ತಾಂ ವದಾಮ್ಯಹಂ ॥೬॥

ಯನ್ಮೇ ಸಾಕ್ಷಾತ್ಪರಂ ರೂಪಂ ದೃಷ್ಟವಾನಸಿ ಭೂಧರ ।
ಅನಂತಶೀರ್ಷನಯನಂ ಅನಂತಚರಣಂ ಮಹತ್ ॥೭॥

ಸರ್ವಶಕ್ತಿಸಮಾಯುಕ್ತಂ ಪ್ರೇರಕಂ ಯತ್ಪರಾತ್ಪರಂ ।
ತದೇವ ಪೂಜಯೇನ್ನಿತ್ಯಂ ನ ಮೇ ಧ್ಯಾಯೇತ್ಸ್ಮರೇದಪಿ ॥೮॥

ಇತ್ಯೇತತ್ಪ್ರಥಮಾರ್ಚಾಯಾಃ ಸ್ವರೂಪಂ ಕಥಿತಂ ನಗ ।
ಶಾಂತಸ್ಸಮಾಹಿತಮನಾ ದಂಭಾಹಂಕಾರವರ್ಜಿತಃ ॥೯॥

ತತ್ಪರೋ ಭವ ತದ್ಯಾಜೀ ತದೇವ ಶರಣಂ ವ್ರಜ ।
ತದೇವ ಚೇತಸಾ ಪಶ್ಯ ಜಪನ್ ಧ್ಯಾಯಸ್ವ ಸರ್ವದಾ ॥೧೦॥

---

ಓ ಹಿಮವಂತನೇ, ಈ ಪೂಜಾವಿಧಾನಗಳಲ್ಲಿ ಮೊದಲನೆಯದಾಗಿರುವ ವೈದಿಕೀ ಪೂಜೆಯ ಪ್ರಕಾರವನ್ನು ನಾನು ಹೇಳುತ್ತೇನೆ. ॥೬॥

ಓ ಪರ್ವತರಾಜನೇ, ಎಣಿಕೆಗೆ ನಿಲುಕದಷ್ಟು ತಲೆಗಳು, ಕಣ್ಣುಗಳು, ಕೈ ಕಾಲುಗಳೂ, ಮುಂತಾದ ಅವಯವಗಳುಳ್ಳ ಅತಿ ದೊಡ್ಡದಾದ ನನ್ನ ಶ್ರೇಷ್ಠವಾದ ವಿರಾಟ್ ರೂಪವನ್ನು ನೀನು ನೋಡಿದೆಯಲ್ಲವೇ ? ॥೭॥

ಆ ಎಲ್ಲ ಶಕ್ತಿಗಳಿಂದಲೂ ಕೂಡಿರುವ, ಎಲ್ಲ ಜೀವರನ್ನೂ ಅವರವರ ಕರ್ಮಗಳಲ್ಲಿ ಪ್ರೇರಿಸುವ, ಅವರಲ್ಲಿ ತಿಳಿವಳಿಕೆಯನ್ನು ಸ್ಫುರಿಸುವಂತೆ ಮಾಡುವ, ಎಲ್ಲಕ್ಕಿಂತಲೂ ಶ್ರೇಷ್ಠವಾದ ಆ ನನ್ನ ವಿಶ್ವರೂಪವನ್ನು ಉಪಾಸಕನು ಯಾವಾಗಲೂ ಪೂಜಿಸುತ್ತಾ ನಮಸ್ಕರಿಸುತ್ತಲೂ, ಸ್ಮರಿಸುತ್ತಲೂ, ಧ್ಯಾನಿಸುತ್ತಿರಬೇಕು. ॥೮॥

ಓ ಹಿಮವಂತನೇ, ಈ ಪ್ರಕಾರವಾಗಿ ಮೊದಲನೆಯ ವೈದಿಕಾರ್ಚನೆಯ ಸ್ವರೂಪವನ್ನು ಹೇಳಿರುತ್ತೇನೆ. ಈ ಪೂಜೆಯನ್ನು ನೀನು ಶಮದಮಾದಿಗುಣಗಳಿಂದ ಕೂಡಿದವನಾಗಿ, ಚಿತ್ತಸಮಾಧಾನವುಳ್ಳವನೂ ಆಗಿ, ಡಾಂಭಿಕವಾದ ಧರ್ಮಾಚರಣೆಯನ್ನೂ ಬಿಟ್ಟು, ಅಹಂಕಾರವನ್ನೂ ಬಿಟ್ಟು, ನೆರವೇರಿಸು. ॥೯॥

ಆ ನನ್ನ ವಿರಾಟ್‌ಸ್ವರೂಪವನ್ನೇ ಎಲ್ಲಕ್ಕೂ ಶ್ರೇಷ್ಠವಾದ ಪೂಜ್ಯವಸ್ತುವೆಂದು ಭಾವಿಸುತ್ತಾ, ಅದಕ್ಕಾಗಿಯೇ ಹವಿಸ್ಸುಗಳಿಂದ ಯಾಗಗಳನ್ನು ಮಾಡಿ ಆರಾಧಿಸು.

ಅನನ್ಯಯಾ ಪ್ರೇಮಯುಕ್ತಭಕ್ತ್ಯಾ ಮದ್ಭಾವಮಾಶ್ರಿತಃ ।
ಯಜ್ಞೈರ್ಯಜ ತಪೋದಾನೈರ್ಮಾಮೇವ ಪರಿತೋಷಯ ॥೧೧॥

ಇತ್ಥ ಮಮಾನುಗ್ರಹತೋ ಮೋಕ್ಷ್ಯಸೇ ಭವಬಂಧನಾತ್ ।
ಮತ್ಪರಾ ಯೇ ಮದಾಸಕ್ತಚಿತ್ತಾ ಭಕ್ತವರಾ ಮತಾಃ ॥೧೨॥

ಪ್ರತಿಜಾನೇ ಭವಾದಸ್ಮಾದುದ್ಧರಾಮ್ಯಚಿರೇಣ ತು ।
ಧ್ಯಾನೇನ ಕರ್ಮಯುಕ್ತೇನ ಭಕ್ತಿಜ್ಞಾನೇನ ವಾ ಪುನಃ ॥೧೩॥

ಪ್ರಾಪ್ಯಾಽಹಂ ಸರ್ವಥಾ ರಾಜನ್ ನ ತು ಕೇವಲಕರ್ಮಭಿಃ ।
ಧರ್ಮಾತ್ಸಂಜಾಯತೇ ಭಕ್ತಿಃ ಭಕ್ತ್ಯಾ ಸಂಜಾಯತೇ ಪರಂ ॥೧೪॥

---

ಆ ದಿವ್ಯಸ್ವರೂಪವನ್ನೇ ರಕ್ಷಕವೆಂದು ತಿಳಿದು ಆಶ್ರಯಿಸು. ಆ ರೂಪವನ್ನೇ ಮನಸ್ಸಿನಲ್ಲಿ ಚಿತ್ರಿಸಿಕೊಂಡು ನೋಡು. ಆ ಸ್ವರೂಪವನ್ನು ವಿವರಿಸುವ ವಾಕ್ಯಗಳನ್ನೂ ಮಂತ್ರಗಳನ್ನೂ ಜಪಿಸು. ಮತ್ತು ಯಾವಾಗಲೂ ಅದನ್ನೇ ಧ್ಯಾನಮಾಡುತ್ತಿರು.॥೧೦॥

ಓ ಗಿರಿರಾಜನೇ, ನನ್ನ ಆ ವಿರಾಟ್‌ಸ್ವರೂಪದಲ್ಲಿಯೇ ಭಕ್ತಿಯಿಂದ ಕೂಡಿದವನಾಗಿ ಬೇರೆ ಯಾವ ವಿಷಯಗಳಲ್ಲೂ ಪ್ರೀತ್ಯಾದರಗಳಿಲ್ಲದೆ, ಯಜ್ಞಗಳು, ತಪಸ್ಸು, ದಾನ, ಇವುಗಳಿಂದ ನನ್ನನ್ನೇ ಆರಾಧಿಸುತ್ತಾ ಸಂತೋಷಪಡಿಸುತ್ತಿರು.॥೧೧॥

ಓ ಪರ್ವತರಾಜನೇ, ಈ ರೀತಿಯಲ್ಲಿ ನನ್ನ ಪೂಜೆಯಿಂದ ನನ್ನನ್ನು ಸಂತೋಷಪಡಿಸಿದರೆ ನಿನ್ನ ವಿಷಯದಲ್ಲಿ ನಾನು ಅನುಗ್ರಹಬುದ್ಧಿಯುಳ್ಳವಳಾಗಿ ನಿನ್ನನ್ನು ಈ ಸಂಸಾರವೆಂಬ ನಿರ್ಬಂಧ ದುಃಖದಿಂದ ಬಿಡಿಸಿ ಮೋಕ್ಷವನ್ನು ಕರುಣಿಸುವೆನು. ಈ ಪ್ರಕಾರವಾಗಿ ಯಾರು ನನ್ನಲ್ಲಿ ನಿರತಿಶಯವಾದ ಪೂಜ್ಯಬುದ್ಧಿಯುಳ್ಳವರಾಗಿ, ನನ್ನ ಆರಾಧನೆಯಲ್ಲಿ ಪ್ರೀತ್ಯಾದರಗಳಿಂದ ಕೂಡಿದ ಮನಸ್ಸುಳ್ಳವರಾಗಿರುತ್ತಾರೋ, ಅಂಥವರೇ ದೇವಿಯ ಭಕ್ತರಲ್ಲಿ ಶ್ರೇಷ್ಠರೆನಿಸಿಕೊಳ್ಳುತ್ತಾರೆ. ॥೧೨॥

ಹೀಗೆ ಯಾರು ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳಿಂದ ಕೂಡಿದ ಧ್ಯಾನದಿಂದಲೂ, ಭಕ್ತಿಯಿಂದ ಕೂಡಿದ ಜ್ಞಾನದಿಂದಲೂ, ನನ್ನನ್ನು ಆರಾಧಿಸುತ್ತಾರೋ ಅಂಥವರನ್ನು ನಾನು ಜಾಗ್ರತೆಯಾಗಿ ಈ ಸಂಸಾರದುಃಖದಿಂದ ಉದ್ಧರಿಸುವೆನೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ. ॥೧೩॥

ಓ ಪರ್ವತರಾಜನೇ, ಉಪಾಸಕರು ನನ್ನನ್ನು ಧ್ಯಾನದಿಂದಲೂ, ಜ್ಞಾನದಿಂದಲೂ ಪಡೆಯುತ್ತಾರೆ. ಬರಿಯ ಕರ್ಮಗಳಿಂದ ನನ್ನನ್ನು ಪಡೆಯಲಾರರು.

ಶ್ರುತಿಸ್ಮೃತಿಭ್ಯಾಮುದಿತಂ ಯಸ್ಸ ಧರ್ಮಃ ಪ್ರಕೀರ್ತಿತಃ ।
ಅನ್ಯಶಾಸ್ತ್ರೇಣ ಯಃ ಪ್ರೋಕ್ತೋ ಧರ್ಮಾಭಾಸಸ್ಸ ಉಚ್ಯತೇ ॥೧೫॥

ಸರ್ವಜ್ಞಾತ್ಸರ್ವಶಕ್ತೇಶ್ಚ ಮತ್ತೋ ವೇದಸ್ಸಮುತ್ಥಿತಃ ।
ಅಜ್ಞಾನಸ್ಯ ಮಮಾಭಾವಾದಪ್ರಮಾಣಾ ನ ಚ ಶ್ರುತಿಃ ॥೧೬॥

ಸ್ಮೃತಯಶ್ಚ ಶ್ರುತೇರರ್ಥಂ ಗೃಹೀತ್ವೈವ ಚ ನಿರ್ಗತಾಃ ।
ಮನ್ವಾದೀನಾಂ ಸ್ಮೃತೀನಾಂ ಚ ತತಃ ಪ್ರಾಮಾಣ್ಯಮಿಷ್ಯತೇ ॥೧೭॥

ಕ್ವಚಿತ್ ಕದಾಚಿತ್ ತಂತ್ರಾರ್ಥಕಟಾಕ್ಷೇಣ ಪರೋದಿತಂ ।
ಧರ್ಮಂ ವದಂತಿ ಸೋಽಂಶಸ್ತು ನೈವ ಗ್ರಾಹ್ಯೋಽಸ್ತಿ ವೈದಿಕೈಃ ॥೧೮॥

---

ಆದರೂ ಕರ್ಮಾಚರಣೆಯು ವ್ಯರ್ಥವೂ ಅನಾವಶ್ಯಕವೂ ಆಗಿದೆ ಎಂದು ತಿಳಿಯ ಬಾರದು. ಏಕೆಂದರೆ ಆ ಧರ್ಮಾಚರಣೆಯಿಂದ ದೇವಿಯಲ್ಲಿ ಭಕ್ತಿಯೂ, ಆ ಭಕ್ತಿ ಯಿಂದ ದೇವಿಯ ಸ್ವರೂಪದ ಜ್ಞಾನವೂ ಉಂಟಾಗುತ್ತದೆ. ಕರ್ಮಾಚರಣೆಯಿಂದ ಪಾಪಕ್ಷಯವಾಗಿ ಭಕ್ತಿಯುಂಟಾಗಿ ಪರಬ್ರಹ್ಮಪ್ರಾಪ್ತಿಯೂ ಲಲಿತವಾಗಿ ಉಂಟಾಗು ತ್ತದೆ. ||೧೪||

ವೇದಗಳಲ್ಲೂ ಸ್ಮೃತಿಗಳಲ್ಲೂ ಹೇಳಿರುವುದೇ ಶ್ರೇಯಸ್ಕರವಾದ ಧರ್ಮವು. ಇತರ ಶಾಸ್ತ್ರಗಳಲ್ಲಿ ಹೇಳಿರುವ ಧರ್ಮಗಳು ಬರಿಯ ಧರ್ಮಾಭಾಸಗಳಾಗಿದ್ದು ಶ್ರೇಯಸ್ಕರವಾಗಲಾರವು. ||೧೫||

ಸರ್ವಜ್ಞಳೂ ಸರ್ವಶಕ್ತಳೂ ಆದ ನನ್ನಿಂದ ವೇದಗಳೆಲ್ಲವೂ ಉಂಟಾಗಿವೆ. ನನಗೆ ಅಜ್ಞಾನ ಸಂಬಂಧವು ಸ್ವಲ್ಪವೂ ಇಲ್ಲದಿರುವುದರಿಂದ ಆ ಶ್ರುತಿಯು ತಪ್ಪಿಲ್ಲದೆ ಪ್ರಮಾಣವಾದುದಾಗಿದೆ. ಆದುದರಿಂದ ಶ್ರುತಿಯಲ್ಲಿ ವಿಧಿಸಿರುವ ಕರ್ಮವೇ ಶ್ರೇಯ ಸ್ಕರವಾದ ಧರ್ಮವೆನಿಸಲು ಅರ್ಹವಾಗುತ್ತದೆ. ||೧೬||

ಆದರೂ ಮನುಸ್ಮೃತಿಯೇ ಮೊದಲಾದ ಗ್ರಂಥಗಳು ಅಪ್ರಮಾಣಗಳಲ್ಲವು. ಏಕೆಂದರೆ ಆ ಸ್ಮೃತಿಗಳೂ ಶ್ರುತಿಯಲ್ಲಿ ಹೇಳಿರುವ ಅರ್ಥವನ್ನು ಅವಲಂಬಿಸಿಯೇ ಉಂಟಾಗಿವೆ. ಆದುದರಿಂದ ಮನ್ವಾದಿ ಸ್ಮೃತಿಗಳೂ ವೇದಮೂಲಕಗಳಾದುದರಿಂದ ಪ್ರಮಾಣಗಳೇ ಆಗಿರುತ್ತವೆ. ||೧೭||

ಅಲ್ಲದೆ ಕೆಲವೆಡೆಗಳಲ್ಲಿ ಮತ್ತು ಒಂದೊಂದು ಸಂದರ್ಭದಲ್ಲಿ ಕುಲಾರ್ಣವ, ಮುಂತಾದ ತಂತ್ರಗಳಲ್ಲಿ ಹೇಳಿರುವ ಅರ್ಥಗಳ ದೃಷ್ಟಿಯಿಂದ ಸ್ಮೃತಿ ಪುರಾಣಗಳ

ಅನ್ಯೇಷಾಂ ಶಾಸ್ತ್ರಕರ್ತೄಣಾಂ ಅಜ್ಞಾನಪ್ರಭವತ್ವತಃ ।
ಅಜ್ಞಾನದೋಷ ದುಷ್ಟತ್ವಾತ್ತದುಕ್ತೇರ್ನ ಪ್ರಮಾಣತಾ ॥೧೯॥

ತಸ್ಮಾನ್ಮುಮುಕ್ಷುರ್ಧರ್ಮಾರ್ಥಂ ಸರ್ವಥಾ ವೇದಮಾಶ್ರಯೇತ್ ।
ರಾಜಾಜ್ಞಾ ಚ ಯಥಾ ಲೋಕೇ ಹನ್ಯತೇ ನ ಕದಾಚನ ॥೨೦॥

ಸರ್ವೇಶಾನ್ಯಾ ಮಮಾಜ್ಞಾ ಸಾ ಶ್ರುತಿಸ್ತ್ಯಾಜ್ಯಾ ಕಥಂ ನೃಭಿಃ ।
ಮದಾಜ್ಞಾ ರಕ್ಷಣಾರ್ಥಂ ತು ಬ್ರಹ್ಮಕ್ಷತ್ರಿಯಜಾತಯಃ ॥೨೧॥

ಮಯಾ ಸೃಷ್ಟಾಸ್ತತೋ ಜ್ಞೇಯಂ ರಹಸ್ಯಂ ಮೇ ಶ್ರುತೇರ್ವಚಃ ।
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭೂಧರ ॥೨೨॥

---

ಲ್ಲಿಯೂ ಹೇಳಿರುವ ತಪ್ತಮುದ್ರಾಧಾರಣ, ವಾಮಾಚಾರ, ಮುಂತಾದ ಕರ್ಮಗಳನ್ನು ಧರ್ಮವೆಂದು ಹೇಳಿರುವುದುಂಟು. ಆದರೂ ಅಂಥವುಗಳನ್ನು ವೈದಿಕರಾದ ಉಪಾಸಕರು ಆಚರಿಸಬಾರದು. ಏಕೆಂದರೆ, ||೧೮||

ವೇದಗಳು ಮತ್ತು ವೇದಮೂಲಗಳಾದ ಸ್ಮೃತಿಗಳು ಇವು ಹೊರತು ಇತರ ಶಾಸ್ತ್ರಗಳನ್ನು ಮಾಡಿದವರು ಅಜ್ಞಾನ ದೋಷವುಳ್ಳವರು. ಅಂತಹ ಅಜ್ಞಾನದಿಂದ ಉಂಟಾದ ಶಾಸ್ತ್ರಗಳಲ್ಲಿರುವ ವಾಕ್ಯಗಳಿಗೆ ಪ್ರಾಮಾಣ್ಯವು ಬರಲಾರದು. ||೧೯||

ಅದುದರಿಂದ ಮೋಕ್ಷವನ್ನು ಪಡೆಯಲಿಚ್ಛಿಸುವವನು ತನ್ನ ಧರ್ಮವನ್ನು ತಿಳಿಯಲು ವೇದವನ್ನೇ ಅವಲಂಬಿಸಬೇಕು. ಲೋಕದಲ್ಲೂ ದೊರೆಯ ಅಪ್ಪಣೆಯು ಎಲ್ಲಿಯೂ ಯಾವಾಗಲೂ ಅತಿಕ್ರಮಿಸಲ್ಪಡುವುದಿಲ್ಲವು. ವೇದೋಕ್ತಧರ್ಮಗಳೂ ಅಂಥವುಗಳು. ||೨೦||

ವೇದಗಳು ಸರ್ವೇಶ್ವರಿಯೂ ಸರ್ವಜ್ಞಳೂ ಆಗಿರುವ ನನ್ನ ಅಪ್ಪಣೆಯ ರೂಪಗಳಾಗಿವೆ. ಆದುದರಿಂದ ಅವುಗಳಲ್ಲಿ ಹೇಳಿರುವ ಧರ್ಮಗಳನ್ನು ಮಾನವರು ಅತಿಕ್ರಮಿಸುವುದು ಹೇಗೆ? ನನ್ನ ಅಪ್ಪಣೆಗಳನ್ನು ಆಚರಿಸಿ ಪಾಲಿಸುತ್ತಿರುವುದರ ಸಲುವಾಗಿಯೇ ಬ್ರಾಹ್ಮಣ ಕ್ಷತ್ರಿಯ ಮುಂತಾದ ಜಾತಿಗಳೂ, ವರ್ಣಾಶ್ರಮಧರ್ಮಗಳೂ ಏರ್ಪಡಿಸಲ್ಪಟ್ಟಿವೆ. ||೨೧||

ಹೀಗೆ ವರ್ಣಗಳೂ ಧರ್ಮಗಳೂ ನನ್ನಿಂದಲೇ ಏರ್ಪಡಿಸಲ್ಪಟ್ಟಿವೆ. ಆದುದರಿಂದ ನಾನು ಹೇಳಿರುವ ವೇದಗಳಿಂದಲೇ ನನ್ನ ತತ್ವರಹಸ್ಯವನ್ನೂ ತಿಳಿಯಬೇಕು. ಓ ಹಿಮವಂತನೇ, ಈ ಧರ್ಮಕ್ಕೆ ತೊಂದರೆಯುಂಟಾದಾಗಲೆಲ್ಲವೂ, ||೨೨||

**ಅಭ್ಯುತ್ಥಾನಮಧರ್ಮಸ್ಯ ತದಾ ವೇಷಾನ್ ಬಿಭರ್ಮ್ಯಹಂ ।**
**ದೇವದೈತ್ಯವಿಭಾಗಶ್ಚಾಪ್ಯತ ಏವಾಭವನ್ನೃಪ ॥೨೩॥**

**ಯೇ ನ ಕುರ್ವಂತಿ ತದ್ಧರ್ಮಂ ತಚ್ಛಿಕ್ಷಾರ್ಥಂ ಮಯಾ ಸದಾ ।**
**ಸಂಪಾದಿತಾಸ್ತು ನರಕಾಸ್ತ್ರಾಸೋ ಯಚ್ಛ್ರವಣಾದ್ಭವೇತ್ ॥೨೪॥**

**ಯೋ ವೇದಧರ್ಮಮುಜ್ಝಿತ್ಯ ಧರ್ಮಮನ್ಯಂ ಸಮಾಶ್ರಯೇತ್ ।**
**ರಾಜಾ ಪ್ರವಾಸಯೇ ದ್ದೇಶಾನ್ನಿಜಾದೇತಾನಧರ್ಮಿಣಃ ॥೨೫॥**

---

ಮತ್ತು ಅಧರ್ಮವು ಮಿತಿಮೀರಿ ತಲೆ ಎತ್ತಿದಾಗಲೂ, ನಾನು ಶಾಕಂಭರೀ ಮುಂತಾದ ಅನೇಕ ಸ್ತ್ರೀರೂಪಗಳನ್ನೂ, ರಾಮ, ಕೃಷ್ಣಾದಿ ಪುರುಷರೂಪಗಳನ್ನೂ ಧರಿಸಿ ಅವತರಿಸುವೆನು. ಮತ್ತು ಹೆಚ್ಚಿದ್ದ ಅಧರ್ಮವನ್ನು ಮೆಟ್ಟಿ, ಧರ್ಮವನ್ನು ಉದ್ಧರಿಸುತ್ತಿರುವೆನು. ಇದರಿಂದಲೇ ದೇವತೆಗಳು, ರಾಕ್ಷಸರು ಎಂಬ ವಿಭಾಗ ಎಂದರೆ ವಿಂಗಡಣೆ ಉಂಟಾಗಿದೆ. ಹೆಚ್ಚಾಗಿ ಧಾರ್ಮಿಕರಾದವರೂ, ವೇದಾರ್ಥಗಳನ್ನು ಬೋಧನೆ ಆಚರಣೆಗಳಿಂದ ಕಾಪಾಡುವವರೂ, ದೇವತೆಗಳಾಗಿಯೂ, ಅತಿಯಾಗಿ ಅಧಾರ್ಮಿಕರಾಗಿರುವವರೂ, ವೇದಾರ್ಥಗಳನ್ನು ನಾಶಮಾಡುವವರೂ ರಾಕ್ಷಸ ರಾಗಿಯೂ ಇರುತ್ತಾರೆ. ||೨೩||

ಓ ಗಿರಿರಾಜನೇ, ಆ ವೇದೋಕ್ತವಾದ ಧರ್ಮವನ್ನು ಯಾರು ಆಚರಿಸುವು ದಿಲ್ಲವೋ, ಅಂಥವರನ್ನು ಶಿಕ್ಷಿಸುವ ಸಲುವಾಗಿಯೇ, ನನ್ನಿಂದಲೇ ಅನೇಕ ವಿಧವಾದ ನರಕಸ್ಥಾನಗಳೂ, ಉಂಟುಮಾಡಲ್ಪಟ್ಟಿವೆ. ಅವುಗಳ ವಿಷಯವನ್ನು ಕೇಳುವುದ ರಿಂದಲೇ ಭಯವುಂಟಾಗುತ್ತದೆ. ಈ ಭಯದಿಂದಲಾದರೂ ದುಷ್ಟ ಜನರು ಪಾಪಾ ಚರಣೆಯನ್ನು ಬಿಡಲಿ, ಸಜ್ಜನರು ಪಾಪಗಳನ್ನು ಮಾಡದಿರಲಿ, ಎಂಬುದೇ ನನ್ನ ಉದ್ದೇಶವಾಗಿದೆ. ||೨೪||

ಆ ವೇದೋಕ್ತವಾದ ಧರ್ಮವನ್ನು ಬಿಟ್ಟು ಇತರ ಶಾಸ್ತ್ರಗಳಲ್ಲಿ ಹೇಳಿರುವ ಧರ್ಮವನ್ನು ಯಾರು ಆಚರಿಸುತ್ತಾರೋ, ಅಂಥಾ ಅಧಾರ್ಮಿಕರಾದ ಪಾಪಿಗಳನ್ನು ದೊರೆಯು ತನ್ನ ದೇಶದಿಂದಲೇ ಹೊರಕ್ಕೆ ಹೊರಡಿಸಬೇಕು. ಅಂತಹ ಅಧರ್ಮಾ ಚರಣೆಯನ್ನು ಮಾಡುವವರೊಡನೆ ಬ್ರಾಹ್ಮಣರು ಮಾತನ್ನೂ ಆಡಬಾರದು. ದ್ವಿಜರು ಅವರೊಡನೆ ಸಹಪಙ್ಕ್ತಿಭೋಜನ ಮುಂತಾದ ಸವ್ಯವಹಾರವನ್ನು ಮಾಡಕೂಡದು. ||೨೫||

ಬ್ರಾಹ್ಮಣೈರ್ನ ಚ ಸಂಭಾಷ್ಯಾಃ ಪಂಕ್ತಿಗ್ರಾಹ್ಯಾ ನ ಚ ದ್ವಿಜೈಃ ।
ಅನ್ಯಾನಿ ಯಾನಿ ಶಾಸ್ತ್ರಾಣಿ ಲೋಕೇಽಸ್ಮಿನ್ವಿವಿಧಾನಿ ಚ ।
ಶ್ರುತಿಸ್ಮೃತಿವಿರುದ್ಧಾನಿ ತಾಮಸಾನ್ಯೇವ ಸರ್ವಶಃ ॥೨೬॥

ವಾಮಂ ಕಾಪಾಲಿಕಂ ಚೈವ ಕೌಲಕಂ ಭೈರವಾಗಮಃ ।
ಶಿವೇನ ಮೋಹನಾರ್ಥಾಯ ಪ್ರಣೀತೋ ನಾನ್ಯಹೇತುತಃ ॥೨೭॥

ದಕ್ಷಶಾಪಾತ್ ಭೃಗೋಶ್ಶಾಪಾತ್ ದಧೀಚಸ್ಯ ಚ ಶಾಪತಃ ।
ದಗ್ಧಾ ಯೇ ಬ್ರಾಹ್ಮಣವರಾ ವೇದಮಾರ್ಗಬಹಿಷ್ಕೃತಾಃ ॥೨೮॥

---

ಮೇಲೆ ಹೇಳಿದಂತೆ ಶ್ರುತಿ ಮತ್ತು ಸ್ಮೃತಿ ಇವುಗಳಿಗೆ ವಿರುದ್ಧವಾಗಿರುವುದರಿಂದ ಆ ಇತರಶಾಸ್ತ್ರಗಳು, ಲೋಕದಲ್ಲಿ ನಾನಾ ಬಗೆಯಾಗಿ ಆಚರಣೆಯಲ್ಲಿರುವವುಗಳಾದರೂ, ಅವು ತಾಮಸಗಳೆನಿಸಿಕೊಳ್ಳುತ್ತವೆ. ಅಂತಹ ಗ್ರಂಥಗಳು ಆ ತಾಮಸ ಮನೋವೃತ್ತಿಯುಳ್ಳವರಿಗಾಗಿ ರಚಿತಗಳಾಗಿರುತ್ತವೆ. ॥೨೬॥

ಅಂತಹವು ಎಂದರೆ ವಾಮ, ಕಾಪಾಲಿಕ, ಕೌಲಕ, ಭೈರವಾಗಮ, ಮುಂತಾದ ತಂತ್ರಗ್ರಂಥಗಳು ಆಯಾ ಹೆಸರುಗಳಿಂದ ಪ್ರಸಿದ್ಧವಾಗಿವೆ. ಅವನ್ನೂ ಶಿವನೇ ತಾಮಸಜನರನ್ನು ಮೋಹಗೊಳಿಸುವುದಕ್ಕಾಗಿಯೇ ಉಪದೇಶಿಸಿರುತ್ತಾನೆ. ಜನರು ತಮ್ಮ ರುಚಿ, ಮತ್ತು ಸಂಸ್ಕೃತಿಗಳ ಭೇದದಿಂದ ತಮಗೆ ಬೇಕಾದ ಅಂತಹ ಗ್ರಂಥಗಳನ್ನು ತಾವಾಗಿಯೇ ಅನುಸರಿಸುತ್ತಾರೆ. ಈ ಪ್ರಪಂಚದಲ್ಲಿ ವೈಚಿತ್ರ್ಯವು ಸಹಜವೂ ಅನಿವಾರ್ಯವೂ ಆಗಿದೆ. ಆದುದರಿಂದ ಈಶ್ವರನಿಗೆ ದೋಷವಿಲ್ಲವು. ಅಲ್ಲದೆ,

ದಕ್ಷ, ಭೃಗು, ಮತ್ತು ದಧೀಚಿ ಮುಂತಾದ ಮಹರ್ಷಿಗಳ ಶಾಪಕ್ಕೆ ಗುರಿಯಾದ ಬ್ರಾಹ್ಮಣರೂ ವೇದೋಕ್ತವಾದ ಕರ್ಮಮಾರ್ಗಕ್ಕೆ ಅನರ್ಹರಾಗಲು, ಅಂಥವರ ಉದ್ಧರಣಕ್ಕಾಗಿಯೂ ಈ ತಾಮಸ ತಂತ್ರಗಳನ್ನು ರಚಿಸಲಾಗಿದೆ. ಹೀಗೆ ಸ್ವಾಭಾವಿಕವಾಗಿ ತಾಮಸವೃತ್ತಿಯುಳ್ಳವರನ್ನೂ, ಮತ್ತು ಶಾಪ ಮುಂತಾದ ವಿಶೇಷ ಕಾರಣಗಳಿಂದ ಹೀನಸ್ಥಿತಿಗೆ ಬಂದವರನ್ನೂ, ಸೋಪಾನಕ್ರಮದಲ್ಲಿ ತಮ್ಮ ಪಾಪಗಳನ್ನು ಕಳೆದುಕೊಂಡು ಶುದ್ಧರಾಗಲು ಈ ತಂತ್ರಗಳಲ್ಲೂ ಆಗಮಗಳಲ್ಲೂ ಸದ್ವಿಷಯಗಳನ್ನೂ ಬೆರೆಸಿ ಹೇಳಿದೆ. ಅವುಗಳಲ್ಲಿ ಒಳ್ಳೆಯವನ್ನೇ ಆರಿಸಿಕೊಂಡು ಆಚರಿಸಿದರೆ ಅವರೂ ಕ್ರಮವಾಗಿ ಸದ್ಗತಿಯನ್ನು ಪಡೆಯಲು ಅವಕಾಶವೂ ಸ್ವಾತಂತ್ರ್ಯವೂ ಇದೆಯಾದುದರಿಂದ ಈಶ್ವರನಿಗೆ ಅಥವಾ ದೇವಿಗೆ ದೋಷವಿಲ್ಲವು. ಎಂದು ಭಾವವು.

**ತೇಷಾಮುದ್ಧರಣಾರ್ಥಾಯ ಸೋಪಾನಕ್ರಮತಸ್ಸದಾ ॥೨೯॥**

**ಶೈವಾಶ್ಚ ವೈಷ್ಣವಾಶ್ಚೈವ ಸೌರಾಶ್ಶಾಕ್ತಾಃ ತಥೈವ ಚ ।**
**ಗಾಣಾಪತ್ಯಾ ಆಗಮಾಶ್ಚ ಪ್ರಣೀತಾಶ್ಶಂಕರೇಣ ತು ॥೩೦॥**

**ತತ್ರ ವೇದಾವಿರುದ್ಧೋಽಂಶೋಽಪ್ಯುಕ್ತ ಏವ ಕ್ವಚಿತ್ಕ್ವಚಿತ್ ।**
**ವೈದಿಕೈಸ್ತದ್ಗ್ರಹೇ ದೋಷೋ ನ ಭವತ್ಯೇವ ಕರ್ಹಿಚಿತ್ ॥೩೧॥**

---

ಈ ಶಾಪಗಳ ಕಥೆಗಳನ್ನು ಕೂರ್ಮಪುರಾಣದಲ್ಲೂ ಸೂತಸಂಹಿತೆಯಲ್ಲೂ, ಈ ಪುರಾಣದ ಹನ್ನೆರಡನೆಯ ಸ್ಕಂಧದಲ್ಲೂ ವಿವರಿಸಲಾಗಿದೆ. ॥೨೮-೨೯॥

ಶಿವನೇ ಸರ್ವೋತ್ತಮನೆಂದು ಹೇಳುವ ಶೈವಾಗಮಗಳೂ, ಹರಿಯೇ ಸರ್ವೋತ್ತಮನೆಂದು ಹೇಳುವ ವೈಷ್ಣವಾಗಮಗಳೂ, ಹಾಗೆಯೇ ಸೂರ್ಯನ ಉತ್ಕರ್ಷವನ್ನು ಹೇಳುವ ಸೌರಮತಗ್ರಂಥಗಳೂ, ಗಣಪತಿಯೇ ಪರಮೋತ್ಕೃಷ್ಟನೆಂದು ಪ್ರತಿಪಾದಿಸುವ ಗಾಣಾಪತ್ಯಮತಗ್ರಂಥಗಳೂ, ಶಕ್ತಿಯೇ ಸರ್ವಾಧಿಕತತ್ವವೆಂದು ಸ್ಥಾಪಿಸುವ ಶಾಕ್ತಮತಾಗಮಗಳೂ, ಈಶ್ವರನಿಂದಲೇ "ನಬುದ್ಧಿಭೇದಂ ಜನಯೇತ್" ಎಂಬ ನ್ಯಾಯವನ್ನನುಸರಿಸಿ ಉಪದೇಶಿಸಲ್ಪಟ್ಟಿವೆ. ॥೩೦॥

ತಂತ್ರಶಾಸ್ತ್ರಗಳಲ್ಲಿ ವೇದಕ್ಕೆ ಅನುಸಾರವಾಗಿರುವ ಮತ್ತು ವೇದಕ್ಕೆ ವಿರುದ್ಧವಾಗಿರುವ ಕರ್ಮಗಳು, ಪೂಜೆಗಳೂ, ವ್ರತಗಳೂ ಹೇಳಲ್ಪಟ್ಟಿವೆ. ಅವುಗಳಲ್ಲಿ ದ್ವಿಜರು, ಎಂದರೆ ವೇದಾಧ್ಯಯನಕ್ಕೆ ಅಧಿಕಾರವುಳ್ಳವರು ಆ ವೇದಕ್ಕೆ ವಿರುದ್ಧವಲ್ಲದೆ ವೇದಾನುಸಾರಿಗಳಾದ ಕರ್ಮಗಳನ್ನು ಆರಿಸಿಕೊಂಡು ಆಚರಿಸುವುದೂ ನಿಷಿದ್ಧವಾಗಿಲ್ಲವು. ಆದರಿಂದ ದೋಷವೂ ಉಂಟಾಗುವುದಿಲ್ಲವು. ಆದುದರಿಂದ ಆ ಗ್ರಂಥಗಳು ಸಂಪೂರ್ಣವಾಗಿ ವ್ಯರ್ಥವಲ್ಲವು. ಅಲ್ಲದೆ ವೇದಾಧ್ಯಯನಕ್ಕೆ ಅಧಿಕಾರವಿಲ್ಲದ ದ್ವಿಜೇತರರಾದ ಜನರು ಆ ಕರ್ಮಗಳನ್ನು ಆಚರಿಸುವುದು ಸ್ವಭಾವಿಕವಾಗಿಯೂ ಇದೆ. ವಾಯುಸಂಹಿತೆಯಲ್ಲಿ "ಶೈವಾಗಮೋಽಪಿದ್ವಿವಿಧಃ ಶ್ರೌತಾಶ್ರೌತಶ್ಚತನ್ಮಯಃ । ಶ್ರುತಿಸಾರಮಯಃಶ್ರೌತಃ ಸ್ವತಂತ್ರ ಇತರೋ ಮತಃ" ಎಂದು ಈ ಅಂಶವನ್ನು ವಿವರಿಸಿದೆ. "ಶ್ರೌತೋಗ್ರಾಹ್ಯಸ್ತು ವೈದಿಕೈಃ" ಎಂದು ಸೂತಸಂಹಿತೆಯಲ್ಲೂ ಹೇಳಿದೆ. ಅಲ್ಲದೆ ವೇದಗಳಂತೆ ತಂತ್ರಗಳೂ ಆಗಮಗಳೂ ಸ್ವತಂತ್ರವಾಗಿ ಪ್ರಮಾಣಗಳೆಂದು ಹೇಳುವವರೂ ಇದಾರೆ. ಅದು ಬೇರೆ ವಿಷಯವು. ಹೇಗಾದರೂ ತಾಮಸಜನರನ್ನೂ ಉದಾಸೀನಮಾಡಿ ಕೈಬಿಡದೆ, ಅವರ ಭಕ್ತಿಶ್ರದ್ಧೆಗಳನ್ನೂ ಹೆಚ್ಚಾಗಿ ಕದಲಿಸದೆ,

ಸರ್ವಥಾ ವೇದಭಿನ್ನಾರ್ಥೇ ನಾಧಿಕಾರೀ ದ್ವಿಜೋ ಭವೇತ್ ।
ವೇದಾಧಿಕಾರಹೀನಸ್ತು ಭವೇತ್ತತ್ರಾಧಿಕಾರವಾನ್ ॥೩೨॥

ತಸ್ಮಾತ್ಸರ್ವಪ್ರಯತ್ನೇನ ವೈದಿಕೋ ವೇದಮಾಶ್ರಯೇತ್ ।
ಧರ್ಮೇಣ ಸಹಿತಂ ಜ್ಞಾನಂ ಪರಂ ಬ್ರಹ್ಮ ಪ್ರಕಾಶಯೇತ್ ॥೩೩॥

ಸರ್ವೇಷಣಾಃ ಪರಿತ್ಯಜ್ಯ ಮಾಮೇವ ಶರಣಂ ಗತಾಃ ।
ಸರ್ವಭೂತ ದಯಾವಂತೋ ಮಾನಾಹಂಕಾರವರ್ಜಿತಾಃ ॥೩೪॥

---

ಅವರ ರುಚಿಗೆ ಒಪ್ಪುವ ವಿಷಯಗಳ ಜೊತೆಯಲ್ಲಿ, ಔಷಧಿಯನ್ನು ಸಕ್ಕರೆಯಲ್ಲಿಟ್ಟು ಕೊಡುವಂತೆ, ಶ್ರೇಯಸ್ಕರಗಳಾದ ವಿಶ್ವಧರ್ಮ, ತತ್ವಗಳನ್ನೂ ಕೇಳಿದೆ. ಇದರಿಂದ ಆ ತಾಮಸರಾಗಿದ್ದವರೂ ಕಾಲಕ್ರಮದಲ್ಲಿ ಅನುಭವ, ವಿಚಾರ, ವಿಮರ್ಶೆಗಳಿಂದ ತಮ್ಮ ತಪ್ಪನ್ನು ತಿಳಿದು ಶ್ರೇಯಸ್ಕರವಾದ ರೀತಿನೀತಿಗಳನ್ನು ಅನುಸರಿಸಲು ಅನುಕೂಲವಾಗಲೆಂದು ಹಾಗೆ ಮಾಡಿದೆಯಾದುದರಿಂದ ದೇವಿಯು ಸರ್ವರಲ್ಲೂ ದಯಾಮಯಳೂ ಉಪಕಾರಿಣಿಯೂ ಆಗಿದ್ದಾಳೆಂಬ ಅಂಶವನ್ನೂ, ಪಕ್ಷಪಾತಿಯಲ್ಲವೆಂಬ ಅಂಶವನ್ನೂ, ತಿಳಿಯಬಹುದು. ॥೩೧॥

ವೇದೋಕ್ತ ಧರ್ಮಗಳಿಗೆ ಅನುಕೂಲವಲ್ಲದ ಅಥವಾ ವಿರುದ್ಧವಾಗಿಯೂ ಇರುವ ತಂತ್ರಾಗಮಗಳಲ್ಲಿ ಹೇಳಿರುವ ಧರ್ಮಗಳನ್ನು ಎಂದರೆ ವ್ರತ, ಪೂಜೆ, ಉಪಾಸನೆಗಳಲ್ಲಿನ ವಾಮಾಚಾರಗಳನ್ನು ವೇದಾಧ್ಯಯನದಲ್ಲಿ ಅಧಿಕಾರವುಳ್ಳ ದ್ವಿಜನು ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ಅಂತಹ ತಾಂತ್ರಿಕ ಧರ್ಮಗಳ ಅನುಷ್ಠಾನದಲ್ಲಿ ಅಧಿಕಾರವುಳ್ಳವನಲ್ಲನು. ಅಂತಹ ಕರ್ಮಗಳಲ್ಲಿ ವೇದಾಧ್ಯಯನಾಧಿಕಾರವಿಲ್ಲದ ದ್ವಿಜೇತರರಾದ ತಾಮಸಜನರೇ ಅಧಿಕಾರವುಳ್ಳವರು. ॥೩೨॥

ಆದುದರಿಂದ ಓ ಪರ್ವತರಾಜನೇ, ವೇದಾಧ್ಯಯನದಲ್ಲಿ ಅಧಿಕಾರವುಳ್ಳ ದ್ವಿಜನು ಎಲ್ಲ ಪ್ರಯತ್ನದಿಂದಲೂ ಶ್ರೇಯಸ್ಕರವಾದ ಧರ್ಮವನ್ನು ತಿಳಿಯಲು ವೇದವನ್ನೇ ಅವಲಂಬಿಸಬೇಕು. ಆ ವೇದದ ವ್ಯಾಸಂಗದಿಂದ ಉತ್ತಮವಾದ ಧರ್ಮದ ಜ್ಞಾನವೂ ಉಂಟಾಗುವುದಲ್ಲದೆ ಪರಬ್ರಹ್ಮತತ್ವದ ತಿಳಿವಳಿಕೆಯೂ ಉಂಟಾಗಿ ಅದು ಸಾಕ್ಷಾತ್ಕಾರವಾಗಿಯೂ ಸ್ಫುರಿಸುತ್ತದೆ. ॥೩೩॥

ಎಲ್ಲ ಬಗೆಯ ಅತಿಯಾದ ದುಷ್ಟವಾದ ಆಸೆಗಳನ್ನೂ ಬಿಟ್ಟು ನನ್ನನ್ನೇ ರಕ್ಷಕಳೆಂದು ಮರೆಹೊಕ್ಕಿರುವ ಅಂತಹ ವೈದಿಕರು ಎಲ್ಲ ಪ್ರಾಣಿಗಳಲ್ಲೂ ದಯೆ

ಮಚ್ಚಿತ್ತಾ ಮದ್ಗತಪ್ರಾಣಾಃ ಮತ್ಸ್ಥಾನಕಥನೇ ರತಾಃ ।
ಸನ್ಯಾಸಿನೋ ವನಸ್ಥಾಶ್ಚ ಗೃಹಸ್ಥಾ ಬ್ರಹ್ಮಚಾರಿಣಃ ॥೩೫॥

ಉಪಾಸಂತೇ ಸದಾ ಭಕ್ತ್ಯಾ ಯೋಗಮೈಶ್ವರಸಂಜ್ಞಿತಂ ।
ತೇಷಾಂ ನಿತ್ಯಾಭಿಯುಕ್ತಾನಾ ಮಹಮಜ್ಞಾನಜಂ ತಮಃ ॥೩೬॥

ಜ್ಞಾನಸೂರ್ಯಪ್ರಕಾಶೇನ ನಾಶಯಾಮಿ ನ ಸಂಶಯಃ ।
ಇತ್ಥಂ ವೈದಿಕಪೂಜಾಯಾಃ ಪ್ರಥಮಾಯಾ ನಗಾಧಿಪ ॥೩೭॥

ಯುಳ್ಳವರಾಗಿರುತ್ತಾ ದುರಭಿಮಾನ, ಅಹಂಕಾರಗಳನ್ನು ಬಿಟ್ಟಿರುತ್ತಾರೆ. ಇಂಥವರು ವಿಶ್ವರೂಪೋಪಾಸನೆಯಲ್ಲಿ ಆದರದಿಂದ ನೆಲೆಸುತ್ತಾರೆ. ॥೩೪॥

ಓ ಗಿರಿರಾಜನೇ, ಅಂತಹ ಆ ಉಪಾಸಕರು ನನ್ನಲ್ಲಿಯೇ ನಟ್ಟಮನಸ್ಸುಳ್ಳವರಾಗಿ, ನನ್ನಲ್ಲಿಯೇ ಲೀನವಾದ ಇಂದ್ರಿಯಗಳುಳ್ಳವರಾಗಿ, ನಾನು ಅತಿಶಯವಾಗಿ ಆವಿರ್ಭವಿಸಿ ನೆಲೆಸಿರುವ ಕ್ಷೇತ್ರಗಳನ್ನೂ, ವಿಗ್ರಹಾದಿ ಪ್ರತೀಕಗಳನ್ನೂ, ಪರಸ್ಪರವಾಗಿ ತಿಳಿಸಿ ತಿಳಿಯುತ್ತಾ, ಹೀಗೆ ತಮ್ಮ ಜೀವಿತಕಾಲವನ್ನು ಸದ್ವಿನಿಯೋಗ ಮಾಡಿಕೊಳ್ಳುತ್ತಿರುತ್ತಾರೆ. ಇವರು ನಾಲ್ಕು ಆಶ್ರಮಗಳಲ್ಲಿರುವವರೂ ಆಗಿರಬಹುದು. ಎಂದರೆ ಸನ್ಯಾಸಿಗಳಾಗಿಯೂ, ವಾನಪ್ರಸ್ಥರಾಗಿಯೂ, ಗೃಹಸ್ಥರಾಗಿಯೂ, ಅಥವಾ ಬ್ರಹ್ಮಚಾರಿಗಳಾಗಿಯೂ ಇರಬಹುದು. ಎಲ್ಲರಿಗೂ ಉಪಾಸನೆಯಲ್ಲಿ ಅಧಿಕಾರವಿದೆ. ॥೩೫॥

ಆ ಉಪಾಸಕರು ತಮ್ಮರುಚಿ, ಮತ್ತು ಯೋಗ್ಯತೆಗೆ ತಕ್ಕಂತೆ ಸಾಕಾರ ಸಗುಣ ಮೂರ್ತಿಯಲ್ಲಾಗಲಿ ನಿರಾಕಾರ ಸಗುಣಮೂರ್ತಿಯಲ್ಲಾಗಲಿ, ಅಥವಾ ನಿರಾಕಾರ ನಿರ್ಗುಣವಾದ ಪರತತ್ವದಲ್ಲಾಗಲಿ, ವಿರಾಟ್‌ಸ್ವರೂಪದಲ್ಲಾಗಲಿ, ಮನಸ್ಸಿಟ್ಟು ಉಪಾಸನೆಯನ್ನು ಮಾಡುತ್ತಾರೆ. ಈ ಪರಮೇಶ್ವರೋಪಾಸನೆಗೆ ವಿಶ್ವರೂಪೋಪಾಸನೆ ಎಂದೂ ಹೆಸರಿದೆ. ಈ ವಿಶ್ವರೂಪೋಪಾಸನೆಯನ್ನು ಆ ಉಪಾಸಕರು ಯಾವಾಗಲೂ ಭಕ್ತಿಯುಳ್ಳವರಾಗಿ ಯೋಗಮಾರ್ಗವನ್ನು ಅನುಸರಿಸಿ ಮಾಡುತ್ತಿರುತ್ತಾರೆ. ಹೀಗೆ ಸಂತತವಾಗಿ ಧ್ಯಾನಮಾಡುತ್ತಿರುವ ಆ ಉಪಾಸಕರ ಮನಸ್ಸಿನಲ್ಲಿರುವ ಅಜ್ಞಾನದಿಂದ ಉಂಟಾಗಿದ್ದ ಕತ್ತಲೆಯನ್ನೂ ನಾನು ಹೋಗಲಾಡಿಸುತ್ತೇನೆ. ॥೩೬॥

ಓ ಪರ್ವತರಾಜನಾದ ಹಿಮವಂತನೇ, ಅಂತಹ ಉಪಾಸಕರ ಅಜ್ಞಾನದ ಕತ್ತಲೆಯನ್ನು ಜ್ಞಾನವೆಂಬ ಸೂರ್ಯನ ಬೆಳಕಿನಿಂದ, ತಿಳಿವಳಿಕೆಯ ಸ್ಫುರಣವೆಂಬ

**ಸ್ವರೂಪಮುಕ್ತಂ ಸಂಕ್ಷೇಪಾತ್ ದ್ವಿತೀಯಾಯಾ ಅಥೋ ಬ್ರುವೇ ।**
**ಮೂರ್ತೌ ವಾ ಸ್ಥಂಡಿಲೇ ವಾಽಪಿ ತಥಾ ಸೂರ್ಯೇಂದುಮಂಡಲೇ ॥೩೮॥**

**ಜಲೇಽಥವಾ ಬಾಣಲಿಂಗೇ ಯಂತ್ರೇ ವಾಽಪಿ ಮಹಾಪಟೇ ।**
**ತಥಾ ಶ್ರೀಹೃದಯಾಂಭೋಜೇ ಧ್ಯಾತ್ವಾ ದೇವೀಂ ಪರಾತ್ಪರಾಂ ೩೯॥**

**ಸಗುಣಾಂ ಕರುಣಾಪೂರ್ಣಾಂ ತರುಣೀಮರುಣಾರುಣಾಂ ।**
**ಸೌಂದರ್ಯಸಾರಸೀಮಾಂ ತಾಂ ಸರ್ವಾವಯಸುಂದರಾಂ ॥॥೪೦॥**

---

ಬೆಳಕಿನಿಂದ, ನಾನು ನಾಶಮಾಡುತ್ತೇನೆ. ಈ ವಿಷಯದಲ್ಲಿ ಸಂದೇಹವಿಲ್ಲವು. ಈ ಪ್ರಕಾರವಾಗಿ ಮೊದಲನೆಯದಾದ ವೈದಿಕ ಪೂಜೆಯ ಸ್ವರೂಪವನ್ನು ನಿನಗೆ ನಾನು ವಿವರಿಸಿ ಹೇಳಿದೆನು. ಇನ್ನು ಮುಂದೆ ಎರಡನೆಯ ಬಗೆಯ ಉಪಾಸನೆಯ ಕ್ರಮವನ್ನು ಸಂಗ್ರಹವಾಗಿ ನಿನಗೆ ತಿಳಿಯಹೇಳುವೆನು. ॥೩೭॥

ವೇದೋಕ್ತವಾದ ಸಗುಣವೂ ಸಾಕಾರವೂ ಆದ ಪ್ರತೀಕದ ಉಪಾಸನೆಯನ್ನು ಕೈ, ಕಾಲು, ಮುಂತಾದ ಅವಯವಗಳಿಂದ ಕೂಡಿದ ವಿಗ್ರಹದಲ್ಲಾಗಲಿ, ಯಜ್ಞ ವೇದಿಕೆಯಲ್ಲಾದಲಿ, ಹಾಗೆಯೇ ಸೂರ್ಯ ಅಥವಾ ಚಂದ್ರ ಮಂಡಲದಲ್ಲಾಗಲಿ ಮಾಡಬಹುದು. ॥೩೮॥

ಅಥವಾ ಈ ಸಗುಣೋಪಾಸನೆಯನ್ನು ಶುದ್ಧವಾದ ತೀರ್ಥಜಲದಲ್ಲಾಗಲಿ, ಬಾಣಲಿಂಗದಲ್ಲಾಗಲಿ, ಶ್ರೀಚಕ್ರಾದಿ ಯಂತ್ರದಲ್ಲಾಗಲಿ, ಒಳ್ಳೆಯ ದೊಡ್ಡ ವಸ್ತ್ರದಲ್ಲಾಗಲಿ, ಹಾಗೆಯೇ ಭಾವಚಿತ್ರಪಟದಲ್ಲಾಗಲಿ, ಅಥವಾ ಎಲ್ಲಕ್ಕಿಂತಲೂ ಮೇಲಾಗಿ ಭಾವನಾಸಂಪತ್ತಿನಿಂದ ಕೂಡಿರುವ ಹೃದಯಕಮಲದಲ್ಲಾಗಲಿ ಸರ್ವಶ್ರೇಷ್ಠಳಾದ ದೇವಿಯನ್ನು ಧ್ಯಾನಮಾಡಬೇಕು. ಹೀಗೆ ಕೈ ಕಾಲು ಮುಂತಾದ ಅವಯವಗಳುಳ್ಳ ಸುಕುಮಾರವಾದ ಮಾನವರೂಪವೆಂಬ ಪ್ರತೀಕವನ್ನು ಅವಲಂಬಿಸಿ ಮಾಡುವ ಪೂಜೆಯು ಬಾಹ್ಯವಾದ ವೈದಿಕ ಪೂಜೆಯ ಎರಡನೆಯ ಬಗೆಯಾಗಿದೆ. ॥೩೯॥

ಅನಂತಕಲ್ಯಾಣಗುಣಗಳಿಂದಲೂ, ಶುದ್ಧಸತ್ವಗುಣದಿಂದಲೂ ಕೂಡಿರುವ, ದಯೆಯಿಂದ ತುಂಬಿ ತುಳುಕುತ್ತಿರುವ, ನವಯೌವನದಿಂದ ಶೋಭಿಸುತ್ತಿರುವ, ಅರುಣನಂತೆ ಹೊಂಬಣ್ಣವುಳ್ಳ, ಲಾವಣ್ಯದ ಮುಖ್ಯಾಂಶಗಳ ಕಡೆಯ ಗಡಿಯಂತಿರುವ, ಕೋಮಲವಾದ ಎಲ್ಲ ಅಂಗಗಳಿಂದ ಮನೋಹರವಾದ, ಆ ದೇವಿಯ ಸುಕುಮಾರ ಮೂರ್ತಿಯನ್ನು ಉಪಾಸಕನು ಧ್ಯಾನಿಸಬೇಕು. ॥೪೦॥

ಶೃಂಗಾರರಸಸಂಪೂರ್ಣಾಂ ಸದಾ ಭಕ್ತಾರ್ತಿಕಾತರಾಂ ।
ಪ್ರಸಾದಸುಮುಖೀಮಂಬಾಂ ಚಂದ್ರಖಂಡಶಿಖಂಡಿನೀಂ ॥೪೧॥

ಪಾಶಾಂಕುಶವರಾಭೀತಿಧರಾ ಮಾನಂದರೂಪಿಣೀಂ ।
ಪೂಜಯೇದುಪಚಾರೈಶ್ಚ ಯಥಾ ವಿತ್ತಾನುಸಾರತಃ ॥೪೨॥

ಯಾವದಾಂತರಪೂಜಾಯಾ ಮಧಿಕಾರೋ ಭವೇನ್ನ ಹಿ ।
ತಾವದ್ಬಾಹ್ಯಾಮಿಮಾಂ ಪೂಜಾಂ ಶ್ರಯೇ ಜ್ಜಾತೇ ತು ತಾಂ ತ್ಯಜೇತ್॥೪೩॥

ಆಭ್ಯಂತರಾ ತು ಯಾ ಪೂಜಾ ಸಾ ತು ಸಂವಿಲ್ಲಯಃ ಸ್ಮೃತಃ ।
ಸಂವಿದೇವ ಪರಂ ರೂಪಂ ಉಪಾಧಿರಹಿತಂ ಮಮ ॥೪೪॥

---

ಭಕ್ತರ ವಿಷಯದಲ್ಲಿ ವಾತ್ಸಲ್ಯದಿಂದಲೂ, ಪರಶಿವನ ವಿಷಯದಲ್ಲಿ ಪ್ರೇಮದಿಂದಲೂ, ಪರಿಪುಷ್ಟವಾದ ರತಿಸ್ಥಾಯಿಭಾವದ ಶೃಂಗಾರರಸದಿಂದ ತುಂಬಿರುವ, ಯಾವಾಗಲೂ ಭಕ್ತರಿಗೆ ಉಂಟಾಗಿರಬಹುದಾದ ದುಃಖವನ್ನು ಸಹಾನುಭೂತಿಯಿಂದ ನಿವಾರಿಸಲು ತವಕಪಡುತ್ತಿರುವ, ಬಾಲಚಂದ್ರಕಲೆಯ ಶಿರೋಭೂಷಣದಿಂದ ಶೋಭಿಸುತ್ತಿರುವ, ಉಪಾಸಕರ ಕೋರಿಕೆಗಳನ್ನು ಕರುಣಿಸಲು ಸಂತುಷ್ಟವಾದ ಮುಖದಿಂದ ದರ್ಶನೀಯಳಾದ ಆ ತಾಯಿಯನ್ನು ಉಪಾಸಕನು ಧ್ಯಾನಿಸಬೇಕು. ॥೪೧॥

ಮತ್ತು ಕೈಗಳಲ್ಲಿ, ಪಾಶ, ಅಂಕುಶ, ಮುಂತಾದ ಆಯುಧಗಳನ್ನೂ, ವರದ, ಮತ್ತು ಅಭಯ ಮುದ್ರೆಗಳನ್ನೂ ಧರಿಸಿರುವ, ನಿತ್ಯಸುಖವೇ ಸ್ವರೂಪವಾಗಿ ಉಳ್ಳ, ಆ ದೇವಿಗೆ ಉಪಾಸಕನು, ತನ್ನ ದ್ರವ್ಯಾನುಕೂಲ್ಯಕ್ಕೆ ತಕ್ಕಂತೆ ಲೋಭವಿಲ್ಲದ, ಅರ್ಘ್ಯ, ಪಾದ್ಯ, ವಸ್ತ್ರಾಭರಣ, ನೈವೇದ್ಯಾದಿಗಳಿಂದ ಷೋಡಶೋಪಚಾರಪೂಜೆಯನ್ನು ಭಕ್ತನು ನೆರವೇರಿಸಬೇಕು. ॥೪೨॥

ಎಲ್ಲಿಯವರೆಗೆ ದೇವಿಯ ಅಂತರಪೂಜೆಯನ್ನು ನೆರವೇರಿಸುವಷ್ಟುಮಟ್ಟಿನ ಯೋಗ್ಯತೆಯು ಭಕ್ತನಿಗೆ ಉಂಟಾಗುವುದಿಲ್ಲವೋ, ಅಲ್ಲಿಯವರೆಗೆ ಆತನು ಈ ಬಾಹ್ಯ ಪೂಜೆಯನ್ನು ಅವಲಂಬಿಸಿರಬೇಕು. ಆ ಯೋಗ್ಯತೆಯು ಎಂದರೆ ಚಿತ್ತದ ಏಕಾಗ್ರತೆಯೂ, ನೈರ್ಮಲ್ಯವೂ, ಉಂಟಾದ ಮೇಲೆ ಇದನ್ನು ಬಿಡಬೇಕು. ಮತ್ತು ಅಂತರ ಪೂಜಾಕ್ರಮವನ್ನೇ ಅವಲಂಬಿಸಬೇಕು. ॥೪೩॥

ಜ್ಞಾನಸ್ವರೂಪವಾದ ಧ್ಯೇಯವಾದ ಪರಬ್ರಹ್ಮತತ್ವದಲ್ಲಿ ಮನಸ್ಸು, ಧ್ಯಾನದಿಂದ ಸವಿಕಲ್ಪಸಮಾಧಿಯನ್ನು ದಾಟಿ ನಿರ್ವಿಕಲ್ಪಸಮಾಧಿಗೆ ಏರಲು ತ್ರಿಪುಟಿಯು ಅಳಿದುಹೋಗಿ ಮನಸ್ಸಿಗೂ ಲಯವುಂಟಾಗುವುದೇ ಅಂತರಪೂಜೆ ಎನಿಸಿಕೊಂಡಿದೆ.

ಅತಸ್ಸಂವಿದಿ ಮದ್ರೂಪೇ ಚೇತಸ್ಸ್ಥಾಪ್ಯಂ ನಿರಾಶ್ರಯಂ ।
ಸಂವಿದ್ರೂಪಾತಿರಿಕ್ತಂ ತು ಮಿಥ್ಯಾ ಮಾಯಾಮಯಂ ಜಗತ್ ॥೪೫॥

ಅತಸ್ಸಂಸಾರನಾಶಾಯ ಸಾಕ್ಷಿಣೀ ಮಾತ್ಮರೂಪಿಣೀಂ ।
ಭಾವಯೇನ್ನಿರ್ಮನಸ್ಕೇನ ಯೋಗಯುಕ್ತೇನ ಚೇತಸಾ ॥೪೬॥

ಅತಃ ಪರಂ ಬಾಹ್ಯಪೂಜಾ ವಿಸ್ತಾರಃ ಕಥ್ಯತೇ ಮಯಾ ।
ಸಾವಧಾನೇನ ಮನಸಾ ಶೃಣು ಪರ್ವತಸತ್ತಮ ॥೪೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ
ಏಕೋನಚತ್ವಾರಿಂಶೋಽಧ್ಯಾಯಃ.

---

ಆ ಸಂವಿದ್ರೂಪವೇ ನನ್ನ ಪಾರಮಾರ್ಥಿಕವಾದ, ಉಪಾಧಿಯನ್ನೂ ಮೀರಿರುವ, ರೂಪವಾಗಿದೆ. ॥೪೪॥

ಓ ಹಿಮವಂತನೇ, ಆ ಕಾರಣದಿಂದ ಜ್ಞಾನಾತ್ಮಕವಾದ ನನ್ನ ಸ್ವರೂಪದಲ್ಲಿ ಮನಸ್ಸನ್ನು ಯಾವ ಅವಲಂಬನವೂ ಇಲ್ಲದೆ ನೆಲಸುವಂತೆ ಮಾಡಬೇಕು. ಈ ಜ್ಞಾನ ಸ್ವರೂಪದಿಂದ ಭಿನ್ನವಾಗಿರುವ ಈ ಪ್ರಪಂಚವೆಲ್ಲವೂ ಬರಿಯ ತೋರಿಕೆಯ ಸ್ವಭಾವ ವುಳ್ಳುದೇ ಹೊರತು ಸತ್ಯವಾದುದಲ್ಲವು. ॥೪೫॥

ಆದುದರಿಂದ ಎಲೈ ಗಿರಿರಾಜನೇ, ಕರ್ತೃತ್ವಭೋಕ್ತೃತ್ವ ಜನನ ಮರಣಗಳಗಳ ಪ್ರವಾಹದಲ್ಲಿ ಸಿಕ್ಕಿಕೊಂಡಿರುವಿಕೆ ಎಂಬ ನಿರ್ಬಂಧ ದುಃಖದಲ್ಲಿ ನಾನು ನನ್ನದು ಎಂಬ ಅಭಿಮಾನದಿಂದ ಮುಳುಗಿಕೊಂಡಿರುವಿಕೆ ಎಂಬ ಈ ಸಂಸಾರದ ನಿವೃತ್ತಿಗಾಗಿ ಭಕ್ತಿಯೋಗದಲ್ಲಿ ಸಿದ್ಧಿಯನ್ನು ಪಡೆದಿರುವ, ನಿರ್ವಿಕಲ್ಪಸಮಾಧಿಗೆ ತಲಪಿರುವ, ಮನಸ್ಸಿನಿಂದ, ಪರಮಾತ್ಮಸ್ವರೂಪಳಾದುದರಿಂದ ಸಾಕ್ಷಿಯಾಗಿರುವ, ಎಂದರೆ ಪ್ರಾಪಂಚಿಕವಾದ ಸುಖದುಃಖಾನುಭವಗಳ ಲೇಪವಿಲ್ಲದಿರುವ, ಶುದ್ಧಸಚ್ಚಿದಾನಂದ ರೂಪಳಾದ ನನ್ನನ್ನು ಭಾವನೆಮಾಡುತ್ತಿರಬೇಕು. ॥೪೬॥

ಓ ಗಿರಿಶ್ರೇಷ್ಠನಾದ, ಹಿಮವಂತನೇ, ಇನ್ನು ಮುಂದೆ ಬಾಹ್ಯಪೂಜೆಯ ಸ್ವರೂಪವನ್ನು ನಾನು ವಿವರಿಸುತ್ತೇನೆ. ಅದೆಲ್ಲವನ್ನೂ ಏಕಾಗ್ರವಾದ ಮನಸ್ಸಿನಿಂದ ಕೇಳಿ ಅವಧರಿಸುವವನಾಗು. ॥೪೭॥

ಇಲ್ಲಿಗೆ ಶ್ರೀದೇವೀಭಾಗವತ ಮಹಾಪುರಾಣದ ಏಳನೆಯ ಸ್ಕಂಧದಲ್ಲಿ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಸಪ್ತಮಸ್ಕಂಧೇ

### ॥ ಚತ್ವಾರಿಂಶೋಽಧ್ಯಾಯಃ ॥

### ನಲವತ್ತನೆಯ ಅಧ್ಯಾಯವು

॥ ಶ್ರೀದೇವ್ಯುವಾಚ ॥

**ಪ್ರಾತರುತ್ಥಾಯ ಶಿರಸಿ ಸಂಸ್ಮರೇತ್ಪದ್ಮಮುಜ್ವಲಂ ।**
**ಕರ್ಪೂರಾಭಂ ಸ್ಮರೇತ್ತತ್ರ ಶ್ರೀಗುರುಂ ನಿಜರೂಪಿಣಂ ॥೧॥**

**ಸುಪ್ರಸನ್ನಂ ಲಸದ್ಭೂಷಾಭೂಷಿತಂ ಶಕ್ತಿಸಂಯುತಂ ।**
**ನಮಸ್ಕೃತ್ಯ ತತೋ ದೇವೀಂ ಕುಂಡಲೀಂ ಸಂಸ್ಮರೇದ್ಬುಧಃ ॥೨॥**

**ಪ್ರಕಾಶಮಾನಾಂ ಪ್ರಥಮೇ ಪ್ರಯಾಣೇ**
**ಪ್ರತಿಪ್ರಯಾಣೇಽಪ್ಯಮೃತಾಯಮಾನಾಂ ।**

---

ಈ ಅಧ್ಯಾಯದಲ್ಲಿ ದೇವಿಯ ಬಾಹ್ಯಪೂಜಾವಿಧಾನವು ಹೇಳಲ್ಪಡುವುದು. ಧರ್ಮಶಾಸ್ತ್ರೋಕ್ತವಾದ ನಿಯಮವನ್ನನುಸರಿಸಿ ಪ್ರಾತಃಕಾಲದಲ್ಲೆದ್ದು, ತನ್ನ ಶಿರಸ್ಸಿನ ಬ್ರಹ್ಮರಂಧ್ರದಲ್ಲಿರುವ ಪದ್ಮವನ್ನೂ, ಅದರಲ್ಲಿ ಕರ್ಪೂರದಂತೆ ಕಾಂತಿಯುಳ್ಳ ಪ್ರಕಾಶಮಾನವಾದ ತನ್ನ ಗುರುವನ್ನೂ, ಧ್ಯಾನಿಸಬೇಕು. ॥೧॥

ಜ್ಞಾನಿಯಾದವನು ಅನಂತರದಲ್ಲಿ ಕಾಂತಿಯುಳ್ಳವನಾಗಿಯೂ, ಪ್ರಕಾಶಮಾನವಾದ ಅಲಂಕಾರಗಳಿಂದ ಭೂಷಿತನಾಗಿಯೂ ಶಕ್ತಿಸಹಿತನಾಗಿಯೂ ಇರುವ, ನಿಜಗುರುವಿಗೆ ನಮಸ್ಕಾರಮಾಡಿ ಆಮೇಲೆ ಕುಂಡಲಿನೀದೇವಿಯನ್ನು ಸ್ಮರಣಮಾಡಬೇಕು. ॥೨॥

ಬ್ರಹ್ಮರಂಧ್ರಗಮನರೂಪವಾದ ಪ್ರಥಮ ಪ್ರಯಾಣದಲ್ಲಿ ಜ್ಞಾನರೂಪದಿಂದ ಪ್ರಕಾಶಿಸುವಂಥ, ಬ್ರಹ್ಮರಂಧ್ರದಿಂದ ಮೂಲಾಧಾರಕ್ಕೆ ಹಿಂತಿರುಗಿ ಬರುವಾಗ ಅಮೃತ

ಅಂತಃ ಪದವ್ಯಾ ಮನುಸಂಚರಂತೀ
ಮಾನಂದರೂಪಾಮಬಲಾಂ ಪ್ರಪದ್ಯೇ ॥೩॥

ಧ್ಯಾತ್ವೈವಂ ತಚ್ಛಿಖಾಮಧ್ಯೇ ಸಚ್ಚಿದಾನಂದರೂಪಿಣೀಂ ।
ಮಾಂ ಧ್ಯಾಯೇದಥ ಶೌಚಾದಿಕ್ರಿಯಾಸ್ಸರ್ವಾಃ ಸಮಾಪಯೇತ್ ॥೪॥

ಅಗ್ನಿಹೋತ್ರಂ ತತೋ ಹುತ್ವಾ ಮತ್ಪ್ರೀತ್ಯರ್ಥಂ ದ್ವಿಜೋತ್ತಮಃ ।
ಹೋಮಾಂತೇ ಸ್ವಾಸನೇ ಸ್ಥಿತ್ವಾ ಪೂಜಾಸಂಕಲ್ಪಮಾಚರೇತ್ ॥೫॥

ಭೂತಶುದ್ಧಿಂ ಪುರಾ ಕೃತ್ವಾ ಮಾತೃಕಾನ್ಯಾಸಮೇವ ಚ ।
ಹೃಲ್ಲೇಖಾ ಮಾತೃಕಾನ್ಯಾಸಂ ನಿತ್ಯಮೇವ ಸಮಾಚರೇತ್ ॥೬॥

ಮೂಲಾಧಾರೇ ಹಕಾರಂ ಚ ಹೃದಯೇ ಚ ರಕಾರಕಂ ।
ಭ್ರೂಮಧ್ಯೇ ತದ್ವದೀಕಾರಂ ಹ್ರೀಂಕಾರಂ ಮಸ್ತಕೇ ನ್ಯಸೇತ್ ॥೭॥

---

ದಂತೆ ಆನಂದವಿಶಿಷ್ಟವಾದ, ಸುಷುಮ್ನಾ ನಾಡಿಯಲ್ಲಿ ಸಂಚಾರ ಮಾಡುವ ಪರಾಶಕ್ತಿಯನ್ನು, ನಾನು ರಕ್ಷಕಳನ್ನಾಗಿ ನಂಬಿರುತ್ತೇನೆಂದು, ಧ್ಯಾನಮಾಡಬೇಕು. ॥೩॥

ಹೀಗೆ ಧ್ಯಾನಿಸಿ ಆ ಕುಂಡಲಿನೀ ಶಿಖಾಮಧ್ಯದಲ್ಲಿ ಸಚ್ಚಿದಾನಂದಸ್ವರೂಪಿಣಿಯಾದ ನನ್ನ ಸ್ಮರಣೆಯನ್ನು ಮಾಡಿ ಆಮೇಲೆ ಶೌಚ ಮೊದಲಾದ ಸಂಧ್ಯಾವಂದನ ಪರ್ಯಂತವಾದ ಎಲ್ಲ ನಿತ್ಯಕರ್ಮಗಳನ್ನೂ ಮಾಡಿ ಮುಗಿಸಬೇಕು. ॥೪॥

ಅನಂತರದಲ್ಲಿ ನನಗೆ ತೃಪ್ತಿಯುಂಟಾಗಲಿ ಎಂಬ ಮನಸ್ಸಿನಿಂದ ಅಗ್ನಿಹೊತ್ರವನ್ನು ಮಾಡಿ ಹೋಮವು ಮುಗಿದ ಮೇಲೆ ಆಸನದಲ್ಲಿ ಕುಳಿತುಕೊಂಡು ದ್ವಿಜನು ಪೂಜೆಗೆ ಸಂಕಲ್ಪವನ್ನು ಮಾಡಬೇಕು. ॥೫॥

ಮೊದಲು ಭೂತಶುದ್ಧಿಯನ್ನೂ, ಅನಂತರದಲ್ಲಿ ಮಾತೃಕಾನ್ಯಾಸ, ಹೃಲ್ಲೇಖಾ ಮಾತೃಕಾನ್ಯಾಸಗಳನ್ನು ಮಾಡಬೇಕು. ಪ್ರತಿ ಒಂದು ಅಕ್ಷರಕ್ಕೂ ಮಾಯಾಬೀಜವನ್ನು ಮೊದಲು ಸೇರಿಸಿ ಮಾಡುವ ಮಾತೃಕಾನ್ಯಾಸಕ್ಕೆ ಹೃಲ್ಲೇಖಾಮಾತೃಕಾನ್ಯಾಸವೆಂದು ಹೆಸರು. ॥೬॥

ಮೂಲಾಧಾರದಲ್ಲಿ ಹಕಾರವನ್ನೂ, ಹೃದಯದಲ್ಲಿ ರಕಾರವನ್ನೂ, ಹುಬ್ಬುಗಳ ಮಧ್ಯದಲ್ಲಿ ಈಕಾರವನ್ನೂ, ಹಾಗೆಯೇ ಶಿರಸ್ಸಿನಲ್ಲಿ ಹ್ರೀಂಕಾರವನ್ನೂ, ನ್ಯಾಸಮಾಡಬೇಕು. ॥೭॥

ತತ್ತನ್ಮಂತ್ರೋದಿತಾನನ್ಯಾನ್ ನ್ಯಾಸಾನ್ಸರ್ವಾನ್ಸಮಾಚರೇತ್ ।
ಕಲ್ಪಯೇತ್ಸ್ವಾತ್ಮನೋ ದೇಹೇ ಪೀಠಂ ಧರ್ಮಾದಿಭಿಃ ಪುನಃ ॥೮॥

ತತೋ ಧ್ಯಾಯೇನ್ಮಹಾದೇವೀಂ ಪ್ರಾಣಾಯಾಮೈರ್ವಿಜೃಂಭಿತೇ ।
ಹೃದಂಭೋಜೇ ಮಮ ಸ್ಥಾನೇ ಪಂಚಪ್ರೇತಾಸನೇ ಬುಧಃ ॥೯॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ ।
ಏತೇ ಪಂಚ ಮಹಾಪ್ರೇತಾಃ ಪಾದಮೂಲೇ ಮಮ ಸ್ಥಿತಾಃ ॥೧೦॥

ಪಂಚಭೂತಾತ್ಮಕಾ ಹ್ಯೇತೇ ಪಂಚಾವಸ್ಥಾತ್ಮಕಾ ಅಪಿ ।
ಅಹಂ ತ್ವವ್ಯಕ್ತಚಿದ್ರೂಪಾ ತದತೀತಾಽಸ್ಮಿ ಸರ್ವಥಾ ॥೧೧॥

---

ಅಲ್ಲದೆ ಆಯಾ ಮಂತ್ರಗಳಿಗೆ ಹೇಳಲ್ಪಟ್ಟಿರುವ ಎಲ್ಲ ನ್ಯಾಸಗಳನ್ನೂ ಮಾಡಬೇಕು. ಮತ್ತು ತನ್ನ ದೇಹದಲ್ಲಿ ಪೀಠವನ್ನು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಈ ಭಾವನೆಗಳಿಂದ ವಿದಿಕ್ಕುಗಳಲ್ಲೂ, ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ, ಈ ಭಾವನೆಗಳಿಂದ ಪೂರ್ವಾದಿ ಚತುರ್ದಿಕ್ಕುಗಳಲ್ಲೂ ಕಲ್ಪಿಸಿಕೊಂಡು ಪೂಜಿಸಬೇಕು. ಇದರ ವಿವರಗಳನ್ನು ಶಾರದಾತಿಲಕಗ್ರಂಥದಲ್ಲಿ ಹೇಳಿದೆ. ॥೮॥

ಜ್ಞಾನಿಯು ಆಮೇಲೆ ಪ್ರಾಣಾಯಾಮಗಳಿಂದ ಹೃತ್ಪದ್ಮವನ್ನು ವಿಕಾಸಮಾಡಿಕೊಂಡು, ಪರಾಶಕ್ತಿಯಾದ ನನ್ನನ್ನು ಧ್ಯಾನಿಸಿ ನನಗೆ ಆಸನಭೂತರಾದ ಪಂಚಪ್ರೇತಗಳನ್ನು ಧ್ಯಾನಿಸಬೇಕು. ॥೯॥

ಬ್ರಹ್ಮಾ, ವಿಷ್ಣು, ರುದ್ರ, ಈಶ್ವರ, ಸದಾಶಿವ ಇವರೇ ನನ್ನ ಪೀಠದ ನಾಲ್ಕು ಪಾದಗಳು ಮತ್ತು ಮೇಲಿನ ಹಲಗೆಯಾಗಿರುವ ಪಂಚಮಹಾಪ್ರೇತಗಳು. ॥೧೦॥

ಬ್ರಹ್ಮನೇ ಮೊದಲಾದ ಐದು ಜನರೂ, ಭೂಮ್ಯಾದಿ ಪಂಚಭೂತಗಳಿಗೆ ಒಡೆಯರು. ಹಾಗೆಯೇ ಅವರು ಜಾಗ್ರತ್ಸ್ವಪ್ನಸುಷುಪ್ತ್ಯಾದಿ ಪಂಚಾವಸ್ಥೆಗಳಿಗೂ, ಅಧಿಪತಿಗಳು. ನಾನಾದರೋ ಈ ಸಮಸ್ತಕ್ಕೂ ಉತ್ಪಾದಕವಾದ ಮಾಯಾವಿಶಿಷ್ಟವಾದ ಬ್ರಹ್ಮಸ್ವರೂಪಿಣಿಯಾಗಿರುವುದರಿಂದ ನಾನು ಅವರಿಗಿಂತಲೂ ಶ್ರೇಷ್ಠಳು. ಅದ್ದರಿಂದಲೇ ಬಹ್ಮಾದಿಗಳು ನನಗೆ ಆಸನಭೂತರಾಗಿರುವರು. ॥೧೧॥

ತತೋ ವಿಸ್ಮರತಾಂ ಯಾತಾಃ ಶಕ್ತಿತಂತ್ರೇಷು ಸರ್ವದಾ ।
ಧ್ಯಾತ್ವೈವಂ ಮಾನಸೈರ್ಭೋಗೈಃ ಪೂಜಯೇನ್ಮಾಂ ಜಪೇದಪಿ ॥೧೨॥

ಜಪಂ ಸಮರ್ಪ್ಯ ಶ್ರೀದೇವ್ಯೈ ತತೋಽರ್ಘ್ಯಸ್ಥಾಪನಂ ಚರೇತ್ ।
ಪಾತ್ರಾಸಾದನಕಂ ಕೃತ್ವಾ ಪೂಜಾದ್ರವ್ಯಾಣಿ ಶೋಧಯೇತ್ ॥೧೩॥

ಜಲೇನ ತೇನ ಮನುನಾ ಚಾಸ್ತ್ರಮಂತ್ರೇಣ ದೇಶಿಕಃ ।
ದಿಗ್ಬಂಧಂ ಚ ಪುರಾ ಕೃತ್ವಾ ಗುರೂನ್ನತ್ವಾ ತತಃ ಪರಂ ॥೧೪॥

ತದನುಜ್ಞಾಂ ಸಮಾದಾಯ ಬಾಹ್ಯಪೀಠೇ ತತಃ ಪರಂ ।
ಹೃದಿಸ್ಥಾಂ ಭಾವಿತಾಂ ಮೂರ್ತಿಂ ಮಮ ದಿವ್ಯಾಂ ಮನೋಹರಾಂ ॥೧೫॥

ಆವಾಹಯೇತ್ತತಃ ಪೀಠೇ ಪ್ರಾಣಸ್ಥಾಪನವಿದ್ಯಯಾ ।
ಆಸನಾವಾಹನೇ ಚಾರ್ಘ್ಯಂ ಪಾದ್ಯಾದ್ಯಾಚಮನಂ ತಥಾ ॥೧೬॥

---

ಈ ಕಾರಣದಿಂದಲೇ ಆ ಬ್ರಹ್ಮಾದಿಗಳು ಪರಾಶಕ್ತಿಯಾದ ನನ್ನನ್ನುದ್ದೇಶಿಸಿ ಮಾಡುವ ತಾಂತ್ರಿಕ ಕರ್ಮಗಳಲ್ಲಿ ಯಾವಾಗಲೂ ಆಸನಭೂತರಾಗಿಯೇ ಪೂಜಿಸಲ್ಪಡುವರು. ಈ ರೀತಿಯಲ್ಲಿ ಮೊದಲು ಮಾನಸೋಪಚಾರಗಳಿಂದ ಧ್ಯಾನಮಾಡಿ, ಯಥಾಶಕ್ತಿಯಾಗಿ ಮೂಲಮಂತ್ರ ಜಪವನ್ನೂ ಮಾಡಬೇಕು. ||೧೨||

ಅನಂತರದಲ್ಲಿ ಜಪವನ್ನು ದೇವಿಗೆ ಸಮರ್ಪಿಸಿ, ಅರ್ಘ್ಯವನ್ನಿರಿಸಿಕೊಂಡು ಪಾತ್ರಾಸಾದನೆಯನ್ನು ಮಾಡಿ, ಪೂಜೆಗಾಗಿ ಇಟ್ಟಿರುವ ಪದಾರ್ಥಗಳನ್ನು ಫಟ್ ಎಂಬ ಮಂತ್ರದಿಂದ ಜಲಪ್ರೋಕ್ಷಣೆಮಾಡಬೇಕು. ||೧೩||

ಜ್ಞಾನಿಯು ಫಟ್ ಎಂಬ ಅಸ್ತ್ರಮಂತ್ರದಿಂದ ಮೊದಲು ದಿಗ್ಬಂಧವನ್ನೂ, ಅಗ್ನಿಪ್ರಾಕಾರ ಭಾವನೆಯನ್ನೂ ಮಾಡಿ, ಆನೇಲೆ ಗುರುನಮಸ್ಕಾರವನ್ನು ಮಾಡಿ, ||೧೪||

ಗುರುಗಳ ಅನುಜ್ಞೆಯನ್ನೂ ಹೊಂದಿ, ಆಮೇಲೆ ಬಾಹ್ಯಪೀಠದಲ್ಲಿ ಹೃದಯದಲ್ಲಿ ನೆಲಸಿರುವ ನನ್ನ ಶ್ರೇಷ್ಠವಾದ ಸುಂದರಾಕಾರದ ಮೂರ್ತಿಯನ್ನು ಧ್ಯಾನ ಮಾಡಿ, ||೧೫||

ಪ್ರಾಣಪ್ರತಿಷ್ಠಾಪನೆಯ ಮಂತ್ರದಿಂದ ಅಲ್ಲಿ ದೇವಿಯ ಆವಾಹನೆಯನ್ನು ಮಾಡಿ, ಆಸನ, ಅರ್ಘ್ಯ, ಪಾದ್ಯ, ಆಚಮನಗಳನ್ನೂ, ||೧೬||

ಸ್ನಾನಂ ವಾಸೋ ದ್ವಯಂ ಚೈವ ಭೂಷಣಾನಿ ಚ ಸರ್ವಶಃ ।
ಗಂಧಪುಷ್ಪಂ ಯಥಾಯೋಗ್ಯಂ ದತ್ವಾ ದೇವ್ಯೈ ಸ್ವಭಕ್ತಿತಃ ॥೧೭॥

ಯಂತ್ರಸ್ಥಾನಾಮಾವೃತೀನಾಂ ಪೂಜನಂ ಸಮ್ಯಗಾಚರೇತ್ ।
ಪ್ರತಿವಾರಮಶಕ್ತಾನಾಂ ಶುಕ್ರವಾರೇ ನಿಯಮ್ಯತೇ ॥೧೮॥

ಮೂಲದೇವೀ ಪ್ರಭಾರೂಪಾ ಸ್ಮರ್ತವ್ಯಾ ಅಂಗದೇವತಾಃ ।
ತತ್ಪ್ರಭಾಪಟಲವ್ಯಾಪ್ತಂ ತ್ರೈಲೋಕ್ಯಂ ಚ ವಿಚಿಂತಯೇತ್ ॥೧೯॥

ಪುನರಾವೃತ್ತಿಸಹಿತಾಂ ಮೂಲದೇವೀಂ ಚ ಪೂಜಯೇತ್ ।
ಗಂಧಾದಿಭಿಸ್ಸುಗಂಧೈಸ್ತು ತಥಾ ಪುಷ್ಪೈಸ್ಸುವಾಸಿತೈಃ ॥೨೦॥

ನೈವೇದ್ಯೈಸ್ತರ್ಪಣೈಶ್ಚೈವ ತಾಂಬೂಲೈರ್ದಕ್ಷಿಣಾದಿಭಿಃ ।
ತೋಷಯೇನ್ಮಾಂ ತ್ವತ್ಕೃತೇನ ನಾಮ್ನಾಂ ಸಾಹಸ್ರಕೇನ ಚ ॥೨೧॥

---

ಸ್ನಾನ, ವಸ್ತ್ರ, ಆಭರಣಗಳು, ಗಂಧ, ಹೂವು, ಇವುಗಳನ್ನೂ ಸಮರ್ಪಿಸಿ ತನ್ನ ಭಕ್ತಿಗೆ ಅನುಸಾರವಾಗಿ ಪೂಜಿಸಬೇಕು. ॥೧೭॥

ಪುಷ್ಪಾಂತಪೂಜೆಯಾದ ಮೇಲೆ ಯಂತ್ರದಲ್ಲಿರುವ ಆವರಣದೇವತೆಗಳನ್ನೂ ಪೂಜಿಸಬೇಕು. ಪ್ರತಿದಿನವೂ ಆವರಣದೇವತೆಗಳನ್ನೂ ಪೂಜಿಸಲು ಶಕ್ತಿ ಇಲ್ಲದಿದ್ದರೆ, ಶುಕ್ರವಾರಗಳಲ್ಲಾದರೂ ತಪ್ಪದೆ ಪೂಜಿಸಬೇಕು. ॥೧೮॥

ಈ ಅಂಗದೇವತೆಗಳನ್ನು ಎಲ್ಲಕ್ಕೂ ಕಾರಣಳಾದ ದೇವಿಯ ಕಾಂತಿಸ್ವರೂಪಗಳೆಂದೂ, ಆ ಕಾಂತಿಸಮೂಹದಿಂದ ಮೂರು ಲೋಕವೂ ತುಂಬಿಹೋಗಿದೆಯೆಂದೂ ಸ್ಮರಣಮಾಡಬೇಕು. ॥೧೯॥

ಈ ಪ್ರಕಾರವಾಗಿ ಆವರಣದೇವತೆಗಳನ್ನು ಪೂಜಿಸಿ, ಪುನರಾವೃತ್ತಿಯಿಂದ ಆವರಣದೇವತಾಸಹಿತಳಾದ ಭುವನೇಶ್ವರೀದೇವಿಯನ್ನು ಸುಗಂಧದಿಂದಲೂ, ಒಳ್ಳೆಯ ವಾಸನೆಯುಳ್ಳ ಪುಷ್ಪಗಳಿಂದಲೂ ಪೂಜಿಸಬೇಕು. ॥೨೦॥

ಅನಂತರವಲ್ಲಿ ನೈವೇದ್ಯ, ತರ್ಪಣ, ತಾಂಬೂಲ, ದಕ್ಷಿಣಾದಿಗಳಿಂದ ನನ್ನನ್ನು ತೃಪ್ತಿಪಡಿಸಿ, ಮೂಲಮಂತ್ರಜಪವನ್ನು ಮಾಡಿ, ನಿನ್ನಿಂದ ರಚಿತವಾದ ಸಹಸ್ರನಾಮಸ್ತೋತ್ರದಿಂದ ನನ್ನನ್ನು ಸಂತೋಷಪಡಿಸಬೇಕು. (ಹಿಮವಂತನು ದೇವಿಯ

ಕವಚೇನ ಚ ಸೂಕ್ತೇನಾಽಹಂ ರುದ್ರೇಭಿರಿತಿ ಪ್ರಭೋ ।
ದೇವ್ಯಥರ್ವಶಿರೋ ಮಂತ್ರೈಃ ಹೃಲ್ಲೇಖೋಪನಿಷದ್ಭವೈಃ ॥೨೨॥

ಮಹಾವಿದ್ಯಾಂ ಮಹಾಮಂತ್ರೈಃ ತೋಷಯೇನ್ಮಾಂ ಮುಹುರ್ಮುಹುಃ ।
ಕ್ಷಮಾಪಯೇ ಜ್ಜಗದ್ಧಾತ್ರೀಂ ಪ್ರೇಮಾರ್ದ್ರಹೃದಯೋ ನರಃ ॥೨೩॥

ಪುಲಕಾಂಕಿತಸರ್ವಾಂಗೋ ಬಾಷ್ಪರುದ್ಧಾಕ್ಷನಿಸ್ವನಃ ।
ನೃತ್ಯಗೀತಾದಿಘೋಷೇಣ ತೋಷಯೇನ್ಮಾಂ ಮುಹುರ್ಮುಹುಃ ॥೨೪॥

ವೇದಪಾರಾಯಣೈಶ್ಚೈವ ಪುರಾಣೈಸ್ಸಕಲೈರಪಿ ।
ಪ್ರತಿಪಾದ್ಯಾ ಯತೋಽಹಂ ವೈ ತಸ್ಮಾತ್ತೈಸ್ತೋಷಯೇತ್ತು ಮಾಂ ॥೨೫॥

---

ಮೇಲೆ ರಚಿಸಿರುವ ಸಹಸ್ರನಾಮಸ್ತೋತ್ರವು ಕೂರ್ಮಪುರಾಣದ ಹನ್ನೆರಡನೆಯ ಅಧ್ಯಾಯದಲ್ಲಿದೆ). ॥೨೧॥

ಓ ಜ್ಞಾನಿಯೇ, ತಂತ್ರಗಳಲ್ಲಿ ಹೇಳಿರುವ ಕವಚದಿಂದಲೂ, ಅಹಂರುದ್ರೇಭಿಃ ಎಂಬ ದೇವೀಸೂಕ್ತದಿಂದಲೂ, ಪಂಚೋಪನಿಷತ್ತಿನಲ್ಲಿರುವ ದೇವ್ಯುಪನಿಷತ್ತೆಂಬ ಹೃಲ್ಲೇಖೋಪನಿಷತ್ತಿನಲ್ಲಿರುವ, "ಸರ್ವೇವೈದೇವಾ ದೇವೀಮುಪತಸ್ಥುಃ" ಇವೇ ಮೊದಲಾದ ಮಂತ್ರಗಳಿಂದಲೂ ನನ್ನನ್ನು ಸ್ತುತಿಸಬೇಕು. ॥೨೨॥

ಮಹಾವಿದ್ಯೆಯಲ್ಲಿ ಹೇಳಿರುವ ಮಹಾಮಂತ್ರಗಳಿಂದಲೂ, ನನ್ನನ್ನು ಪದೇ ಪದೇ ಸ್ತುತಿಸಿ, ಭಕ್ತಿಯಿಂದ ತುಂಬಿದ ಮನಸ್ಸುಳ್ಳವನಾಗಿ, ಜಗಜ್ಜನನಿಯಾದ ನನ್ನನ್ನು ಕುರಿತು ಅಪರಾಧಗಳೆಲ್ಲವನ್ನೂ ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕು. ॥೨೩॥

ತನ್ನ ಸರ್ವಾಂಗಗಳಲ್ಲೂ ಪುಲಕಗಳುಂಟಾಗುವಷ್ಟು ಹೆಚ್ಚಾದ ಭಕ್ತಿಯುಳ್ಳವನಾಗಿ, ಭಕ್ತಿವಿಶೇಷದಿಂದ ಕಣ್ಣುಗಳಲ್ಲಿ ನೀರು ತುಂಬಿ ದೃಷ್ಟಿನಿರೋಧ ಉಳ್ಳವನಾಗಿ, ನಾಟ್ಯ, ಗಾನ, ಮೊದಲಾದುವುಗಳ ಧ್ವನಿಗಳಿಂದಲೂ ನನ್ನನ್ನು ಪದೇ ಪದೇ ಸಂತೋಷಪಡಿಸಬೇಕು. ॥೨೪॥

ವೇದ, ಪುರಾಣಗಳೆಲ್ಲೆಲ್ಲವುಗಳಲ್ಲೂ ನನ್ನ ಸ್ವರೂಪಗಳೇ ವರ್ಣಿತಗಳಾಗಿರುವುದರಿಂದ ವೇದಪಾರಾಯಣಗಳಿಂದಲೂ, ಪುರಾಣಪಠನಾದಿಗಳಿಂದಲೂ, ನನ್ನನ್ನು ಸಂತೋಷಪಡಿಸಬೇಕು. ॥೨೫॥

ನಿಜಂ ಸರ್ವಸ್ವಮಪಿ ಮೇ ಸ ದೇಹಂ ನಿತ್ಯಶೋಽರ್ಪಯೇತ್ ।
ನಿತ್ಯಹೋಮಂ ತತಃ ಕುರ್ಯಾದ್ಬ್ರಾಹ್ಮಣಾಂಶ್ಚ ಸುವಾಸಿನೀಃ ॥೨೬॥

ಬಟುಕಾನ್ಪಾಮರಾನನ್ಯಾನ್ ದೇವೀಬುದ್ಧ್ಯಾ ತು ಭೋಜಯೇತ್ ।
ನತ್ವಾ ಪುನಃ ಸ್ವಹೃದಯೇ ವ್ಯುತ್ಕ್ರಮೇಣ ವಿಸರ್ಜಯೇತ್ ॥೨೭॥

ಸರ್ವಂ ಹೃಲ್ಲೇಖಯಾ ಕುರ್ಯಾತ್ಪೂಜನಂ ಮಮ ಸುವ್ರತ ।
ಹೃಲ್ಲೇಖಾಸರ್ವಮಂತ್ರಾಣಾಂ ನಾಯಿಕಾ ಪರಮಾ ಸ್ಮೃತಾ ॥೨೮॥

ಹೃಲ್ಲೇಖಾ ದರ್ಪಣೇ ನಿತ್ಯಮಹಂ ತು ಪ್ರತಿಬಿಂಬಿತಾ ।
ತಸ್ಮಾದ್ಧೃಲ್ಲೇಖಯಾ ದತ್ತಂ ಸರ್ವಮಂತ್ರೈಸ್ಸಮರ್ಪಿತಂ ॥೨೯॥

ಗುರುಂ ಸಂಪೂಜ್ಯ ಭೂಷಾದ್ಯೈಃ ಕೃತಕೃತ್ಯತ್ವಮಾವಹೇತ್ ।
ಯ ಏವಂ ಪೂಜಯೇದ್ದೇವೀಂ ಶ್ರೀಮದ್ಭುವನಸುಂದರೀಂ ॥೩೦॥

---

ಅನಂತರದಲ್ಲಿ ತನ್ನ ದೇಹವನ್ನೂ, ತನಗಿರುವ ಸಮಸ್ತ ವಸ್ತುವನ್ನೂ ದೇವಿಗೆ ಸಮರ್ಪಣೆ ಮಾಡಿ ನಿತ್ಯಹೋಮವನ್ನು ಮುಗಿಸಿ, ಬ್ರಾಹ್ಮಣರನ್ನೂ ಸುವಾಸಿನಿಯರನ್ನೂ, ॥೨೬॥

ಬ್ರಹ್ಮಚಾರಿಗಳನ್ನೂ, ಇತರ ದೀನಜನಗಳನ್ನೂ, ದೇವಿಯು ಅವರಲ್ಲಿಯೂ ಸನ್ನಿಹಿತಳಾಗಿರುವಳೆಂಬ ಬುದ್ಧಿಯಿಂದ ಭೋಜನ ಮಾಡಿಸಿ, ನಮಸ್ಕರಿಸಿ, ಅನಂತರದಲ್ಲಿ ಸಂಹಾರಮುದ್ರೆಯಿಂದ ಮೊದಲಿನ ಕ್ರಮಕ್ಕಿಂತ ವ್ಯತ್ಯಾಸಕ್ರಮದಿಂದ ವಿಸರ್ಜನೆಯನ್ನೂ ಮಾಡಬೇಕು. ॥೨೭॥

ಓ ನಿಯಮಶೀಲನಾದ ಹಿಮವಂತನೇ, ನನ್ನ ಸಂಬಂಧವಾದ ಪೂಜೆಯೆಲ್ಲವನ್ನೂ ಹ್ರೀಂಕಾರದಿಂದ ಮಾಡಬೇಕು. ಏಕೆಂದರೆ ಮಂತ್ರಗಳೊಳಗೂ ಹ್ರೀಂಕಾರವೇ ಪರಮಶ್ರೇಷ್ಠವಾದುದು ಎಂದು ಶಾಸ್ತ್ರಗಳಲ್ಲೂ ಹೇಳಿದೆ. ॥೨೮॥

ಹ್ರೀಂಕಾರವೆಂಬ ಕನ್ನಡಿಯಲ್ಲಿ ಪ್ರತಿ ದಿವಸವೂ ಯಾವಾಗಲೂ ನಾನು ಪ್ರತಿಬಿಂಬಿಸುತ್ತಿರುವೆನು. ಆದ್ದರಿಂದ ಹ್ರೀಂಕಾರದಿಂದ ಹವಿಸ್ಸು ಮೊದಲಾದುವನ್ನು ನನಗೆ ಕೊಟ್ಟರೆ ಎಲ್ಲ ಮಂತ್ರಗಳಿಂದಲೂ ಕೊಟ್ಟಂತೆಯೇ ಆಗುವುದು. ॥೨೯॥

ಅನಂತರದಲ್ಲಿ ತನ್ನ ಗುರುವನ್ನೂ ವಸ್ತ್ರಾಭರಣಾದಿಗಳಿಂದ ಸತ್ಕರಿಸಿ ಕೃತಾರ್ಥನಾದಂತೆ ಭಾವಿಸಿಕೊಳ್ಳುತ್ತಿರಬೇಕು. ಯಾವನು ಈ ರೀತಿಯಲ್ಲಿ ಲೋಕೈಕ ಸುಂದರಿಯಾದ ದೇವಿಯನ್ನು ಪೂಜಿಸುವನೋ, ॥೩೦॥

ನ ತಸ್ಯ ದುರ್ಲಭಂ ಕಿಂಚಿತ್ಕದಾ ಚಿತ್ಕ್ವಚಿದಸ್ತಿ ಹಿ ।
ದೇಹಾಂತೇ ತು ಮಣಿದ್ವೀಪಂ ಮಮ ಯಾತ್ಯೇವ ಸರ್ವಥಾ ॥೩೧॥

ಜ್ಞೇಯೋ ದೇವೀಸ್ವರೂಪೋಽಸೌ ದೇವಾ ನಿತ್ಯಂ ನಮಂತಿ ತಂ ।
ಇತಿ ತೇ ಕಥಿತಂ ರಾಜನ್ ಮಹಾದೇವ್ಯಾಃ ಪ್ರಪೂಜನಂ ॥೩೨॥

ವಿಮೃಶ್ಯೈತದಶೇಷೇಣಾಪ್ಯಧಿಕಾರಾನುರೂಪತಃ ।
ಕುರು ಮೇ ಪೂಜನಂ ತೇನ ಕೃತಾರ್ಥಸ್ತ್ವಂ ಭವಿಷ್ಯಸಿ ॥೩೩॥

ಇದಂ ತು ಗೀತಾ ಶಾಸ್ತ್ರಂ ಮೇ ನಾಶಿಷ್ಯಾಯ ವದೇತ್ಕ್ವಚಿತ್ ।
ನಾಽಭಕ್ತಾಯ ಪ್ರದಾತವ್ಯಂ ನ ಧೂರ್ತಾಯ ಚ ದುಹೃದೇ ॥೩೪॥

ಏತತ್ಪ್ರಕಾಶನಂ ಮಾತು ರುದ್ಘಾಟನಮುರೋಜಯೋಃ ।
ತಸ್ಮಾದವಶ್ಯಂ ಯತ್ನೇನ ಗೋಪನೀಯಮಿದಂ ಸದಾ ॥೩೫॥

---

ಅಂಥವನಿಗೆ ಈ ಪ್ರಪಂಚದಲ್ಲಿ ದುರ್ಲಭವಾದುದು ಎಲ್ಲೂ, ಯಾವ ಕಾಲದಲ್ಲೂ ಯಾವುದೂ ಇರುವುದಿಲ್ಲವು. ಅವನು ತನ್ನ ದೇಹಾವಸಾನವಾದ ಮೇಲೆ ನನ್ನ ವಿಲಾಸಸ್ಥಾನವಾದ ಮಣಿದ್ವೀಪವನ್ನು ಖಂಡಿತವಾಗಿಯೂ ಹೊಂದುವನು. ॥೩೧॥

ಅಂತಹ ಮನುಷ್ಯನನ್ನು ದೇವಿಯ ಸ್ವರೂಪನೆಂದು ತಿಳಿಯಬೇಕು. ಅವನಿಗೆ ನಿತ್ಯವೂ ದೇವತೆಗಳೂ ನಮಸ್ಕರಿಸುತ್ತಾರೆ. ಎಲೈ ರಾಜನೇ, ಈ ಪ್ರಕಾರವಾಗಿ ಪರಾಶಕ್ತಿಯ ಪೂಜಾವಿಧಾನವು ನಿನಗೆ ಹೇಳಲ್ಪಟ್ಟಿತು. ॥೩೨॥

ಇದೆಲ್ಲವನ್ನು ಪೂರ್ತಿಯಾಗಿ ತಿಳಿದುಕೊಂಡು ನಿನ್ನ ಸ್ಥಿತಿಗೆ ತಕ್ಕಂತೆ ನನ್ನ ಪೂಜೆಯನ್ನು ಮಾಡು. ಆದರಿಂದ ನೀನು ಧನ್ಯನಾಗುವೆ. ॥೩೩॥

ಈ ನನ್ನ ದೇವಿಗೀತಾರೂಪವಾದ ಶಾಸ್ತ್ರವನ್ನು ಅಯೋಗ್ಯನಾದ ಶಿಷ್ಯನಿಗೂ ದೈವಭಕ್ತಿ ಇಲ್ಲದವನಿಗೂ ಧೂರ್ತನಿಗೂ ಕೆಟ್ಟ ಮನಸ್ಸುಳ್ಳವನಿಗೂ ಉಪದೇಶ ಮಾಡಬಾರದು. ॥೩೪॥

ಅಯೋಗ್ಯನಿಗೆ ಇದನ್ನು ಪ್ರಕಾಶಪಡಿಸುವುದು ತಾಯಿಯ ಸ್ತನಗಳನ್ನು ಪ್ರಕಾಶಕ್ಕೆ ತಂದಷ್ಟು ಪಾಪವನ್ನುಂಟುಮಾಡುವುದು. ಆದ್ದರಿಂದ ಪ್ರಯತ್ನಪಟ್ಟಾದರೂ ಇದನ್ನು ಯಾವಾಗಲೂ ಕಾಪಾಡಿಕೊಳ್ಳಬೇಕು. ॥೩೫॥

ದೇಯಂ ಭಕ್ತಾಯ ಶಿಷ್ಯಾಯ ಜ್ಯೇಷ್ಠಪುತ್ರಾಯ ಚೈವ ಹಿ ।
ಸುಶೀಲಾಯ ಸುವೇಷಾಯ ದೇವೀಭಕ್ತಿಯುತಾಯ ಚ ॥೩೬॥

ಶ್ರಾದ್ಧಕಾಲೇ ಪಠೇದೇತದ್ಬ್ರಾಹ್ಮಣಾನಾಂ ಸಮೀಪತಃ ।
ತೃಪ್ತಾಸ್ತಸ್ಯ ಪಿತರಸ್ಸರ್ವೇ ಪ್ರಯಾಂತಿ ಪರಮಂ ಪದಂ ॥೩೭॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಸಾ ಭಗವತೀ ತತ್ರೈವಾಂತರಧೀಯತ ।
ದೇವಾಶ್ಚ ಮುದಿತಾಸ್ಸರ್ವೇ ದೇವೀದರ್ಶನತೋಽಭವನ್ ॥೩೮॥

॥ ವ್ಯಾಸ ಉವಾಚ ॥

ತತೋ ಹಿಮಾಲಯೇ ಜಜ್ಞೇ ದೇವೀ ಹೈಮವತೀ ತು ಸಾ ।
ಯಾ ಗೌರೀ ತಿ ಪ್ರಸಿದ್ಧಾಽಸೀದ್ದತ್ತಾ ಸಾ ಶಂಕರಾಯ ಚ ॥೩೯॥

---

ದೇವಿಯಲ್ಲಿ ಭಕ್ತಿಯುಳ್ಳವನಿಗೂ ಸಚ್ಛಿಷ್ಯನಿಗೂ ತನ್ನ ಹಿರಿಯ ಮಗನಿಗೂ ಒಳ್ಳೆಯ ನಡತೆಯುಳ್ಳವನಿಗೂ ಶುದ್ಧವಾದ ವಸ್ತ್ರಾದಿಗಳನ್ನು ಧರಿಸುವ ಸ್ವಭಾವ ಉಳ್ಳವನಿಗೂ ಇದನ್ನು ಉಪದೇಶಮಾಡಬೇಕು. ॥೩೬॥

ಶ್ರಾದ್ಧಕಾಲದಲ್ಲಿ ಬ್ರಾಹ್ಮಣರ ಎದುರಿಗೆ ಇದನ್ನು ಪಠನೆಮಾಡಿದರೆ ಪಿತೃಗಳು ತೃಪ್ತರಾಗಿ ಶ್ರೇಷ್ಠವಾದ ಸ್ಥಾನವನ್ನು ಹೊಂದುವರು. ॥೩೭॥

ವ್ಯಾಸನು ಹೇಳಿದನು—ಹೀಗೆ ಹೇಳಿ ದೇವಿಯು ಅಲ್ಲಿಯೇ ಅದೃಶ್ಯಳಾದಳು. ಎಲ್ಲ ದೇವತೆಗಳೂ ದೇವಿಯ ಸಂದರ್ಶನದಿಂದ ಸಂತೋಷವನ್ನು ಹೊಂದಿದರು. ॥೩೮॥

ವ್ಯಾಸನು ಹೇಳಿದನು—ಅನಂತರದಲ್ಲಿ ಯಾವಳು ಗೌರೀಯೆಂದು ಪ್ರಸಿದ್ಧಳಾಗಿದ್ದಾಳೋ ಅವಳೇ ಹಿಮಾಲಯದಲ್ಲಿ ಹಿಮವಂತನಿಗೆ ಮಗಳಾಗಿ ಹುಟ್ಟಿದಳು ಮತ್ತು ಅವಳು ಪರಮೇಶ್ವರನಿಗೆ ಹೆಂಡಿತಿಯಾದಳು. ॥೩೯॥

ತತಃ ಸ್ಕಂದಸ್ಸಮುದ್ಭೂತ ಸ್ತಾರಕಸ್ತೇನ ಪಾತಿತಃ ।
ಸಮುದ್ರಮಂಥನೇ ಪೂರ್ವಂ ರತ್ನಾನ್ಯಾಸುರ್ನರಾಧಿಪ ॥೪೦॥

ತತ್ರ ದೇವೈಃ ಸ್ತುತಾ ದೇವೀ ಲಕ್ಷ್ಮೀಪ್ರಾಪ್ತ್ಯರ್ಥಮಾದರಾತ್ ।
ತೇಷಾಮನುಗ್ರಹಾರ್ಥಾಯ ನಿರ್ಗತಾ ತು ರಮಾ ತತಃ ॥೪೧॥

ವೈಕುಂಠಾಯ ಸುರೈರ್ದತ್ತಾ ತೇನ ತಸ್ಯ ಶಮೋಽಭವತ್ ।
ಇತಿ ತೇ ಕಥಿತಂ ರಾಜನ್ ದೇವೀಮಾಹಾತ್ಮ್ಯಮುತ್ತಮಂ ॥೪೨॥

ಗೌರೀಲಕ್ಷ್ಮ್ಯೋಸ್ಸಮುದ್ಭೂತಿವಿಷಯಂ ಸರ್ವಕಾಮದಂ ।
ನ ವಾಚ್ಯಂ ತ್ವೇತದನ್ಯಸ್ಮೈ ರಹಸ್ಯಂಕಥಿತಂ ಯತಃ ॥೪೩॥

ಗೀತಾ ರಹಸ್ಯಭೂತೇಯಂ ಗೋಪನೀಯಾ ಪ್ರಯತ್ನತಃ ।
ಸರ್ವಮುಕ್ತಂ ಸಮಾಸೇನ ಯತ್ಪೃಷ್ಟಂ ತತ್ತ್ವಯಾಽನಘ ॥೪೪॥

---

ಪಾರ್ವತೀಪರಮೇಶ್ವರರಿಗೆ ಆಗ ಸ್ಕಂದನು ಮಗನಾಗಿ ಹುಟ್ಟಿ, ತಾರಕಾಸುರನನ್ನು ಸಂಹರಿಸಿದನು. ಎಲೈ ನರಶ್ರೇಷ್ಠನಾದ ರಾಜನೇ, ಹಿಂದೆ ಸಮುದ್ರವನ್ನು ಕಡೆಯುವಾಗ ಅಲ್ಲಿ ಅನೇಕ ರತ್ನಗಳಿದ್ದವು. ॥೪೦॥

ಆ ಸಮಯದಲ್ಲಿ ಲಕ್ಷ್ಮೀಪ್ರಾಪ್ತಿಗೋಸ್ಕರ ದೇವತೆಗಳಿಂದ ದೇವಿಯು ಸ್ತುತಿಸಲ್ಪಟ್ಟಳು. ಅವರನ್ನು ಅನುಗ್ರಹಿಸಲು ಲಕ್ಷ್ಮಿಯು ಸಮುದ್ರದಿಂದ ಮೇಲಕ್ಕೆ ಬಂದಳು. ॥೪೧॥

ಆ ಲಕ್ಷ್ಮೀದೇವಿಯು ದೇವತೆಗಳಿಂದ ವೈಕುಂಠ (ನಿತ್ಯಜ್ಞಾನರೂಪನೂ, ನಿತ್ಯಲೋಕಾಶ್ರಯನೂ ಆದ) ನಾಮಕನಾದ ವಿಷ್ಣುವಿಗೆ ಕೊಡಲ್ಪಟ್ಟಳು. ಅದರಿಂದ ಅವನಿಗೂ ಲೋಕಕ್ಕೂ ಶಾಂತಿಯು ಲಭಿಸಿತು. ಓ ರಾಜನೇ, ಈ ಪ್ರಕಾರವಾಗಿ ಶ್ರೇಷ್ಠವಾದ ದೇವಿಯ ಮಹಿಮೆಯನ್ನು ನಿನಗೆ ವಿವರಿಸಿ ಹೇಳಿರುತ್ತೇನೆ. ॥೪೨॥

ಎಲ್ಲ ಪುರುಷಾರ್ಥಗಳನ್ನೂ ಕೊಡುವ, ಲಕ್ಷ್ಮೀಗೌರೀದೇವಿಯರ ಉತ್ಪತ್ತಿಗೆ ಸಂಬಂಧಿಸಿದ ಈ ಚರಿತ್ರೆಯನ್ನು ಅನರ್ಹರಾದವರಿಗೆ ತಿಳಿಯಹೇಳಬಾರದು. ಆದುದರಿಂದ ಇದನ್ನು ಗೋಪ್ಯವಾಗಿ ಕಾಪಾಡಿ, ತಕ್ಕ ಅಧಿಕಾರಿಗೆ ಮಾತ್ರ ತಿಳಿಯಹೇಳಿ, ಇದು ಅಳಿಯದಂತೆ ರಕ್ಷಿಸಬೇಕು. ॥೪೩॥

ಓ ರಾಜನೇ, ಅದರಲ್ಲೂ ವಿಶೇಷವಾಗಿ ಈ ದೇವೀಗೀತೆಯನ್ನು ತುಂಬ ಎಚ್ಚರಿಕೆಯಿಂದ ರಹಸ್ಯವಾಗಿಟ್ಟು ಕಾಪಾಡುತ್ತಿರಬೇಕು. ಈ ಪ್ರಕಾರವಾಗಿ ನೀನು

**ಪವಿತ್ರಂ ಪಾವನಂ ದಿವ್ಯಂ ಕಿಂ ಭೂಯಶ್ಶ್ರೋತುಮಿಚ್ಛಸಿ ।**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಸಪ್ತಮಸ್ಕಂಧೇ ಚತ್ವಾರಿಂಶೋಽಧ್ಯಾಯಃ**

## ಇತಿ ಸಪ್ತಮಸ್ಕಂಧಃ ಸಮಾಪ್ತಃ

---

ನಿರ್ದೋಷವಾದ ಸ್ವಭಾವವುಳ್ಳವನಾದುದರಿಂದ ನಿನಗೆ ಇದನ್ನು ಎಲ್ಲವನ್ನೂ ಸಂಗ್ರಹವಾಗಿಯೂ ವಿಶದವಾಗಿಯೂ ನಿರೂಪಿಸಲಾಗಿದೆ. ಪುಣ್ಯಕರವೂ ದೋಷ ನಿವಾರಣದಿಂದ ಪರಿಶುದ್ಧಿಕರವೂ ಆಗಿರುವ ಇನ್ನು ಯಾವ ಉತ್ತಮವಾದ ವಿಷಯ ಗಳನ್ನು ನೀನು ಪುನಃ ಕೇಳಬಯಸುತ್ತಿರುವೆ? ಅದನ್ನೂ ಕೇಳು. ಎಂದು ವ್ಯಾಸನು ಜನಮೇಜಯನಿಗೆ ಹೇಳಿದನು. ||೪೪||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದಲ್ಲಿ ಏಳನೆಯ ಸ್ಕಂಧದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು.

## ಹೀಗೆ ಏಳನೆಯ ಸ್ಕಂಧವೂ ಮುಗಿಯಿತು.

---

ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ।
ಸುಬ್ಬಮಾಂಬಾದೇವಯಜ್ವತನಯಃ ಚಂದ್ರಶೇಖರಃ ।
ಜನಾನಾ ಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ, ದೇಶಸೇವಾಂ, ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾದ್ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

ಪ್ರಭು ಸಂಮಿತವೇದೈರ್ಯೋ ।
ಮಿತ್ರಸ್ಸಂಮಿತಮಹಾಪುರಾಣೈಶ್ಚ ॥
ಕಾಂತಾ ಸಂಮಿತಕಾವ್ಯೈಃ ।
ಉಪದಿಶ್ಯೋಽಧರ್ಮ ಏವ ಮಾಂಪಾತು ॥